# ಶ್ರದ್ಧಾಲಯ

**ಮಲ್ಲಿಕಾ**

ಸತ್ಸಂಗತ್ವೇ ನಿಸ್ಸಂಗತ್ವಂ
ನಿಸ್ಸಂಗತ್ವೇ ನಿರ್ಮೋಹತ್ವಂ ।
ನಿರ್ಮೋಹತ್ವೇ ನಿಶ್ಚಲ ತತ್ವಂ
ನಿಶ್ಚಲ ತತ್ವೇ ಜೀವನ್ಮುಕ್ತಿಃ ॥

Shraddhalaya in Kannada by 'Mallika'
Published by Lakshmi Prakashana,
No. 359, 14th Cross, Sadashivanagara
Bangalore-560 080

ಪ್ರಥಮ ಮುದ್ರಣ : ೧೯೯೩

—: ಎಲ್ಲಾ ಹಕ್ಕುಗಳನ್ನೂ ಕಾಯ್ದಿಡಲಾಗಿದೆ :—

ಬೆಲೆ : ನೂರು ರೂಪಾಯಿ

ಮುದ್ರಕರು :
**ನ್ಯೂ ಐಡಿಯಾಸ್**
ನಂ. ೩೦, ೩ನೇ ಅಡ್ಡ ರಸ್ತೆ, ಬೈರಸಂದ್ರ ಮುಖ್ಯ ರಸ್ತೆ
ಜಯನಗರ ಒಂದನೆಯ ಪೂರ್ವ ವಿಭಾಗ
ಬೆಂಗಳೂರು–೫೬೦ ೦೧೧

|| ರಾಧಾರಮಣಪಾದಾರ್ಪಣಮಸ್ತು ||

# ಶ್ರದ್ಧಾಲಯ

## ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
ಸಂ. 359, 14ನೇ ಅಡ್ಡ ರಸ್ತೆ, ಸದಾಶಿವನಗರ
ಬೆಂಗಳೂರು–560 080

# ನಿವೇದನೆ

ಸಾಹಿತ್ಯ ಕಲಾವತಿಯು ಸರಸಸುಂದರಿಯಾದರೂ ಮಹಾತಪಸ್ವಿನಿಯೂ ಹೌದು. ಅವಳ ಬಹಿಃರೂಪ ಕಾಲೋಚಿತವಾದ ಓಜಃಪುಂಜವಾದರೂ ಅಂತರ್ಯದಲ್ಲಿ ತಪಸ್ಸಿನ ಕಮನೀಯ ಕಂಪಿನ ರಾಸಾಯನವಿದೆ. ಸತ್ಯ ಶಾಂತಿಯ ಪರಮ ದ್ರವ್ಯವಿದೆ. ನಗ್ನ ಸ್ವರೂಪದ ದಿವ್ಯದರ್ಶನವಿದೆ. ಅಂತಲೇ ಅತ್ಯದ್ಭುತ ಪರ್ಣಾರ್ಣವಗಳಿಂದ, ಗ್ರಾಮ ನಗರಗಳಿಂದ, ಗಿರಿಪರ್ವತಗಳಿಂದ, ಹೊಳೆಕೆರೆಗಳಿಂದ, ಪ್ರಾಣಿಕೋಟಿಗಳಿಂದ ನಿಸರ್ಗ ಸೌಂದರ್ಯದಿಂದ ತುಂಬಿ ನಲಿನಲಿದು, ಸಿತಸ್ಮಿತ ಸೂಸುವ ಬ್ರಹ್ಮಾಂಡದ ಅಂತರಾಳದಲ್ಲಿ ಶತಶತಮಾನ ಗಳಿಂದಲೂ ರಭಸದಿಂದ ಭೋರ್ಗರೆದು ಘೂರ್ಣಿಸುತ್ತಿರುವ ಜಲರಾಶಿಯು ತಪಸ್ಸು ಮಾಡುತ್ತಿರುವಂತೆಯೇ ಸಾಹಿತ್ಯ ಸುಂದರಿಯ ಅಂತರ್ಯದಲ್ಲಿ ಘನ ತರದ ತಪಸ್ಸಿದೆ. ಬಹುತರದ ಓಜಸ್ಸಿದೆ. ಮೇಲ್ನೋಟದ ಸಾಮಾನ್ಯ ದೃಷ್ಟಿಗೆ ಸೌಂದರ್ಯದರ್ಶನ ಮಾತ್ರವಾದರೆ, ಅಂತರ್ಯದ ರಸಸೃಷ್ಟಿಯ ಪರಿ ಚಯವಿರುವ ಋಷಿವರೇಣ್ಯರಿಗೆ ಶಾಶ್ವತವಾದ ಓಜಸ್ಸಿನ ದಿವ್ಯದರ್ಶನವಾಗು ವುದು ಸತ್ಯ. ಆಕೆ ಲಘುಮಾನಸಿಗರ ಆಲಸ ಮನೋಗತಿಗೆ ನಿಲುಕುವ ನರ್ಮಮೂರ್ತಿ ಅಲ್ಲವೇ ಅಲ್ಲ. ಕಾವ್ಯದ ಕಮನೀಯತೆ, ತಾತ್ವಿಕ ಸೂಕ್ಷ್ಮತೆ ಒಂದುಗೂಡಿ ವಿಜೃಂಭಿಸುವ ಋಷಿಕವಿಗಳ ಚಿಂತನಾಪೂರ್ವಕವಾದ ಸಮೀಕ್ಷೆ ಯಲ್ಲಿ ರಸಸೃಷ್ಟಿಯ ಶ್ರೀಗಂಧ ವೈಭವೀಕರಿಸುತ್ತದೆ. ಪಸುಳೆಯ ಕ್ರೀಡಾಶೀಲತೆ, ತಾರುಣ್ಯದ ಉತ್ಸುಕತೆ, ವೃದ್ಧಾಪ್ಯದ ಧ್ಯಾನಶೀಲತೆಗಳ ಸಂಗಮದಿಂದ ಹೊಮ್ಮಿದ ಸಾಹಿತ್ಯವಾಹಿ ನಿಜಕ್ಕೂ ಆಕರ್ಷಣೀಯ.

ಕವಿಯು ತನ್ನ ಹೊಸಹೊಸ ಅನುಭವಾಮೃತವನ್ನು ಸಲಸಲವೂ ಹೊಮ್ಮುವ ಗ್ರಾಂಥಿಕ ರೂಪದಲ್ಲಿ ಬುದ್ಧಿವಮಾನ್ಯರೊಂದಿಗೆ ಹಂಚಿಕೊಳ್ಳುವುದು ಅನಿವಾರ್ಯ. ತನ್ನ ಅನುಭವ ಸಾರವನ್ನು ಎಂದಿಗೂ ತಾನೇತಾನಾಗಿ ಸವಿಯುವುದು ಸಾಧ್ಯವೂ ಇಲ್ಲ. ಅಂತಲೇ ಪುರಾಣ ಪ್ರಥಿತ ಗ್ರಂಥಕೋಟಿಗಳು ಇಂದಿಗೂ ಪ್ರಸ್ತುತ. ಆದರೇನು ? ನಮ್ಮವರು ಇರುವುದು ಇನ್ನೂ ಜಡ ನಿದ್ದೆಯಲ್ಲಿ. ಅದೇ ದುರದೃಷ್ಟಕರ.

**ಶ್ರೀಮುಖ ನಾಮ ಸಂವತ್ಸರ**
**ಜ್ಯೇಷ್ಠ ಬಹುಳ ಷಷ್ಠಿ** **ಮಲ್ಲಿಕಾ**
**ಗುರುವಾರ** ೨೭–೫–೧೯೯೩

# ಶ್ರದ್ಧಾಲಯ

## ಅಧ್ಯಾಯ ೧

ಸುಂದರ ಸೃಷ್ಟಿ, ಸುಂದರ ಸಮಯ, ಸುಂದರ ವಾತಾವರಣ.

ಸುಂದರ ಸೃಷ್ಟಿಯ ರಸಾಸ್ವಾದನೆ ಮಾಡಬೇಕಾದರೆ ಸುಂದರ ರಸದೃಷ್ಟಿಯೂ ಇರಬೇಕು. ಅದಿಲ್ಲವಾದರೆ ಸುಂದರವಾದುದು ಕೂಡಾ ಅಸುಂದರವೇ. ಸುಂದರ ದೃಷ್ಟಿಯಿದ್ದವರಿಗೆ ಅಸುಂದರವೂ ಸುಂದರವಾಗಿಯೇ ಕಾಣಿಸುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಸೌಂದರ್ಯ ದೃಷ್ಟಿಗತವೇ ಹೊರತು ವಸ್ತುಗತವಲ್ಲ ಎನಿಸಿತು ನನಗೆ ಆ ಮುಹೂರ್ತದಲ್ಲಿ. ಆದರೆ, ಸೌಂದರ್ಯ ಭಾಗಶಃ ದೃಷ್ಟಿಗತವಾಗಿದ್ದರೂ ಅರ್ಧಾಂಶ ವಸ್ತುಗತ ಎಂಬು ದನ್ನೂ ಒಪ್ಪಿಕೊಳ್ಳಲೇಬೇಕು. ಅದೂ ಪೂರ್ಣ ಸತ್ಯವೇ.

ಯಾವ ಗ್ರಂಥವನ್ನು ಅಲ್ಲಿದ್ದ ಪಾಠಕರಿಬ್ಬರು ತೆಗೆದುಕೊಂಡು ಪುಟ ಪುಟಗಳನ್ನು ತಿರುವಿಹಾಕಿ ಹಿಂದೆ ಮುಂದೆ ತಿರುಗಿಸಿನೋಡಿ ಚೆನ್ನಿಲ್ಲ ಎಂಬ ಏಕಾಭಿಪ್ರಾಯಕ್ಕೆ ಬಂದು ಹಿಂತಿರುಗಿಸಿ ಅದೇ ಸ್ಥಳದಲ್ಲಿಟ್ಟರೋ ಅದೇ ಗ್ರಂಥಕ್ಕೆ ನಾನು ಕೈಹಾಕಿದೆ. ಅದನ್ನು ತೆಗೆದು ಪುಟಪುಟವನ್ನು ನೋಡಿ ದಾಗಲೇ ನನಗೆ ಹಾಗೆನಿಸಲು ಕಾರಣ. ಆ ಗ್ರಂಥವನ್ನು "ಬಿಮಲ್ ರೇ" ಎಂಬಾಕೆ ಇಂಡಿಯಾ ದೇಶದ ದೇವಾಲಯುಗಳನ್ನು ಕುರಿತು ಬರೆದಿದ್ದಾಳೆ. ಬೃಹದ್ ಗ್ರಂಥ. ಪುಟಪುಟದಲ್ಲಿ ದೇವಾಲಯುಗಳ ಅತ್ಯಂತ ಸುಂದರ ಕಲಾತ್ಮಕವಾದ ವಿಗ್ರಹಗಳ ಚಿತ್ರಗಳೂ, ದೇವಾಲಯುಗಳ ಮುಮ್ಮೈ, ಒಳಮೈ, ಹೊರಮೈಗಳಲ್ಲಿ

ಕರಕೌಶಲದಿಂದ ಸೃಷ್ಟಿತವಾದ ಅತ್ಯಮೂಲ್ಯ ಕಲಾಕೃತಿಗಳ ಚಿತ್ರವೂ ಸೇರಿದಂತೆ ಅವುಗಳ ವಿವರಣಾತ್ಮಕವಾದ ಲೇಖನಗಳಿಂದ ಕೂಡಿದ ಸುಮನೋಹರ ಗ್ರಂಥ ಅದು. ಅದರ ಫೋಟೋಗ್ರಫಿಯೂ ಚೆನ್ನ. ಲೇಖನವೂ ಚೆನ್ನ. ಆಕೆ ಒಂದೊಂದು ವಸ್ತುವನ್ನೂ ವಿವರಿಸುವಲ್ಲಿ ಸುಂದರವಾದ ಭಾಷೆಯನ್ನು ಬಳಸಿದ್ದಾಳೆ. ಅವಳ ಭಾಷೆಯಲ್ಲಿ ಆಳವಿದೆ; ಬಿಗಿಯಿದೆ; ವೈಶಿಷ್ಟ್ಯವೂ ಇದೆ. ಅವಳ ರಸಾತ್ಮಕ ಹೃದಯದ ನಿರೂಪಣೆಯೇ ಈ ರಸದೃಷ್ಟಿ. ರಸಾಸ್ವಾದನೆಯಿಂದಲ್ಲದೆ ರಸಸೃಷ್ಟಿ ಆಗುವುದೇ ಇಲ್ಲ. ಆ ಗುಡಿಗೋಪುರಗಳು ಯಾವಯಾವ ಕಾಲದ ಸೃಷ್ಟಿಯೋ! ಇಂದೂ, ಈಗಲೂ ಅಚ್ಚಳಿಯದೆ ವಿಜೃಂಭಿಸುವುದನ್ನು ನೋಡಿದರೆ ಮನಃಪ್ರಾಣಗಳು ಪುಟಿಪುಟಿಯುತ್ತವೆ. ಅಂದಮೇಲೆ, ಇಂಥ ಅಮೋಘವಾದ ಸೃಷ್ಟಿಯನ್ನು ಸವಿಯಲು ಸುಂದರ ದೃಷ್ಟಿಯಿಲ್ಲದಿದ್ದರೆ ಖಂಡಿತಾ ಸಾಧ್ಯವಿಲ್ಲ ಎಂಬುದಕ್ಕೆ ಈವೊಂದು ದೃಷ್ಟಾಂತವೇ ಸಾಕ್ಷಿ ! ನಾನು ಒಮ್ಮೆ ಹುಬ್ಬೆತ್ತಿ ಅವರತ್ತ ನೋಡಿದೆ. ಇಬ್ಬರೂ ಪತ್ತೇದಾರಿ ಕಾದಂಬರಿಯನ್ನು ಆರಿಸಿಕೊಳ್ಳುತ್ತಿದ್ದರು. ಹಾ, ರಸಬೋಧೆಯ ದಾರಿದ್ರವಲ್ಲವೇ ಈ ಮಹದ್ಗ್ರಂಥವನ್ನು ಹಿಂದಕಿಟ್ಟು ಪತ್ತೇದಾರಿ ಕಾದಂಬರಿಯನ್ನು ಆರಿಸಿಕೊಳ್ಳಲು ಕಾರಣ ?

ತತ್‌ಕ್ಷಣವೇ ನನ್ನ ತುಟಿಗಳಲ್ಲಿ ಕಿರುನಗೆ ಮೂಡಿದರೂ ಮನದಲ್ಲಿ ಮರುಕವೂ ಮೂಡಿತು. ಆ ಅಬೋಧ ದಂಪತಿಗಳಿಗಾಗಿ. ನಾನು ಅಲ್ಲಿಯೇ ಕುಳಿತು ಪುಟಪುಟದಮೇಲೂ ಕಣ್ಣಾಡಿಸಿದೆ. ನೋಡಿದಷ್ಟೂ ಮನಸ್ತೃಪ್ತಿಯಿಂದ ಹೃದಯ ಕುಂಡ ರಸದೂಟೆಯಾಯಿತು. ಪುಟಪುಟಗಳ ಹೊಳಪು ಕೈಯಾಡಿಸಬೇಡ ಎಂದು ಸಾರಿ ಹೇಳುವಂತಿದೆ. ಆದರೆ ಆಸೆ–ಪ್ರತ್ಯಾಸೆಗಳು ಕೇಳಬೇಕಲ್ಲ ? ಪುಟಪುಟಗಳನ್ನು ಪುನಃ ಪುನಃ ತಿರುವಿಹಾಕಿದೆ. ನನ್ನ ಆಸಕ್ತಿಯನ್ನು ಗಮನಿಸಿದ ಆ ಮಹಿಳೆ ಕೇಳಿದಳು "ಏನಮ್ಮಾ ಬಹಳ ಆಸಕ್ತಿಯಿಂದ ನೋಡುತ್ತೀ ?".

"ನನಗಿದು ತುಂಬಾ ಹಿಡಿಸಿತು; ರಿಯಲಿ ಐ ಲೈಕ್ ಇಟ್ ಸೋ ಮಚ್".

ಅವಳು ಮಾತಾಡದೆ ತಿರಸ್ಕಾರದ ನಗೆ ಬೀರಿದಳು.

ಗ್ರಂಥದ ಬೆಲೆ ಹತ್ತು ಪೌಂಡುಗಳು. ಅದು ಪ್ರಕಾಶಿತವಾದುದೂ ಇಂಗ್ಲೆಂಡಿನಲ್ಲೇ. ಆಗಲೇ ನಾಲ್ಕನೇ ಮುದ್ರಣ ಕಂಡಿದೆ. ಹಣವನ್ನು ಕೊಟ್ಟು ಅದನ್ನು ಕೊಂಡುಕೊಂಡು ಅಂಗಡಿಯಿಂದ ಹೊರಬಿದ್ದೆ. ತುಂತುರು ಮಳೆ ಎಡೆಬಿಡದೆ ಸುರಿಯುತ್ತಿತ್ತು. ನನಗೆ ತುಂತುರು ಮಳೆಯೆಂದರೆ ಬಲು ಹಿತ. ಅವು ಮುತ್ತು ಮುತ್ತಾಗಿ ಮೈಕೈ ಮತ್ತು ಕೂದಲುಗಳ ಮೇಲೆ ಬಿದ್ದರೆ ನೋಡಲು ಎಷ್ಟು ಸುರಮ್ಯ ? ಅವು ಮೈಯನ್ನು ತಣ್ಣಗೆ ಕೊರೆಯುತ್ತವೆ ನಿಜ. ಆದರೂ, ಅದರಲ್ಲಿ ಶೀತಲೋಜಸ್ವಿತೆಯಿದೆ. ವಾಸ್ತವಿಕ ಪ್ರೇಮವಿದೆ. ಅವಿಸ್ಮರಣೀಯ ಜೀವನಬಂಧವಿದೆ.

ಗ್ರಂಥವನ್ನು ಓವರ್ ಕೋಟಿನ ಒಳಗಡೆ ಹಿಡಿದು ರಕ್ಷೆ ನೀಡಿ ಗೃಹಾಭಿಮುಖವಾಗಿ ನಡೆದೆ. ಅಲ್ಲಿಂದ ಸರ್ಪೆಂಟೈನ್ ಸ್ಟ್ರೀಟ್ ಮೂಲಕ ನಡೆದರೆ ಮನೆ ಹತ್ತಿರವೇ. ಆದರೆ ಪೀಟರ್ ವಾಸ ಅಲ್ಲೇ. ಅವನ ಮುಖ ನೋಡುವುದು ನನಗೆ ಇಷ್ಟವಿಲ್ಲ. ಅಂತಲೇ ರಾಜಮಾರ್ಗ ಹಿಡಿದೆ. ಮನೆಯಲ್ಲಿ ತಾಯಿ ಒಬ್ಬಳೇ ಅಡಿಗೆ ಕೆಲಸದಲ್ಲಿ ನಿಮಗ್ನಳಾಗಿದ್ದಳು. ಬೆಮೆಲ್ ಇನ್ನೂ ಎದ್ದೇ ಇರಲಿಲ್ಲ. ಅವಳು ಯಾವತ್ತೂ ಹಾಗೆಯೇ, ಮನೆಯಲ್ಲಿದ್ದರೆ ನಿದ್ದೆ. ಹೊರಹೋದರೆ ತಿರುಗಾಟ, ಮನೆಯನ್ನಾಗಲೀ ತಾಯಿಯ ಶ್ರಮವನ್ನಾಗಲೀ ಲಕ್ಷಿಸುವವಳೇ ಅಲ್ಲ. ಎಲಿಜ ಮನೆಯಲ್ಲಿದ್ದರೆ ಅಷ್ಟಿಷ್ಟು ಮಾಡುತ್ತಾಳೆ. ಆದರೆ, ಅವಳು ಮನೆಯಲ್ಲಿದ್ದರಷ್ಟೆ ? ನಾನು ಒಳ ಹೆಜ್ಜೆಯಿಟ್ಟಾಗ ಟೇಬಲ್ ಟೆನ್ನಿಸ್ ಆಡುತ್ತಿದ್ದ ಮೂವರು ಅಣ್ಣಂದಿರೂ ಕೈಯಲ್ಲಿದ್ದ ಗ್ರಂಥವನ್ನು ನೋಡಿ "ಲೈಬ್ರರಿಯಿಂದ ತಂದೆಯಾ?" ಎಂದರು.

"ಇಲ್ಲಪ್ಪಾ ! ಹೊಸದು."

"ಕೊಂಡು ತಂದೆಯಾ ?"

"ಹೌದು."

"ನೋಡೋಣ" ಎಂದು ನನ್ನ ಕೈಯಿಂದ ಅದನ್ನು ತೆಗೆದುಕೊಂಡು ಪುಟಗಳನ್ನು ಅಿವಿಹಾಕಿ ಅದರ ಬೆಲೆಯನ್ನು ನೋಡಿ ಹಾಸ್ಯ ಪ್ರಧಾನವಾಗಿ

ನಗುತ್ತ "ಹತ್ತು ಪೌಂಡ್ ಕೊಟ್ಟು ಕೊಳ್ಳುವ ಅವಶ್ಯಕತೆಯೇನಿತ್ತು ?" ಎಂದ ಟಾಮಿ.

ಒಡನೆಯೇ ಮೂವರೂ ನನ್ನನ್ನು ತರಾಟೆಗೆ ತೆಗೆದುಕೊಂಡುದುದಲ್ಲದೆ ತಾಯಿಯನ್ನು ಕರೆದು ಗ್ರಂಥವನ್ನು ತೋರಿ "ನೋಡಿದೆಯಾ. ನಿನ್ನ ಮಗಳ ವ್ಯವಹಾರ ? ದುಡ್ಡಿಲ್ಲದ ಈ ಕಷ್ಟದ ದಿನಗಳಲ್ಲಿ ಇಂಥ ದರಿದ್ರ ಪುಸ್ತಕವನ್ನು ಕೊಂಡು ತಂದಿದ್ದಾಳೆ ! ಯಾರಿಗೆ ಬೇಕು ಇದು ?"

ನಾನು ಪ್ರತಿಭಟಿಸಿದೆ "ನಿಮಗಾರಿಗೂ ಬೇಡವಾದರೆ ಬಿಡಿ. ನನಗೆ ಬೇಕು !"

"ಏತಕ್ಕೆ ? ಅದರಿಂದ ಏನು ಪ್ರಯೋಜನ ? ಮುಖ್ಯವಾಗಿ ನಮ್ಮ ಪುಸ್ತಕಗಳನ್ನು ಇಡುವುದಕ್ಕೆ ಸ್ಥಳವಿಲ್ಲ. ನಿನಗೆ ಇಷ್ಟವಾಗಿದ್ದರೆ ಲೈಬ್ರರಿ ಯಿಂದ ತಂದು ಓದಿ ಹಿಂದಿರುಗಿಸಬಹುದಾಗಿತ್ತಲ್ಲ ?"

"ಸರಿ, ಸರಿ. ನಾನು ತಂದಿರುವುದು ಹಿಂದಿರುಗಿಸುವುದಕ್ಕಲ್ಲ; ನನ್ನ ಸ್ವಂತಕ್ಕಾಗಿ."

ಆ ವೇಳೆಗೆ ಜೆಮೆಲ್ ಎದ್ದು ಬರುವುದಕ್ಕೂ ಹೊರಬಾಗಿಲಿನಿಂದ ಎಲಿಜ ಒಳಬರುವುದಕ್ಕೂ ಸರಿಹೋಯಿತು. ನನ್ನ ಪುಸ್ತಕದ ಪರಾಂಬರಿಕೆಯಿಂದ ಕುಪಿತಳಾಗಿದ್ದ ತಾಯಿ ಉಚ್ಚ ದನಿಯಲ್ಲಿ ಹೇಳಿದಳು "ಎಲೆ ಹುಚ್ಚು ಹುಡುಗಿ! ಇವತ್ತು ಹತ್ತು ಪೌಂಡ್ ಇದ್ದಿದ್ದರೆ ಎಷ್ಟು ಗ್ರಾಸ ಬರುತಿತ್ತು? ಎಲ್ಲರೂ ಒಂದುದಿನ ಪುಷ್ಕಳವಾದ ಭೋಜನ ಮಾಡಬಹುದಿತ್ತಲ್ಲ, ನಿನಗೆ ಅಷ್ಟು ಹೊಳೆಯಲಿಲ್ಲವೇ ? ದುಡಿಯುವವರಿಲ್ಲದ ದುರ್ದಿನಗಳಲ್ಲಿ ವ್ಯರ್ಥ ಕೆಲಸಕ್ಕೆ ಏಕೆ ಕೈ ಹಾಕಿದೆ ?"

"ಮನೆಗೆ ಕೊಡುವ ಹಣ ಆಗಲೇ ಕೊಟ್ಟಾಗಿದೆ. ಇದು ನನ್ನ 'ಪಾಕೆಟ್ ಮನಿ'ಯಿಂದ ಕೊಂಡುತಂದದ್ದು! ನಿಮಗೆ ಇಷ್ಟವಾಗದಿದ್ದರೆ ಬಿಡಿ, ನಾನೇಕೆ ಓದಬಾರದು? "

ಹಗರಣ ಅಲ್ಲಿಗೆ ಮುಗಿಯಲಿಲ್ಲ. ಎಲ್ಲರೂ ಅದರ ಮೇಲೆ ಎಷ್ಟೆಷ್ಟು ವ್ಯಾಖ್ಯಾನ ಮಾಡಿ ವಿಷಕಾರಬೇಕೋ ಅಷ್ಟೂ ಕಾರಿ ಸುಮ್ಮನಾದರು. ತಾಯಿ ಸಿಟ್ಟಿನಿಂದಲೇ ಅಡಿಗೆ ಮನೆಗೆ ಹೋದಳು. ಅಪ್ಪ ಕೆಲಸ ಮಾಡು ತಿದ್ದ ಮೈನಿನಲ್ಲಿ ಅಪಘಾತಕ್ಕೀಡಾದಮೇಲೆ ನಾನು ನನ್ನ ದುಡಿಮೆಯಲ್ಲಿ ಅರ್ಧ ಭಾಗವನ್ನು ತಾಯಿಗೆ ತಂದುಕೊಡುತ್ತಲೇ ಇರುವೆ. ಎಲಿಜ ಫ್ರೆಡ್ಡಿ ಎಡ್ವರ್ಡರೂ ಅಲ್ಪಸ್ವಲ್ಪ ಕೊಡುತ್ತಾರೆ. ಬೆಮೆಲ್ ಮತ್ತು ಟಾಮಿ ಯರು ಇನ್ನೂ ಸಂಪೂರ್ಣ ತಮ್ಮ ಕಾಲಮೇಲೆ ನಿಂತಿಲ್ಲವಾದುದರಿಂದ ತಾಯಿ ಅವರನ್ನು ಕೇಳುವುದಿಲ್ಲ. ಆರ್ಥಿಕ ಅನಾನುಕೂಲತೆಯಿಂದ ಯಾರೂ ಇಂಟರ್ ಮೀಡಿಯಟ್ ದಾಟಲಿಲ್ಲ. ನಾನು ಸ್ಕೂಲ್ ಫೈನಲ್‌ಗೆ ಬಿಟ್ಟು ಟೈಪಿಸ್ಟ್ ಆಗಿ ಕೆಲಸಕ್ಕೆ ಸೇರಿಕೊಂಡೆ. ವಾರಕ್ಕೆ ಹದಿನೈದು–ಇಪ್ಪತ್ತು ಪೌಂಡು ಗಳಿಕೆ. ಒಳ್ಳೆಯ ಗೆಳೆಯ ವೃಂದ. ಹೆಸರುವಾಸಿಯಾದ ಕಂಪನಿ ಯಲ್ಲಿ ಕೆಲಸ. ನನಗಷ್ಟೇ ಸಾಕು ಎಂಬಷ್ಟು ಮನಸ್ತೃಪ್ತಿ. ಬಹುಶಃ ಅಕ್ಕ ಅಣ್ಣಂದಿರಿಗಿಂತ ಗಳಿಕೆಯಲ್ಲಿ ನಾನೇ ಮುಂದೆ ಅಥವಾ ಹೆಚ್ಚುಗಳಿಸಿದ್ದರೂ ಹೇಳದೆ ತಮ್ಮತಮ್ಮಲ್ಲಿ ನುಂಗಿಕೊಳ್ಳುವ ಸ್ವಾರ್ಥಿಗಳು ಅವರು. ನಾನೂ ಯಾವತ್ತೂ, ಯಾರನ್ನೂ ಎದುರು ಹಾಕಿಕೊಂಡವಳಲ್ಲ. ನನ್ನ ಅಳುಕು ಸ್ವಭಾವವನ್ನು ನೋಡಿಯೇ ಎಲ್ಲರೂ ನನ್ನ ಮೇಲೆ ಹರಿಹಾಯುತ್ತಾರೆ ಎನಿಸುತ್ತೆ ನನಗೆ.

ಬಹುಶಃ ಎಲಿಜ ನನ್ನ ಕಂದಿದ ಮುಖವನ್ನು ಗಮನಿಸಿದಂತೆ ಹೇಳಿದಳು "ನಿಜವಾಗಿಯೂ ಜನಿ ! ನೀನು ಆ ಪುಸ್ತಕದ ಮೇಲೆ ಹಣ ಹಾಕಿ ಹಾಳು ಮಾಡಿದುದರಲ್ಲಿ ತಪ್ಪಿಲ್ಲದಿಲ್ಲ. ಅದು ಭಾರತದ ಸಂಪ್ರದಾಯವಾದಿಗಳಿಗೆ ಸರಿ; ನಮಗೇತಕ್ಕೆ?"

"ಸಂಪ್ರದಾಯಕ್ಕೂ ವಾಸ್ತವಿಕ ಸೌಂದರ್ಯಕ್ಕೂ ಬಹಳ ವ್ಯತ್ಯಾಸ ವಿದೆ. ಸೌಂದರ್ಯ ಸೌಂದರ್ಯವೇ ! ಸಂಪ್ರದಾಯ ಸಂಪ್ರದಾಯವೇ !"

"ಇರಲಿ, ನಮಗೂ ಅದಕ್ಕೂ ಎಲ್ಲಿಯ ಸಂಬಂಧ? ನೀನಾದರೂ ಅದ ಕ್ಕೇಕೆ ಹಣ ಹಾಳು ಮಾಡಬೇಕು ? "ಯೂ ಮಸ್ಟ್ ಸ್ಪೆಂಡ್ ದಿ ಮನಿ ಫಾರ್ ದಿ ಸೇಕ್ ಆಫ್ ಫ್ಯಾಮಿಲಿ."

ಆಗ ಪುಸ್ತಕದಂಗಡಿಯಲ್ಲಿದ್ದ ದಂಪತಿಗಳು ನೆನಪಿಗೆ ಬಂದರು. ನಾನು ಮನದಲ್ಲೇ ಉದ್ಗಾರ ತೆಗೆದೆ .. .... "ಈ ಜಗತ್ತೇ ಹೀಗೆ ! ನಾನುಂಟೋ ಜಗತ್ತುಂಟೋ!"

ನನ್ನ ಒಡಹುಟ್ಟುಗಳನ್ನು ಕುರಿತು ಹೆಚ್ಚು ಹೇಳುವುದಕ್ಕಿಂತ ಈವೊಂದು ದೃಷ್ಟಾಂತದಿಂದಲೇ ಅರ್ಥಮಾಡಿಕೊಳ್ಳಿ ಎನ್ನುವುದು ಲೇಸು. ತಾಯಿ ಮನೆಯಲ್ಲೂ ದುಡಿದು ಹೊರಗು ದುಡಿದು ಸಂಸಾರ ನಡೆಸುತ್ತಾಳೆ. ಅವಳ ಬಗ್ಗೆ ಯಾರಿಗೂ ಮರುಕವಿಲ್ಲ. ಎಲ್ಲರಿಗೂ ಸ್ವಚಿಂತನೆಯೇ. ಅವರ ನಿರ್ಲಕ್ಷ್ಯವನ್ನು ನೋಡಿಯೇ ನಾನು ನನ್ನ ದುಡಿಮೆಯಲ್ಲಿ ಅರ್ಧಾಂಶವನ್ನು ಕೊಡುತ್ತಾ ಬಂದಿರುವೆ. ಅದಲ್ಲದೆ ಮನೆಯಲ್ಲಿದ್ದಷ್ಟು ಸಮಯವೂ ಕೈಲಾದಷ್ಟು ಸಹಾಯವನ್ನು ಮಾಡುವುದರಲ್ಲೂ ನಾನೇ ಮುಂದೆ. ಆದರೂ ಸಹ, ಒಡಹುಟ್ಟುಗಳಿಗೆ ಸಮಾಧಾನವಿಲ್ಲ; ಅದಕ್ಕೆ ಬದಲಾಗಿ ಹೊಟ್ಟೆಯುರಿ.

ನನ್ನನ್ನು ಅಣಕಿಸುವ ಸಲುವಾಗಿ ಬೆಮೆಲ್ ಅಂದಳು "ಅವಳಿಗೆ ಇಂಡಿಯನ್ಸ್ ಎಂದರೆ ಎಲ್ಲಿಲ್ಲದ ಪ್ರೀತಿ. ಶಾಲಾದಿನಗಳಲ್ಲಿ ಆ ಸುಮನಾ ಜೊತೆ ಓಡಾಡುತ್ತಿದ್ದುದು ಯಾರೂ ಮರೆತಿಲ್ಲವಷ್ಟೆ? ಅವಳನ್ನು ನೋಡಿದರೆ ನನಗೆ ಅಸಹ್ಯ. ಇವಳಿಗೆ ಸ್ನೇಹ! ಯಾರೊಂದಿಗೆ ಸ್ನೇಹ ಬೆಳಸಬೇಕು; ಯಾರೊಂದಿಗೆ ಬೆಳಸಬಾರದು ಎಂಬುದರ ಅರಿವೂ ಇಲ್ಲವಲ್ಲ, ಕೀಳು ಬುದ್ಧಿ, ಕೀಳು ಸಹವಾಸ; ಕೀಳು ವ್ಯವಹಾರ. ನನಗಂತೂ ಇದೆಲ್ಲಾ ಹಿಡಿಸುವುದಿಲ್ಲ ನೋಡು! ಯೂ ಆರ್ ಎ ಫೂಲ್ ಐ ಟೆಲ್ ಯೂ!"

ಅವಳ ಮಾತಿಗೆ ಕಿವಿಗೊಡದೆ ನಾನು ನನ್ನ ಕೆಲಸದಲ್ಲಿ ನಿಮಗ್ನಳಾದೆ. ಬೆಮೆಲ್ ಯಾವಾಗಲೂ ಹಾಗೆಯೆ. ಅವಳ ಹೊಟ್ಟೆಯುರಿ ಅರ್ಥವಿಲ್ಲದ್ದು. ಪ್ರತಿ ಮಾತಾಡುವುದು ಕೊಚ್ಚೆಗೆ ಕಲ್ಲೆಸೆದಂತೆಯೇ.

ಫ್ರೆಡ್ಡಿಗೆ ನಾನು ಮಾತಾಡದಿದ್ದುದು ಹೊಟ್ಟೆಯುರಿಸಿತೇನೋ. ಅವನು ಹಲ್ಕಿರಿದು ಅಂದ "ನೀನು ಇಂಡಿಯಾಕ್ಕೆ ಹೋಗು! ಆ ದೇವಸ್ಥಾನಗಳಲ್ಲಿ ತಪಸ್ಸು ಮಾಡಬಹುದು !"

ಎಲ್ಲರೂ ಗೊಳ್ಳನೆ ನಕ್ಕರು. ನಗೆಯ ಹೊನಲು ನಾಡುಮುಟ್ಟುವಂತೆ ಚಿಮ್ಮಿತು.

"ನಾನು ಏನಾದರೂ ಮಾಡುತ್ತೇನೆ. ಅದು ನನ್ನ ಇಷ್ಟ!" ತೀವ್ರ ಅಸಮಾಧಾನದಿಂದ ನುಡಿದು ಒಳಹೋದೆ.

ಒಳಗಿನ ಕೆಲಸವನ್ನು ಮುಗಿಸಿದ ನಂತರ ನಾನು ಗ್ರಂಥವನ್ನು ತೆರೆದೆ. ಒಳಪುಟದಲ್ಲಿ ಬಿಮಲ್‌ರೇ ಚಿತ್ರಪಟವಿತ್ತು. ಕೆಂಪು ಹೂವೆಂಚಿನ ಬಿಳಿಯ ದುಕೂಲವುಟ್ಟ ಆಕೆ ಸುಂದರಿಯೂ ಹೌದು. ಹಣೆಯಲ್ಲಿ ತಿಲಕ; ಬೈತಲೆಯಲ್ಲಿ ಸಿಂಧೂರ; ತುಟಿಗಳಲ್ಲಿ ಎಳೆನಗು; ಅಗಲವಾದ ಕಣ್ಣುಗಳಲ್ಲಿ ಮಿನುಗುವ ಮಿಂಚು; ದುಂಡುಮುಖದಲ್ಲಿ ನೋಡಿದಷ್ಟೂ ಆಕರ್ಷಣೀಯತೆ ಇದೆ. ಚಿತ್ರದಡಿಯಲ್ಲಿ ಹೆಸರು ಅಚ್ಚಾಗಿತ್ತು. ನನಗೆ ಸುಮನಾ ಸಹವಾಸದಿಂದ ಇಂಡಿಯಾದೇಶೀಯರ ನೀತಿ–ನಿಯಮಗಳು, ಆಚಾರ ವ್ಯವಹಾರಗಳು ಸಾಕಷ್ಟು ಪರಿಚಯವಾಗಿವೆ. ಅವರಲ್ಲಿರುವ ಪ್ರೀತಿ–ವಿಶ್ವಾಸ–ಅನ್ಯೋನ್ಯತೆಗಳು ನನಗೆ ಬಲು ಪ್ರಿಯ. ಅತಿಥಿ ಸತ್ಕಾರದಲ್ಲಿ ಅವರಿಗಿರುವ ಆಸ್ಥೆ ಮೆಚ್ಚುವಂತಾದ್ದು. ಸುಮನಾ ನನ್ನ ವಯಸ್ಸಿನವಳೇ. ಅವಳೊಂದಿಗೆ ಅಲ್ಪಸ್ವಲ್ಪ ಹಿಂದಿಯನ್ನು ಕಲಿತಿದ್ದೆ. ಅವಳು ಇಂಡಿಯಾಕ್ಕೆ ಹಿಂದಿರುಗಿ ಮೂರು ವರ್ಷಗಳೇ ಆದುವು. ಅನಂತರ ಅದು ಮರೆತು ಹೋಯಿತು.

ನನ್ನ ಆತ್ಮೀಯ ಗೆಳತಿ ಸುಮನಾ ಬರೋಡೆಯವಳೇ. ಅವಳೂ ನಾನು ಐದು ವರ್ಷಗಳ ಪರ್ಯಂತ ಒಂದೇ ಶಾಲೆಯಲ್ಲಿ ಕಲಿತಿದ್ದು. ಕುಳಿತುಕೊಳ್ಳುತಿದ್ದುದೂ ಅಕ್ಕಪಕ್ಕದಲ್ಲೇ. ಅವಳು ಕೆಲವೊಮ್ಮೆ ಪಂಜಾಬಿ ಉಡುಗೆ ತೊಡುತ್ತಿದ್ದರೂ ಹೆಚ್ಚಾಗಿ ಉಡುತಿದ್ದುದು ಸೀರೆಗಳನ್ನು. ಅವಳ ಗೆಳೆತನದಿಂದಾಗಿ ನಾನು ಭಾರತೀಯ ಉಡುಗೆ ತೊಡುಗೆಗಳನ್ನು ಚೆನ್ನಾಗಿ ಅರಿತಿರುವೆ. ಅವಳೊಂದಿಗೆ ಒಮ್ಮೆ ನಾಟಕದಲ್ಲಿ ಪಾತ್ರ ವಹಿಸಿದ್ದುದುಂಟು. ಆಗ ನಾನು ಸೀರೆಯುಟ್ಟು ತಿಲಕವಿಟ್ಟು ಸಿಂಧೂರವನ್ನು ಧರಿಸಿ ಅಚ್ಚ ಭಾರತೀಯ ಹೆಣ್ಣಾಗಿದ್ದೆ. ನಾಟಕ ನಡೆದುದು ಭಾರತ ಹೈಕಮೀಷನರ ಕಛೇರಿಯಲ್ಲಿ. ಸುಮನಾ ಹೈಕಮೀಷನರ ಮಗಳೇ. ಬ್ರಿಟನ್ ಮತ್ತು ಭಾರತ ಸಾಂಸ್ಕೃತಿಕ ಕಾರ್ಯ

ಕ್ರಮಗಳ ಒಕ್ಕೂಟ ಅದು. ಅ ವಿಚಾರ ಮನೋಭಿತ್ತಿಯಮೇಲೆ ಸುಳಿದಾಗ ನಾನು ದೃಷ್ಟಿಯನ್ನು ಹೊರಜಗತ್ತಿನಲ್ಲಿ ಚೆಲ್ಲಿಕೊಟ್ಟೆ. ಶರತ್ಕಾಲದ ದೃಶ್ಯ ಅತ್ಯಂತ ಮನೋಹರ. ಸೂರ್ಯಬಿಂಬ ಕ್ಷಿತಿಜರೇಖೆಗಳ ಮಧ್ಯೆ ಮೆಲ್ಲಮೆಲ್ಲನೆ ಜಾರಿ ಹೋಗುತ್ತಿದೆ. ದಿಗ್ದೇಶ ನೀಲಿಯಿಂದ ಹರಿದ್ರಕ್ಕೆ ಹರಿದ್ರದಿಂದ ಕೇಸರಕ್ಕೆ ಕೇಸರದಿಂದ ರಕ್ತವರ್ಣಕ್ಕೆ ಬದಲಾಯಿಸುತ್ತಿದೆ ಸಮಯೋಚಿತವಾಗಿ. ಹಿಮಾಚ್ಛಾದಿತ ಮರಗಳು ಸಂಧ್ಯಾರಾಗದಿಂದ ವೈಭವೋಪೇತವಾಗಿವೆ. ಆದರೆ ನೈರುತ್ಯದಿಕ್ಕಿನಿಂದಲೋ ಏನೋ ಕಾರ್ಮೇಘಗಳು ದಂಡೆತ್ತಿ ಬರುತ್ತಿರುವು ದನ್ನು ನೋಡಿದರೆ ಮನಸ್ಸಿಗೆ ಆತಂಕವನ್ನು ಮೂಡಿಸುವಂತಹ ಪರಿಸ್ಥಿತಿ. ಕಳೆದೆರಡು ವಾರಗಳಿಂದ ವಾತಾವರಣ ಮಳೆ ಬಿಸಿಲಾಗಿತ್ತು. ಈಗಣ ಕಾರ್ಮೋ ಡಗಳು ಭೈರವ ವರ್ಷವನ್ನೇ ಕರೆಯಬಹುದು...... ಎನಿಸಿದಾಗ ಎದೆಯಾಳ ದಿಂದ ಬಿಸಿಯುಸಿರೊಂದು ಮೆಲ್ಲನೆ ತಪ್ಪಿಸಿಕೊಂಡಿತು.

ನಾನು ಪುಟಗಳನ್ನು ತಿರುವಿ ಹಾಕಿದೆ. ಸೊಬಗು ಸಿರಿಯ ದೇವಾಲಯಗಳು ಕಣ್ಣಿಗೆ ಹಬ್ಬವನ್ನುಂಟುಮಾಡಿದುವು. ಆ ಕಲಾಕೃತಿಗಳ ಶಿಲೆಯಿಂದ ಮೂಡಿದುವೊ ಬೆಣ್ಣೆಯಿಂದ ಹೊಮ್ಮಿದುವೋ ಎಂದು ಎಂತಹ ವರೂ ಅಚ್ಚರಿ ಪಡುವಂತಹ ಅದ್ಭುತ ಕರಕೌಶಲ....ಭಾರತ ಆಧ್ಯಾ ತ್ಮಿಕವಾದುದು ; ಉನ್ನತಿಯ ಪ್ರತೀಕ...ಭಕ್ತಿ ಭಾವದ ಅತ್ಯದ್ಭುತ ಸ್ಮಾರಕ... ಒಮ್ಮೆ ಭಾರತ ಪ್ರವಾಸ ಹೋಗಿ ಇವನ್ನೆಲ್ಲಾ ಕಣ್ತುಂಬ ನೋಡಬೇಕು ಎನಿಸಿತು ನನಗೆ. ಆ ಬಗ್ಗೆ ಏಸುಸ್ವಾಮಿಗೆ ಆತ್ಮ ನಿವೇದನೆ ಮಾಡಿಕೊಂಡೆ.

ಸುಮನಾ ಒಮ್ಮೆ ಹೇಳಿದ್ದಳು "ಭಾರತ ತೀರ ಶೋಷಿತವಾದ ದೇಶ ಬಡತನದಿಂದ ಅದು ಮುಕ್ತಿಹೊಂದಬೇಕಾದರೆ ಒಂದು ಶತಮಾನವೇ ಬೇಕು."

ಒಳಗಡೆಯಿಂದ ತಾಯಿಯ ಕರೆ ಜನೀ...."

ದನಿಯಲ್ಲಿ ಆಯಾಸ – ಅಸಮಾಧಾನ – ಅಶಾಂತಿಗಳ ಸಂಮಿಶ್ರಣವೇ ಇತ್ತು. ನಾನು ಗ್ರಂಥವನ್ನು ಮುಚ್ಚಿ ಓಗೊಡುವುದರೊಳಗಾಗಿ ಪುನಃ ಅದೇ ದನಿ ಮೊಳಗಿತು, ಜನೀ..."

"ಜೀವಿತದಲ್ಲಿ ವೃದ್ಧಾಪ್ಯ ಎಂಬುದು ಒಂದು ವಿಶಿಷ್ಟ ಘಟ್ಟ. ತನ್ನ ಜೀವ ನರಂಗದ ಕೊನೆಯ ತೆರೆ ಎಳೆಯುವಾಗಲೂ ಇತರರ ಕಾರ್ಯ ಚತುರತೆಗಳಿಗೆ ದಾರಿತೋರುವ ಒಂದು ದಾರಿ ದೀಪ" ಆ ಕ್ಷಣವೇ ಅಂತರ್ವಾಣಿ ಕೂಗಿ ಹೇಳಿತು. ನಾನು ಎದ್ದು ಹೋದೆ.

ತಾಯಿ ಬಟ್ಟಲು ಬಸಿಗಳನ್ನು ತೊಳೆಯುವುದರಲ್ಲಿ ನಿಮಗ್ನಳಾಗಿದ್ದಳು. ನಾನು ಅವಳಿಗೆ ತೊಳೆಯಲು ಸಹಾಯಕಳಾದೆ. ಅವಳಿಗೆ ಕೆಲಸಕ್ಕೆ ಹೋಗಲು ಹೊತ್ತಾದುದರಿಂದ ಹೇಳಿದಳು "ಹೊತ್ತಾಯಿತು ನನಗೆ. ಇನ್ನೂ ಅಡಿಗೆ ಪೂರ್ತಿಯಾಗಲಿಲ್ಲ. ಉಳಿದ ಕೆಲಸ ನೀನು ನೋಡಿಕೊ. ನಾನು ಹೊರಡುವೆ."

"ಆಗಲಿ"

೦ ೦ ೦ ೦

ಲಂಡನ್ ನಗರ. ಶೀತಲ ವಾತಾವರಣದ ಮಹಾಪೂರ.

ಶಾಂತ ಸಮೃದ್ಧ ಪ್ರಾತಃಸಮಯ.

ಸ್ವಚ್ಛವಾದ ತಾಣದಲ್ಲಿ ಮೈದಾಳಿದ ಬೃಹದ್ ಕಟ್ಟಡದಲ್ಲಿ ಕೌಂಟ್ ಹೆರ್ಮನ್ ಅಂಡ್ ಕಂಪನಿ. ನಾನು ಅಲ್ಲಿಗೆ ಹೋದಾಗ ಸೋಫಿ ಮೇರಿಯರು ಇನ್ನೂ ಬಂದಿರಲಿಲ್ಲವಾದುದರಿಂದ ಅವರಿಗಾಗಿ ಕಾಯುತ್ತ ಬಾಗಿಲ ಬಳಿನಿಂತೆ. ಬರುವವರು ಬರುತಿದ್ದಾರೆ. ಒಳ ಹೋಗುವವರು ಹೋಗುತ್ತಿದ್ದಾರೆ. ಮಹಡಿ ಹತ್ತುವವರು ಹತ್ತುತಿದ್ದಾರೆ. ಮಾತಿನ ಮರ್ಮರ ಸದ್ದಿನೊಂದಿಗೆ ಬೂಟಿನ ತಾಡನಗಳ ಸದ್ದು ಕಿವಿಯನ್ನು ಅವ್ಯಾಹತವಾಗಿ ಮುತ್ತುತಿತ್ತು. ನಾನು ನೋಟವನ್ನು ಕರವಸ್ತ್ರದ ಮೇಲೆ ಹರಿಸಿದ್ದಾಗ ಎದುರಾಗಿ ಬಂದ ಅಪರಿಚಿತ ನೊಬ್ಬ "ಒನ್ ಮಿನಿಟ್ ಪ್ಲೀಸ್!" ಎಂದ.

ನಾನು ತಕ್ಷಣ ತಲೆಯೆತ್ತಿ ನೋಡಿದೆ. ಆ ಕ್ಷಣವೇ ನಾಲ್ಕು ಕಣ್ಣು ಗಳೂ ಅನಿರೀಕ್ಷಿತವಾಗಿ ಕೂಡಿದುವು. ಮರುಕ್ಷಣವೇ ಬೆಚ್ಚಿ ಬೇರೆಡೆಗೆ ನೋಟ

ವನ್ನು ಸಿಡಿಸಿದೆ. ಒಂದೆರಡು ಕ್ಷಣ ಮೈಮರೆತೇನೋ ಅನಂತರ ನನ್ನನ್ನು ನಾನೇ ಸುಧಾರಿಸಿಕೊಳ್ಳುತ್ತ ಕೇಳಿದೆ 'ಏನು ಬೇಕಾಗಿತ್ತು?'

ಓಹ್! ಅವನಲ್ಲಿ ಅದೆಂತಹ ಆಕರ್ಷಕತೆ? ಅದೆಂತಹ ಭವ್ಯತೆ? ನಾನು ಇದುವರೆಗೂ ನೋಡಿರದಂಥ ಸುಂದರವ್ಯಕ್ತಿತ್ವ. ಇದೇ ಪ್ರಥಮ ಬಾರಿಗೆ ಇಲ್ಲಿಗೆ ಬಂದಿದ್ದಾನೆ. ನನ್ನ ಆಶ್ಚರ್ಯಯುಕ್ತ ನೋಟ ಅವನೆಡೆಗೆ ಪುನಃ ಹರಿದಾಗ ಅವನೆಂದ "ನಾನು ಡೈರೆಕ್ಟರನ್ನು ನೋಡಬೇಕಾಗಿತ್ತು."

"ಅವರಿನ್ನೂ ಬಂದಿಲ್ಲ. ನೀವು ಸ್ವಲ್ಪಹೊತ್ತು ಕಾಯುವಿರಾದರೆ...?"

"ಆಗಬಹುದು."

"ಹೀಗೆ ಬನ್ನಿ."

ಅವನನ್ನು ಒಳಕೊಠಡಿಗೆ ಕರೆದುಕೊಂಡು ಹೋಗಿ ಅತಿಥಿಗಳು ಕೂಡುವೆಡೆಯಲ್ಲಿ ಕೂರಿಸಿ ಹೊರ ಬಂದೆ. ಆದರೆ, ಅವನ ಅತ್ಯಂತ ಆಕರ್ಷಣೀಯವಾದ ವ್ಯಕ್ತಿತ್ವ ಅಕ್ಷಿಪಟಲದ ಮೇಲೆ ಅಚ್ಚಳಿಯದೆ ಉಳಿಯಿತು. ದೇಹಾದ್ಯಂತ ಬಿಸಿನೆತ್ತರಿನ ಛುರಿ ಬಿಸಿಬಿಸಿಯಾಗಿ ಹರಿದಾಡತೊಡಗಿತು. ಯಾರಿರಬಹುದು ?"

ಪುನಃ ಅದೇ ಪ್ರಶ್ನೆ ಯಾರಿರಬಹುದು ?... ಯಾರಿರಬಹುದು ?... ಯಾರಿರಬಹುದು ?

ನಾನೇ ಅವನೊಂದಿಗೆ ಮಾತಾಡಿ ಯಾರಿರಬಹುದೆಂದು ತಿಳಿದುಕೊಳ್ಳಲೇ ಎಂಬ ಕುತೂಹಲ ಒಳಗಿಂದೊಳಗೆ ಕುದಿಯಹತ್ತಿತು. ಆದರೆ...ಒಳಗಿಂದೊಳಗೆ ಪರಿಭ್ರಮಿಸುವ ಆಶಾಪಾಶಗಳಿಂದ ಮಾತಾಡಿಸುವ ವ್ಯವಧಾನ ಮೂಡಲಿಲ್ಲ. ಎಂತೋ, ಏನೋ, ಎಂಬ ತಾನವಿತಾನದಲ್ಲಿ ಮುಖಾಮುಖಿಯಾಗಿ ನಿಂತು ಮಾತಾಡುವ ಸ್ಥೈರ್ಯವೂ ಇಲ್ಲ. ಹೃದಯರಂಗ ದ್ವಂದ್ವ ಭಾವನೆಗಳ ತತ್ತ್ರಳ ತುಳಿತಕ್ಕೆ ಸಿಕ್ಕಿ ಆಹತವಾಗುತ್ತಿದ್ದರೂ ನಾನು ಒಳ ಹೆಜ್ಜೆಯಿಡಲಿಲ್ಲ. ಸ್ವಲ್ಪ ಹೊತ್ತು ಉರುಳಿತೇನೋ ಅವನೇ ಎದ್ದು ಹೊರಬಂದ. ಈ

ಸಲಿ ನಾನು ಹುಬ್ಬೇತ್ತಿ ಸರಿಯಾಗಿ ನೋಡಿದೆ. ಅವನು ಈ ಪ್ರಾಂತ್ಯದವ ನೇನೂ ಅಲ್ಲ. ಬಹುಶಃ ಇಂಡಿಯನ್ ಇರಬಹುದು....... ನನ್ನ ಗಂಭೀರ ಭಾವವನ್ನು ನೋಡಿಯೋ ಏನೋ ಅವನೇ ಕೇಳಿದ "ಡೈರೆಕ್ಟರವರು ಬರುವ ಹೊತ್ತು ತಿಳಿದರೆ ಅ ಸಮಯಕ್ಕೆ ಸರಿಯಾಗಿ ಬರುವೆ....ಆಗಬಹುದೇ ?"

"ಅವರು ಹತ್ತೂವರೆಗೆ ಬರುತ್ತಾರೆ. ಕೆಲವೊಮ್ಮೆ ಹೆಚ್ಚು ಕಡಿಮೆ ಯಾಗಬಹುದು."

ಅವನ ಮುಖಬಿಂಬ ಶಿಲ್ಪಿಯ ಕರಕೌಶಲದಿಂದ ಒಡೆದು ಮೂಡಿದಷ್ಟು ಸುಂದರ. ಒಂದೊಂದು ಅಂಗಗಳೂ ಶೋಭಾಯುಕ್ತ. ಹೆಚ್ಚು ಬಿಳುಪಲ್ಲ ದಿದ್ದರೂ ಕಪ್ಪಲ್ಲ, ಕೆಂಪು ಕೆಂಪು. ಇಪ್ಪತ್ತೈದರ ಹರೆಯ. ಸದೃಢ ಶರೀರ ಸೌಷ್ಠವ. ಒಟ್ಟಿನಲ್ಲಿ ಅತ್ಯಪೂರ್ವವಾದ ವ್ಯಕ್ತಿಶ್ರೀ.

ಆ ಕ್ಷಣ ನೋಟವನ್ನು ಕೈಗಡಿಯಾರದ ಮೇಲೆ ಚೆಲ್ಲಿ "ಇನ್ನೂ ಅರ್ಧ ಗಂಟೆಯಿದೆ. ಆ ಸಮಯಕ್ಕೆ ಸರಿಯಾಗಿ ಬರುವೆ" ಎಂದ ಅವನು.

"ಆಗಲಿ."

ಅವನು ಮೆಟ್ಟಿಲಿಳಿದು ತ್ವರಿತಗತಿಯಲ್ಲಿ ನಡೆದು ಹೋದ. ನನ್ನ ಕಣ್ಣುಗಳು ಅವನು ಕಣ್ಮರೆಯಾಗುವವರೆಗೂ ನೋಡಿದುವು. ಅವನು ಹೋಗಿ ಒಂದೆರಡು ನಿಮಿಷಗಳು ಉರುಳುವಷ್ಟರಲ್ಲಿ ಮೇರಿ ಸೋಫಿಯರು ಬಂದರು. ನಾವು ಮೂವರೂ ಒಟ್ಟಾಗಿ ಕೆಲಸಕ್ಕೆ ಕೈಹಚ್ಚಿದೆವು. ಟೈಪ್ ರೈಟರ್ ಯಂತ್ರಗಳ ಕಟಕಟ ಸದ್ದು ಮಾಡುಮುಟ್ಟುವಂತೆ ಮೊಳಗಹತ್ತಿತು. ಸೆಕ್ಷನ್ ಆಫೀಸರ್ ಕೊಠಡಿಯ ತುತ್ತತುದಿಯಲ್ಲಿ ಕಾಗದ ಪತ್ರಗಳನ್ನು ಪರಿ ಶೀಲಿಸುತಿದ್ದ. ಕೊಠಡಿಯ ತುಂಬೆಲ್ಲಾ ಕೆಲಸಗಾರರಿಂದ ತುಂಬಿಹೋಗಿತ್ತು. ಮ್ಯಾನೇಜ್‌ಮೆಂಟಿನವರು ಮಹಡಿ ಹತ್ತಿದರು. ಡೈರೆಕ್ಟರು ಬಂದು ತಮ್ಮ ಕೊಠಡಿಗೆ ಹೋದ ಕೆಲವೇ ನಿಮಿಷಗಳಲ್ಲಿ ಆ ವ್ಯಕ್ತಿಯೂ ಆಗಮಿಸಿದ. ಅವನ ಪ್ರತೀಕ್ಷೆಯಲ್ಲಿದ್ದ ನಾನು ಅವನನ್ನು ಮಹಡಿಯ ಮೇಲಿನ ಕೊಠಡಿಗೆ ಕರೆದು ಕೊಂಡು ಹೋಗುತ್ತ ಪ್ರಾಸಂಗಿಕವಾಗಿ ಕೇಳಿದೆ "ನಿನ್ನ ಹೆಸರನ್ನು ತಿಳಿಯ ಬಹುದೇ ?"

"ಭಾಸ್ವಾನ್!" ಎಂದ ಅವನು ಪುನಃ ನನ್ನನ್ನು ಕೇಳಿದ "ನಿನ್ನ ಹೆಸರು?"

"ಜನೀ...."

ಅನಂತರ ಅವನನ್ನು ಡೈರೆಕ್ಟರವರಿಗೆ ಪರಿಚಯಿಸಿ ನಾನು ಕೆಳಗಿಳಿದು ಬಂದೆ. ನನ್ನ ಮನಃ ಪಟಲದ ಮೇಲೆ ಅವನ ಚಿತ್ರಿತ ಚಿತ್ರ ಘನೀಭೂತ ವಾಗಿತ್ತು. ನಾನೇಕೆ ಅವನಿಗೆ ಅಷ್ಟೊಂದು ಮಾರುಹೋದೆ ಎಂಬುದು ಅರ್ಥವಾಗಲಿಲ್ಲ. ಮೇಲಾಗಿ, ಅವನ ಪರಿಚಯ ಮಾಡಿಕೊಂಡು ಪೂರ್ವೋತ್ತ ರಗಳನ್ನು ತಿಳಿದು ಕೊಳ್ಳಬೇಕೆಂಬ ಉತ್ಕಟ ಆಕಾಂಕ್ಷೆ ಮನದಲ್ಲಿ. ಕೈ ಬೆರ ಳುಗಳು ಟೈಪ್‌ರೈಟರ್ ಮೇಲೆ ಯಾಂತ್ರಿಕವಾಗಿ ಓಡಾಡಿದವು. ಅವನು ಕೆಳ ಗಿಳಿದು ಬರುವಾಗಲೊಮ್ಮೆ ನೋಡುವ ತವಕದಿಂದ ಕಣ್ದೃಷ್ಟಿ ಮೆಟ್ಟಲುಗಳ ಕಡೆ ಪುನಃ ಪುನಃ ಹರಿಯುತಿದ್ದುದರಿಂದ ಅನೇಕ ತಪ್ಪುಗಳು ಸಂಭವಿಸಿದುವು. ಆದರ ಬಗ್ಗೆ ನಾನು ಅಷ್ಟಾಗಿ ತಲೆ ಕೆಡಿಸಿಕೊಳ್ಳಲಿಲ್ಲ. ಅರ್ಧಗಂಟೆಯ ನಂತರ ಅವನು ಅಫೀಸಿನಿಂದ ಕೆಳಗಿಳಿದು ಬಂದಾಗ ಮುಖಬಿಂಬದಲ್ಲಿ ಹರ್ಷ ಭಾವನೆ ತಾಂಡವವಾಡುತ್ತಿತ್ತು. ಅತ್ತಿತ್ತ ತಿರುಗಿ ನೋಡದೆಯೇ ಹೊರ ನಡೆದೇ ಬಿಟ್ಟ.

ಮರುದಿನವೂ ಅವನು ಬಂದ. ಇಂದು ಅವನೊಂದಿಗೆ ಇಬ್ಬರು ಗೆಳೆ ಯರು ಬಂದಿದ್ದರು. ಅವರಲ್ಲಿ ಅಂತಹ ಆಕರ್ಷಕತೆಯೇನೂ ಕಾಣಿಸಲಿಲ್ಲ. ಇವನು ಮಾತ್ರ ಸ್ಫುರದ್ರೂಪಿ ಎಂದು ಮನಃಪ್ರಾಣಗಳು ಒಪ್ಪಿಕೊಳ್ಳುತ್ತವೆ. ರಕ್ತದ ಕಣಕಣಗಳೂ 'ಹೌದು' ಎಂದು ಪ್ರತಿಪಾದಿಸುತ್ತವೆ. ಆಂದಮೇಲೆ, ನಾನು ಮಕರಂದಕ್ಕೆ ಮಾರುಹೋಗುವ ದುಂಬಿಯಂತಾದೆ, ಎಂದು ಹೇಳ ಬೇಕಾಗಿಲ್ಲ.

ಈ ವಾರದಲ್ಲಿ ನಾಲ್ಕೈದು ಬಾರಿಯಾದರೂ ಅವನು ಬಂದು ಹೋಗಿರಬ ಹುದು. ಮಹಡಿಯ ಮೇಲಕ್ಕೆ ಹೋಗಿ ಬರುವಾಗಲೆಲ್ಲ ನನ್ನ ದೃಷ್ಟಿ ತಪ್ಪದೆ ಸಂದರ್ಶಿಸುತಿತ್ತು. ಎಷ್ಟೋವೇಳೆ ರಾತ್ರಿಯೆಲ್ಲಾ ನಿದ್ರೆ ಮಾಡದೆ ಅವನ ಚಿತ್ರವನ್ನು ಮನಃಪಟಲದಮೇಲೆ ಚಿತ್ರಿಸಿಕೊಳ್ಳುತ್ತ ಹಾಸಿಗೆಯ ಮೇಲೆ

ಬಿದ್ದುಕೊಂಡಿರುತಿದ್ದೆ. ಜಡನಿದ್ರೆಗಿಂತ ಅದೇ ಎಷ್ಟೋ ಹಿತ. ಎಷ್ಟೋ ಆನಂದದಾಯಕ.

ಇಂದು ಆಫೀಸಿನ ಬಿಡುವಿನ ವೇಳೆಯಲ್ಲಿ ಕಾಫಿಗಾಗಿ ಕ್ಯಾಂಟೀನಿನತ್ತ ಹೋಗುವ ಯೋಚನೆಯಲ್ಲಿರುವಾಗ ಪೀಟರ್ ಎದುರಾಗಿ ಬಂದ; ಎಲ್ಲಾ ಹಲ್ಲುಗಳನ್ನು ಒಮ್ಮೆಗೆ ಪ್ರದರ್ಶಿಸಿ "ನಾನೂ ಕಾಫಿಗೆ ಹೋಗುವವನೇ. ಬಾ, ಒಂದಿಗೇ ಹೋಗಿ ಬರೋಣ" ಎಂದ. ಅವನ ಕಣ್ಣುಗಳಲ್ಲಿ ಕಾಮನೆಯ ಬೆಳಕು ತುಂಬಿ ತುಳುಕುತಿತ್ತು. ಈ ಹಿಂದೆ ನಾನು ಒಂದೆರಡು ಬಾರಿ ಅವನೊಂದಿಗೆ ಓಡಾಡಿದವಳೇ. ಅವನ ಮೇಲೆ ಅರೆಬರೆ ಮನಸ್ಸೂ ಇತ್ತು. ಈಚೆಗೆ ನಾನು ಆ ಭಾವನೆಯಿಂದ ಸಂಪೂರ್ಣ ಮುಕ್ತೆ. ಆದರೆ, ಅದರ ಪಿತ್ತ ನೆತ್ತಿಗೇರಿದೆ ಅವನಿಗೆ. ಹೇಗಾದರೂ ನನ್ನನ್ನು ಬಗಲಿಗೆ ಹಾಕಿಕೊಳ್ಳಲೇಬೇಕೆಂಬ ಚಪಲ. ಅನಾವಶ್ಯಕ ಮಾತು. ಅನಾವಶ್ಯಕ ಗೇಲಿ. ಇವುಗಳಲ್ಲಿ ನನ್ನನ್ನು ಮರುಳು ಮಾಡುವ ಹುಚ್ಚು... ಅವನ ರೀತಿನೀತಿಗಳನ್ನು ನೋಡಿ ಒಮ್ಮೆ ಬೇಸರ ಮೂಡಿದರೆ ಇನ್ನೊಮ್ಮೆ ಸಿಟ್ಟು ಬರುತ್ತದೆ. ನಾನು ಹುಬ್ಬೆತ್ತಿ ನೋಡದೆ ಒಂದು ರೀತಿಯ ಅಸಮಾಧಾನದಿಂದ ನುಡಿದೆ. "ನೀನು ಹೋಗು. ನಾನು ಅನಂತರ ಹೋಗುವೆ."

ಅವನು ಅಷ್ಟಕ್ಕೆ ಜಗ್ಗದೆ "ಏಕಷ್ಟು ಉದಾಸೀನ ? ಸ್ವಲ್ಪ ಸಮಯ ಹೋಗಿ ಬರುವುದರಿಂದ ಆಗುವುದೇನು?"

"ಇಲ್ಲಪ್ಪಾ, ದಯವಿಟ್ಟು ಹೋಗು."

ಅವನ ಒಡಲಲ್ಲಿ ಎಷ್ಟೆಷ್ಟು ಅಸಮಾಧಾನದ ಕಿಚ್ಚು ಹೊಗೆಯಾಡುತ್ತಿದೆ ಎಂಬುದು ನನಗೊತ್ತು. ಹೇಗಾದರೂ ಅವನನ್ನು ದೂರೀಕರಿಸುವುದು ಲೇಸು ಎಂಬ ಚಿಂತನೆಯಲ್ಲೇ ಮೊಗವನ್ನು ಬೇರೆಡೆಗೆ ಹೊರಳಿಸಿದೆ. ಆದರೆ ಅವನು ಅಷ್ಟಕ್ಕೆ ಸೋಲುವವನಲ್ಲ. ಸಮಯ ಸಂದರ್ಭಗಳಿಗಾಗಿ ಕಾಯುತ್ತಿರುತ್ತಾನೆ. ನೋಡೋಣ ಅವನ ಧೈರ್ಯ....?

ಅವನು ಅತ್ತ ಹೋಗುತ್ತಲೂ ನಾನು ಕಾರ್ಯನಿರತಳಾದೆ.

ಭಾಸ್ವಾನ್ ಕೆಳಗಿಳಿದು ಬಂದು ಎಂಟು ಪುಟಗಳ ಸಾಹಿತ್ಯವನ್ನು ನನ್ನ ಮುಂದಿಡುತ್ತ ಹೇಳಿದ,

"ಇದು ಈಗಿಂದೀಗಲೇ ಆಗಬೇಕು. ದಯವಿಟ್ಟು ಟೈಪ್ ಮಾಡಿ ಕೊಡುತ್ತೀಯಷ್ಟೆ ?"

"ಆಗಲಿ" ಎಂದೆ. ನನಗೆ ಅಷ್ಟು ಮಾತ್ರ ಸಂಪರ್ಕ ದೊರಕಿದುದೇ ಸಾಕಾಗಿತ್ತು. ನಗುಮುಖದಿಂದ ತೆಗೆದುಕೊಂಡೆ. ಭಾಸ್ವಾನ್ ಮೆಟ್ಟಿಲೇರಿ ಮಹಡಿಗೆ ಹೋದ. ಅವನು ಈ ಕಂಪನಿಯ ವಿಜ್ಞಾನ ವಿಭಾಗದಲ್ಲಿ ಕೆಲಸ ಹಿಡಿದು ನಾಲ್ಕೈದು ದಿನಗಳಾದುವು. ಸ್ವಭಾವ ಬಹಳ ಗಂಭೀರ ಹೆಚ್ಚು ಯಾರೊಂದಿಗೂ ಬೆರೆಯುವವನಲ್ಲ. ಅವನ ಚಿತ್ರವನ್ನು ಮನಸದಲ್ಲಿ ತುಂಬಿಕೊಂಡೇ ನಾನು ಕೆಲಸ ಆರಂಭಿಸಿದೆ. ಅದನ್ನು ಟೈಪ್ ಮಾಡುವುದು ಬಹಳ ಹೊತ್ತೇನೂ ತೆಗೆದುಕೊಳ್ಳಲಿಲ್ಲ. ಜಾಗ್ರತೆ ಮುಗಿಸಿ ಜೋಡಿಸಿ ಪಿನ್ ಮಾಡಿ ಬದಿಗಿಡುತ್ತ ಮೇರಿಗೆಂದೆ "ಇಲ್ಲಿ ಈಗಾಗಲೇ ನಾಲ್ಕಾರು ಮಂದಿ ಇಂಡಿಯನ್ಸ್ ಕೆಲಸಕ್ಕೆ ಸೇರಿದ್ದಾರೆ !"

ಅವಳು ಸ್ವಲ್ಪ ಅಸಮಾಧಾನದಿಂದ ಉತ್ತರಿಸಿದಳು "ಈ ಡೈರೆಕ್ಟರ್ಸ್‌ಗೆ ಸ್ವಲ್ಪವೂ ಬುದ್ಧಿ ಇಲ್ಲ. ಪರಕೀಯರಿಗೆ ಸ್ಥಳಾವಕಾಶ ಕಲ್ಪಿಸಿಕೊಡುವುದು ನಮ್ಮವರಿಗೆ ಅನ್ಯಾಯ ಮಾಡಿದಂತೆ!"

"ಹಾಗೆಂದರೆ ಹೇಗೆ ? ದಕ್ಷತೆಯಿದ್ದವರಿಗೆ ಕೊಡುವುದು ನ್ಯಾಯವೇ."

"ನಮ್ಮಲ್ಲಿ ದಕ್ಷತೆಯಿಲ್ಲ ಎಂದು ಒಪ್ಪಿಕೊಳ್ಳುವೆಯಾ?"

"ಹಾಗಂತಲ್ಲ. ಸಮಯೋಚಿತ ಅಷ್ಟೆ."

"ಈ ಕೌಂಟ್ ಹೆರ್ಮನ್ ಅಂಡ್ ಕಂಪನಿ ಇಂಗ್ಲೆಂಡಿಗೆ ಮಾತ್ರವಲ್ಲ; ಇಡೀ ಯೂರೋಪಿಗೇ ಹೆಸರಾದುದು. ಅಂದಮೇಲೆ, ಇದರಲ್ಲಿ ಇಂಡಿಯನ್ಸ್‌ಗೆ ಅವಕಾಶ ಕೊಡುತ್ತಿರುವುದು ತುಂಬಾ ತಪ್ಪು. ಇಂಡಿಯನ್ಸ್ ಕೀಳು ಮಂದಿ. ಎಂದಿಗೂ ನಂಬಿಗೆಗೆ ಅರ್ಹರಲ್ಲ, ಶುದ್ಧ ಈಡಿಯಟ್ಸ್ !" ಎಂದಳು ತುಟಿ ಕಚ್ಚಿ.

ಆದರೆ, ಆ ಮಾತನ್ನು ಅಷ್ಟು ಸುಲಭವಾಗಿ ಒಪ್ಪುವುದು ನನ್ನಿಂದ ಸಾಧ್ಯವಾಗಲಿಲ್ಲ. ನಾನು ಸುಮನಾ ಮತ್ತು ಅವಳ ಮನೆಯವರೆಲ್ಲರ ಕೂಟದಿಂದಾಗಿ ಇತರ ಅನೇಕ ಇಂಡಿಯನ್ಸ್ ಜೊತೆ ಕಲೆತು ಅರಿತವಳು. ಅವರಲ್ಲಿ ಅಂತಹ ನ್ಯೂನತೆಯನ್ನೇನೂ ಕಂಡಿರಲ್ಲಿಲ್ಲ. ಮೇರಿ ಹೇಗೆ ಈ ಭಾವನೆ ತಳೆದಿದ್ದಾಳೋ! ನಾನಿಯೆ ಅವರನ್ನು ಅರಿತುಕೊಳ್ಳದೆ ಅನ್ನುವುದರಲ್ಲಿ ಅರ್ಥವಿಲ್ಲ. ಕೇವಲ ದುರ್ಭಾವನೆ... ಎಂದುಕೊಂಡೆ ಮನದಲ್ಲಿ. ನಾನು ಉತ್ತರಿಸದಿದ್ದುದನ್ನು ನೋಡಿಯೋ ಏನೋ, ಅವಳು ತಾನಾಗಿ ಮುಂದು ವರಿದಳು. ಇವನ ಗೆಳೆಯರಿಬ್ಬರಿದ್ದಾರೆ...ಅವರಿಗಂತೂ ಅದೆಷ್ಟು ಅಹಂ ಕಾರವೊ !"

ನಾನೂ ಅವರನ್ನು ನೋಡಿರುವೆ. ಅವರ ಕೂಡ ಮಾತಾಡಿಲ್ಲವಾದ್ದ ರಿಂದ ಅವರ ವಿಷಯ ನನಗೆ ಏನೇನೂ ತಿಳಿಯದು. ನಾನು ಮುಗುಳುನಕ್ಕು ಸುಮ್ಮನಾದೆ. ಅವಳು ಮುಂದುವರಿದಳು "ಕೇಳು! ಲಂಡನ್ ಯೂನಿವರ್ಸಿ ಟಿಯಲ್ಲಿ ಮೂರುನಾಲ್ಕು ಮಂದಿ ಕರಿಯ ಪ್ರೊಫೆಸರುಗಳು ಸೇರಿಕೊಂಡಿದ್ದಾರೆ. ಅವರಿಂದಲೇ ಈ ಕರಿಯರಿಗೆ ಪ್ರಾಶಸ್ತ್ಯ. ಇಲ್ಲದಿದ್ದರೆ ಇವರಿಗೆ ಹೇಗೆ ಲಭಿಸ ಬೇಕು ರ್ಯಾಂಕ್ಸ್ ? ಇದೆಲ್ಲಾ ಮೋಸ!"

ಅಷ್ಟರಲ್ಲಿ ಭಾಸ್ವಾನ್ ಅಲ್ಲಿಗೆ ಬಂದ. ನಾನು ಟೈಪ್ ಮಾಡಿದ ಹಾಳೆ ಗಳನ್ನು ಕೊಡುತ್ತಾ ಅಂದೆ.

"ಸಕಾಲದಲ್ಲಿ ಮಾಡಿಕೊಟ್ಟಿರುವೆ. ನನಗೇನು ಬಹುಮಾನ ?"

ಅವನು ನಗುಮುಖದಿಂದ "ನೋಡೋಣ."

"ಅಷ್ಟರಲ್ಲೇ ಮುಗಿಸಿ ಬಿಡಬೇಡ!"

"ತುಂಬ ಥ್ಯಾಂಕ್ಸ್ !" ಎಂದವನೇ ಅಲ್ಲಿ ನಿಲ್ಲದೆ ಹೊರಟ.

ಮೇರಿ ಹಾಳೆಯನ್ನು ಬದಲಿಸುತ್ತ ಹೇಳಿದಳು "ಇಂಡಿಯನ್ಸ್ ಬಗ್ಗೆ ನಾವು ಬಹಳ ಎಚ್ಚರಿರಬೇಕು. ಇವರ ಬಲೆಗೆ ಬಿದ್ದರೆ ನಮ್ಮನ್ನು ದಾಸಿಯರ ನ್ನಾಗಿ ಮಾಡಿಕೊಳ್ಳುತ್ತಾರೆ. ಅನಂತರ ನಮಗೆ ವೈಯಕ್ತಿಕ ಸ್ವಾತಂತ್ರ್ಯವೂ

ಇಲ್ಲ. ಆರ್ಥಿಕ ಸ್ವಾತಂತ್ರ್ಯವೂ ಇಲ್ಲ. ಬರೀ ಮಕ್ಕಳನ್ನು ಹೆರುವ ಯಂತ್ರವಾಗಿ ಬಿಡುತ್ತೇವೆ ಅಷ್ಟೆ."

"ನಮ್ಮ ಬುದ್ಧಿಬಲ ನಮಗಿರುವಾಗ ಯಾರೂ ಏನೂ ಮಾಡಲಾರರು ಬಿಡು."

ಮೇರಿ ಮುಖವನ್ನು ಹಿಂಡುತ್ತ "ಕಾಮನ್‌ವೆಲ್ತ್ ಕಮಿಷನ್ನಿನವರು ಇಂಥ ಅವಿಚಾರಕರಿಗೆ ಫೆಲೋಷಿಪ್ ನೀಡಿ ಬರಮಾಡಿಕೊಳ್ಳುತ್ತಾರೆ ಅದು ತಪ್ಪು! ಈಗಾಗಲೇ ನಮ್ಮ ದೇಶ ಇಂಡಿಯನ್ ಬೆಗ್ಗರ್‌ಗಳಿಂದ ತುಂಬಿ ಹೋಗಿದೆ. ಇವರನ್ನು ನೋಡಿದರೆ ಸಾಲಾಗಿ ಗುಂಡಿಟ್ಟು ಮಲಗಿಸಿ ಬಿಡಬಾರದೇ ಎನಿಸುತ್ತೆ ನನಗೆ. ಇಷ್ಟರ ಮೇಲೆ ಇಲ್ಲಿ ಇವರ ಕುಶಲೋಪರಿ..."

ಇವಳ ಕೋಪ ಅರ್ಥವೇ ಆಗಲಿಲ್ಲ ನನಗೆ. ಇದೇ ಕಂಪನಿಯಲ್ಲಿ ಕೆಲಸ ಮಾಡುತ್ತಿರುವ ಇನ್ನೂ ಕೆಲವರನ್ನು ಅಂದಿನಿಂದಲೂ ನೋಡುತ್ತಿರುವೆ. ಅವರಲ್ಲಿ ಅಂತಹ ರೂಕ್ಷತೆಯನ್ನೇನೂ ಈವರೆಗೆ ಕಾಣಲಿಲ್ಲ. ಬಣ್ಣ ಕಪ್ಪು ಎಂಬುದೊಂದೇ ಐಬು. ನಾನು ಉತ್ತರಿಸದಿದ್ದುದನ್ನು ನೋಡಿ ಅವಳೇ ಮುಂದುವರಿದಳು,

"ಈ ಪರಕೀಯರು ಇಲ್ಲದೇ ಹೋದರೆ ನಮ್ಮ ದೇಶ ಚೊಕ್ಕವಾದೀತು? ಎಷ್ಟು ಸಮೃದ್ಧವಾದೀತು? ಅದನ್ನೆಲ್ಲಾ ಯೋಚಿಸಬೇಕು ನೀನು."

"ಯಾವ ರಾಷ್ಟ್ರದಲ್ಲೂ ಆಯಾ ರಾಷ್ಟ್ರೀಯರೇ ಇರುವುದು ಸಾಧ್ಯವೇ ಇಲ್ಲ. ಎಲ್ಲಿಂದ ಎಲ್ಲಿಗಾದರೂ ವಲಸೆ ಹೋಗುವುದು ಮಾನವ ಪ್ರವೃತ್ತಿ. ಈಗ ನಮ್ಮವರು ಹೊರಗಡೆ ಇಲ್ಲವೇ ?"

ನಮ್ಮವರ ರೀತಿ ಬೇರೆ. ತೀರ ಅಸಭ್ಯರು – ಅವಿಚಾರಕರು ಆದವರ ಸಹವಾಸ ಅಸಹ್ಯ ಅಲ್ಲವೆ?"

ಅವಳು ಟೈಪ್ ಮಾಡಿದ ಹಾಳೆಗಳನ್ನು ಪರಿಶೀಲಿಸುತ್ತ "ನೀನು ಮಾತಿಲ್ಲದೆ ಕೇಳಿತಿರುವುದನ್ನು ನೋಡಿದರೆ ನಿನಗೆ ಅವರ ಬಗ್ಗೆ ಸಹಾನುಭೂತಿ ಇದೆ

ಎಂಬುದು ನನಗೆ ವ್ಯಕ್ತವಾಗುತ್ತದೆ. ಇರಲಿ, ಅದರಲ್ಲಿ ಅಭ್ಯಂತರವಿಲ್ಲ. ಆದರೆ ಎಷ್ಟಿರಬೇಕೋ ಅಷ್ಟು ಮಾತ್ರ ಇರಲಿ ಎಂಬುದು ನನ್ನ ಉಪದೇಶ!"

ನಾನು ನಕ್ಕುಬಿಟ್ಟೆ.

ಹಿಂದೊಮ್ಮೆ ಇದೇ ವಿಚಾರವಾಗಿ ನನ್ನ ತಾಯಿ ನನ್ನನ್ನು ಕುರಿತು "ಜನೀ! ನೀನು 'ಇಂಡಿಯನ್ ಬ್ಯಾಸ್ಟರ್ಡ್' ಗಳಿಂದ ಬಲುಬೇಗ ಆಕರ್ಷಿತಳಾಗುತ್ತಿ. ಅದು ಶುದ್ಧ ತಪ್ಪು! ಇಂಡಿಯಾ ಸುಸಂಸ್ಕೃತ ರಾಷ್ಟ್ರವಲ್ಲ. ಅಲ್ಲಿ ಹೆಂಗಸರು ನಾಯಿಗಳಿಗಿಂತ ಕೀಳು!' ಎಂದು ಕಟುವಾಗಿಯೇ ಹೇಳಿದ್ದಳು. ಅದರಿಂದಾಗಿ ನಾನು ಸುಮನಾಳನ್ನು ಒಮ್ಮೆಯೂ ನನ್ನ ಮನೆಗೆ ಬರಮಾಡಿಕೊಂಡಿರಲಿಲ್ಲ. ನಾನೇ ಯಾವತ್ತೂ ಅವಳ ಮನೆಗೆ ಹೋಗಿ ಊಟ ತಿಂಡಿ ಹೊಡೆಯುತಿದ್ದೆ. ನಾನು ಕರೆಯುವಂತಿಲ್ಲವಲ್ಲಾ ಎಂಬ ಸಂಕೋಚ ನನ್ನ ಮನವನ್ನು ಕೊರೆಯುತಿತ್ತು. ಆದರೂ, ವಿಧಿಯಿರಲಿಲ್ಲ.

೦ ೦ ೦ ೦

ನಮ್ಮಿಬ್ಬರ ಮನೋಗತಿಯಲ್ಲಿ 'ಪೂರ್ವ' 'ಪಶ್ಚಿಮ'ಗಳ ಅಂತರವಿಲ್ಲದಿಲ್ಲ. ಎಷ್ಟೇ ಪ್ರಬುದ್ಧರಾದರೂ ಸ್ವಾರ್ಥದ ಎಳೆಎಳೆಯನ್ನೂ ಮುಟ್ಟುತ್ತದೆ ಮನಸ್ಸು ಎನಿಸುತ್ತದೆ ನನಗೆ. ಎದುರಿಗೆ ನಯವಾಗಿದ್ದರೂ ಒಳಗೊಳಗೇ ಕಿಚ್ಚಿನ ಕಿಡಿ ಹೋಗೆಯಾಡುತ್ತಿರುತ್ತದೆ. ಕೆಲವರ ಭಾವಗಳು—ಸ್ವಭಾವಗಳು ಇಂತಹವೆಂದು ಗುರುತಿಸುವುದು ಸುಲಭ. ಕಾರಣ, ಅವುಗಳಲ್ಲಿ ಪರಸ್ಪರ ವ್ಯತಿರೇಕಗಳೇ ಹೆಚ್ಚು.

ಅಂತಹ ಒಂದು ಇಕ್ಕಟ್ಟಿನ ಹಾದಿಯಲ್ಲೇ ನಡೆಯುತ್ತದೆ ನನ್ನ ಜೀವನ ಯಾತ್ರೆ. ಎತ್ತ ಯಾವ ದಿಶೆಯಲ್ಲಿ ಹೆಜ್ಜೆಯಿಡುತ್ತೇನೆಂದರೂ ಏನೋ ಒಂದು ಅಡೆತಡೆ. ನನಗೆ ಸ್ವಾತಂತ್ರ್ಯ ಇಲ್ಲ ಎಂದೇನಿಲ್ಲ. ಆದರೆ, ಮಾನಸಿಕವಾದ, ಬೌದ್ಧಿಕವಾದ ಅಡೆತಡೆ. ಸುಖವಾಗಿ ಜೀವಿಸುವುದರಲ್ಲಿಯೇ ಮಾನವನ ಲಕ್ಷ್ಯ ಎನ್ನೋಣ. ಆದರೆ, 'ಸುಖ' ಎಂಬುದು ಎಲ್ಲಿ ಯಾವ ವಿಧದಲ್ಲಿ ಸಿಗುತ್ತದೆ

ಎಂಬುದೇ ಅಗವ್ಯ. ಇಲ್ಲಿ–ಅಲ್ಲಿ ಎಲ್ಲಾ ಕಡೆ ಅರಸುತ್ತ ಮುಗ್ಗರಿಸಿ ಬೀಳು ವುದು ಸರ್ವೇ ಸಾಮಾನ್ಯ.

ನನಗೂ ಜೀವಿಸುವಿಕೆಯೇ ಪರಮ ಲಕ್ಷ್ಯವಾದರೂ ಜೀವನವನ್ನು ಹೀಗೆ ಎಂದು ನಿರ್ಣಯಿಸುವುದೇ ಕಷ್ಟ. ಈ ದಿನಗಳಲ್ಲಿ ಫ್ರೆಡ್ಡಿ ಮತ್ತು ಎಡ್ವರ್ಡ್ ಮದುವೆಯಾಗಿ ಹೊರ ಹೋಗುವವರಿದ್ದಾರೆ. ಎಲಿಜ ಆಗಲೇ ಹೋಗಿದ್ದಾಳೆ. ಅವರೆಲ್ಲರೂ ತಮ್ಮ ತಮ್ಮ ಸಂಗಾತಿಗಳನ್ನು ಆಗಾಗ್ಗೆ ಕರೆತಂದು ಕೂಡುತಿದ್ದುದರಿಂದ ಮನೆಯ ಪರಿಸ್ಥಿತಿ ಹದಗೆಡುತಿತ್ತು, ಆರ್ಥಿಕ ಅಡಚಣೆಯಿಂದ. ಬೆಮೆಲ್ ಎಲ್ಲೋ ಕೆಲಸ ಮಾಡುತಿದ್ದಾಳೆ. ಆದರೆ ಕಾಸು ಬಿಚ್ಚುವವಳಲ್ಲ. ಟಾಮೀ ಓದುವವ. ಅಮ್ಮ ಚಿಕ್ಕ ಹೋಟೆ ಲೊಂದರಲ್ಲಿ 'ಹೌಸ್ ಕೀಪರ್' ಆಗಿ ಕೆಲಸಮಾಡುತ್ತಾಳೆ. ಆದರೂ ಸಹ, ಜೀವನ ಕಷ್ಟವೇ.

ತಂದೆ ಸತ್ತು ಎರಡು ವರ್ಷಗಳಾದುವೇನೋ. ಆಗಿನಿಂದಲೂ ಜೀವನ ಬಡತನದ ಜಾಡಿನಲ್ಲಿಯೇ ನಡೆದು ಬಂದಿದೆ. ಮುಂದೆಯೂ ಪರಿಸ್ಥಿತಿ ಸುಧಾ ರಿಸುತ್ತದೆ ಎಂಬುದಕ್ಕೆ ಯಾವ ಆಧಾರವೂ ಇಲ್ಲ. ಇಂತಹ ಪರಿಸ್ಥಿಯಲ್ಲಿ ನನ್ನ ಕರ್ತವ್ಯವೇನು ಎಂಬುದು ಹಿರಿಯ ಪ್ರಶ್ನೆ. ಹೆಜ್ಜೆ ಮುಂದಿಡುವುದೂ ಕಷ್ಟ ಹಿಂದಿಡುವುದೂ ಕಷ್ಟ. ನಾನೇ ಎಲ್ಲರಿಗಿಂತ ಚಿಕ್ಕವಳು. ಸ್ಕೂಲ್ ಎಜುಕೇಶನ್ ಮುಗಿಸಿ ಟೈಪಿಂಗ್ ಹಿಡಿದುದರ ಉದ್ದೇಶ ಆರ್ಥಿಕ ಅಡಚಣೆಯೇ. ಮುಂದೆಯಾದರೂ ಈ ಜೀವನಕ್ಕೊಂದು ಭವ್ಯತೆಯನ್ನು ರೂಪಿಸಬೇಕು ಎಂಬುದರಲ್ಲಿ ಅರ್ಥವಿಲ್ಲದಿಲ್ಲ.

ಇಂದು ಮಳೆ ಎಡೆಬಿಡದೆ ಸುರಿಯುತಿದ್ದುದರಿಂದ ಚಹದ ಬಿಡುವಿನಲ್ಲಿ ನಾವು ಹೊರಹೋಗುವ ಬದಲು ಚಹ ಇಲ್ಲಿಗೆ ಆಗಮಿಸಿತು. ಅದೇ ಆಗಲೇ ಕೆಳಗಿಳಿದು ಬಂದಿದ್ದ ಭಾಸ್ ಇಲ್ಲಿಯೇ ಚಹ ಸ್ವೀಕರಿಸಿದ. ಮೇರಿ ಚಹವನ್ನು ಗುಟುಕು ಗುಟುಕಾಗಿ ಹೀರುತ್ತ "ಕ್ಯಾಂಟೀನ್ ಕಡೆ ಹೋಗಿ ಬರುವುದಕ್ಕಿಂತ ಇದೇ ಉತ್ತಮ."

"ಮಳೆಯಿದ್ದಾಗ ಸರಿ. ಇಲ್ಲದಾಗ ಕಾಲುಗಳಿಗೆ ಸ್ವಲ್ಪ ವ್ಯಾಯಾಮ ಬೇಡವೆ?."

ಭಾಸ್ಕರ್‌ ಅಂದ ಮಾತಿಗೆ ಮೇರಿ ಕೇಳಿದಳು "ನಾನು ನಿನ್ನನ್ನು ಒಂದು ಪ್ರಶ್ನೆ ಕೇಳಬಹುದೇ ?"

"ಓ...ಆಗಬಹುದು."

"ನೀವೆಲ್ಲಾ ಇಂಗ್ಲೀಷ್ ಕಲಿತು ಉಡಿಗೆತೊಡಿಗೆಗಳಲ್ಲಿ 'ವೆಸ್ಟ್ರನೈಸ್ಡ್' ಆದವರು. ಆದರೆ ವ್ಯವಹಾರದಲ್ಲಿ ವೆಸ್ಟ್ರನೈಸ್ಡ್ ಆದಂತೆ ತೋರಲಿಲ್ಲ ನಿಜವೇ ?"

"ಅಂದರೆ...?" ಆಸಕ್ತಿಯಿಂದ ಹೊರಬಿತ್ತು ಪ್ರಶ್ನೆ.

"ನಿಮ್ಮಲ್ಲಿ ಕ್ರೂರವಾದ ಪದ್ಧತಿಗಳು ಈಗಲೂ, ಈಗಳಿಗೆಯಲ್ಲೂ ಪ್ರಚಲಿತವಾಗಿವೆಯಲ್ಲವೇ?"

"ಅವು ಏನೆಂಬುದನ್ನು ತಿಳಿಯಬಹುದೇ ?"

"ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯವಾಗಲೀ ವೈಯಕ್ತಿಕ ಸ್ವಾತಂತ್ರ್ಯವಾಗಲೀ ಇಲ್ಲ. ಅವರು ವಿಧವೆಯರಾದರೆ ಜೀವನ ನರಕ. ಹೊರಗೆ ಹೋಗುವಂತಿಲ್ಲ. ರಂಗುರಂಗಿನ ಬಟ್ಟೆ ಉಡುವಂತಿಲ್ಲ. ಕೂದಲು ಮುಂಡನ ಮಾಡಿಸುವುದೂ ಇತ್ಯಾದಿ, ಇತ್ಯಾದಿ...."

"ನೀನು ಯಾವ ಕಾಲದಲ್ಲಿ ಭಾರತಕ್ಕೆ ಬಂದಿದ್ದೆ? ಹಿಂದಿನ ಜನ್ಮದಲ್ಲೇ ?"

ಎಲ್ಲರೂ ಕಿಲಕಿಲ ನಕ್ಕರು.

"ಹಿಂದಿನ ಜನ್ಮಕ್ಕೆ ಹೋಗುವುದೇಕೆ? ನಮಗೆ ಪ್ರಪಂಚ ವ್ಯವಹಾರ ತಿಳಿಯದೇ? ಕತೆ ಕಾದಂಬರಿ ಪತ್ರಿಕೆಗಳನ್ನು ನಾವು ಓದುವುದಿಲ್ಲವೇ ?"

ಭಾಸ್ ನೇರವಾಗಿ ಕುಳಿತು ಹೇಳಿದ "ವಿದ್ಯೆ ಬುದ್ಧಿ ಇಲ್ಲದ ಕಾಲ ನಮ್ಮಲ್ಲೂ ಇತ್ತು. ನಿಮ್ಮಲ್ಲೂ ಇತ್ತು. ಯಾವುದು ಅನಾಗರಿಕವೋ ಅದನ್ನೇ

ನಾಗರಿಕತೆ ಎಂದು ನಂಬುತ್ತಿದ್ದರು ಜನ. ಈಗಲೂ ಅಂತಹ ಪದ್ಧತಿಗಳನ್ನು ಮನಃಪೂರ್ವಕವಾಗಿ ನಡೆಸಿಕೊಳ್ಳುವವರು ಅಲ್ಲಲ್ಲಿ ಇದ್ದಾರೆ. ವಿದ್ಯಾವಂತರೂ ಬುದ್ಧಿವಂತರೂ ತಾವೇತಾವಾಗಿ ಸುಧಾರಿಸಿಕೊಳ್ಳುತ್ತಾರೆ. ಇಲ್ಲದವರು ಹಾಗೇ ಉಳಿದಿದ್ದಾರೆ, ಇದು ಟೀಕಾಸ್ಪದ ವಿಚಾರವಲ್ಲ. ಯೂರೋಪ್ ದೇಶಗಳಲ್ಲೂ ಮೂಢನಂಬಿಕೆಗಳಿಕೆ ಕೊರತೆಯಿಲ್ಲ ಬಿಡು. ಇಲ್ಲಿ ಸ್ತ್ರೀಯರಿಗಾಗಲೀ ಪುರುಷರಿಗಾಗಲಿ ಲಂಗುಲಗಾಮಿಲ್ಲ. ಜೀವನವೆಂಬುದು ಕಾಲ್ಕಸ. ನಮ್ಮಲ್ಲಿ ಜೀವನವನ್ನು ಗೌರವಿಸುತ್ತೇವೆ. ಇಲ್ಲಿ ಗೌರವಕ್ಕೆ ಬೆಲೆಯೇ ಇಲ್ಲ...."

ಅವನು ಇನ್ನೂ ಏನೇನು ಹೇಳುತಿದ್ದನೋ ಅಷ್ಟರಲ್ಲಿ ಚಹದ ಅವಧಿ ಮುಗಿದುದರಿಂದ ಮಹಡಿ ಹತ್ತಿದ. ನನಗೆ ಅವನ ವಿಚಾರಧಾರೆ ಮತ್ತು ಮಾತಿನ ಚಕಮುಕಿ ಹಿತಕರವಾಗಿ ತೋರಿ, ಅವನನ್ನು ಗಾಢವಾಗಿ ಅರಿತುಕೊಳ್ಳಬೇಕೆಂಬ ಉತ್ಕಟೇಚ್ಛೆಯು ಮೂಡಿತು. ಆದರೆ, ಅವನೊಬ್ಬ ವಿಜ್ಞಾನಿ ನಾನೊಬ್ಬ ಸಾಮಾನ್ಯ ಟೈಪಿಸ್ಟ್. ಎಲ್ಲಿಂದ ಎಲ್ಲಿಗೆ ಸಂಬಂಧ? ಇದೆಂದಾದರೂ ಕೈಗೂಡುವುದುಂಟೆ? ಎಂಬ ಪ್ರಶ್ನೆಯೂ ಏಳುತ್ತದೆ. ಆದರೂ ಸಹ ನನ್ನ ಹೃದಯ ಮಂದಿರ ಅವನಿಗಾಗಿಯೇ ಹೆಬ್ಬಾಗಿಲನ್ನು ತೆರೆದು ಕಾತರದಿಂದ ಕಾದಿದೆ. ನಾನು ಅವನ ರಾಣಿಯಾಗದೇ ಹೋದರೆ ಖಂಡಿತಾ ಜೀವಿಸಲಾರೆ...

ಕೈಗಳು ಯಾಂತ್ರಿಕವಾಗಿ ಕೆಲಸ ಮಾಡಿದುವು. ನಾನು ಎಲ್ಲರೊಂದಿಗೆ ಕೆಲಸ ಮುಗಿಸಿ ಹೊರಟೆ.

ಇತಿಮಧ್ಯೆ, ನಮ್ಮ ಕಂಪನಿಯ ಕೆಲಸಗಾರರೂ ಇತರ ಕಂಪನಿಗಳ ಕೆಲಸಗಾರರೂ ಕೆಲವರು ಕೂಡಿ ನಾಲ್ಕು ಬಸ್ಸುಗಳಲ್ಲಿ ಭಾರತ ಪ್ರವಾಸವನ್ನು ಏರ್ಪಡಿಸಿಕೊಂಡಿದ್ದರು. ಅದರಲ್ಲಿ ಪಾಲ್ಗೊಳ್ಳುವ ಇಚ್ಛೆ. ಆದರೆ, ನನ್ನ ಉಳಿತಾಯ ಪ್ರವಾಸದ ವೆಚ್ಚವನ್ನು ತೂಗಿಸಲಾರದು. ಬ್ಯಾಂಕಿನಿಂದ ಸ್ವಲ್ಪ ಹಣವನ್ನು ಪಡೆಯುವ ಉದ್ದೇಶದಿಂದ ಬ್ಯಾಂಕಿಗೆ ಹೋಗಿ ಮ್ಯಾನೇಜರೊಂದಿಗೆ ಮಾತಾಡಿ ಬಾಂಡಿಗೆ ಸಹಿ ಹಾಕಿದ ಮೇಲೆ ತಾಯಿಗೆ ವಿಷಯ ತಿಳಿಸಲಿಲ್ಲವಲ್ಲಾ ಎಂಬ

ಯೋಚನೆ ಬಾರದಿರಲಿಲ್ಲ. ಮನೆಗೆ ಹೋದಮೇಲೆ ಹೇಳಿದರಾಯಿತು ಎಂಬ ಸಮಾಧಾನದಿಂದ ಮನೆಯ ಹಾದಿ ಹಿಡಿದೆ. ಮನಸ್ಸು ಸ್ವಪ್ನ ಸೌಧವನ್ನು ನಿರ್ಮಿಸುತಿತ್ತು. ಸಾನದರ ಸ್ವಾಮಿನಿಯಾಗಿದ್ದೆ.

ಮನೆ ಮುಟ್ಟಿದಾಗ ಐದು ಗಂಟೆಯ ಸಮಯ. ಅಣ್ಣಂದಿರು ಅಕ್ಕಂದಿರು ಚಹಪಾನದಲ್ಲಿ ನಿಮಗ್ನರಾಗಿದ್ದರು. ತಾಯಿ ಒಳಗಿದ್ದಳೇನೋ ಕರಿದ ಮೀನಿನ ಕಂಪು ಮನೆಯೆಲ್ಲಾ ಹರಡಿತ್ತು. ಚಹದ ಬಸಿಯನ್ನು ತೆಗೆದು ಕೊಂಡು ನಾನು ಇಂಡಿಯಾ ಪ್ರವಾಸಕ್ಕೆ ಹೋಗಲಿರುವುದನ್ನೂ ಅದಕ್ಕಾಗಿ ಬ್ಯಾಂಕಿನಲ್ಲಿ ಸಾವಿರ ಪೌಂಡ್ ಸಾಲ ತೆಗೆಯಲಿರುವುದನ್ನೂ ತಿಳಿಯಪಡಿಸಿದೆ. ಆಗ ಸಿಟ್ಟಿಗೆದ್ದ ಎಲ್ಲರೂ ನನ್ನನ್ನು ತರಾಟೆಗೆ ತೆಗೆದುಕೊಂಡರು. ಅನೇಕ ಕಟು ಮಾತುಗಳು ಹೊರಬಿದ್ದುವು. ಎಲ್ಲರದೂ ಒಂದೇ ರೀತಿ ನೀತಿ ಮತ್ತು ಧಾಟಿ.... "ಇಂಡಿಯಾ ದೇಶವನ್ನು ಯಾವ ಮಹಾ ನಾಗರಿಕ ದೇಶ ಎಂದು ಸಾವಿರ ಪೌಂಡ್ ಸಾಲ ಮಾಡುತ್ತಿ? ಇದು ಹೇಯತನವಲ್ಲವೇ ? ಆ ಸಾಲ ತೀರುವುದಾದರೂ ಎಂದಿಗೆ ? ಒಂದು ವೇಳೆ ಯಾವುದೇ ಸಂಪದ್ಭರಿತ ರಾಷ್ಟ್ರದ ಪ್ರವಾಸವಾಗಿದ್ದರೆ ಅದೂ ಒಂದು ವಿಶೇಷವೇ. ಇದೇಕೆ ಇಂತಹ ಹುಚ್ಚುತನ ಕೈಕೊಂಡೆ ?" ಎಂಬುದೇ. ಒಳಗಿನಿಂದ ತಾಯಿಯೂ ಹೊರಬಂದಳು. ಮುಖಬಿಂಬ ಕೆಂಪುಕೆಂಪು ತಳೆದಿತ್ತು. ತೀರ ಅಸಮಾಧಾನದ ಗಣಿಯಾಗಿ ಕೇಳಿದಳು "ಕೈಯಲ್ಲಿ ಕಾಸಿಲ್ಲದ ಕಾಲ. ಸಾಲ ಮಾಡುವ ಧೈರ್ಯ ನಿನಗೆ ಬಂದುದೂ ಸಹ ಆಶ್ಚರ್ಯವೇ. ನಿನಗೆ ಸ್ವಲ್ಪವಾದರೂ ಬುದ್ಧಿಯಿಲ್ಲವೇ."

ನಾನು ಎಲ್ಲರಿಗೂ ಒಂದೇ ಎಂಬಂತೆ ಉತ್ತರಿಸಿದೆ.

"ನಾನು ಸಾಲ ಮಾಡಿದ್ದು ತೀರಿಸುವ ಉದ್ದೇಶದಿಂದಲೇ. ಇದೊಂದು ಅಪೂರ್ವವಾದ ಸದವಕಾಶ. ಆದ್ದರಿಂದಲೇ ನಾನು ಒಪ್ಪಿಕೊಂಡೆ. ನನ್ನ ಪಾಕೆಟ್ ಮನಿಯಿಂದ ನಾನು ಸಾಲವನ್ನು ತೀರಿಸಿಕೊಳ್ಳುವೆ. ಇದರಿಂದ ನಿಮಗಾರಿಗೂ ಭಾರವಾಗುವಂತಿಲ್ಲ."

"ಆದರೂ ಹಣ ಸದ್ವಿನಿಯೋಗವಾಗಬೇಕೇ ಹೊರತು ದುರ್ವಿನಿಯೋಗ ವಾಗಬಾರದು."

"ಇದು ಖಂಡಿತ ವ್ಯರ್ಥವಲ್ಲ."

ನನ್ನನ್ನೇನೋ ನಾನು ಸಮರ್ಥಿಸಿಕೊಂಡೆ. ಆದರೆ, ಅದು ಎಲ್ಲರಿಗೂ ಸಮಾಧಾನ ನೀಡಲಿಲ್ಲ. ಕೋಪ–ಭರ್ತ್ಸನೆಗಳು ನಡೆದೇ ಇದ್ದವು. ಜೊತೆಗೆ ಅಪಹಾಸ್ಯಗಳೂ ಬೇರೆ. ನನ್ನ ಮನಸ್ಸು ಆಹತವಾಯಿತು. ನಾನು ಆತ್ಮ ನಿವೇದನೆ ಮಾಡಿಕೊಳ್ಳಬೇಕಾದುದು ಪರಮಾತ್ಮನಿಗೆ ಮಾತ್ರ.

o o o o

ಸಾಯಂಕಾಲ ಆರುಗಂಟೆಯ ಸಮಯ.

ಅದೇ ತಾನೇ ಸೂರ್ಯಾಸ್ತವಾಗಿ ದಿಗ್ದೇಶವೆಲ್ಲಾ ರಂಗುರಂಗಾಗಿತ್ತು. ಮನದಲ್ಲಿ ಗಾಳಿಗೋಪುರವನ್ನು ನಿರ್ಮಿಸುತ್ತ ಕಾರ್ಲ್‌ಟನ್ ಸ್ಟ್ರೀಟಿನಲ್ಲಿ ನಡೆಯುತಿದ್ದೆ. ನನಗೆ ಒಂದೆರಡು ಕರವಸ್ತ್ರ, ಕೆಲವು ಹೇರ್‌ಪಿನ್‌ಗಳು, ಒಂದು ಸ್ಕಾರ್ಫ್ ಇಷ್ಟನ್ನು ಕೊಳ್ಳುವ ಅಗತ್ಯವಿತ್ತು. ಆ ಉದ್ದೇಶದಿಂದಲೇ ನಾನು ಅಂಗಡಿ ಸಾಲಿಗೆ ಹೊರಟದ್ದು. ಹಾದಿಯಲ್ಲಿ ಹಳೆಯ ಗೆಳೆಯರನೇಕರು ಎದುರಾದರು. ಎಲ್ಲರೊಂದಿಗೂ ಒಂದೆರಡು ಮಾತು 'ಹಾಯ್' 'ಬಾಯ್'ಗಳ ವಿತರಣೆಗಳಿಂದ ಮನಸ್ಸು ಅರಳಿ ಹೂವಾಯಿತು. ಮನೆಯಿಂದ ಹೊರಬಂದುದು ಎಷ್ಟೊಂದು ಹರ್ಷದಾಯಕ ಎನಿಸಿತು ಮನಸ್ಸಿಗೆ. ಇನ್ನೂ ಹತ್ತುಮಾರು ನಡೆಯುವಷ್ಟರಲ್ಲಿ ದೂರದಲ್ಲಿ ಎದುರುಗಡೆಯಿಂದ ಭಾಸ್ ಇತ್ತ ಬರುತಿದ್ದುದು ದೃಷ್ಟಿಗೆ ಬಿದ್ದು ಹೃದಯ ಆನಂದದ ಆಗರವಾಯಿತು. ಈಚೀಚೆಗೆ ವಿಧಿವಶಾತ್ತಾಗಿಯೋ ಏನೋ ಅನಿರ್ವಚನೀಯವಾದ ಸ್ನೇಹಾನುರಾಗ ಬೆಳೆಯುತ್ತಿದೆ... ನಿಜ, ಅದನ್ನು ಸಮಂಜಸವೋ ಅಸಮಂಜಸವೋ ಊಹಿಸುವುದು ಕಷ್ಟ. ಅವನ ವಿದ್ಯಾವಿನಯ ಸಂಪನ್ನತೆ, ಚುರುಕು ಬುದ್ಧಿ, ಶರೀರ ಸೌಷ್ಟವ ಮಾತಿನ ಥಾಟ ಒಂದೊಂದೂ ಆಕರ್ಷಣೀಯವೇ. ಬುದ್ಧಿವಂತರ ಕೂಟ ನಿಜಕ್ಕೂ ಹಿತಕರ. ಯಾವ ರಾಷ್ಟ್ರೀಯನಾದರೇನು? ಗುಣಕ್ಕೆ ಮಾತ್ಸರ್ಯವುಂಟೇ ? ಆಫೀಸಿನಲ್ಲಿ ಅವನನ್ನು ಮೀರಿಸುವವರಿಲ್ಲ. ಎಲ್ಲರಿಗೂ ಅವನು ಅಚ್ಚುಮೆಚ್ಚು. ಮೇರಿ ಏಕೆ ಅವನ ಮೇಲೆ ವಿಷಕಾರುತ್ತಾಳೋ ಕಾಣೆ.

ಅವಳ ಎದೆಯಲ್ಲಿ ತುಂಬಿರುವುದು ವಿಷವಲ್ಲ, ರಾಷ್ಟ್ರೀಯತೆ ಅಥವಾ ಮತಾಂಧತೆ. ಏನೇ ಇರಲಿ, ಅದಕ್ಕೆ ಇತಿಮಿತಿ ಇರಬೇಕು. ಅವಳು ಸದಾ ಟೀಕಿಸುತ್ತಿರುವುದು ನನಗೆ ಇಷ್ಟವೇ ಇಲ್ಲ. ಹಾಗೆಂದು ಅವಳ ಸ್ನೇಹವನ್ನೂ ಕಡೆಗಣಿಸಲಾರೆ, ಹೀಗಿದೆ ನನ್ನ ಪರಿಸ್ಥಿತಿ.

ಭಾಸ್ ಹತ್ತಿರ ಹತ್ತಿರವಾಗುತ್ತ ಬಂದ. ಅವನ ನೋಟ ಭೂಮಿಯ ಮೇಲಿತ್ತು. ಮೇರಿ ಹೇಳುವುದರಲ್ಲಿ ಸ್ವಲ್ಪ ಅರ್ಥವಿದೆ. ಅವನು ಅಷ್ಟು ಸರಾಗವಾಗಿ ಯಾರೊಡನೆಯೂ ಬೆರೆಯುವವನಲ್ಲ. ಅವನು ತಲೆಯೆತ್ತಿ ನೋಡಿಯಾನೇನೋ ಎಂದು ಕೆಲವು ಕ್ಷಣ ಕಾದು ನೋಡಿ ನಾನೇ 'ಹಾಯ್' ಎಂದೆ.

ಅವನು ಆ ಕ್ಷಣ ತಲೆಯೆತ್ತಿ ನೋಡಿ ಮುಗುಳು ನಗೆ ಬೀರಿ 'ಹಾಯ್!' ಎಂದ.

"ಯಾವ ಕಡೆ ಹೊರಟಿದ್ದಿ?"

"ಸುಮ್ಮನೆ ವಾಕಿಂಗ್... ನೀನು?"

"ಸ್ವಲ್ಪ ಶಾಪಿಂಗ್ ಇತ್ತು. ಅದಕ್ಕಾಗಿಯೇ ಈ ಕಡೆ ಬಂದೆ."

ಅವನು ಕೇಳಿದ "ಯಾವ ಅಂಗಡಿಯಲ್ಲಿ?"

"ಅದೋ, ಆ ಮುಂದಿನ ಅಂಗಡಿಯಲ್ಲಿ. ನೀನು ನನ್ನೊಂದಿಗೆ ಬರಲು ಅಡ್ಡಿಯಿಲ್ಲವಷ್ಟೇ"

"ಅಡ್ಡಿಯೇನಿಲ್ಲ, ನಡೆ ಹೋಗೋಣ."

"ಥ್ಯಾಂಕ್ಯೂ!" ಎಂದೆ ನಾನು.

ಅವನು ವಿಚಾರಪರವಶನಾಗಿ ಗಂಭೀರವಾದ ದನಿಯಲ್ಲಿ ನುಡಿದ "ಯಾವತ್ತೂ ಒಬ್ಬೊಬ್ಬರೇ ಹೊರಹೋಗುವುದೆಂದರೆ ಬೋರಿಂಗ್. ಹೀಗೆ ಯಾರಾದರೂ ಜೊತೆಗೂಡಿದರೆ ಹೊತ್ತು ಸರಾಗ ಉರುಳುತ್ತದೆ. ನಾನು ದೇಶಬಿಟ್ಟು ಬಂದವನು. ಕೌಟುಂಬಿಕ ಸುಖ ದೂರವಿರುವುದರಿಂದ ಯಾರಾದರೂ ಸಿಕ್ಕಿದರೆ ಸಾಕು ಎನಿಸುವುದು ಸಹಜ...."

ಆ ಮಾತು ಕೇಳಿ ನನ್ನ ಹೃದಯ ಬಿಸಿಲಟ್ಟಿದ ಮಂಜಿನಂತಾಯಿತು. ನಾನು ವಿನಯಪೂರ್ವವಾಗಿ ನುಡಿದೆ, "ನಾವೂ ಒಂದು ವೇಳೆ ವಿದೇಶಗಳಲ್ಲಿರುವ ಪ್ರಸಂಗ ಬಂದರೆ ನಮಗೂ ಸಹ ಹೀಗೇ ಅನಿಸಬಹುದು. ನಮಗೆ ಇನ್ನೂ ಆ ಅನುಭವವಾಗಿಲ್ಲವಾದುದರಿಂದ ಯಾವತ್ತೂ ವಿದೇಶೀಯರನ್ನು ಕಂಡರೆ ತಾತ್ಸಾರ !"

"ಅದೇ ವೈರಕ್ಕೆ ಕಾರಣ." ಒಂದು ಗಳಿಗೆ ತಡೆದು ಪುನಃ ಮುಂದು ವರಿದ "ಸಂಘ ಶಕ್ತಿ ಬೆಳೆಯುವುದೆಂದರೆ ಸ್ನೇಹ ಸೌಹಾರ್ದತೆಗಳಿಂದ ತಾನೇ ?"

"ಹೌದು, ಭಾಸ್!"

"ನೀನು ಈಚೆಗೆ ಹೋಟೆಲ್ ಒಲಂಪಿಯಾಕ್ಕೆ ಹೋಗಿದ್ದೆಯಾ ?"

"ಇಲ್ಲ."

"ಈಗ ಅಲ್ಲಿ ಮಸಾಲೆದೋಸೆ ತಯಾರಿಸುವುದನ್ನು ಕಲಿತಿದ್ದಾರೆ. ಬಾ, ನಿನಗದರ ರುಚಿ ತೋರಿಸುವೆ."

ನಾನು ಅತ್ಯಾನಂದ ತುಂದಿಲತೆಯಿಂದ ಅವನೊಂದಿಗೆ ನಡೆದೆ. ಅಲ್ಲಿಂದ ಒಲಂಪಿಯಾ ಹೋಟೆಲ್ ಒಂದು ಫರ್ಲಾಂಗ್ ಮೇಲೆಯೇ ಇತ್ತು. ನಾನು ಅತ್ಯಂತ ಹುರುಪಿನಿಂದ ಹೆಜ್ಜೆ ಹಾಕಿದೆ. ಮನಃಪಕ್ಷಿ ಭವಿಷ್ಯದ ವೇದಿಕೆಯನ್ನೇರಿ ಅಂಡಲೆಯುತ್ತಿದ್ದಂತೆ ಹಾದಿ ಹೆಚ್ಚು ಮಾತುಕತೆಯಿಲ್ಲದೆ ಗಂಭೀರವಾಗಿ ಸಾಗಿತು. ಹೋಟೆಲಿಗೆ ಹೋದಾಗ ಕುರ್ಚಿಮೇಜುಗಳು ಭರ್ತಿಯಾಗಿದ್ದುವು. ಪಕ್ಕದ ಕೊಠಡಿಯಲ್ಲಿ ಖಾಲಿಯಿದ್ದ ಮೇಜಿನ ಬಳಿ ಕುಳಿತುಕೊಂಡೆವು. ಭಾಸ್ ಮಸಾಲೆ ದೋಸೆಗೆ ಆರ್ಡರ್ ಕೊಟ್ಟ. ಅಲ್ಲಿ ಬಹಳ ಹೊತ್ತು ಕುಳಿತು ವರ್ತಮಾನ–ಭವಿಷ್ಯತ್ತುಗಳ ವಿಚಾರವಾಗಿ ಮನಬಿಚ್ಚಿ ಮಾತಾಡಿದೆವು. ಭಾರತದ ಸಾಹಿತ್ಯ–ಸಂಸ್ಕೃತಿಗಳನ್ನು ಅವನು ತಿಳಿಸಿಕೊಡುತ್ತಿದ್ದರೆ ನಾನು ಮಂತ್ರಮುಗ್ಧಳಂತೆ ಕೇಳುತ್ತಿದ್ದೆ. ಮಸಾಲೆದೋಸೆ ಅರಗಿ ಊಟದ ವೇಳೆಯೂ ಬಳಿಸಾರಿ ಬಂದಿತು. ಭಾಸ್ ಒಳ್ಳೆಯ ಡಿನ್ನರ್‌ಗೆ ಆರ್ಡರ್ ಕೊಟ್ಟ. ನಾವು ಊಟವನ್ನು ಮುಗಿಸಿ ಹಿಮ್ಮರಳುವಾಗ ಅವನನ್ನು ಮನವಾರೆ

ಮೆಚ್ಚಿಕೊಂಡಿದ್ದೆ. ಅವನ ನಡೆನುಡಿಗಳು ಅನುಕರಣೀಯವಾಗಿದ್ದುವು. ನಾನು ಕಲ್ಲುಸಕ್ಕರೆಗೆ ಮಾರುಹೋಗುವ ಮಗುವಿನಂತಾದೆ.

ನಾನು ರಾತ್ರಿ ನನ್ನ ತಾಯಿಯೊಂದಿಗೆ ಭಾಸ್ವಾನನ ವಿಚಾರ ಹೇಳಿದಾಗ ಅವಳು ಕುಪಿತಳಾಗಿ "ನೀನು ಇಂಡಿಯನ್ ಮದುವೆಯಾದರೆ ಸ್ವಾತಂತ್ರ್ಯ ಹೀನಳಾಗಿ ನರಳಬೇಕು. ಆ ಕರಿ ಮುಸುಡಿಯ ಮುಸಿಯಗಳನ್ನು ಏನೆಂದು ಮೆಚ್ಚುವೆ ? ಕೇವಲ ಮೃಗಗಳಿಗೂ ಕೀಳಾದ ಜನ. ಉಡಿಗೆ ತೊಡಿಗೆಯಲ್ಲಿ 'ವೆಸ್ಟ್ರನೈಸ್ಡ್' ಆದರೆ ಸಾಕೆ? ಬಿಳೀ ಹೆಣ್ಣುಗಳ ಬೆನ್ನು ಹತ್ತಿ ಅವರು 'ಜೈನಿ' ಹೊಡೆಯುವ ಕೀಳ್ತನವನ್ನು ಅರ್ಥಮಾಡಿಕೊಳ್ಳದಿದ್ದರೆ ಹೇಗೆ ? ಜೀವನ ಎಂದೂ ಹೂವಿನ ಹಾಸಿಗೆಯಲ್ಲ. ಪೂರ್ವಾಪರಗಳನ್ನು ತಿಳಿದುಕೊಳ್ಳದೇ ಹೋದರೆ ನರಕಕ್ಕೆ ಬೀಳಬೇಕಾಗುತ್ತೆ ಎಚ್ಚರ!" ಎಂದು ಮುಂತಾಗಿ ಛೀಮಾರಿ ಹಾಕಿದಳು. ನಾನು ಅಷ್ಟಕ್ಕೆ ಬಿಡಲಿಲ್ಲ; ಮೈಯೆಲ್ಲಾ ಮನಸ್ಸಾಗಿ ಉತ್ತರಿಸಿದೆ.

"ಅವನು ಉತ್ತಮ ತರಗತಿಯ ವಿಜ್ಞಾನಿ. ಕಾಮನ್‌ವೆಲ್ತ್ ಸ್ಕಾಲರ್ ಷಿಪ್ ಪಡೆದವನು. ಬಣ್ಣ ಎಣ್ಣೆಗೆಂಪಾದರೂ ಒಳ್ಳೆಯ ಲಕ್ಷಣವಂತ. ನಯವಿನಯಾದಿಗಳ ಗಣಿ. ನೀನು ಒಪ್ಪಿದರೆ ನಾವು ಸಂತೋಷದಿಂದ ಮದುವೆಯಾಗುತ್ತೇವೆ."

ಅವಳು ಕುಪಿತಳಾಗಿ ಉಚ್ಚಸ್ವರದಲ್ಲಿ ಹೇಳಿದಳು "ನೀನು ಇನ್ನೂ ನೂರು ಸಲ ಪರ್ಯಾಲೋಚಿಸು. ನಿನಗೆ ಏಸು ಸ್ವಾಮಿ ಸಹಾಯ ಮಾಡುತ್ತಾನೆ!"

"ಅಮ್ಮಾ ! ಪ್ಲೀಸ್..."

"ಛೀ! ಛೀ! ಎಲ್ಲಿಯಾದರುಂಟೇ ? ತೀರ ಅಸಹ್ಯ ! ಕ್ಷುದ್ರತನ !"

ಅವಳು ವ್ಯಗ್ರಮನಸ್ಕಳಾಗಿ ಏನೇನು ಚೀರಿದಳೋ ಅದೆಲ್ಲಾ ಅರ್ಥವಿಲ್ಲದ್ದು ಎಂಬುದು ನನಗೆ ಗೊತ್ತು. ಅವಳು ಭಾರತೀಯರನ್ನು ತಿಳಿದು

ಕೊಂಡಿರುವುದೂ ಸಹ ಅಲ್ಪವೆ. ಅಂದಮೇಲೆ ಅವಳ ಪ್ರತಿಕ್ರಿಯೆ ಸಾಧ್ಯವಾದುದೇ, ಎನಿಸಿದಾಗ ನಾನು ಸ್ವಲ್ಪ ತಡೆದು ನುಡಿದೆ,

"ನಿನಗೆ ಭಾರತೀಯರ ವಿಷಯ ಏನೇನೂ ತಿಳಿಯದು. ವೃಥಾ ತಪ್ಪು ಕಲ್ಪನೆ ಅಥವಾ ವಿಪರೀತಾರ್ಥ. ವಿಷಯ ತಿಳಿಯದೇ ಮಾತಾಡುವುದು ವ್ಯರ್ಥ."

ಆ ಮಾತಿನಿಂದ ಇನ್ನಷ್ಟು ಕೋಪಿಷ್ಟಳಾದ ತಾಯಿ ಹುಬ್ಬು ಗಂಟಿಕ್ಕಿ ಹೇಳಿದಳು,

"ಹೋಗು !, ಹೋಗು ! ನೀನು ಅವನ ಕೈಯಿಂದಲೇ ಸಮಾಧಿ ಹೊಂದುತ್ತಿ !"

ಸಣ್ಣ ಎದೆಯಾಳದಿಂದ ದೀರ್ಘವಾದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು. ನಾನು ಹಿಂಬಾಗಿಲಿಗೆ ಹೋದೆ. ಗಗನ ಭಿತ್ತಿಯಲ್ಲಿ ಲಕ್ಷ ಲಕ್ಷ ಲಕ್ಷ ಲಕ್ಷ ನಕ್ಷತ್ರಗಳು ಉಜ್ವಲವಾಗಿ ಬೆಳಗುತ್ತಿವೆ. ಅರ್ಧಚಂದ್ರವು ಮ್ಲಾನ ಮುಖಿಯಾಗಿ ಸಾಮ್ರಾಜ್ಯವಾಳುತಿದ್ದಾನೆ. ತಂಗಾಳಿ ತಣ್ಣಗೆ ತೀಡುತ್ತಿದೆ. ರಾತ್ರಿಯಾದರೂ ಸದ್ದುಗದ್ದಲಗಳು ಅಡಗಿಲ್ಲ. ಬಗೆ ಬಗೆಯ ವಾಹನಗಳು ಇನ್ನೂ ರಸ್ತೆಯಲ್ಲಿ ಓಡಾಡುತ್ತಿವೆ. ನೆರೆಮನೆಯ ನಾಯಿಯೊಂದು ಕರ್ಕಶವಾಗಿ ಬೊಗಳಿ ಬೊಗಳಿ ತನ್ನ ದನಿಯನ್ನು ಹರಿಯ ಬಿಡುತ್ತಿದೆ ಸದ್ದುಗದ್ದಲಗಳಿಗೆ ಶೃತಿಯಾಗಿ. ನಾನಲ್ಲಿ ಕಲ್ಲಿಗಿಂತ ಕಲ್ಲಾಗಿ ಎಷ್ಟು ಹೊತ್ತು ನಿಂತಿದ್ದೆನೋ; ತಾಯಿ ಕದ ಮುಚ್ಚಲು ಬಂದಾಗಲೇ ಇತ್ತ ಗಮನ.

೦ ೦ ೦ ೦

ವಸಂತಕಾಲ ಕಮನೀಯವಾಗಿದ್ದರೂ ಬಿಸಿಲಿನ ಚುರುಕು ಮೈಯಲ್ಲಿ ಧಗೆ ಮೂಡಿಸುವಷ್ಟು ವಿಶೇಷ. ಆದರೂ, ವಾತಾವರಣವೂ ಹಿತ. ಕಾಲಮಾನವೂ ಹಿತ.

ಇಂದು ಆಫೀಸ್‌ಗೆ ಭಾಸ್ವಾನ್ ಬಂದಿರಲಿಲ್ಲ. ರಜೆ ತೆಗೆದುಕೊಂಡಿರಬಹುದೇನೋ ಎನಿಸಿತೊಮ್ಮೆ. ಕುತೂಹಲಭರಿತ ಕಣ್ಣನಗಳು ತಡುಕುತ್ತಲೇ ಇದ್ದುದನ್ನೂ ತಡೆಯದಾದೆ. ಮನೋಗತಿ ಹೀಗೆ ಇದ್ದರೂ ಕಾರ್ಯಗತಿ

ಗೇನೂ ಕುಂದುಂಟಾಗಲಿಲ್ಲ. ನಾನು ಸೋಫಿ ಮತ್ತು ಮೇರಿಯೊಂದಿಗೆ ಕೆಲಸ ಆರಂಭಿಸಿದೆ. ಅಷ್ಟರೊಳಗಾಗಿ ಸಹಕೆಲಸಗಾರರು ಗುಂಪು ಗುಂಪಾಗಿ ಬರ ಹತ್ತಿದರು. ಎಲ್ಲರ ಬಾಯಲ್ಲೂ ಪ್ರಸಕ್ತ ರಾಜಕೀಯ ರಂಗುರಂಗಾಗಿ ನಲಿ ಯುತ್ತಿದ್ದುದು ನಮ್ಮ ಕಿವಿಗೂ ಬಿತ್ತು.

ಆಗ ಮೇರಿಯೆಂದಳು "ಈಗೀಗ ಕಾಲಗತಿ ಬದಲಾಗುತ್ತಿದೆ. ವಿದ್ಯೆ ಬುದ್ಧಿಗಳಿಂದ ಜನ ಆಲೋಚನಾಶೀಲರಾಗಿದ್ದಾರೆ. ಆದರೂ ಜೀವನಸ್ತರದಲ್ಲಿ. ಅಂತಹ ಮಾರ್ಪಾಡೇನೂ ಆಗಲಿಲ್ಲ. ಅದೇ ವಿಶೇಷ !"

"ತಪ್ಪು ನಮ್ಮದೇ !"

ಮೇರಿ ಮಾತಾಡದೇ ನನ್ನ ವಿವರಣೆಯನ್ನೇ ನಿರೀಕ್ಷಿಸಿದಳೇನೋ ನೋಟ ಇತ್ತಲೇ ನೆಟ್ಟಿತು.

"ಹೌದು ನಾವು ಕೈಕಟ್ಟಿ ಸುಮ್ಮನೆ ಕುಳಿತರೆ ಮತ್ತೇನಾದೀತು ? ಈಗ ಬಲಿಷ್ಠ ರಾಷ್ಟ್ರಗಳನ್ನು ನೋಡು ! ಪ್ರತಿಯೊಂದು ಸಣ್ಣ ಕಾರಣಕ್ಕೂ ಹಲ್ಲು ಮಸೆಯುತ್ತ ಯುದ್ಧ ಸನ್ನಾಹ ಮಾಡಿಕೊಳ್ಳುತ್ತಿವೆ. ಅಂದಮೇಲೆ ಅಪ್ರ ಬುದ್ಧರ ಗತಿಯೇನು ? ಮೊದಲು ಪ್ರಬುದ್ಧತೆಯ ಮೆಟ್ಟಲೇರದಿದ್ದರೆ ಸುಧಾ ರಣೆ ಹೇಗೆ ಸಾಧ್ಯ?"

"ಅದು ನಿಜವೇ."

ನಾವು ಕೆಲಸವನ್ನು ಮುಗಿಸಿ ಮನೆಗೆ ಹೊರಡುವ ಸಮಯದಲ್ಲಿ ಸೆಕ್ಷನ್ ಮ್ಯಾನೇಜರ್ ಹೇಳಿದ "ಭಾಸ್ವಾನ್‌ಗೆ ಆಕ್ಸಿಡೆಂಟಾಗಿ ಆಸ್ಪತ್ರೆ ಸೇರಿ ದ್ದಾನಂತೆ !"

ಒಮ್ಮೆಲೇ ಆಕಾಶವೇ ತಲೆಯಮೇಲೆ ಕಳಚಿಬಿದ್ದಂತಾಯಿತು!

"Oh ಅಯ್ಯೋ ದೇವರೇ! ಅಪಘಾತ ಹಿರಿದೇ? ಕಿರಿದೇ? ಯಾವ ಆಸ್ಪತ್ರೆಯಲ್ಲಿದ್ದಾನೆ?"

"ವಿಲ್ಲಿಂಗ್‌ಟನ್ ಕ್ರಾಫರ್ಡ್ ಆಸ್ಪತ್ರೆಯಲ್ಲಿದ್ದಾನೆ. ಮೂಳೆ ಮುರಿದಿಲ್ಲ. ಕೈಕಾಲುಗಳಿಗೆ ಗಾಯವಾಗಿ ತುಂಬಾ ರಕ್ತಸ್ರಾವವಾಗಿದೆ. ನಾನು ನೋಡಿ ಬಂದೆ. ತುಂಬ ಸುಸ್ತಾಗಿದ್ದಾನೆ."

"ಅದಕ್ಕೇ ಅವನು ಈವತ್ತು ಕೆಲಸಕ್ಕೆ ಬರಲಿಲ್ಲ. ಅಪಘಾತ ನಡೆದುದು ಯಾವಾಗ?"

"ಆಫೀಸಿಗೆ ಬರುವ ಸಮಯದಲ್ಲಿ."

ನಾನು ಅಷ್ಟು ಕೇಳಿದವಳೇ ಸ್ವಲ್ಪವೂ ತಡಮಾಡದೆ ಅಫೀಸ್ ಬಿಟ್ಟು ಹೊರಟೆ. ಮುಂದಿನ ಸರ್ಕಲ್ಲಿನಲ್ಲಿ ಕೋಚ್ ಹಿಡಿದು ಆಸ್ಪತ್ರೆಯನ್ನು ಸೇರಿ ವಾರ್ಡ್ ಹುಡುಕಿಕೊಂಡು ಒಳಹೋದೆ. ಭಾಸ್ವಾನ್ ಒಬ್ಬನೇ ನರಳುತ್ತ ಮಲಗಿದ್ದ. ರಕ್ತ ಸಂಯೋಜನೆ ನಡೆಯುತಿತ್ತು. ಅಲ್ಲಿದ್ದ ನರ್ಸ್ ನನ್ನನ್ನು ಕುರಿತು ಹೇಳಿದಳು "ಇನ್ನೂ ಎರಡು ಸೀಸೆ ರಕ್ತ ಬೇಕಾಗುತ್ತೆ."

ಭಾಸ್ವಾನ್ ಒಮ್ಮೆ ಸ್ವಲ್ಪ ಮಾತ್ರ ಕಣ್ತೆರೆದು ನೋಡಿ ಮುಚ್ಚಿಕೊಂಡ. ಅತೀವ ಯಾತನೆಯಿಂದ ಮುಖ ಬಾಡಿಹೋಗಿತ್ತು. ತುಟಿಗಳು ಒಣಗಿದ್ದುವು. ನನಗೆ ಅವನ ದಾರುಣಸ್ಥಿತಿಯನ್ನು ನೋಡಿ ಕರುಳ ಬಳ್ಳಿ ಕರಗಿ ನೀರಾಗಿ ಹರಿದು ಕಣ್ಣುಗಳಲ್ಲಿ ತಕ್ಕನೆ ನೀರಾಡಿತು, ಭಯವಿಹ್ವಲತೆಯಲ್ಲಿ ಮೈಯಲ್ಲಿ ಚಳಿ ಮೂಡಿದಂತೆ ಸಣ್ಣಗೆ ನಡಗುತ್ತ ಬಳಿಯಲ್ಲಿ ಕುಳಿತುಕೊಂಡು ಅದುರುವ ದನಿಯಲ್ಲಿ ಮೆಲ್ಲನೆ ಕರೆದೆ "ಭಾಸ್! ಭಾಸ್!!

"......."

"ಭಾಸ್! ನಾನು ಜನೀ!"

"......"

"ಭಾಸ್! ನಿನಗಾಗಿ ಪ್ರಾರ್ಥಿಸುವೆ...."

"ಆ... ! ಬಹಳ ನೋವು ತಡೆಯಲಾರೆ."

"ಹೇಗಾದರೂ ಒಂದೆರಡು ದಿನ ತಡೆದುಕೋ. ಅನಂತರ ನೋವು ಕಡಿಮೆಯಾಗುತ್ತೆ. ಭಾಸ್ ಎದೆಗುಂದಬೇಡ....ಖಂಡಿತ ಎದೆಗುಂದಬೇಡ.

ಭಗವಂತ ತುಂಬ ಕರುಣಾಳು!"

ಅವನು ಮಾತಾಡಲಿಲ್ಲ. ಎದೆಯಾಳದಿಂದ ನಿಟ್ಟುಸಿರೊಂದು ಹೊರ ಹೊಮ್ಮಿತು. ನಾನು ನರ್ಸಳಿಗೆಂದೆ, "ನಾನೇ ರಕ್ತ ಕೊಡುವೆ. ನನ್ನದು ಹೊಂದುತ್ತೋ ನೋಡು."

ಅವಳು ಅದಕ್ಕೊಪ್ಪಿ ನನ್ನ ರಕ್ತ ಪರೀಕ್ಷೆ ಮಾಡಿ ನೋಡಿದನಂತರ 'ಸರಿಹೊಂದುತ್ತೆ' ಎಂದಳು. ನಾನು ಅವಳಿಗೆ ನನ್ನ ರಕ್ತವನ್ನು ತೆಗೆದು ಕೊಳ್ಳಲು ಕೇಳಿಕೊಂಡೆ. ಅವನ ಮೈಕೈ ಬ್ಯಾಂಡೇಜ್‌ನಿಂದ ಆವೃತವಾಗಿತ್ತು. ಬಲಗೈ ತಿರುಚಿದ್ದುದರಿಂದ ಆಪರೇಶ‌ನ್ ಮಾಡಿ ಸರಿ ಹೊಂದಿಸಿದ್ದರು. ಊದಿ ಕೆಂಪು ಕೆಂಪಾದ ದೇಹವನ್ನು ನೋಡಿದರೆ ಕಣ್ಣುಗಳಲ್ಲಿ ನೀರು ತಟತಟ ಹನಿ ಯುತ್ತವೆ. ಒಡಲು ಸಂಕಟದಿಂದ ತಳಮಳಿಸಿ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿತ್ತು. ನಾನು ಅವನಿಗಾಗಿ ಮೌನ ಪ್ರಾರ್ಥನೆ ಸಲ್ಲಿಸಿದೆ. ವಿಶೇಷ ಔಷಧಿಯ ಮತ್ತಿನಲ್ಲಿ ಎಚ್ಚರವಿಲ್ಲದೆ ಮಲಗಿದ್ದ ಅವನನ್ನು ಬಿಟ್ಟು ಮನೆಗೆ ಹೋಗಲು ಮನಸ್ಸು ಬರಲಿಲ್ಲ. ಅವನ ಗೆಳೆಯರು ಎಲ್ಲಿದ್ದಾರೋ ತಿಳಿಯದು. ಅವರಿಗೆ ಸುದ್ದಿ ತಿಳಿದಿದ್ದರೆ ಬಾರದೆ ಇರುತ್ತಿರಲಿಲ್ಲ. ಬಹುಶಃ ಅವರಿಗೆ ತಿಳಿ ಯದೇನೋ ಎನಿಸಿತು ನನಗೆ.

ಅದು ಎಮರ್ಜನ್ಸಿ ವಾರ್ಡ್. ಇನ್ನೂ ಕೆಲವರು ಮೂರ್ಛಾವಸ್ಥೆ ಯಲ್ಲಿ ಮಲಗಿದ್ದಾರೆ. ಅವರ ಉಸ್ತುವಾರಿಯಲ್ಲಿ ಒಬ್ಬ ಡಾಕ್ಟರು ಇಬ್ಬರು ನರ್ಸ್‌ಗಳು ಇದ್ದೇ ಇರುತ್ತಾರಾದ್ದರಿಂದ ನಾನು ಮನೆಗೆ ಹೋಗಬಹುದಾಗಿತ್ತು. ಅವನಿಗೆ ಪೂರ್ಣ ಎಚ್ಚರಿಕೆ ಬಂದಿರಲಿಲ್ಲವಾದ್ದರಿಂದ 'ಅವಸರ ಸರಿಯಲ್ಲ' ಎಂದಿತು ಆಂತರಿಕ ಪ್ರಜ್ಞೆ. ನರ್ಸ್ ನನ್ನ ರಕ್ತವನ್ನು ತೆಗೆದುಕೊಳ್ಳಲು ಪಕ್ಕದ ಕೊಠಡಿಗೆ ಕರೆದುಕೊಂಡು ಹೋದಳು. ಬಲಗೈ ಹಿಡಿದು ರಕ್ತಹಿರಿ ಯುವ ಸೂಜಿಯನ್ನು ಧಮನಿಗೆ ಅಳವಡಿಸಿ ಸೀಸೆಯನ್ನು ಇಟ್ಟಳು. ಆಗ ನನಗೆ ಆಯಾಸವೇನೂ ತೋರದಿದ್ದರೂ ಎರಡು ಸೀಸೆಯನ್ನು ಬಸಿದ ನಂತರ ಸ್ವಲ್ಪ ಆಯಾಸ ತೋರಿತು. ಎದ್ದು ಮೈಕೈ ಮುರಿದು ನಿಮಿರಿ ಸ್ಥಿತಿಗತಿ ಯನ್ನು ಸರಿಪಡಿಸಿಕೊಂಡು ವಾರ್ಡಿಗೆ ಹೋಗಿ ನೋಡಿದರೆ ಅವನಿಗೆ ಇನ್ನೂ

ವೈಯರಿವು ಬಂದಿರಲಿಲ್ಲ. ಆಗ ನರ್ಸ್ ಅಂದಳು "ನೀನು ಮನೆಗೆ ಹೋಗಿ ವಿಶ್ರಾಂತಿ ತೆಗೆದುಕೊ. ಅವನಿಗೆ ಪ್ರಾಣಾಪಾಯವೇನೂ ಇಲ್ಲ. ಅವನು ಎಮರ್ಜನ್ಸಿ ವಾರ್ಡಿನಲ್ಲಿರುವವರೆಗೆ ಇತರರ ಅಗತ್ಯವಿಲ್ಲ."

ನನಗೂ ವಿಶ್ರಾಂತಿಯ ಅಗತ್ಯ ಬಹಳವಿತ್ತು. ವಾರ್ಡಿನಿಂದ ಹೊರಡುವಾಗ ಹೃದಯವನ್ನೇ ಬಿಟ್ಟು ಹೋಗುತ್ತಿರುವಷ್ಟು ಸಂಕಟಪಡಯಿತು. ಆದರೂ ವಿಧಿಯಿರಲಿಲ್ಲ. ಟ್ಯಾಕ್ಸಿ ಹಿಡಿದು ಮನೆ ಮುಟ್ಟಿದಾಗ ರಾತ್ರಿ ಎಂಟು ಗಂಟೆ. ತಾಯಿಗೆ ನಾನು ತಡವಾಗಿ ಬಂದ ಕಾರಣವನ್ನು ತಿಳಿಸಿದಾಗ "ಅವರಿಗೆಲ್ಲಾ ನಾವೇಕೆ ತಲೆ ಬಿಸಿ ಮಾಡಿಕೊಳ್ಳಬೇಕು ಬಿಡು" ಎಂದಳು ಅತ್ಯಂತ ಅಸಡ್ಡೆಯಿಂದ.

ಆದರೆ....

ಪ್ರಾತಃಸೂರ್ಯ ಕಿರಣಗಳು ಕಿಟಕಿಯನ್ನು ಮುತ್ತಿದಾಗ ಹಾಸಿಗೆಯನ್ನು ಬಿಟ್ಟಿದ್ದು ದುಪ್ಪಟಿಯನ್ನು ಮಡಸಿ ಹೊರಬಂದೆ. ಶೌಚಗೃಹವನ್ನು ಬೆಮೆಲ್ ಆಕ್ರಮಿಸಿಕೊಂಡಿದ್ದುದರಿಂದ ಸ್ವಲ್ಪಹೊತ್ತು ನಾನು ಕಾಯಬೇಕಾಯಿತು. ಹಾಗೇ ಹೊರಬಾಗಿಲಿಗೆ ಬಂದೆ. ರಸ್ತೆಯಲ್ಲಿ ಆಗಲೇ ಟ್ಯಾಕ್ಸಿಗಳು ಓಡಾಡುತಿದ್ದುವು. ಹೊತ್ತಿಗೆ ಮುಂಚೆ ಇಂಗ್ಲೀಷರು ಏಳುವುದಿಲ್ಲವಾದ್ದರಿಂದ ಸಿಕ್ ಟ್ಯಾಕ್ಸಿವಾಲಾಗಳಿಗೆ ಅಧಿಕ ಹುರುಪು ಮತ್ತು ಅತ್ಯಂತ ಲಾಭ. ಆದಕ್ಕೇ ಅವರು ಹೊತ್ತಿಗೆ ಮುಂಚೆ ಏಳುತ್ತಾರೆ. ಪ್ರಾತರ್ವಿಧಿಗಳನ್ನು ಮುಗಿಸಿಕೊಂಡಿದ್ದರೆ ಈಗಲೇ ಒಂದು ಟ್ಯಾಕ್ಸಿ ಹಿಡಿದು ಆಸ್ಪತ್ರೆಗೆ ಹೋಗಬಹುದಾಗಿತ್ತು. ಈ ವೇಳೆಗೆ ಪ್ರಜ್ಞೆ ಬಂದಿರಬಹುದು. ಬಹುಶಃ ಅವನಿಗೆ ನನ್ನನ್ನು ನೋಡಿದ ಅರಿವು ಮೂಡಿರಲಾರದು. ಈಗ ನೋಡಿದರೆ ಅರಿತುಕೊಳ್ಳಲು ಸಾಧ್ಯ.... ಆ ಯೋಚನೆಯಲ್ಲೇ ನಾನು ಒಳಹೋದೆ.

ಶೌಚದ ಮನೆಯ ಬಾಗಿಲು ತೆರೆಯಿತು.

ಎಲ್ಲರೂ ಚೆಲ್ಲಾಡಿದ ಎಂಜಲುಗೊಂಜಲುಗಳಿಂದ ಇಡೀ ಶೌಚಗೃಹ ಅಸಹ್ಯವಾಗಿತ್ತು. ಕೊನೆಯಲ್ಲಿ ಮುಖ ಮಜ್ಜನ ಮಾಡಿದ ನಾನು. ಅದರ

ಶುಚಿತ್ವವನ್ನು ಮುಗಿಸಿ ಹೊರಬಂದಾಗ ಒಳಗಿನ ಕೆಲಸ ಕಾದಿತ್ತು. ಎಲ್ಲ ವನ್ನೂ ಅವಸರವಾಗಿ ಮುಗಿಸುತ್ತಿರುವಾಗ ತಾಯಿ ಅಂದಳು "ಜನೀ! ನಿನಗಾ ಗಲೇ ಅನೇಕ ಬಾರಿ ಹೇಳಿಯಾಗಿದೆ. ನೀನು ಇನ್ನೂ ಅದೇ ದಾರಿ ತುಳಿದರೆ ಅದರ ಪರಿಣಾಮವೇ ಬೇರೆ. ಮಕ್ಕಳ ಬದುಕು ವ್ಯರ್ಥವಾಗುವುದನ್ನು ನಾನು ಸಹಿಸಲಾರೆ. ನೀನು ಚರ್ಚಿಗೆ ಹೋಗಿ 'ಆತ್ಮನಿವೇದನೆ' ಮಾಡಿಕೊಂಡು ಆ ಇಂಡಿಯನ್ ಬ್ರೂಟ್ ಮರೆತುಬಿಡು. ಒಮ್ಮೆ 'ಕನ್ಫೆಶನ್' ಆಯಿತೆಂದರೆ ನಿನಗೆ ಜ್ಞಾನೋದಯವಾಗುತ್ತದೆ. ಅನಂತರ ಹಾದಿ ತಪ್ಪುವ ಸಂಭವ ಬರು ವುದಿಲ್ಲ. ಹೇಳು, ಏನು ಮಾಡುತ್ತಿ?"

ನನಗಾಗ ನಿಜವಾಗಿಯೂ ಬಹಳ ಬೇಸರವಾಯಿತು. ಏನೆಂದು ಉತ್ತರಿಸಲೂ ಮನಸ್ಸು ಬರಲಿಲ್ಲ. ಹೃದಯ ಸ್ವಾಭಿಮಾನ ಕೋಪ ತಾಪ ಗಳಿಂದ ಜರ್ಜರಿತವಾಯಿತು. ತುಟಿಗಳು ಬಿರಿಯಲಿಲ್ಲ. ಕೂಡಲೇ ಅಣ್ಣಂ ದಿರೂ, ಅಕ್ಕಂದಿರೂ ಗಟ್ಟಿಯಾಗಿ ಗಹಗಹಿಸಿ ನಕ್ಕ ಧೂರ್ತ ಪ್ರತಿಕ್ರಿಯೆ ನನ್ನನ್ನು ಅಪ್ಪಳಿಸಿತು. "ಇಂಡಿಯನ್ ಬ್ರೂಟ್!" 'ಇಂಡಿಯನ್ ಬ್ಯಾಸ್ಟರ್ಡ್! ಎಂದು ಪುನಃ ಪುನಃ ಬಾಯಿ ಹರಿಯುವಂತೆ ಕೂಗಿದರು! ನಾನು ಒಂದೆರಡು ಕ್ಷಣ ಹೊಸ್ತಿಲಲ್ಲಿ ನಿಂತಿದ್ದು ಬಿರುಗಾಳಿಯಂತೆ ಸರ್ರನೆ ತಿರುಗಿ "ನೀವೆಲ್ಲಾ ಇಂಗ್ಲೆಂಡ್ ಬುಚ್ಚರ್ಸ್ !" ಎಂದೆ. ಅನಂತರ ನನ್ನ ಸಿಟ್ಟು ನನಗೇ ನಗು ತರಿಸಿತು. ಅವರು ಏನಾದರೂ ಅಂದುಕೊಳ್ಳಲಿ. ನಾನೇಕೆ ತಲೆ ಕೆಡಿಸಿ ಕೊಳ್ಳಬೇಕು ಎನಿಸಿ ನಾನೇ ಸಮಾಧಾನ ಪಟ್ಟುಕೊಂಡೆ. ನಂತರ ಎಂದಿನಂತೆ ನೇರವಾಗಿ ಆಫೀಸಿಗೆ ಹೋಗದೆ ಆಸ್ಪತ್ರೆಯ ಹಾದಿ ಹಿಡಿದೆ. ಅವನಿಗೆ ಜ್ವರ ಬಂದಿತ್ತು. ಇನ್ನೂ ಎಮರ್ಜನ್ಸಿ ವಾರ್ಡಿನಲ್ಲಿಯೇ ಇದ್ದ. ಇಂದೂ ರಕ್ತ ಸಂಯೋಜನೆ ನಡೆಯುತಿತ್ತು. ಬಳಿಗೆ ಹೋಗಿ ಹಣೆಯ ಮೇಲೆ ಮೆಲ್ಲನೆ ಕೈಯಿಟ್ಟೆ. ಅವನು ಕಣ್ತೆರೆದು ನೋಡಿ "ಏಕೆ ಇಲ್ಲಿಗೆ ಬರುವ ತೊಂದರೆ ತೆಗೆದುಕೊಂಡೆ ?" ಎಂದ, ಕ್ಷೀಣಿತ ದನಿಯಲ್ಲಿ.

"ಇದೊಂದು ತೊಂದರೆಯೇ? ಆ ಬಗ್ಗೆ ಚಿಂತೆ ಬೇಡ... ಈಗ ನಿನಗೇ ನಾದರೂ ಕುಡಿಯಲು ಕೊಡಲೇ?"

"ಏನಿದೆ?"

"ನೀನು ಏನು ಬಯಸಿದರೆ ಅದನ್ನು ತಂದುಕೊಡುವೆ."

"ಬರೀ ಹಾಲು ಸಾಕು."

ಆಸ್ಪತ್ರೆಯ ಕ್ಯಾಂಟೀನಿನಿಂದ ಒಂದು ಬಸಿ ಹಾಲನ್ನು ತಂದುಬಾಯಿಗೆ ಸ್ವಲ್ಪ ಸ್ವಲ್ಪವಾಗಿ ಸುರಿದೆ. ಆವನು ಪೂರ್ತಿ ಹಾಲನ್ನು ಕುಡಿದನಂತರ ಅಂದ "ನೀನಿಂದು ಆಫೀಸಿಗೆ ಹೋಗುವುದಿಲ್ಲವೇ ?"

"ಇಲ್ಲ, ಇಲ್ಲೇ ಇರುವೆ. ನಿನ್ನ ಗೆಳೆಯಲ್ಲಿದ್ದಾರೆ ? ಅವರಿಗಿದು ತಿಳಿಯದೇ ?"

"ವಸಂತ್ ಆನಂದ್ ಇಬ್ಬರೂ ಯುರೋಪ್ ಪ್ರವಾಸ ಹೋಗಿದ್ದಾರೆ. ಅವರಿಬ್ಬರೂ ನನ್ನನ್ನು ಬಹಳ ಒತ್ತಾಯಿಸಿದರು. ನಾನು ಅವರೊಂದಿಗೆ ಹೋಗಿದ್ದಿದ್ದರೆ ಈ ಅವಗಡ ತಪ್ಪುತಿತ್ತು. ನಾನೇ ಹೋಗಲಿಲ್ಲ."

"ಏಕೆ?"

"ಈಗಷ್ಟೆ ಕೆಲಸಕ್ಕೆ ಸೇರಿರುವುದರಿಂದ ರಜೆ ತೆಗೆದುಕೊಳ್ಳಲು ಮನಸ್ಸಾಗಲಿಲ್ಲ. ಮುಂದಿನ ವರ್ಷ ಹೋದರೆ ಸರಿ ಎಂದುಕೊಂಡೆ. ಈಗ ನೋಡಿದರೆ ಈ ದುರ್ಗತಿ ಒದಗಿತು."

ನಾನು ತೊಯ್ದ ಕಣ್ಣುಗಳನ್ನು ಕರವಸ್ತ್ರದಿಂದ ಒರಿಸಿಕೊಂಡು ಹೇಳಿದೆ "ನೀನು ಎದ್ದು ಓಡಾಡುವಂತಾಗುವವರೆಗೂ ಆಫೀಸಿಗೆ ನಾನು ಹೋಗುವುದಿಲ್ಲ ಬಿಡು."

"ನೀನೇಕೆ ನನಗಾಗಿ ತೊಂದರೆ ತೆಗೆದುಕೊಳ್ಳಬೇಕು? ಅದರಿಂದ ನಿನಗೆ ಆರ್ಥಿಕ ನಷ್ಟವೂ ಆಗುತ್ತದೆ."

ಅದೇ ವೇಳೆಗೆ ಒಳ ಬಂದ ನರ್ಸ್ ಮುಗುಳು ನಗುತ್ತ ನನ್ನನ್ನು ತೋರಿ "ಇವಳೇ ನಿನಗೆ ರಕ್ತ ಕೊಟ್ಟು ಹೋದವಳು. ನಿನ್ನೆ ನೀನು ಯಾರು ಎಂದು ಕೇಳಿದೆಯಲ್ಲಾ ಅದಕ್ಕಾಗಿ," ಎಂದಳು ಭಾಸ್‌ನನ್ನು ಕುರಿತು.

ಭಾಸ್ ನನ್ನನ್ನು ಆಶ್ಚರ್ಯದಿಂದ ಕೇಳಿದ "ನೀನು ರಕ್ತ ಕೊಟ್ಟೆಯಾ?"

"ಹೌದು ..." ಮುಂದೆ ಮಾತು ಹೊರಡಲಿಲ್ಲ ಸುಮ್ಮನಾದೆ. ಕಣ್ಣು ಗಳು ಪುನಃ ಪುನಃ ತೊಯ್ಯುತಿದ್ದುವು. ಆದರಿಂದ ಅವನ ಮನಸ್ಸಿಗೆ ಘಾಸಿ ಯಾಗುತ್ತದೆಂಬುದು ಗೊತ್ತು. ಆದರೂ, ನನ್ನನ್ನು ಹತೋಟಿಯಲ್ಲಿಟ್ಟು ಕೊಳ್ಳಲಾಗದೆ ಹೋದುದರಿಂದ ಸ್ವಲ್ಪಹೊತ್ತು ಹೊರ ಹೋಗಿ ನನ್ನನ್ನು ಸುಧಾ ರಿಸಿಕೊಳ್ಳುವುದು ಲೇಸು ಎನಿಸಿದಾಗಲೇ ಪೀಟರ್ ಒಳಹೆಜ್ಜೆಯಿಟ್ಟ. ನನ್ನನ್ನೂ ಭಾಸ್‌ನನ್ನೂ ನಿಟ್ಟಿಸಿ ನೋಡಿ "ಇದಕ್ಕೇಕೆ ಇಷ್ಟೊಂದು ಪರಿತಾಪ ? ಕಷ್ಟ ಬಂದಾಗ ಧೈರ್ಯ ತಾಳಬೇಕೆ ಹೊರತು ಎದೆಗುಂದಬಾರದು" ಎನ್ನುತ್ತ ನನ್ನ ಬೆನ್ನನ್ನು ನೇವರಿಸಿದ. ನನಗಾಗ ನಿಜವಾಗಿಯೂ ಅಸಮಾಧಾನವಾಯಿತು. ನಾನು ಸಿಡುಕಿನಿಂದ ಹೇಳಿದೆ "ಇರಲಿ, ನೀನೇಕೆ ಇದರಲ್ಲಿ ಆಸ್ಥೆ ವಹಿಸುತ್ತಿ ? ನಮ್ಮ ಕಷ್ಟ ನಮಗೆ."

ಅವನು ಅಲ್ಲಿಗೂ ಸುಮ್ಮನಾಗಲಿಲ್ಲ. ನನ್ನ ತಲೆಯಮೇಲೆ ಕೈಯಿಟ್ಟು "ಇಷ್ಟೊಂದು ವಿವಶಳಾಗಬೇಡ" ಎಂದು ನಲ್ಮೆಯಿಂದ ನುಡಿದು ಭಾಸ್ ಕಡೆ ತಿರುಗಿ "ಈಗ ಹೇಗಿದ್ದಿ? ನೋವು ಕಡಿಮೆಯಿದೆಯೇ ?" ಎಂದ.

ಅವನ ಅತೀವರ್ತನೇ ನನಗೆ ಕೋಪ ತರಿಸಿದರೂ ಸೂಕ್ತವಲ್ಲದ ಸಮಯ ವಾದುದರಿಂದ ನಾನು ಪ್ರತಿನುಡಿಯದೆ ಎದ್ದು ವರಾಂಡಕ್ಕೆ ಹೋದೆ. ಮನಃ ಪ್ರಾಣಗಳು ದುಃಖದುಗುಡಗಳ ಆಗರವಾಗಿದ್ದುವು. ಒಡಲು ಒಳಗಿಂದೊಳಗೇ ಹುಯ್ಯಲಿಡುತಿತ್ತು. ನರನರಗಳೂ ಅಳುತಿದ್ದುವು. ನಾನು ಕಣ್ಣು ಮುಖ ಗಳನ್ನು ಒರೆಸಿಕೊಂಡು ನನ್ನನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸರ್ವಸಹಸಾ ಪ್ರಯತ್ನಿಸಿದೆ. ಹತ್ತಿಪ್ಪತ್ತು ನಿಮಿಷಗಳು ಉರುಳಿದುವೇನೋ, ನಾನು ಒಳಬಂದೆ. ಹಾಸಿಗೆಯ ಬಳಿ ಕುಳಿತಿದ್ದ ಪೀಟರ್ ಎದ್ದು ನಿಂತು ಹೇಳಿದ,

"ನಾನಿನ್ನು ಆಫೀಸಿಗೆ ಹೊರಡುವೆ. ನೀನೂ ಬರುತ್ತೀಯಷ್ಟೆ?"

"ಇಲ್ಲ..." ತಲೆಯಾಡಿಸುತ್ತ ನಾನು ಉತ್ತರಿಸಿದೆ. ಒಂದೆರಡು ಕ್ಷಣ ಯೋಚಿಸಿ ಪುನಃ ನಾನೆಂದೆ "ಮೂರು ದಿನ ನನಗಾಗಿ ರಜೆ ಕೇಳಿಕೋ. ನಾನು

ಮನೆಗೆ ಹೋಗುವಾಗ ಬಂದು ರಜೆ ಬರೆದುಕೊಳ್ಳುವೆ. ಈಗ ನನ್ನ ಬಳಿ ಕಾಗದವಿಲ್ಲ."

"ಆಗಬಹುದು.... ಖಂಡಿತಾ ನೀನು ಚಿಂತಿತಳಾಗಬೇಡ ಡಾರ್ಲಿಂಗ್!"

ನನ್ನ ಮನಸ್ಸು ಥೂತ್ಕರಿಸಿತು. ಅವನನ್ನೊಮ್ಮೆ ತಿರಸ್ಕಾರ ದೃಷ್ಟಿಯಿಂದ ನೋಡಿ ಸ್ಟುಪಿಡ್! ಎಂದು ಒಳಬಂದೆ. ಭಾಸ್ ಮುಖ ಕೆಂಪು ಕೆಂಪು ತಳೆದಿತ್ತು. ಹಣೆ ಮುಟ್ಟಿ ನೋಡಿದರೆ ಜ್ವರ ಕೈಸುಡುವಷ್ಟು ಏರಿತ್ತು. ಕೊಡಬೇಕಾದ ಔಷಧಿ ಇಂಜಕ್ಷನ್‌ಗಳನ್ನು ಆಗಲೇ ಕೊಟ್ಟಿದ್ದಾಳೆ ನರ್ಸ್. ನಾನು ಅವಳ ಬಳಿಗೆ ಹೋಗಿ ಹೇಳಿದೆ "ಈಗ ಜ್ವರ ಇನ್ನಷ್ಟು ಹೆಚ್ಚಿದೆ."

"ಎರಡು ಮೂರು ದಿನ ಜ್ವರ ಇರುತ್ತೆ, ಏನೂ ಮಾಡುವಂತಿಲ್ಲ."

ನಾನು ನಿರಾಶಳಾಗಿ ಹಿಂದಿರುಗಿದೆ. ಅವನು ತಡೆತಡೆದು ಉಸಿರಾಡುತಿದ್ದ. ಮಾತಾಡುವಷ್ಟು ಶಕ್ತಿಯೂ ಇರಲಿಲ್ಲ. ಅವನ ಸಹ ಅಧಿಕಾರಿಗಳೂ ಇನ್ನೂ ಕೆಲವು ಭಾರತ ಮಿತ್ರರೂ ಆಗಾಗ ಬಂದು ಹೋಗುತಿದ್ದರು. ನಾನು ಆಫೀಸಿಗೆ ಹೋಗದೆ ಅಲ್ಲೇ ಇರುತಿದ್ದೆನಾದ ಕಾರಣ ನನಗೆ ಹಣದ ಅಡಚಣೆ ದಿನದಿನಕ್ಕೂ ಹೆಚ್ಚತೊಡಗಿತು. ಆದರೂ ಧೃತಿಗೆಡದೆ ಒಂದೆರಡು ಚೂರು ಬ್ರೆಡ್ ತಿಂದು ಕಾಲಹರಣ ಮಾಡುತಿದ್ದೆ. ಮನೆಯಿಂದ ಮುಂಚೆಯೇ ಹೊರಡುತ್ತಿದುದ್ದರಿಂದ ಆಸ್ಪತ್ರೆಗೆ ಹೋಗುತಿದ್ದೇನೆಂಬುದು ಎಲ್ಲರಿಗೂ ತಿಳಿದಿತ್ತು. ತಾಯಿ ಅದೇ ಕಾರಣವಾಗಿ ಕುಪಿತಳಾಗುತಿದ್ದಳು. ನಾನು ಅವೊಂದನ್ನೂ ಮನಸ್ಸಿಗೆ ಹಾಕಿಕೊಳ್ಳದೆ ಹಾಗೇ ನೇರವಾಗಿ ಬರುತಿದ್ದೆ. ಭಾಸ್ಕರ್ ಎಮರ್ಜನ್ಸಿ ವಾರ್ಡಿನಿಂದ ಬೇರೊಂದು ಜನರಲ್ ವಾರ್ಡಿಗೆ ವರ್ಗಾಯಿಸಲ್ಪಟ್ಟಿದ್ದ. ಜ್ವರ ಬಿಟ್ಟಿದ್ದು ಗಾಯಗಳು ಮಾಯುತ್ತಿದ್ದುವು. ಆದರೆ, ನಿಶ್ಶಕ್ತಿ ಬಹಳವಾಗಿತ್ತು. ಸಶಕ್ತನಾಗಲು ಇನ್ನೂ ಒಂದು ವಾರವೇ ಬೇಕು. ಪೀಟರ್ ದಿನವೂ ಬರುತಿದ್ದ. ಆದರೆ ಅದು ನಮ್ಮ ನಮ್ಮಗಳ ಮಧ್ಯೆ ವಿಷ ಬೀಜ ಬಿತ್ತುವುದಕ್ಕೆ. ನನ್ನ ಮನವನ್ನು ಅವನಿಂದ ಹಿಂದಿರುಗಿಸಿದರೆ ನಾನು ಅವನವಳಾಗುತ್ತೇನೆಂಬ ಕ್ಷುದ್ರ ಭಾವ. ಭಾಸ್ ಮುಂದೆ ತನ್ನ ಪ್ರೇಮವನ್ನು

ಪ್ರಕಟಿಸಿದರೆ ಅವನು ನನ್ನನ್ನು ದೂರೀಕರಿಸುತ್ತಾನೆ ಎಂಬುದು ಕುಹಕ ಮನದ ಕುತಂತ್ರ. ಅವನು ಅಲ್ಲಿ ಬಂದರೆ ಇಲ್ಲಿ ನನ್ನ ರಕ್ತ ಕುದಿಯತೊಡಗಿ ನಾನು ಹೊರಹೋಗುತ್ತಿದ್ದೆ. ಆದರಿಂದ ಅವನು ಇನ್ನೊಂದು ಬಗೆಯ ಸಂಚು ಹೂಡಿದ. ನಾನು ಹೊರಬಂದ ವೇಳೆಯಲ್ಲಿ ತಾನೂ ಜನಿಯೂ ಬಲು ದಿನದ ಪ್ರೇಮಿಗಳೆಂದೂ ಮದುವೆಯಾಗುವ ದಿನ ನಿಶ್ಚಿತವಾಗಿಲ್ಲವೆಂದೂ ಸುಳ್ಳು ಆರೋಪಿಸಿದ. ಹಾಗೆಂದು ಭಾಸ್ ಮನಬಿಚ್ಚಿ ನನಗೆ ನೇರವಾಗಿ ಹೇಳಲಿಲ್ಲ ವಾದರೂ ಅವನ ವರ್ತನೆ ನನಗದರ ಪರಿಚಯ ಸ್ವಲ್ಪ ಮಾಡಿಸಿತು.

ಆರ್ಥಿಕ ಅಡಚಣೆ ಮಾನಸಿಕ ಪರಿಭ್ರಮಣೆ ನನ್ನ ಹೃದಯವನ್ನು ಕಾಣದ ಕೈಗಳಿಂದ ಹಿಸುಕುತ್ತಿದ್ದುವು. ಇನ್ನು ಸದ್ಯದಲ್ಲೇ ಭಾರತ ಪ್ರವಾಸ ಬೇರೆ. ಅದಕ್ಕಾಗಿ ಇನ್ನಷ್ಟು ಹಣ ಕೂಡಿಸಿಕೊಳ್ಳಬೇಕಾಗಿತ್ತು. ಅದಕ್ಕೂ ಕಲ್ಲು ಬಿದ್ದುದರಿಂದ ಮೂರು ತಿಂಗಳು ಹೇಗೆ ನಿಭಾಯಿಸುವೆನೋ ಎಂಬ ಚಿಂತೆ ಮನದಲ್ಲಿ. ಎರಡುವಾರಗಳಿಂದ ಕೆಲಸ ಮಾಡಿರಲಿಲ್ಲ. ಇನ್ನು ತಾಯಿಗೆ ಹಣ ನೀಡದೆ ಇರುವಂತಿಲ್ಲ. ಹೀಗೆ, ಒಂದಲ್ಲ ಒಂದು ಬಗೆಯ ಚಿಂತೆಯನ್ನು ತುಂಬಿ ಕೊಂಡೇ ಕೆಲಸ ಮಾಡುತ್ತಿದ್ದೆ. ಆಫೀಸಿನಿಂದ ಹೋಗುವಾಗ ಆಸ್ಪತ್ರೆಗೆ ಹೋಗಿ ಭಾಸ್‌ನೊಂದಿಗೆ ಸ್ವಲ್ಪ ಹೊತ್ತು ಕಳೆಯುತ್ತಿದ್ದೆ. ಆದರೂ, ಅವನಲ್ಲಿ ಅಂತಹ ಮನಃಪರಿವರ್ತನೆಯೇನೂ ಆಗಿರಲಿಲ್ಲ. ಇಂದು ನಾನು ಅಲ್ಲಿಗೆ ಹೋದಾಗ ಅವನು ವರಾಂಡದ ಕುರ್ಚಿಯ ಮೇಲೆ ಕುಳಿತು ವರ್ತಮಾನ ಪತ್ರಿಕೆಯನ್ನೋ ದುತ್ತಿದ್ದ. ನಾನು ಬಳಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಕೇಳಿದೆ "ಹೇಗಿದ್ದಿ? ಕೈ ನೋವು ಹಿಂಗಿದೆಯೇ ?"

"ಕೈ ನೋವು ವಿನಾ ಮತ್ತೆಲ್ಲವೂ ತುಂಬ ಗುಣವಾಗಿವೆ. ಒಂದು ವಾರದಲ್ಲಿ ನನ್ನ ಆರೋಗ್ಯ ಕುದುರಿಕೊಳ್ಳಬಹುದು. ಕೈ ಬಹುಶಃ ಇನ್ನೂ ಕೆಲವು ದಿನ ತೆಗೆದುಕೊಳ್ಳುತ್ತೆ ಎಂದು ತೋರುತ್ತೆ. ನೀನು ವೃಥಾ ಇಲ್ಲಿಗೆ ಬರುವ ತೊಂದರೆ ತೆಗೆದುಕೊಳ್ಳುತ್ತಿ. ನೀನು ಹೀಗೆ ಬರುವುದರಿಂದ ಪೀಟರ್‌ಗೂ ಬೇಸರವಾಗಬಹುದು" ಎಂದ, ನನ್ನ ಮುಖಭಾವವನ್ನು ಸೂಕ್ಷ್ಮ

ವಾಗಿ ಗಮನಿಸುತ್ತ. ಭಾಸ್ ಮುಖದಿಂದ ಆ ಮಾತು ಕೇಳಿ ನನ್ನ ಮೈ ಉರಿದುಹೋಯಿತು. ಆದರೂ ಸಮಯೋಚಿತವಾಗಿ ನನ್ನನ್ನು ನಾನು ಹತೋಟಿಯಲ್ಲಿಟ್ಟುಕೊಂಡು ಉತ್ತರಿಸಿದೆ "ನೀನೇಕೆ ಹೀಗೆ ಮಾತಾಡುತಿದ್ದಿ? ನನಗೂ ಪೀಟರ್‌ಗೂ ಯಾವ ಸಂಬಂಧವೂ ಇಲ್ಲ. ನಾನು ಬರುತ್ತಿರುವುದು ನಿನಗಾಗಿಯೇ!"

"ಅವನು ನನ್ನೊಂದಿಗೆ ನೀನೂ ಅವನೂ ಬಲು ದಿನದ ಪ್ರೇಮಿಗಳು ಎಂದಿದ್ದಾನೆ!"

"ನಿನ್ನ ಮನಸ್ಸನ್ನು ಕೆಡಿಸಲು ಹೂಡಿದ ಸಂಚು ಇದು. ನೀನು ಅವ ನನ್ನು ನಂಬಬೇಡ. ಅವನು ಕಡು ಧೂರ್ತ! ಈ ಜನ್ಮದ ಮಾತಿರಲಿ, ಮುಂದಿನ ಜನ್ಮಕ್ಕೂ ಕೂಡಿ ಬರುವುದಿಲ್ಲ ನಮ್ಮ ಸಂಬಂಧ! ನಾನು ಮದುವೆ ಯಾಗಿ ಸಂಸಾರ ಹೂಡುವುದಾದರೆ ಅದು ನಿನ್ನೊಂದಿಗೆ ಮಾತ್ರ. ಅದಿಲ್ಲದೆ ಹೋದರೆ 'ನನ್' ಆಗಿಯೋ 'ನರ್ಸ್' ಆಗಿಯೋ ಜನಸೇವೆ ಮಾಡುವೆ, ಇದು ನಿಶ್ಚಿತ ! ಅವನೊಬ್ಬ ನೀಚ ! ಅತ್ಯಂತ ಹೀನ ನೀಚ!"

ಅವನು ಮುಗುಳು ನಕ್ಕ. ಮತ್ತೇನೂ ಹೇಳಲಿಲ್ಲ.

ನಾನು ಭಾರವಾದ ಹೃದಯದಿಂದ ನುಡಿದೆ "ನೋಡು! ನಿನ್ನನ್ನು ವಂಚಿ ಸುವ ಸಲುವಾಗಿಯೇ ಅವನು ಇಲ್ಲಿಗೆ ಬರುತಿದ್ದಾನೆ. ನಿನ್ನ ಸ್ನೇಹಕ್ಕ ಸಲು ವಾಗಿ ಖಂಡಿತಾ ಅಲ್ಲ. ಮೊದಲಿನಿಂದಲೂ ನನ್ನನ್ನು ಅವನ ಕಾಮದ ಪಶು ವನ್ನಾಗಿ ಮಾಡಿಕೊಳ್ಳಬೇಕೆಂಬ ಪ್ರಲೋಭನೆ ಬಹಳ. ನಾನು ಅವನ ತಂತ್ರ ಕುತಂತ್ರಗಳಿಗೆ ಬಗ್ಗಲಿಲ್ಲವಾದುದರಿಂದ ಈಗ ನಮ್ಮಿಬ್ಬರ ನಡುವೆ ಕಿಚ್ಚು ಹಚ್ಚುವ ಯೋಜನೆಯಿಂದಲೇ ಇಲ್ಲಿಗೆ ಬರುತಿದ್ದಾನೆ. ಅವನನ್ನು ಎಷ್ಟು ದೂರ ಇಟ್ಟರೆ ಅಷ್ಟು ಕ್ಷೇಮ. ನೀನು ನನ್ನನ್ನು ದಯವಿಟ್ಟು ನಂಬು."

ಅವನು ಫಕಪಕನೆ ನಕ್ಕು ಬಿಟ್ಟ.

ನಾನು ಮೌನವಾಗಿ ಭಗವಂತನಲ್ಲಿ ಆತ್ಮನಿವೇದನೆ ಮಾಡಿಕೊಂಡೆ. ನನ್ನ ಮನೋಭಿಲಾಷೆಯನ್ನು ಕೈಗೂಡಿಸು ಎಂದು.

— ೦ —

# ಅಧ್ಯಾಯ

## ೨

ನನ್ನ ಮನಃಬುದ್ಧಿಗಳು ಬಾಹ್ಯಜಗತ್ತಿಗಿಂತ ಅಂತರ್ಜಗತ್ತಿಗೇ ಹೆಚ್ಚಿನ ಬೆಲೆ ಕೊಡುತ್ತವೆ. ಆದರೆ... ಸೂಕ್ಷ್ಮಜಗತ್ತಿಗೆ ಎಷ್ಟೆಷ್ಟು ಬೆಲೆ ಕೊಡ ಬೇಕೋ ಸ್ಥೂಲ ಜಗತ್ತಿಗೂ ಅಷ್ಟಷ್ಟೇ ಬೆಲೆಕೊಡುವುದು ಅನಿವಾರ್ಯ. ದೃಷ್ಟಿಗ್ರಾಹ್ಯ ವಸ್ತುಗಳಷ್ಟೇ ಅತೀಂದ್ರಿಯಗ್ರಾಹ್ಯ ವಸ್ತುಗಳೂ ಕೂಡ ಪ್ರಿಯವೇ. ಅಂತರ್–ಬಹಿಃ, ಸೂಕ್ಷ್ಮ–ಸ್ಥೂಲಗಳ ಭಾರಸಾಮ್ಯಕ್ಕೆ ದಿನಚರಿ ಸ್ವಲ್ಪ ಅಡಚಣೆ ಉಂಟುಮಾಡಿದರೂ ಈ ದಿನಗಳಲ್ಲಿ ಮನಃಬುದ್ಧಿಗಳ ನಡುವೆ ಭದ್ರವಾದ ಸೇತುವೊಂದನ್ನು ನಿರ್ಮಿಸಲು ಈ ತುಲನೆಯೇ ಆಧಾರ.

ಭಾರತ ಪ್ರವಾಸ ಮುಗಿದನಂತರ ನಾನು ನರ್ಸಿಂಗ್‌ನಲ್ಲಿ ಟ್ರೈನಿಂಗ್ ತೆಗೆದುಕೊಳ್ಳುವ ಯೋಚನೆ ಕ್ಷಣಕ್ಷಣಕ್ಕೂ ಬಲಿಯುತಿತ್ತು. ನಾನು ವಿಚಾರಪರವಶಳಾಗುತಿದ್ದೆ. ಭೌತಿಕ ಜಗತ್ತಿನಲ್ಲಿ ದಿನವಹಿ ಉಂಟಾಗುವ ಅನನ್ಯ ಅನುಭವ ಪಡೆದಂತೆಲ್ಲಾ ಸೂಕ್ಷ್ಮ ಜಗತ್ತಿನ ಕಡೆಗೆ ಇಣುಕಿ ನೋಡು ವುದು ಸುಲಭಸಾಧ್ಯ ಎನಿಸುತ್ತದೆ ಈಗೀಗ. ನಾನು ಈ ವಿಚಾರವಾಗಿ ಭಾಸ್ಕ್ವಾನ್ ಜೊತೆ ಚರ್ಚಿಸಬೇಕೆಂದೇ ಆಸ್ಪತ್ರೆಯ ಕಡೆ ನಡೆದೆ. ಅವನು ಪಲ್ಲಂಕದ ದಿಂಬನ್ನು ಏರಿಸಿಕೊಂಡು ಅರ್ಧಶಯನಾವಸ್ಥೆಯಲ್ಲಿ ಮಲಗಿ ಪುಸ್ತ ಕಾವಲೋಕನದಲ್ಲಿ ನಿಮಗ್ನನಾಗಿದ್ದ. ನಾನು ಬಳಿಯಲ್ಲಿ ಕುಳಿತುಕೊಂಡು ಕೇಳಿದೆ,

"ಹೇಗಿದ್ದ? ಆಸ್ಪತ್ರೆಯಿಂದ ಎಂದು ಡಿಸ್‌ಛಾರ್ಜ್ ಆಗುವೆ?"

"ತುಂಬ ನಿಶ್ಶಕ್ತಿಯಿರುವುದರಿಂದ ನಾನೀಗ ಹೊರಹೋದರೆ ಬಹಳ ತೊಂದರೆಯಾಗುತ್ತದೆ. ಕೈಕಟ್ಟು ಬಿಚ್ಚುವವರೆಗೂ ಇಲ್ಲಿಯೇ ಇರುವುದೆಂದು

ನಿಶ್ಚಯಿಸಿರುವೆ. ಆನಂದ್ – ವಸಂತ್ ಇಲ್ಲಿಲ್ಲವಾದ್ದರಿಂದ ಸಹಾಯಕರಿಲ್ಲ ವಾಗುತ್ತೆ."

ನೀನು ಒಪ್ಪಿದರೆ ನಾನು ಆ ಭಾರವನ್ನು ವಹಿಸಿಕೊಳ್ಳಬಹುದಾಗಿತ್ತು ಎಂಬ ಯೋಚನೆ ಮೂಡದಿರಲಿಲ್ಲ. ಆದರೆ, ನುಡಿ ತುಟಿಮೀರಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ ನಾನೆಂದೆ "ಬಹುಶಃ ಇನ್ನು ಎರಡು ಮೂರು ವಾರಗಳಲ್ಲೇ ನಮ್ಮಮ್ಮ ಭಾರತ ಪ್ರವಾಸ ಹೊರಡಬಹುದು. ಆ ಮೂರು ತಿಂಗಳ ಪ್ರವಾಸದಲ್ಲಿ ಅಲ್ಲಿಯ ಸಂಸ್ಕೃತಿಯನ್ನೂ ಕಲಾತ್ಮಕವಾದ ದೇವಾಲಯಗಳನ್ನೂ ಸ್ವಂತ ಕಣ್ಣುಗಳಿಂದ ನೋಡಿ ತಿಳಿಯುವ ಹಂಬಲವಿದೆ. ಬಿಮಲ್ ರೇ ಬರೆದ 'ಟೆಂಪಲ್ಸ್ ಆಫ್ ಇಂಡಿಯಾ' ಓದಿರುವೆ. ಅವಳು ವಿವರಾತ್ಮಕವಾಗಿ ಆ ದೇವಾಲಯಗಳನ್ನು ಕಟ್ಟಿದ ಹಿನ್ನೆಲೆಯ ಸಂಸ್ಕೃತಿಯನ್ನು ನಿರೂಪಿಸಿ ಇಂದ್ರಿಯಗ್ರಾಹ್ಯವಾದ ದೇವಾಲಯಗಳೇ ಅತೀಂದ್ರಿಯಗ್ರಾಹ್ಯವಾದ ಸಂಸ್ಕೃತಿ ಪ್ರತೀಕ ಎಂದು ಬಣ್ಣಿಸಿದ್ದಾಳೆ. ಬಹುಶಃ ನಿನ್ನ ಅಭಿಪ್ರಾಯವೂ ಅದೇ ಇರಬಹುದೇನೋ."

ಅವನು ಸ್ವಲ್ಪ ಹೊತ್ತು ಕಿಟಕಿಯ ಕಡೆ ನೋಡುತಿದ್ದು ಅನಂತರ ಅಂದ,

"ಅಂತರ್ಜಗತ್ತಿನ ಸೂಕ್ಷ್ಮಾತಿಸೂಕ್ಷ್ಮವಾದ ವ್ಯವಹಾರವೇ ಸಂಸ್ಕೃತಿಯ ಆಲೋಕ. ಅದನ್ನೆಲ್ಲಾ ಸುಲಭವಾಗಿ ಅರಿಯಬೇಕಾದರೆ ಈ ಗ್ರಂಥಾವಲೋಕನದಿಂದ ಸಾಧ್ಯ. ಇಗೋ ನೋಡು "ಎನ್ನುತ್ತ ತಾನು ಓದುತಿದ್ದ ಗ್ರಂಥವನ್ನು ನನ್ನ ಕೈಗಿಟ್ಟ. ಅದು ಭಗವದ್ಗೀತೆಯ ಇಂಗ್ಲೀಷ್ ರೂಪಾಂತರ. ನಾನು ಒಂದೆರಡು ಪುಟಗಳನ್ನು ತಿರುವಿಹಾಕಿದ ನಂತರ ನುಡಿದೆ "ನೀನು ಓದಿದನಂತರ ನಾನು ತೆಗೆದುಕೊಳ್ಳುವೆ." ಒಂದೆರಡು ಗಳಿಗೆ ತಡೆದು "ಇದು ನಿನಗೆ ಇರಲಿ, ನಾನು ಬೇರೊಂದನ್ನು ಕೊಂಡುಕೊಳ್ಳುವೆ. ಇಂತಹ ಗ್ರಂಥಗಳು ಬಳಿಯಲ್ಲಿರುವುದು ಕ್ಷೇಮ" ಎಂದೆ.

"ನಾನಿದನ್ನು ಬೇಕಾದಷ್ಟು ಬಾರಿ ಓದಿರುವೆ. ನಿನಗೆ ಅಷ್ಟೊಂದು ಆಸಕ್ತಿ ಇರುವುದಾದರೆ ನೀನೇ ಇಟ್ಟುಕೊ. ಅದರಲ್ಲಿ ಏನೂ ಅಭ್ಯಂತರವಿಲ್ಲ."

ನಾನು ಒಂದೆರಡು ಕ್ಷಣ ಯೋಚನೆಗೊಳಗಾದೆ.

"ಪರವಾಯಿಲ್ಲ. ನನ್ನಲ್ಲಿ ಆಧ್ಯಾತ್ಮಿಕ ಗ್ರಂಥಗಳಿಗೆ ಕೊರತೆಯಿಲ್ಲ. ನೀನಿದನ್ನು ಇಟ್ಟುಕೊಳ್ಳಬಹುದು."

"ತುಂಬ ಥ್ಯಾಂಕ್ಸ್!"

"ನಮ್ಮ ವೇದಾಂತಿಗಳು, ದಾರ್ಶನಿಕರು ಇಂತಹ ಮಹದ್ಗ್ರಂಥಗಳ ರಾಶಿ ರಾಶಿಯನ್ನೇ ನಮಗೆ ಬಿಟ್ಟು ಹೋಗಿದ್ದಾರೆ. ಎಷ್ಟು ಓದಿದರೂ ಪೂರೈಸ ಲಾರೆವೇನೋ ಎಂಬಷ್ಟು ಸಂಪುಟಗಳಿವೆ."

"ನನಗೆ ಓದುವ ಹಂಬಲವಿದೆ. ಭಾಷೆ ತಿಳಿಯದು."

"ಇಂಗ್ಲೀಷಿನಲ್ಲಿ ಬೇಕಾದಷ್ಟು ಮಹನೀಯರು ಬರೆದಿದ್ದಾರೆ. ಸಾಕಷ್ಟು ಅನುವಾದವೂ ಆಗಿವೆ. ಅದಷ್ಟನ್ನೇ ನೀನು ಓದಿ ಜೀರ್ಣಿಸಿಕೊಂಡರೆ ಸಾಕು."

ನಾನು ಮಾತಾಡದೆ ತಲೆದೂಗಿದೆ.

ಅವನು ಮುಂದುವರಿದ "ಈ ಭಗವದ್ಗೀತೆಯೊಂದನ್ನೇ ಪುನಃ ಪುನಃ ಓದು. ಇದರಲ್ಲೇ ಸಾಕಷ್ಟು ಅನುಭವ ಬರುತ್ತದೆ. ಅನಂತರ ಇತರ ಗ್ರಂಥ ಗಳನ್ನು ಅರ್ಥ ಮಾಡಿಕೊಳ್ಳುವುದು ಸುಲಭ."

"ಆಗಲಿ," ಎಂದ ನಾನು ಪುನಃ ಕೇಳಿದೆ "ನಿನಗೇನಾದರೂ ಅಗತ್ಯವಿದ್ದರೆ ತಂದು ಕೊಡುವೆ."

"ಬೇಡ.... ಬೆಳಿಗ್ಗೆ ನನ್ನ ಮಿತ್ರ ಎಲ್ಲಾ ತಂದಿಟ್ಟು ಹೋಗಿದ್ದಾನೆ. ನನ್ನ ಕೊಠಡಿಯಿಂದ ಈ ಗ್ರಂಥಗಳನ್ನು ತಂದುಕೊಟ್ಟವನೂ ಅವನೇ. ಸ್ವಲ್ಪ ತಿರುಗಾಡುವಂತಾದೆ; ಇನ್ನೇನೂ ತೊಂದರೆಯಿಲ್ಲ."

"ಆದರೂ ಮೊದಲಿನ ಶಕ್ತಿ ಮೈಗೂಡಿಲ್ಲ. ಮುಖದಲ್ಲಿ ಆಯಾಸ ಕಾಣಿಸುತ್ತಿದೆ."

"ಅದು ನಿಜ."

"ಪೂರ್ತಿ ಸರಿಹೋಗಿ ಆರೋಗ್ಯ ಮೈಗೂಡಬೇಕಾದರೆ ಇನ್ನೂ ಕೆಲವು ದಿನಗಳು ಬೇಕು."

ಅವನು ಮಾತಾಡದೆ 'ಹೌದು' ಎಂಬಂತೆ ತಲೆದೂಗಿದ.

ಭಗವದ್ಗೀತೆಯನ್ನು ಕೈಯಲ್ಲಿಟ್ಟುಕೊಂಡು ಕೇಳಿದೆ "ನಾನಿನ್ನು ಹೊರಡಲೇ ? ಆರು ಗಂಟೆ. ಮನೆ ಮುಟ್ಟಬೇಕಾದರೆ ಅರ್ಧಗಂಟೆ ಬೇಕು." ಎಂದೆ ಅವನ ಕೈಯನ್ನು ಹಿಡಿದುಕೊಂಡು.

"ಆಗಲಿ... ಹೋಗು."

ನಾನು ಹೊರಟೆ. ರಸ್ತೆಯಿಂದ ಬಲಭಾಗದ ಪ್ರದೇಶದಲ್ಲಿ ಪಾರ್ಲಿಮೆಂಟ್ ಭವನದ ಗೋಪುರ ಕಾಣಿಸುತಿತ್ತು. ಗೂಡನ್ನರಸುವ ಕಾಗೆಗಳು ಅದರ ಮೇಲೆ ಕುಳಿತಿದ್ದುದು ಕರಿಯ ಚುಕ್ಕೆಗಳಂತೆ ಕಾಣಿಸುತಿದ್ದುವು. ಹಿಮಗಾಳಿ ತಣ್ಣಗೆ ತೀಡುತಿದ್ದುದರಿಂದ ಮೈ ನಡುಗಿಸುವಂತಹ ಚಳಿ. ಉಣ್ಣೆಯ ಕೋಟನ್ನು ಕತ್ತು ಎದೆಗಳನ್ನು ಮುಚ್ಚಿಕೊಳ್ಳುವಂತೆ ಎಳೆದುಕೊಂಡೆ. ಆದರೂ ಒಳಗಿಂದೊಳಗೆ ನಡುಗುತಿತ್ತು ಮೈ. ನಾನು ಮನೆ ಮುಟ್ಟಿದಾಗ ತಾಯಿ ಜ್ವರದಿಂದ ಹಾಸಿಗೆ ಹಿಡಿದಿದ್ದಳು. ಅವಳಿಗೆ ಚಹ ತಯಾರಿಸಿಕೊಟ್ಟು ಹತ್ತಿರದ ಚಿಕಿತ್ಸಾಲಯಕ್ಕೆ ಹೋಗಿ ಔಷಧಿಯನ್ನು ತಂದುಕೊಟ್ಟೆ. ಅನಂತರ ರಾತ್ರಿಯ ಅಡಿಗೆಯನ್ನು ಮುಗಿಸುವಷ್ಟರಲ್ಲಿ ಬೆನೆಲ್ ಬಂದಳು. ಟಾಮಿ ಇನ್ನೂ ಬಂದಿರಲಿಲ್ಲ. ಬೆನೆಲ್ ಒಳಬಂದವಳೇ ಹೇಳಿದಳು,

"ಇಂದು ಎಲಿಜ ಸಿಕ್ಕಿದ್ದಳು."

"ಎಲ್ಲಿ?"

"ಪಿಕ್ಚರ್ ಹೌಸ್‌ನಲ್ಲಿ."

"ನೀನು ಹೋಗಿದ್ದೆಯಾ?"

"ಹೌದು. ಅಲ್ಲಿ ಮ್ಯಾನೇಜರ್‌ನನ್ನು ಕಂಡು ಟಿಕೆಟ್ ವಿತರಣೆಯ ಕೆಲಸವನ್ನು ಗಿಟ್ಟಿಸಿಕೊಂಡೆ. ಇದೇ ಮೊದಲ ತಾರೀಖಿನಿಂದ ಟಿಕೆಟ್

ಕೊಡುವ ಕೆಲಸ. ಬಲೂ ಸುಲಭ, ಒಂದೆರಡು ಗಂಟೆ ಮಾಡಿದರೆ ಆಯಿತು. ಮಾರ್ನಿಂಗ್ ಶೋ ಮತ್ತು ಮ್ಯಾಟಿನಿಗೆ ನಾನು. ಸಾಯಂಕಾಲ ಮತ್ತು ರಾತ್ರಿಗೆ ಬೇರೆಯವರಿದ್ದಾರೆ. ಆದ್ದರಿಂದ ನಾನು ಎಷ್ಟಾದರೂ ತಿರುಗಾಡಿ ಕೊಂಡು ಹಾಯಾಗಿರಬಹುದು !" ಪುನಃ "ಐಯಾಮ್ ವೆರಿವೆರಿ ಹ್ಯಾಪಿ !" ಎಂದಳು ಅವಳು.

"ಅಭಿನಂದನೆಗಳು !"

ಅವಳು ಅತ್ಯಾನಂದ ತುಂದಿಲತೆಯಿಂದ ನಿಗಿನಿಗಿ ನಲಿಯುತ್ತ "ನನಗೆ ಹಿಡಿ ಸುವಂತಹ ಕೆಲಸ ! ನಾನು ಭಗವಂತನನ್ನು ಎಷ್ಟು ಅಭಿನಂದಿಸಿದರೂ ಸಾಲದು."

ಜೆನೆಲ್ ಮೊದಲಿನಿಂದಲೂ ಹಾಗೆಯೇ. ಯಾವ ಬಿಗಿ ಕೆಲಸವನ್ನಾಗಲೀ, ಕುಳಿತು ಕಲಿಯುವ ವ್ಯಾಸಂಗವಾಗಲೀ ಅವಳಿಂದ ಸಾಧ್ಯವೇ ಇಲ್ಲ. ಹರಟೆ–ತಿರುಗಾಟ ಇವೇ ಅವಳ ಪಂಚಪ್ರಾಣ. ಅವಳ ಅಲೆಮಾರಿತನ ತಾಯಿಗೆ ಕೋಪವನ್ನು ಮಾಡಿಸಿದ್ದರೂ ಅವಳು ಮಣಿಯುವವಳೇ ಅಲ್ಲ. ಎಂಟನೆಯ ಸ್ಟ್ಯಾಂಡರ್ಡ್‌ಗೆ ಶಾಲೆಗೆ ಶರಣು ಹೊಡೆದು ಅಲೆಮಾರಿತನಕ್ಕೆ ಹೊಂದಿಕೊಂಡಿದ್ದಾಳೆ. ಮೇಲಾಗಿ, ಹಣಕಾಸಿನಲ್ಲೂ ಕೈಸಡಿಲ. ಹಣಕ್ಕಾಗಿ ನಮ್ಮೆಲ್ಲರಿಗೂ ಗಂಟು ಬೀಳುವವಳೇ. ಇನ್ನಾದರೂ ಅವಳು ಸ್ವಾವಲಂಬಿಯಾಗಬಹುದು ಎನಿಸಿತು ನನಗೆ.

ತಾಯಿಗೆ ಮೂರು ನಾಲ್ಕು ದಿನಗಳು ಜ್ವರ ಬಿಡಲಿಲ್ಲ. ಅವಳ ಶುಶ್ರೂಷೆಗಾಗಿ ನಾನು ಮನೆಯಲ್ಲೇ ನಿಂತೆ. ಜೆನೆಲ್ ಬೆಳಗ್ಗೆ ಹೊರಹೊರಟರೆ ಮಧ್ಯಾಹ್ನ ಊಟಕ್ಕೆ ಮನೆಗೆ ಮರಳುತ್ತಾಳೆ. ಪುನಃ ಮಧ್ಯಾಹ್ನ ಹೊರಟರೆ ರಾತ್ರಿಗೆ ಹಿಮ್ಮರಳುವ ಯೋಚನೆ. ಎಷ್ಟೋ ದಿನಗಳಲ್ಲಿ ಮಧ್ಯರಾತ್ರಿಗೋ ಅನಂತರವೋ ಮನೆಗೆ ಬಂದು ನಿದ್ದೆಗೆಡಿಸುತ್ತಾಳೆ. ಈ ದಿನ ಟಾಮಿ ಮನೆಗೆ ಬರುವಾಗಲೇ ಜ್ವರದಿಂದ ಕೆಂಪುಕೆಂಪಾಗಿ ಬಂದ. ತಾಯಿ ಸುಧಾರಿಸಿ ಕೊಳ್ಳುವುದರೊಳಗೇ ಅವನು ಹಾಸಿಗೆ ಹಿಡಿದುದರಿಂದ ನಾನು ಇನ್ನೂ ಎರಡು

ದಿನಗಳು ಆಫೀಸಿಗೆ ಹೋಗಪೆ ಮನೆಯಲ್ಲುಳಿದೆ. ಇಂದು ಭಾಸ್ ಕೊಟ್ಟ ಗ್ರಂಥವನ್ನು ಓದಿ ಮುಗಿಸಿದಾಗ ಮನಸ್ಸಿಗೆ ಅನಿರ್ವಚನೀಯವಾದ ಆನಂದ. ಭಾಸ್ ಹೇಳಿದಂತೆ ಅದನ್ನು ಪುನಃ ಪುನಃ ಓದಿ ನಿತ್ಯಪಠಣ ಮಾಡುವ ಯೋಚನೆಯಿಂದ ಬಳಿಯಲ್ಲಿಟ್ಟುಕೊಂಡೆ. ಒಳಗಿನ ಕೆಲಸ ಮುಗಿಯುವುದರೊಳಗಾಗಿ ನನ್ನ ಮೈಯ್ಯಲ್ಲೂ ಚಳಿಮೂಡಿ ಜ್ವರದ ಕಾವು ಏರತೊಡಗಿತು. ಈಗಾಗಲೇ ಈ ತಿಂಗಳಲ್ಲಿ ಮೂರು ವಾರಗಳು ರಜೆಯಲ್ಲಿ ಕಳೆದುಹೋಗಿವೆ. ಈಗ ನನಗೂ ಜ್ವರ ಬರಬೇಕೆ ? ಎನಿಸಿತು. ಹಾಗೇ ಭಾಸ್ವ್ವನ್ ಹೇಗಿದ್ದಾನೋ ಒಮ್ಮೆ ನೋಡಿ ಬರಬೇಕಿತ್ತು. ಇಷ್ಟರೊಳಗಾಗಿ ಡಿಸ್‌ಛಾರ್ಜ್ ಆಗಿರಲಾರ. ನನಗೆ ಜ್ವರ ಬಿಟ್ಟೊಡನೆಯೇ ಹೋಗಿ ನೋಡಲೇಬೇಕು. ನಿತ್ಯ ಬರುತಿದ್ದವಳು ಎಂಟು ಹತ್ತು ದಿನಗಳಿಂದ ಇತ್ತ ಬರಲೇ ಇಲ್ಲವಲ್ಲಾ ಎಂದು ದಾರಿ ನೋಡಬಹುದು. ಈ ಪೀಟರ್ ಹೋಗಿ ಇನ್ನೇನು ಕತೆಕಟ್ಟ ಹೇಳಿದ್ದಾನೋ ಎಂಬ ಆಲೋಚನೆ ಮನದಲೆಯಲ್ಲಿ ಸುಳಿಸುತ್ತುತಿತ್ತು. ಮೇಲಾಗಿ, ನನ್ನ ಭವಿಷ್ಯವನ್ನು ಹೀಗೇ ಎಂದು ನಿರ್ಧರಿಸಿಕೊಳ್ಳಲಾಗಲಿಲ್ಲ. ಭಾಸ್ ಬಾಯಿಬಿಟ್ಟು ಏನೂ ಹೇಳುವುದಿಲ್ಲ. ಜೀವನದಲ್ಲಿ ಯಾವ ಆಸಕ್ತಿಯನ್ನೂ ವ್ಯಕ್ತಪಡಿಸುತ್ತಿಲ್ಲ. ಅವನ ಹೃದಯದಾಳವನ್ನು ಅರಿತುಕೊಳ್ಳುವುದು ಕಷ್ಟ. ಇದು ಬಹಳ ಇಕ್ಕಟ್ಟಿನ ಪ್ರಸಂಗ. ಈಗ ನಾನೇನಾನಾಗಿ ಏನನ್ನೂ ನಿರ್ಣಯಿಸಲಾರೆ ಎನಿಸಿದಾಗ ನಿಜವಾಗಿಯೂ ತೀವ್ರ ಚಿಂತೆಯಿಂದ ಹೃದಯ ಭಾರವಾಯಿತು.

ಒಂದು ವಾರದ ತನಕ ಜ್ವರ ಬಿಡಲಿಲ್ಲವಾದುದರಿಂದ ಮೈಯ್ಯಲ್ಲಿ ಬಹಳ ನಿಶ್ಶಕ್ತಿ. ಎರಡು ಮೂರು ದಿನ ವಿಶ್ರಾಂತಿಯಿಲ್ಲದೆ ಕೆಲಸ ಮಾಡುವಂತಿರಲಿಲ್ಲ. ದಿನವೆಲ್ಲಾ ಜಿನುಗುವ ಮಳೆಯಿಂದಾಗಿ ವಾತಾವರಣವೂ ಹಿತಕರವಾಗಿರಲಿಲ್ಲ. ಸಹಿಸಿಕೊಳ್ಳಲಾಗದಂತಹ ವಿಪರೀತ ಚಳಿ. ತಾಯಿ ಕೆಲಸಕ್ಕೆ ಹೋಗಿದ್ದಾಳೆ. ಮನೆಯಲ್ಲಿ ಯಾರೂ ಇರಲಿಲ್ಲ. ಸದ್ದಿಲ್ಲದ ಶಾಂತಿ ಘನಿಸಿತ್ತು. ನಾನು ಭಗವದ್ಗೀತೆಯನ್ನು ತೆರೆದೆ. ನಾಲ್ಕಾರು ಪುಟಗಳನ್ನು ಓದುವುದರೊಳಗಾಗಿ ತಲೆಬಾಗಿಲ ಕರೆಗಂಟೆ ಕರೆನೀಡಿತು. ತಾಯಿ ಇಂದೇಕೆ ಬೇಗನೆ ಹಿಂತಿರುಗಿದಳೆಂಬುದು ಸ್ವಲ್ಪ ಆಶ್ಚರ್ಯವೇ ಆಯಿತು. ನಾನು ಎದ್ದು ಹೋಗಿ

ಕವ ತೆರೆದೆ. ನೋಡಿದರೆ ಪೀಟರ್! ತನ್ನೆಲ್ಲಾ ಹಲ್ಲುಗಳನ್ನೂ ಒಮ್ಮೆಗೇ ಪ್ರದರ್ಶಿಸಿ ಕೇಳಿದ,

"ಇನ್ನೂ ಜ್ವರ ಬಿಡಲಿಲ್ಲವೇ ?"

"ಆದಿರಲಿ, ನೀನೇಕೆ ಇಲ್ಲಿಗೆ ಬಂದೆ ?"

"ನಿನ್ನನ್ನು ನೋಡಿ ಹೋಗಲಿಕ್ಕೆ. ಹೇಗಿದ್ದಿ?"

"ನಿನ್ನ ಸ್ನೇಹ–ಸೌಜನ್ಯತೆಗಳು ನನಗೆ ಬೇಕಿಲ್ಲ. ದಯವಿಟ್ಟು ಹೊರಟು ಹೋಗು."

"ಅಷ್ಟೇಕೆ ಧೂರ್ತತನ ? ನಾನು ಇಷ್ಟುದೂರ ಬಂದಿರುವುದು ನಿನಗಾಗಿಯೆ !"

ನಾನೊಮ್ಮೆ ನಡುಗಿಹೋದೆ. 'ಇವನನ್ನು ಉಪಾಯದಿಂದ ತೊಲಗಿಸ ಬೇಕೇ ಹೊರತು ಶಕ್ತಿಯಿಂದಲ್ಲ. ದುಡುಕಬೇಡ' ಎಂದು ಕೂಗಿ ಹೇಳಿತ್ತು ಅಂತರ್ವಾಣಿ. ನಾನು ಸ್ವಲ್ಪ ಯೋಚಿಸಿದವಳಂತೆ ನಟಿಸಿ ಕೇಳಿದೆ "ಹೊರಗಡೆ ಕರೆದೊಯ್ಯುವ ಇಚ್ಛೆಯೇ ನಿನಗೆ?"

"ಹೌದು..."

"ಐದು ಗಳಿಗೆ ಕುಳಿತುಕೊ. ತಾಯಿಗೆ ಹೇಳಿ, ಉಣ್ಣೆಯ ಬಟ್ಟೆ ತೊಟ್ಟುಕೊಂಡು ಬರುವೆ."

"ಆಗಬಹುದು. ಬೇಗ ಬರುತ್ತೀಯಷ್ಟೆ?"

"ಖಂಡಿತ !"

ಅವನು ಕುಳಿತುಕೊಂಡೊಡನೆಯೇ ನಾನು ಒಳಗಿನ ಬಾಗಿಲು ಹಾಕಿ ಭದ್ರಪಡಿಸಿಕೊಂಡು ಕಿಟಕಿಯ ಬಳಿಗೆ ಹೋದೆ. ವರಾಂಡಕ್ಕೂ ಡ್ರಾಯಿಂಗ್ ರೂಮಿಗೂ ಮಧ್ಯೆ ಪರದೆಯಿಂದಾವೃತವಾದ ಕಿಟಕಿ. ಪರದೆಯನ್ನು ಸರಿಸಿ ಕಿಟಕಿಯ ಕಂಬಿಗಳನ್ನು ಹಿಡಿದುಕೊಂಡು ಹೇಳಿದೆ "ದಯವಿಟ್ಟು ನೀನು ಹೊರಟುಹೋಗು. ಇಂತಹ ಬಲಾತ್ಕಾರ ಮರ್ಯಾದೆಯಲ್ಲ. ಐ ನೆವರ್ ಲವ್ ಯೂ. ಇಟ್ ಈಸ್ ಶ್ಯೂರ್! ಗೆಟ್ ಅವೇ ಫ್ರಂ ಹಿಯರ್ !"

ಆಗ ಅವನ ಸ್ಥಿತಿಯನ್ನು ಬಣ್ಣಿಸುವುದೇನು ? ಸಿಟ್ಟು ರೋಷಗಳು ಮೂಡಿದ್ದರೂ ಒಳಗೊಳಗೇ ಹುಗಿದಿಟ್ಟುಕೊಂಡು "ಅಂಜುಬುರುಕಿ! ಒಳ ಹೋಗಿ ಬಾಗಿಲು ಹಾಕಿಕೊಳ್ಳಬೇಕೇ? ಎದುರಿಗೇ ನಿಂತು ಹೋಗು ಎನ್ನ ಬೇಕಿತ್ತು! ಇರಲಿ, ಇನ್ನೊನ್ಮೆ ಕೂಡೋಣ" ಎನ್ನುತ್ತ ಹೋದ. ಅವನು ಹೊರಹೋದರೂ ನಂಬುಗೆ ಮೂಡಲಿಲ್ಲ ನನಗೆ. ಒಳಹೋಗಿ ಬೆಡ್‌ರೂಮಿನ ಕಿಟಕಿಯಿಂದ ನೋಡಿದರೆ ಕಾಂಪೌಂಡಿನ ಆಚೆ ನಿಂತು ಇತ್ತಲೇ ನೋಡುತ್ತಿ ರುವುದು ದೃಷ್ಟಿಗೆ ಬಿತ್ತು. ನಾನು ಒಳಹೋಗಿ ಹಾಸಿಗೆಯ ಮೇಲೆ ಬಿದ್ದು ಕೊಂಡೆ. ಆ ಚಳಿಯಲ್ಲಿಯೂ ಮೈ ಬಿಸಿಬಿಸಿಯಾಯಿತು.

ಮುಂಬಾಗಿಲು ಹಾಕೋಣವೆಂದರೂ ಭಯ. ಇವನು ಇಷ್ಟು ಧೂರ್ತ ತನಕ್ಕಿಳಿದಾನೆಂದು ನಾನು ಯೋಚಿಸಿರಲಿಲ್ಲ. ಹೊತ್ತು ನಿರಾಂತಕವಾಗಿ ಉರುಳುತಿತ್ತು. ಅವನು ಹೋಗಿದ್ದಾನೆಯೋ ಎಂದು ಪುನಃ ಕಿಟಕಿಯಲ್ಲಿ ಹಣಿಕಿದೆ. ಅವನು ಸಿಗರೇಟು ಸೇದುತ್ತ ಅದೇತಾನೇ ಅಲ್ಲಿಂದ ಹೆಜ್ಜೆ ತೆಗೆ ಯುತಿದ್ದ. ಸದ್ಯ ಹೋಗುತಿದ್ದಾನೆ ಧೂರ್ತ! ಎಂದು ಅಂತರ್ವಾಣಿ ಕೂಗಿ ಹೇಳಿತು. ಅವನು ಕಣ್ಮರೆಯಾಗುವವರೆಗೂ ನೋಡುತಿದ್ದು ಅನಂತರ ಒಳಬಾಗಿಲನ್ನು ತೆಗೆದು ಹೊರಹೋಗಿ ಮುಂಬಾಗಿಲನ್ನು ಹಾಕಿಕೊಂಡೆ. ಅವನಿಂದ ಪಾರಾದುದಕ್ಕೆ ಮನಸ್ಸು ದೇವರನ್ನು ಬಹಳವಾಗಿ ನೆನೆದರೂ ಅವ ನಿಂದ ಎಂದಾದರೂ ಅಪಾಯವಿದೆ ಎಂಬುದನ್ನು ಸಾರಿಸಾರಿ ಹೇಳುತಿತ್ತು. ಆಗ...ಆಗ ಒಮ್ಮೆ ದೇಹದ್ಯಾಂತ ಸಣ್ಣಗೆ ನಡುಗಿಹೋದೆ. ಕೋಪತಾಪಗಳಿಂದ ಬಿಸಿ ನೆತ್ತರು ಒಳಗಿಂದೊಳಗೇ ಕುದಿಯಹತ್ತಿತು. ತಾಪಾನುತಾಪಗಳನ್ನು ತಾಳಿಕೊಳ್ಳಲಾರದೇ ಹಾಸಿಗೆಯಮೇಲೆ ಅಡ್ಡಾಗಿ ಮೈಮೇಲೆ ಹೊದ್ದಿಕೆಯನ್ನೆ ಳೆದುಕೊಂಡೆ. ಅದುವರೆಗೂ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದುದು ಗಮನಕ್ಕೆ ಬಂದಿರಲಿಲ್ಲವಾದರೂ ಅಡ್ಡಾದ ಮೇಲೆ ಒಂದೇ ಸಮನೆ ಡಬ. ಡಬ. ಡಬ. ಡಬ. ಎನ್ನುತ್ತಿದ್ದುದು ಅವ್ಯಾಹತವಾಗಿ ಕೇಳಿಸಹತ್ತಿತು. ನಾನು ಹಾಗೇ ವಿಶ್ರಾಂತಿಗೆ ಶರಣಾದೆ.

೦ ೦ ೦ ೦ ೦

ಆಸ್ಪತ್ರೆಗೆ ಆತುರಾತುರವಾಗಿ ನಡೆದು ಬಂದಿದ್ದೆ. ನಾನು ಬಸ್ ನಿಲ್ದಾಣವನ್ನು ಮುಟ್ಟಿದಾಗ ಬಸ್ಸು ಆದೇ ತಾನೇ ಹೊರಟುಹೋಗಿದ್ದುದರಿಂದ ನಡೆಯುವ ಕ್ರಮ ಕೈಕೊಂಡೆ. ವಾರ್ಡಿನ ಒಳಹೆಜ್ಜೆಯಿಡುವ ಮುನ್ನ ಭಾಸ್ ಇದ್ದಾನೆಯೋ ಎಂದು ಹಣಿಕಿ ನೋಡಿದಾಗ ಬೇರೆ ಯಾರೋ ಇದ್ದುದು ಕಂಡು ಬಂದುದರಿಂದ ನಾನು ಹಿಂದಿರುಗಿ ಬಂದು ನರ್ಸಳನ್ನು ಕೇಳಿದೆ "ಭಾಸ್ ಡಿಸ್ ಛಾರ್ಜ್ ಆಗಿದ್ದಾನೆಯೋ ?"

"ಹೌದು ಅವನು ಹೊರಟುಹೋಗಿ ಮೂರು ದಿನಗಳಾದುವು."

ನಾನು ಅತ್ಯಂತ ನಿರಾಶಳಾಗಿ ಆಫೀಸಿನ ಕಡೆ ಹೊರಟೆ. ಅಲ್ಲಿಗೆ ಹೋದಮೇಲೆ ಅವನು ಇನ್ನೂ ರಜೆಯ ಮೇಲೇ ಇದ್ದುದು ತಿಳಿಯಿತು. ಸೋಫಿ ನೇರಿ ಆಗಲೆ ಕೆಲಸ ಆರಂಭಿಸಿದ್ದರು. ನಾನು ಹೋಗಿ ನನ್ನ ಸ್ಥಳವನ್ನು ಆಕ್ರಮಿಸಿಕೊಂಡೆ. ಕೈಗಳು ಯಾಂತ್ರಿಕವಾಗಿ ಕೆಲಸ ಮಾಡುತ್ತಿರುವಾಗ ನಾನು ನೇರಿಯನ್ನು ಕೇಳಿದೆ "ನೀನು ಪ್ರವಾಸಕ್ಕಾಗಿ ಎಷ್ಟು ಹಣವನ್ನು ಕೂಡಿಸಿಕೊಂಡಿರುವೆ ?"

"ಹತ್ತು ಸಾವಿರ ಪೌಂಡು ಪ್ರವಾಸಕ್ಕೆ. ಮೂರು ಸಾವಿರ ಸ್ವಂತಕ್ಕೆ. ಒಟ್ಟು ಹದಿಮೂರು ಸಾವಿರ.

ಹಾಗೆ ನೋಡಿದರೆ ನಾನು ಕೂಡಿಸಿಕೊಂಡಿರುವುದು ಅತ್ಯಲ್ಪ. ಹತ್ತು ಸಾವಿರ ಪ್ರವಾಸಕ್ಕೆ ನಿಗದಿಯಾದುದು. ಸ್ವಂತಕ್ಕೆ ಪಡೆದುಕೊಂಡಿರುವುದು ಒಂದು ಸಾವಿರ ಮಾತ್ರ. ಅದೂಕೂಡಾ ಬಹಳ ಮಟ್ಟಿಗೆ ಬ್ಯಾಂಕಿನಿಂದ ಪಡೆದುಕೊಂಡುದೇ. ಈ ಸಲ ಹಣದ ಮುಗ್ಗಟ್ಟಿನಿಂದ ಪಾರಾಗಬೇಕಾದರೆ ತುಂಬ ಕಷ್ಟವಿದೆ; ಎಂಬ ಯೋಚನೆಯಲ್ಲೇ ಸೋಫಿಯನ್ನು ಕೇಳಿದೆ "ನೀನೆಷ್ಟು ಪಾಕೆಟ್ ಮನಿ ಕೂಡಿಸಿಕೊಂಡಿದ್ದಿ ?"

"ನಾನೂ ಅಷ್ಟೆ. ಇಬ್ಬರೂ ಮಾತಾಡಿಕೊಂಡೇ ಕೂಡಿಸಿಕೊಂಡದ್ದು."

ನನ್ನಲ್ಲಿ ಹಣವೇ ಇಲ್ಲ. ಒಂದು ಸಾವಿರ ಪೌಂಡ್ ಮಾತ್ರ ಖರ್ಚಿಗಿದೆ. ಸಾಕು ಹೇಗಾದರೂ ಮ್ಯಾನೇಜ್ ಮಾಡಬಲ್ಲೆ. ಇಂಥ ಸುಯೋಗ ಮುಂದೆ

ಸಿಗುತ್ತೋ ಇಲ್ಲವೋ ಎಂಬ ಅನುಮಾನದಿಂದ ಈ ಪ್ರವಾಸ ಕೈಕೊಂಡೆ ; ಇಲ್ಲದಿದ್ದಲ್ಲಿ ಸಾಲಹೊತ್ತುಕೊಂಡು ಪ್ರವಾಸ ಮಾಡಬೇಕಾಗಿರಲಿಲ್ಲ."

ಅದೇ ಸಮಯಕ್ಕೆ ಫಸ್ಟ್‌ಫ್ಲೋರ್‌ನಲ್ಲಿ ಕೆಲಸ ಮಾಡುತಿದ್ದ ಪೀಟರ್ ಕೆಳಗಿಳಿದು ಬಂದ. ಪ್ರಥಮ ನೋಟಕ್ಕೆ ನನ್ನನ್ನು ಕಂಡೊಡನೆ ಮುಖಬಿಂಬ ಕಪ್ಪಿಟ್ಟಿತಾದರೂ ಅದನ್ನು ತೋರಗೊಡದೆ ಮಿಂಚಿನ ದನಿಯಲ್ಲಿ ಪ್ರಶ್ನಿಸಿದ "ಓ...ಕೆಲಸಕ್ಕೆ ಬಂದೆಯಾ ? ಈಗ ಆರೋಗ್ಯ ಸರಿಹೋಯಿತೇ ?"

ನಾನೂ ಅಷ್ಟೇ ನೀರಸ ದನಿಯಲ್ಲಿ "ಹೂಂ...ಈಗ ಪರವಾಯಿಲ್ಲ" ಎಂದೆ. ಎದೆಯಲ್ಲಿ ಕಿಚ್ಚಿನ ಕಿಡಿ ಜ್ವಲಿಸುತಿತ್ತು. ನರನಾಡಿಗಳಲ್ಲಿ ರಕ್ತ ಸಂಚಾರ ತೀವ್ರವಾಗಿ ನೆತ್ತಿಗೆ ನುಗ್ಗಿ ಬಂತು. ಆದರೂ, ಅದನ್ನು ತೋರಗೊಡದಂತೆ ತಲೆಬಾಗಿ ಕೆಲಸ ಆರಂಭಿಸಿದೆ. ಅವನು ಕೋಪತಾಪಗಳ ವಶೀಭೂತನಾಗಿ ದಡದಡನೆ ನಡೆದುಹೋದ.

ಸೋಫಿ ಅಂದಳು "ಅವನೂ ಕೂಡ ನಮ್ಮ ಪ್ರವಾಸದಲ್ಲಿ ಪಾಲ್ಗೊಳ್ಳುತ್ತಾನೆ. ಈಚೆಗೆ ತನ್ನ ಹೆಸರು ನೊಂದಾಯಿಸಿಕೊಂಡಿದ್ದಾನೆ!"

ಅದನ್ನು ಕೇಳಿ ಈ ಶನಿ ಅಲ್ಲಿಯೂ ಗಂಟು ಬೀಳಬೇಕೆ ಎನಿಸಿತು ಮನದಲ್ಲಿ. ಬಾಯಿಬಿಟ್ಟು ಏನೂ ಹೇಳದೆ ನನ್ನ ಕೆಲಸದಲ್ಲಿ ಗಮನವಿಟ್ಟೆ. ಸಾಯಂಕಾಲ ಆಫೀಸು ಬಿಟ್ಟನಂತರ ಲೈಬ್ರರಿಗೆ ಹೋಗಿ ಪುಸ್ತಕಗಳನ್ನು ಆರಿಸಿಕೊಳ್ಳುವಾಗ 'ಕಮಲ ತಾರಾನಾಥ್' ಬೈ ಜಾಹ್ನವಿ ಎಂಬ ಕಾದಂಬರಿ ಕಣ್ಣಿಗೆ ಬಿತ್ತು. ಅದು ಭಾರತೀಯ ಕಾದಂಬರಿಯಾದ್ದರಿಂದ ಓದಿ ನೋಡೋಣ ಎಂಬ ಕುತೂಹಲ ಮೂಡಿತು. ಅದನ್ನು ತೆಗೆದುಕೊಂಡೆ. ಮನೆಮುಟ್ಟಿದಾಗ ತಾಯಿ ಪತ್ರಿಕಾವಲೋಕನದಲ್ಲಿ ನಿಮಗ್ನಳಾಗಿದ್ದಳು. ಅವಳು ನನ್ನ ಕೈಯಲ್ಲಿನ ಪುಸ್ತಕವನ್ನು ನೋಡುತ್ತಲೂ 'ಅದಾವ ಪುಸ್ತಕ'? ಎಂದಳು.

"ಕಾದಂಬರಿ".

"ಯಾರು ಬರೆದದ್ದು?"

"ಜಾಹ್ನವೀ ಎಂಬ ಭಾರತೀಯ ಮಹಿಳೆ. ಇದು ಅಲ್ಲಿಯ ಸಾಮಾಜಿಕ ಕಾದಂಬರಿ."

"ನೀನಂತೂ ಬಲೂ ಹುಚ್ಚಾಗುತ್ತೀದ್ದಿ !"

"ಏಕೆ? ಇದರಿಂದ ತೊಂದರೆ ಏನು? ದೇಶವಿದೇಶಗಳ ಕತೆಕಾದಂಬರಿಗಳನ್ನು ಓದುವುದರಿಂದ ಅಲ್ಲಿಯ ಸಾಮಾಜಿಕ ಪದ್ಧತಿಗಳ ಪರಿಚಯವಾಗುತ್ತದೆ."

ಅವಳು ಮಾತಾಡದೆ ನಸುನಕ್ಕಳು.

ನಾನು ಒಳಗಡೆ ಮಾಡಬೇಕಾದ ಕೆಲಸ ಕಾರ್ಯಗಳನ್ನು ಮುಗಿಸಿದ ನಂತರ ಕಾದಂಬರಿಯನ್ನು ಕೈಕೊಂಡೆ. ರಾತ್ರಿ ಒಂದು ಗಂಟೆಯವರೆಗೂ ಓದಿದನಂತರ ಮಲಗಿಕೊಂಡೆ. ಮರುದಿನ ಆಫೀಸಿಗೆ ಹೋಗುವ ಸಮಯದವರೆಗೂ ಓದಿದೆ. ಕೊನೆಯ ಕಾಲು ಭಾಗವನ್ನು ಸಾಯಂಕಾಲ ಓದಿ ಮುಗಿಸಿದೆ.

ಕಥಾ ನಾಯಕಿ ಬಿ.ಎ. ಓದಿದ ಕಮಲ ಎಂಬ ತರುಣಿ. ಅವಳನ್ನು ಮದುವೆಯಾಗಲು ಬಯಸಿದ ತರುಣ ಐವತ್ತು ಸಾವಿರ ರೂಪಾಯಿ ವರದಕ್ಷಿಣೆ ಕೇಳುತ್ತಾನೆ....ಅವಳು ವಿದ್ಯಾವತಿಯಾದುದರಿಂದ "ನೀವು ಹೀಗೆ ವರದಕ್ಷಿಣೆ ಕೇಳುವುದು ತುಂಬ ಹೀನಾಯವಾದುದು. ನನಗೆ ಎಲ್ಲಾದರೂ ಕೆಲಸ ಮಾಡಲು ಅವಕಾಶ ಕೊಟ್ಟರೆ ಹಣಕ್ಕೇನು ಕೊರತೆ ? ನಾವಿಬ್ಬರೂ ಒಟ್ಟಾಗಿ ದುಡಿದು ಸಂಪಾದಿಸೋಣ. ಇನ್ನೊಬ್ಬರ ಹಣಕ್ಕೇಕೆ ಕೈಯೊಡ್ಡಬೇಕು ?" ಎನ್ನುತ್ತಾಳೆ.

ಮುಂದೆ ಅದೊಂದು ದೊಡ್ಡ ರಾದ್ಧಾಂತವಾಗಿ ಪರಿಣಮಿಸುತ್ತದೆ.

ಹೆಣ್ಣಾದವಳು ಹೀಗೆ ಮಾತಾಡಿದ್ದು ತಪ್ಪು ಎಂದು ಬಂಧುವರ್ಗದವರು ಛೀಮಾರಿ ಹಾಕಿದರೆ ವರನ ಕಡೆಯವರು ಹುಡುಗಿ ಬಹಳ 'ಗಂಡುಬೀರಿ' ಎಂದು ಪ್ರಚಾರ ಮಾಡಿ ಅವಳ ಹೆಸರಿಗೆ ಕಳಂಕವನ್ನು ಹಚ್ಚುತ್ತಾರೆ. ಅನಂತರ ಅದೇ ಕಾರಣವಾಗಿ ಅವಳನ್ನು ಮದುವೆಯಾಗಲು ಯಾವ ತರುಣನೂ ಮುಂದೆ ಬರುವುದಿಲ್ಲ. ಅವಳು ಕೆಲಸ ಮಾಡುತ್ತೇನೆಂದರೆ ತಂದೆ ತಾಯಿಯರು ಒಪ್ಪದೆ ಮಗಳು ಗೃಹಿಣಿಯಾಗಿ ತಾಯಿಯಾಗುವುದೇ ಶ್ರೇಯಸ್ಕರ ಎನ್ನುತ್ತಾರೆ. ಅತ್ತ ಮದುವೆಯೂ ಇಲ್ಲದೆ ಇತ್ತ ಕೆಲಸ ಮಾಡುವುದೂ ಸಾಧ್ಯ

ವಾಗದೆ ಮನೆಯಲ್ಲಿ ಕಸಮುಸುರೆ ಇವುಗಳಲ್ಲೇ ಮುಳುಗಿ ಕಣ್ಣೀರಿನಲ್ಲಿ ಕೈ ತೊಳೆಯುತ್ತಾಳೆ ಕಮಲ. ಹೀಗೆ ಕಾದಂಬರಿಯ ಪೂರ್ವಾರ್ಧದಲ್ಲಿ ಅತ್ಯಂತ ವಿಶಾದನೀಯವಾಗಿ ಹರಿಯುತ್ತದೆ ಅವಳ ಕಥಾಸರಣಿ. ಅನಂತರ ಅವಳ ಆತ್ಮೀಯ ಗೆಳತಿಯಾದ ರುಕ್ಮಿಣಿ ಕಮಲೆಗೆ ಕಿವಿಮಾತಿನಲ್ಲಿ "ನಿನ್ನ ಮನೆಯವರಿಗೆ ತಿಳಿಯದಂತೆ ಯಾವುದಾದರೂ ಕೆಲಸಕ್ಕೆ ಪ್ರಯತ್ನಿಸು. ಕೆಲಸ ಸಿಕ್ಕಿದರೆ ಹಾಸ್ಟಲ್ ಸೇರಿಕೊ. ವಿದ್ಯಾವತಿಯಾಗಿ ಹಿಂಜರಿಯುವುದೇಕೆ?" ಎಂದು ಸಲಹೆ ನೀಡುತ್ತಾಳೆ. ಆದರೆ, ಹೊರಹೋಗಲು ಅವಕಾಶವಿಲ್ಲದೆ ಕೆಲಸ ದಕ್ಕಿಸಿಕೊಳ್ಳುವುದು ಹೇಗೆ ? ಎಂಬುದು ಬಹುದೊಡ್ಡ ಪ್ರಶ್ನೆ. ಆಗ ರುಕ್ಮಿಣಿ ಸ್ವಲ್ಪ ಯೋಚಿಸಿ "ನೀನು ಶಾಲಾ ಶಿಕ್ಷಕಿಯಾಗಿ ಕೆಲಸ ಮಾಡುವುದಾದರೆ ನಿನಗಾಗಿ ನಾನು ಪ್ರಯತ್ನಿಸುವೆ" ಎಂದಾಗ ಅದಕ್ಕೆ ಸಂತಸದಿಂದ ಒಪ್ಪಿಗೆ ನೀಡುತ್ತಾಳೆ ಕಮಲ. ರುಕ್ಮಿಣಿಯು, ತಾರಾನಾಥರ ಹೈಸ್ಕೂಲಿನಲ್ಲಿ ಕೆಲಸ ಕೇಳಲು ಹೋದಾಗ ತಾರಾನಾಥ್ "ಅವಳೇಕೆ ಶಿಕ್ಷಕಿಯಾಗಿ ಕೆಲಸ ಮಾಡಬೇಕು ? ನಾನೇ ಪಾಣಿಗ್ರಹಣ ಮಾಡಿಕೊಳ್ಳುವೆ. ಅವಳು ನನ್ನ ಗೃಹಿಣಿಯಾಗಿ ಸುಖವಾಗಿ ಮನೆಯಲ್ಲಿರಲಿ" ಎನ್ನುತ್ತಾನೆ.

ತಾರಾನಾಥ್ ವಿಧುರ. ಮೂರು ಮಕ್ಕಳ ತಂದೆ. ಮಕ್ಕಳು, ತಾಯಿ ತೀರಿಕೊಂಡನಂತರ ಅಜ್ಜಅಜ್ಜಿಯರ ಮನೆಯನ್ನು ಸೇರಿಕೊಂಡುದುದರಿಂದ ಮನೆ ಖಾಲಿಯಿತ್ತು. ಅವನು ನಲ್ವತ್ತರ ಹರೆಯದವನಾದರೂ ಗಟ್ಟಿಮುಟ್ಟಾಗಿ ಮೂವತ್ತರ ತರುಣನಂತೆ ಕಾಣಿಸುತ್ತಾನೆ. ಮೇಲಾಗಿ, ಲಕ್ಷಣವಂತನೂ ಹೌದು. ಅದೆಲ್ಲವೂ ರುಕ್ಮಿಣಿಗೆ ಸಂತೃಪ್ತಿ ತಂದುದರಿಂದ ಈ ವಿಚಾರದಲ್ಲಿ ತಾನೇ ರಾಯಭಾರಿಯಾಗಿ ಕೆಲಸ ಮಾಡಿ ಕಮಲೆಯನ್ನು ಮದುವೆಗೆ ಒಪ್ಪಿಸುತ್ತಾಳೆ. ಕೊನೆಗೆ ಎಲ್ಲರೂ ಅತ್ಯಂತ ಸಂತೃಪ್ತಿಯಿಂದ ವಿವಾಹ ಮಹೋತ್ಸವ ನಡೆಸುತ್ತಾರೆ. ಆದರೆ, ಅವನು ಸಂತಾನಹರಣ ಚಿಕಿತ್ಸೆಗೆ ಒಳಗಾಗಿದ್ದ. ಅದು ಬೇರಾರಿಗೂ ತಿಳಿಯದ ವಿಷಯ. ಕ್ರಮ ಕ್ರಮೇಣ ಕಮಲ ಸ್ತ್ರೀ ಸಹಜವಾದ ಮಾತೃಭಾವಕ್ಕೆ ಶರಣಾಗಿ ಮಕ್ಕಳಿಗಾಗಿ ಹಂಬಲಿಸುತ್ತ ಡಾಕ್ಟರಿಂದ ಡಾಕ್ಟರಿಗೆ ಅಲೆದು ಔಷಧೋಪಚಾರ ಹೊಂದುವುದು, ದೇವತೆಗಳ ಮೊರೆಹೊಕ್ಕು ಪೂಜೆವ್ರತಗಳಲ್ಲಿ ನಿರತಳಾಗುವುದು, ಗುರುಜನರ ಆಶೀರ್ವಾದ

ಪಡೆಯುವುದು ಹೀಗೆ ಹಗಲಿರುಳೂ ತಾಯ್ತನಕ್ಕಾಗಿ ಹಂಬಲಿಸುವುದು ಇತ್ಯಾದಿ ಅತ್ಯಂತ ಕರುಣಾಜನಕವಾಗಿ ಹರಿಯುತ್ತದೆ ಕಥಾ ಸರಣಿ ಕಾದಂಬರಿಯ ಉತ್ತರಾರ್ಧದಲ್ಲಿ. ಆದರೂ, ತಾರಾನಾಥ ತನ್ನ ಶಸ್ತ್ರಚಿಕಿತ್ಸೆ ವಿಷಯವನ್ನು ಬಹಿರಂಗ ಪಡಿಸುವುದಿಲ್ಲ ; ಅದನ್ನರಿಯದ ಆ ಮುಗ್ಧೆ ಮಕ್ಕಳಿಗಾಗಿ ಪರಿತಪಿಸುವುದನ್ನು ನಿಲ್ಲಿಸುವುದೂ ಇಲ್ಲ.

ಒಮ್ಮೆ ಪ್ರಸಂಗವಶಾತ್ ಆಕಸ್ಮಿಕವಾಗಿ ಅವನ ಕುಟುಂಬಿಗರಿಂದ ಶಸ್ತ್ರಕ್ರಿಯೆಯ ವಿಚಾರ ಹೊರಬಿದ್ದಾಗ ಕಮಲೆ ನಿರಾಸೆಯ ಬೆಂಕಿಯಲ್ಲಿ ಬೆಂದು ತಾಳಲಾಗದೆ ಕೆರೆಯಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ ! ಹೀಗೆ ಆದ್ಯಂತವೂ ಗೋಳಿನ ಕಣದಲ್ಲೇ ಹರಿದ ಅವಳ ಕಥಾವಾಹಿನಿಯನ್ನು ಓದಿ ಉಂಟಾದ ಸಂಕಟ ನನ್ನ ನಯನದ್ವಯಗಳಲ್ಲಿ ನೀರಾಡಿಸಿತು. ನಾನು ತೀವ್ರ ಆಲೋಚನಾ ಪರವಶಳಾದೆ. ಕೈಗಳು ಕೆಲಸ ಮಾಡುವಾಗಲೂ ಮನಸ್ಸು ಅದೇ ವಿಚಾರಗತ್ತರಿಯಲ್ಲಿ ಸಿಕ್ಕಿ ಚಡಪಡಿಸುತಿತ್ತು.

ಇಂದು ಸಂಜೆಯ ಸಮಯದಲ್ಲಿ ಆಫೀಸ್ ಬಿಟ್ಟಾಗ ಐದು ಗಂಟೆ. ಕಾದಂಬರಿ ಹಿಂದಿರುಗಿಸುವ ಸಲುವಾಗಿ ಲೈಬ್ರರಿಯ ಕಡೆ ಹೊರಟೆ. ನಾನು ಒಳ ಹೋದಾಗ ವಸಂತ್ ಪುಸ್ತಕವನ್ನು ಆರಿಸಿಕೊಳ್ಳುವುದರಲ್ಲಿದ್ದ. ನಾನು ಪುಸ್ತಕವನ್ನು ಹಿಂದಿರುಗಿಸುವ ಮುನ್ನ ಇತ್ತ ತಿರುಗಿದ ಅವನು ಮುಗುಳ್ನಗೆಯಿಂದ ನುಡಿದ "ಓಹೊ! ನೀನೂ ಇಲ್ಲಿ......? ಈಚೆಗೆ ನಿನ್ನನ್ನು ಕಂಡಿರಲಿಲ್ಲ......"

"ನೀವು ಪ್ರವಾಸ ಹೋಗಿದ್ದಿರೆಂದು ತಿಳಿಯಿತು."

"ಹೌದು.... ಹಿಂದಿರುಗಿ ಒಂದು ವಾರವಾಯಿತು."

"ಹೇಗಿತ್ತು ಪ್ರವಾಸ?"

"ಚೆನ್ನಾಗಿತ್ತು."

"ನಾನು ಈ ಸಲಿ ಓದಿದ್ದು ಭಾರತೀಯ ಕಾದಂಬರಿ."

"ಯಾವುದು ನೋಡೋಣ ?"

ಅದನ್ನು ಅವನ ಕೈಗಿಟ್ಟೆ.

"ನಾನೂ ಇದನ್ನು ಓದಿರುವೆ."

"ಅದರ ಬಗ್ಗೆ ನಿನ್ನ ಅಭಿಪ್ರಾಯವನ್ನು ತಿಳಿಯಬಹುದೇ ?"

"ನಮ್ಮಲ್ಲಿ ಅಂತಹ ಜೀವನ ಚಿತ್ರಗಳು ನಡೆಯಲಿಲ್ಲ ಎಂದೇನೂ ಹೇಳಲಾರೆ. ಆದರೆ, ಅದೊಂದು 'ಕಾದಂಬರಿ' ಮಾತ್ರ ಎಂಬುದನ್ನು ನೀನು ಗಮನದಲ್ಲಿರಿಸಬೇಕು."

"ಜೀವನದ ನೈಜ ಚಿತ್ರಗಳೇ ಸಾಮಾನ್ಯವಾಗಿ ಕಾದಂಬರಿಗಳಲ್ಲಿ ಮೂಡಿಬರುವುದು ದಿಟವಲ್ಲವೇ?"

"ಅದು ಸಹಜ ಎನ್ನೋಣ. ಆದರೆ, ನಾಗರಿಕತೆ ಬೆಳೆಯುತ್ತಿದ್ದಂತೆಲ್ಲಾ ಇಂತಹ ಅನಾಗರಿಕ ವ್ಯವಹಾರಗಳು ರೆಕ್ಕೆ ಮುರಿದುಕೊಳ್ಳಲೇಬೇಕು ; ಮುರಿದುಕೊಳ್ಳುತ್ತವೆ."

"ಆದರೆ, ಒಂದು ಪ್ರಶ್ನೆ. 'ಭಾರತ ಸಂಸ್ಕೃತಿ' ಎಂದು ಬಾಯಿ ತುಂಬಾ ಹೇಳಿಕೊಳ್ಳುವ ನೀವುಗಳು ಇಷ್ಟಕ್ಕೆ ಅವಕಾಶ ಕೊಡುವುದು ತಪ್ಪಲ್ಲವೇ ? ಅದರಲ್ಲೂ ಇಂತಹ ನಾಗರಿಕ ದಿನಗಳಲ್ಲಿ ಎಂತಹ ಹೇಯಕೃತ್ಯ ಎನಿಸುವುದಿಲ್ಲವೇ ನಿಮಗೆ ?"

ಅವನು ನಸುನಕ್ಕು ಮುಂದುವರಿದ "ಇಂತಹ ದುರ್ವ್ಯಾಪಾರಗಳು ಎಲ್ಲಾ ದೇಶದಲ್ಲೂ ಎಲ್ಲಾ ಕಾಲಗಳಲ್ಲೂ ನಡೆಯುವುದು ಸರ್ವೇಸಾಮಾನ್ಯ. ಮನುಷ್ಯ ಕಾಮುಪರವಶನಾದರೆ ಮುಗಿಯಿತು. ಅವನು ಆತ್ಮವನ್ನಾಗಲೀ ಜೀವನವನ್ನಾಗಲೀ ಗೌರವಿಸುವುದು ಸಾಧ್ಯವೇ ? ಈ ದೇಶದಲ್ಲಿ ಇಂತಹ ಪ್ರಸಂಗಗಳು ನಡೆದಲ್ಲಿ ಅಂದೇ ವಿವಾಹ ವಿಚ್ಛೇದನಕ್ಕೆ ಅರ್ಜಿ ಹಾಕುತ್ತಾರೆ. ಅಲ್ಲಿ ಹಾಗಲ್ಲ, ನೋಡು ; ತನ್ನ ಜೀವನವನ್ನೇ ಕೊನೆಗಾಣಿಸಿ ಕಾಮದ ಕಣ್ಣಿಗೆ ಕೈಬೆರಳಿಂದ ಚುಚ್ಚಿಹೋಗಿದ್ದಾಳೆ ಆ ದಿಟ್ಟ ಮಾನಿನಿ!"

"ಆದರೂ, ಆವಳ ಜೀವನ ನಷ್ಟವಾಗಲಿಲ್ಲವೇ ?"

"ಅದು ನಿಜ. ಅಂದರೂ, ಅದಕ್ಕಿಂತ ಮಿಗಿಲು ಅವಳು ಕಾಮದ ಕಣ್ಣನ್ನು ಕುಕ್ಕಿದ್ದು !"

ನಾನು ಕೈ ಬೆರಳನ್ನು ಕಚ್ಚಿದೆ.

ಅವನು ಒಂದೆರಡು ಗಳಿಗೆ ತಡೆದು ಮುಂದುವರಿದ "ಇಂತಹ ಕ್ಷುಲ್ಲಕ ವಾದ ಹಲಕೆಲವು ಲೋಪದೋಷಗಳು ಉಳಿದುಕೊಂಡಿವೆ. ಅವುಗಳು ಹುಟ್ಟ ಳಿದು ಹೋದರೆ ಸಮಾಜಕ್ಕೆ ಒಳ್ಳೆಯದು. ಎಲ್ಲಕ್ಕೂ ತುಂಬಾ ಕಾಲವ ಕಾಶಬೇಕು."

"ಬಿಡಿ, ನೀವು ಭಾರತೀಯ ಪುರುಷರು ನಿಷ್ಠುರವಾದಿಗಳು ; ನಿಮ್ಮಿಂ ದಲೇ ಸ್ತ್ರೀಯರ ಅಧಃಪತನ ಎನಿಸುತ್ತದೆ ನನಗೆ. ನಿಮ್ಮಲ್ಲಿ ಸ್ತ್ರೀಯರಿಗೆ ವೈಯಕ್ತಿಕ ಸ್ವಾತಂತ್ರ್ಯವಾಗಲೀ ಆರ್ಥಿಕ ಸ್ವಾತಂತ್ರ್ಯವಾಗಲೀ ಇಲ್ಲವೇ ಇಲ್ಲ. ನೀವು ಸ್ತ್ರೀಯರನ್ನು ತೀರ ಡಾಮಿನೇಟ್ ಮಾಡುತ್ತೀರಿ ಎಂಬುದು ಭಾರತೀಯ ಕತೆ ಕಾದಂಬರಿಗಳಿಂದ ವ್ಯಕ್ತವಾಗುತ್ತದೆ."

"ಅಂತಹ ಕಾಲವೊಂದಿತ್ತು. ಈಗಿನ ಹುಡುಗಿಯರು ಇಂಗ್ಲೀಷ್ ಭಾಷೆ ಕಲಿತು ಇಂಗ್ಲೀಷ್ ಸಾಹಿತ್ಯ ಓದಿ ಜೀರ್ಣಿಸಿಕೊಂಡವರು. ಈಗ ಅದೆಲ್ಲಾ ನಡೆಯುವುದಿಲ್ಲ. ಆದರೂ, ಹೆಂಗಸರು ಗಂಡಸರಿಗೆ ತಗ್ಗಿಬಗ್ಗಿ ನಡೆ ಯುವುದು ನಿಜ. ವಿದ್ಯೆಬುದ್ಧಿಯುಳ್ಳವರು ಒಬ್ಬರನ್ನೊಬ್ಬರು ಅರಿತುಕೊಳ್ಳು ತ್ತಾರೆ. ಇಲ್ಲದವರು ಕಟ್ಟುನಿಟ್ಟುಗಳಿಗೆ ಒಳಗಾಗುತ್ತಾರೆ. ಜೀವನಯುಕ್ತ ರೀತಿಯಲ್ಲಿ ಭಾವನೋಚಿತವಾಗಿ ರೂಪುಗೊಳ್ಳುತ್ತದೆ."

"ನಾವು ಇಷ್ಟರಲ್ಲೇ ಭಾರತ ಪ್ರವಾಸ ಹೋಗಲಿದ್ದೇವೆ."

"ಹೋಗಿ ಬಾ. ನಿನಗೆ ಸುಖ ಪ್ರಯಾಣ ಬಯಸುವೆ. ಅಲ್ಲಿಯ ಸಂಸಾರಗಳನ್ನು ನೋಡಿದೆಯಾದರೆ ನೀನು ಖಂಡಿತ ಭಾರತ ಸಂಸ್ಕೃತಿಯನ್ನು ಒಪ್ಪುತ್ತೀ."

ಅವನು ಆ ಮಾತನ್ನು ಬಲು ಹೆಮ್ಮೆಯಿಂದ ಹೊರಹಾಕಿದ. ಕಣ್ಣು ಗಳಲ್ಲಿ ಸಾತ್ವಿಕತೆಯ ಮಿಂಚು ಮಿಂಚುತಿತ್ತು. ನಾನು ನಗು ಮುಖದಿಂದ ನುಡಿದೆ "ನಾನು ಪ್ರವಾಸ ಹೋಗಿ ಬಂದನಂತರ ಹೇಳುವೆ."

"ಬರೀ ಪ್ರವಾಸ ಹೋಗಿ ಬರುವುದರಿಂದ ದೃಶ್ಯವಸ್ತುಗಳನ್ನು ಕಣ್ತುಂಬ ಕಾಣಬಹುದು ಅಷ್ಟೆ. ಅಲ್ಲಿ ನಾಲ್ಕು ಜನರೊಂದಿಗೆ ಕೂಡಿ ಬಾಳಿ ಬದುಕಿದರೆ ವ್ಯವಹಾರ ತಿಳಿಯುತ್ತದೆ. ಅಲ್ಲದಿದ್ದರೆ ಹೇಗೆ ?

"ಮೂರು ತಿಂಗಳ ಒಡನಾಟ ತಿಳಿಸದೇ ?"

ಅವನು ನಗುನಗುತ್ತ "ಅದು ನಿಮ್ಮವರ ಒಡನಾಟ ಅಷ್ಟೆ," ಎಂದು ಸ್ವಲ್ಪ ತಡೆದು ಮುಂದುವರಿದ "ದಿನಕ್ಕೊಂದು ಕಡೆ ತಂಗುವಿಕೆ. ಒಬ್ಬೊಬ್ಬರೊಡನೆ ಒಂದು ಗಂಟೆ ಅಥವಾ ಅರ್ಧ ಗಂಟೆ ವ್ಯವಹಾರ ; ಮಾತುಕತೆ ಇಷ್ಟೇತಾನೆ ? ಅದರಿಂದ ಏನು ತಿಳಿಯುತ್ತದೆ ?"

"ಏನೂ ಇಲ್ಲದಿರುವುದಕ್ಕಿಂತ ಸ್ವಲ್ಪವಾದರೂ ತಿಳಿದುಕೊಳ್ಳುವುದು ಲೇಸಲ್ಲವೆ ?"

"ಅದು ಸರಿಯೆ... ಕೇವಲ ನೂರಿನ್ನೂರು ವರ್ಷಗಳ ಹಿಂದೆ ಇಂಗ್ಲೆಂಡಿನ ಸ್ಥಿತಿ ಹೇಗಿತ್ತು ? ನ್ಯೂಯಾರ್ಕಿನಲ್ಲಿ ಸ್ಥಿತಿ ಹೇಗಿತ್ತು ? ನ್ಯೂಯಾರ್ಕಿನಲ್ಲಿ ಒಬ್ಬ ಭಂಗಿಯೂ ಇರಲಿಲ್ಲವೆಂಬುದನ್ನು ನೀನು ಬಲ್ಲೆಯಾ? ಆ ಬೃಹದ್ ನಗರದಲ್ಲಿ ಸಾವಿರಾರು ಹಂದಿಗಳ ಸೇನೆಯೇ ಭಂಗಿಗಳ ಕೆಲಸವನ್ನು ನಿರ್ವಹಿಸುತಿದ್ದುವು. ಕೆಲವು ದಶಕಗಳ ಹಿಂದೆ ಪಶ್ಚಿಮ ದೇಶಗಳಲ್ಲಿದ್ದ ಸ್ಥಿತಿ ಇಂದು ನಮ್ಮಲ್ಲಿದೆ. ನಮ್ಮವರು ತೀರ ಶೋಷಣೆಗೊಳಗಾದವರು. ಸುಧಾರಿಸಿಕೊಳ್ಳಲು ಕಾಲಾವಕಾಶಬೇಕು...."

ನಾನು ಮಾತಾಡದೆ ಮೌನವಾಗಿ ಕೇಳುತಿದ್ದೆ.

"ಕೆಲವು ಶತಮಾನಗಳ ಹಿಂದೆ ಕೆಥೋಲಿಕ್ ಚರ್ಚ್ ಹೇಗಿತ್ತು?"

"ಆ ವಿಚಾರ ನನಗೆ ತಿಳಿಯದು"

"ನೀನು ಚರಿತ್ರೆ ಓದಲಿಲ್ಲವೇ"

"ಓದಿದ್ದೆಲ್ಲಾ ನೆನಪಿರಬೇಕಲ್ಲ ?"

"ಪೋಪನಾದವನು ಅಧಿಕಾರಕ್ಕೆ ಹಾತೊರೆಯುತ್ತ ರಾಜರುಗಳ ಸೂತ್ರದ ಬೊಂಬೆಯಾದ ಕಥೆ ಯಾರಿಗೆ ಗೊತ್ತಿಲ್ಲ ? ರಾಜ–ರಾಜರುಗಳ ತಿಕ್ಕಾಟ ಮತ್ತು ಸ್ಪರ್ಧೆಗಳಿಂದ 'ಸ್ಕಿಸಮ್' ಗಳಾಗಿ ಒಂದು ಸೀಟಿಗೆ ಎರಡು

ಮೂರು ಪೋಪರುಗಳು ನೇಮಕ ಹೊಂದಿ ಪರಸ್ಪರ ವಿರೋಧ-ಜಗಳ, ಬೈದಾಟ-ಕೂಗಾಟಗಳಲ್ಲಿ ತೊಡಗಿದ ಅತ್ಯಂತ ಅಸಹ್ಯಕರವಾದ 'ಸ್ಕ್ಯಾಂಡಲ್' ತಿಳಿಯದೇ? ಆದೇ ಪ್ರಾಟಿಸ್ಟೆಂಟರು ಹೇಗೆ ಮುಂಡೆ ಬಂದರು? ಕ್ಯಾಥೋಲಿಕರ ದೋಷವೇನೆಂದು ಪ್ರಾಟಿಸ್ಟೆಂಟರನ್ನು ಕೇಳಿದರೆ ಅವರು ದೋಷಗಳ ಉದ್ದುದ್ದ ಪಟ್ಟಿಯನ್ನೇ ಕೊಟ್ಟಾರು. ಕೊಟ್ಟಕೊನೆಗೆ ಇಗ್ನೇಶಿಯಸ್ ಲಾಯೋಲಾ ಎಂಬಾತ 'ಜೆಸು ಇಟ್' ಸಂಸ್ಥೆಯನ್ನು ಸ್ಥಾಪಿಸಿ ಕ್ಯಾಥೋಲಿಕ್ ಚರ್ಚಿನಲ್ಲಿ ಹೊಸ ಕಳೆಯನ್ನು ತುಂಬಿದ ಹಾಗೆಯೇ ನಮ್ಮಲ್ಲಿ ಗಾಂಧೀಜಿ ಸಾರ್ವಜನಿಕ ಕ್ಷೇತ್ರಕ್ಕೆ ಕಾಲಿಟ್ಟಮೇಲೆ ನಮ್ಮವರು ಎಚ್ಚೆತ್ತುಕೊಂಡರು....... ಎಲ್ಲೆಲ್ಲಿ ಮನೋದೌರ್ಬಲ್ಯ, ಜೀವನ ದುಸ್ಥಿತಿ ಇದೆಯೋ ಅಲ್ಲೆಲ್ಲಾ ಸುಧಾರಣೆಗಾಗಿ ಕಾಯಕಲ್ಪ ಕೈಕೊಳ್ಳುವ ಧೀರರು ಹುಟ್ಟಿಕೊಂಡರೆ ಎಲ್ಲರ ಜೀವನವೂ ಸುಧಾರಿಸಿಕೊಳ್ಳುತ್ತದೆ."

"ನಿನ್ನ ಆಶಾವಾದಿತ್ವ ಮೆಚ್ಚುವಂತಾದ್ದು."

"ಇಂಗ್ಲೀಷರ ಆಳ್ವಿಕೆಯಲ್ಲಿ ನಮ್ಮವರು ನಾಗರಿಕವಲಯಕ್ಕೆ ಹಣಕಿದರೆ ಅಲ್ಲೇ ಗುಂಡಿಡುತ್ತಿದ್ದರು ಗೊತ್ತೇ? ಆ ಮುನ್ನೂರು ವರ್ಷಗಳ ಕಾಲವೂ ನವೂ ನಮ್ಮವರು ಇದ್ದುದು ಅಂಧಕಾರ ಕೂಪದಲ್ಲೇ."

"ಪಾಪ... ರಿಯಲಿ ಐ ಫೀಲ್ ಸಾರಿ ಫಾರ್ ದೆಮ್."

"ಆಗಿನ ಇತಿಹಾಸವನ್ನು ಒರೆಗೆ ಹಚ್ಚಿದರೆ ಕಂಡುಬರುವ ಮೊತ್ತ ಕ್ರೌರ್ಯ-ಮೋಸ-ಭೇದ-ಅನೀತಿ-ಅನ್ಯಾಯ-ಸುಲಿಗೆ-ಹಿಂಸೆ ಇವುಗಳೇ!"

"ಹೋಗಲಿ ಬಿಡು. ನಾವು ಮಾತು ಆರಂಭಿಸಿದ್ದು ಎಲ್ಲೋ ಕೊನೆ ಮುಟ್ಟಿದ್ದು ಇನ್ನೆಲ್ಲೋ."

ಅವನು ನಕ್ಕುಬಿಟ್ಟ.

"ನೀನು ಭಾರತ ಪ್ರವಾಸದಲ್ಲಿ ಗೋವಾಕ್ಕೆ ಹೋಗುವುದನ್ನು ಮರೆಯಬೇಡ. ಗೋವಾ ಒಂದುಕಾಲಕ್ಕೆ ಪೋರ್ಚುಗೀಸರ ಆಡಳಿತಕ್ಕೆ ಸೇರಿತ್ತು. ಇಂಗ್ಲೀಷರಂತೆ ಇವರೂ ನಮ್ಮನ್ನು ಶೋಷಣೆಗೈದವರೇ. ಅವರ ಹಿಂಸೆಯನ್ನು ತಾಳಲಾರದೆ ನಮ್ಮವರು ದೇಶಾಂತರ ಹೋಗಿದ್ದಾರೆ. ಹಾಗೆ ಹೋದವರಲ್ಲಿ

ನಮ್ಮ ಹಿರಿಯರು ಕೂಡ. ಈಗ ನಮ್ಮವರು ಇರುವುದು ಜೋಂಬಾಯಿ ಯಲ್ಲಿ. ನಮ್ಮ ಸ್ವಂತ ನಾಡು ಗೋವಾ ಬಲು ಸುಂದರವಾದ ಪ್ರಾಂತ್ಯ. ಪೋರ್ಚುಗೀಸರ ಚಿತ್ರಹಿಂಸೆಯಿಂದ ರಕ್ತಸ್ನಾನವಾಗಿದೆ ಭೂಮಿ."

ನನಗೆ ಏನೂ ಹೇಳಲು ತೋರಲಿಲ್ಲ. ಮೌನಗತಿಯಲ್ಲಿ ಆ ಚಿತ್ತಾರ ವನ್ನು ಮನದಲ್ಲೇ ಚಿತ್ರಿಸಿಕೊಂಡೆ. ಅವನು ಲೈಬ್ರರಿಯಿಂದ ಹೊರಡುತ್ತ ಅಂದ "ಆಗಿನ ಸಂದರ್ಭದಲ್ಲಿ ನಮ್ಮವರು ಪಟ್ಟ ಕಷ್ಟ ಆ ದೇವನೊಬ್ಬನೇ ಬಲ್ಲ. ಹೀಗೆ ಎಂದಾದರೂ ಕೂಡಿ ಮಾತಾಡುವಂತಿತ್ತೆ? ಸಿಟಿ ವಲಯಗಳ ಮುಖ್ಯ ಸ್ಥಳಗಳಲ್ಲಿ ನಮ್ಮವರು ಇಣುಕುವಂತಿತ್ತೇ? ಆಗ ಎಲ್ಲೆಂದರಲ್ಲಿ ಗುಂಡು! ಈಗ ಎಂತೆಂತಹ ಬಡವರೂ ಕೂಡ ಅವರವರ ಸ್ಥಳಗಳಲ್ಲಿ ನಿರ್ಭಯದಿಂದ ತಮ್ಮ ವ್ಯಾಪಾರವನ್ನು ಮಾಡಿಕೊಂಡು ಜೀವಿಸುತಿದ್ದಾರೆ. ಅವರ ಪಾಲಿಗೆ ಬಂದ ಗಂಜಿಯೋ ಅನ್ನವೋ ಯಾವುದನ್ನೋ ಹೊಟ್ಟೆತುಂಬ ಉಣ್ಣುತ್ತಾರೆ. ಬಡತನ ಹೋಗಿಲ್ಲ ನಿಜ. ಗುಡಿಸಲುಗಳಲ್ಲೇ ವಾಸವಾದರೂ ಮನಸ್ಸಿಗೆ ನೆಮ್ಮ ದಿಯಿದೆ."

"ಅಷ್ಟಿದ್ದರೆ ಸಾಕಲ್ಲ."

ಅವನು ಹೊರ ಹೋಗುವ ಮುನ್ನ ಸಂಧ್ಯಾವಂದನೆಯನ್ನು ಸಲ್ಲಿಸಿದ. ನಾನು ಪ್ರತಿವಂದಿಸಿ ಹೊರಟು ಬಂದೆ. ವಾತಾವರಣ ಬಲು ಹಿತಕರವಾಗಿತ್ತು. ಹಕ್ಕಿಗಳು ಚಿಲಿಪಿಲಿರಾಗ ಹಾಡುತಿದ್ದುವು. ಕೆಲಸ ಮುಗಿಸಿ ಮನೆಯ ಹಾದಿ ಹಿಡಿದ ಜನವಾರಿಧಿಯ ಸದ್ದು. ಉದ್ದಕ್ಕೂ ಪಾದರಕ್ಷೆಗಳ ಪಟಪಟಾತ್ಕಾರ ದೊಂದಿಗೆಮಾತಿನ ಮರ್ಮರವೂ ಕೇಳಿಸುತಿತ್ತು. ವಾಹನಗಳ ಗದ್ದಲವೂ ಕಡಿಮೆಯಿರಲಿಲ್ಲ. ನಾನು ತಲೆಬಾಗಿ ಹೆಜ್ಜೆಹಾಕಿದೆ. ಮನದಲೆಯಲ್ಲಿ ವಸಂತನ ವ್ಯಾಖ್ಯಾನ ಧುಮಿಧುಮಿಸುತಿತ್ತು.

o o o o

ಅಂದು ಹೊರ ಹೋದ ಅಣ್ಣಂದಿರಿಬ್ಬರೂ ಒಮ್ಮೆಯೂ ಬಂದು ಹೋಗಿ ರಲಿಲ್ಲ. ಎಲಿಜ ಒಮ್ಮೆ ಬಂದಿದ್ದಳೇನೋ ನಿಜ, ಆದರೆ ಅದು ಹಣಕ್ಕಾಗಿ.

ಬೆಮೆಲ್ ತನ್ನ ಪ್ರಿಯಕರ ಹಾಲ್ಡೇನ್‌ನನ್ನು ಆಗಾಗ ಕರೆತರುತ್ತಾಳೆ. ಊಟ ತಿಂಡಿಗಾಗಿ ಒಂದು ಚಿಕ್ಕಾಸೂ ಬಿಚ್ಚುವುದಿಲ್ಲ. ಅವರ ಭಾರ ನಮ್ಮ ಮೇಲೆಯೆ. ಟಾಮಿ ಯಾವುದೋ ಕೆಲಸಕ್ಕಾಗಿ ಓಡಾಡುತ್ತಿದ್ದಾನೆ. ಅದರ ಸಲುವಾಗಿ ಅವನಿಗೆ ಎಷ್ಟು ಹಣವಿದ್ದರೂ ಸಾಲದು, ಎಂಬ ಧೋರಣೆ. ಅವರಂತೆಯೇ ಇವರೂ ಹೊರಹೋಗಿದ್ದರೆ ಎಷ್ಟೋ ಮೇಲಾಗುತ್ತಿತ್ತು ಎಂಬ ಯೋಚನೆ ಅನೇಕವೇಳೆ ಉಂಟಾಗುತ್ತದೆ. ನಮ್ಮದೇ ಕಷ್ಟಪರಿಸ್ಥಿತಿ ಇರುವಾಗ ಈ ಹೊರೆ ಮತ್ತೂ ಕಷ್ಟವೇ. ತಾಯಿಯೊಂದಿಗೆ ಹಣವೇನೋ ಇದೆ. ಅವಳು ವಿನಾಕಾರಣ ಬಿಚ್ಚುವವಳೇ ಅಲ್ಲ. ಎಷ್ಟು ಗಳಿಕೆಯೋ ಅಷ್ಟರಲ್ಲೇ ದಿನಗಳೆಯಬೇಕು. ಈ ಎಲ್ಲಾ ಕಾರಣಗಳಿಂದಾಗಿ ನನಗೆ ಎಲ್ಲಿಲ್ಲದ ತಲೆನೋವು. ಪ್ರವಾಸಕ್ಕಾಗಿ ಹಣ ಉಳಿತಾಯ ಮಾಡಿಕೊಳ್ಳಬೇಕು ಎಂಬ ಆಸೆ ನಿರಾಸೆಯಾಯಿತು. ಮುಂದಿನವಾರವೇ ನಮ್ಮ ಪಯಣ. ಆ ವಿಚಾರದಲ್ಲಿ ತಾಯಿಗೆ ಇನಿತೂ ತೃಪ್ತಿಯಿಲ್ಲ. ವೃಥಾ ಹಣಹಾಳು ಎಂಬ ತೀರ್ಮಾನ ಅವಳದು. ಅಸಡ್ಡೆ–ಅಸಮಾಧಾನಗಳಿಂದಲೇ ನನ್ನನ್ನು ನೋಡುತ್ತಾಳೆ. ದಿನವೂ ಎಲ್ಲಿಲ್ಲದ ಕಿರಿಕಿರಿ ಮನೆಯಲ್ಲಿ. ಒಮ್ಮೆ ಪಯಣ ಹೊರಟರೆ ಮೂರು ತಿಂಗಳು ಹಾಯಾಗಿರಬಹುದು ಎಂಬ ಯೋಚನೆ ಅನೇಕವೇಳೆ ಬರುತ್ತದೆ.

ಇಂದು ಒಂದು ತಿಂಗಳ ರಜೆಯನಂತರ ಭಾಸ್ ಆಫೀಸಿಗೆ ಬಂದಿದ್ದ. ಸಾಯಂಕಾಲ ಹೊರಹೋಗುತ್ತ ಇಬ್ಬರೂ ವೆಲ್ಲಿಂಗ್‌ಟನ್ ಹೌಸ್‌ನ ಹೊರಾಂಗಣದ ಕಲ್ಲು ಬೆಂಚಿನಮೇಲೆ ಕುಳಿತುಕೊಂಡೆವು. ಅವನು ನಗುಮುಖದಿಂದ ಕೇಳಿದ "ಪಯಣದ ಸಿದ್ಧತೆಗಾಗಿ ಏನೆಲ್ಲಾ ತಯಾರು ಮಾಡಿಕೊಂಡಿದ್ದಿ?"

"ಏನಿಲ್ಲ. ಕೆಲವು ರಡಿಮೇಡ್ ಬಟ್ಟೆಗಳನ್ನು ಕೊಂಡುಕೊಳ್ಳಬೇಕಾಗುತ್ತದೆ. ಅವೂ ಕೂಡಾ ಸಾಲ್ಕಾರು ಜೋಡಿಯಾದರೆ ಸಾಕು. ನನ್ನ ಬಳಿ ಈಗಾಗಲೇ ಸಾಕಷ್ಟಿವೆ."

"ಹೇಗೂ ಬಸ್ಸಿನಲ್ಲಿ ಪಯಣ. ಹೊದೆಯಲು ಶಾಲು ದುಪ್ಪಟಿಗಳನ್ನು ತೆಗೆದುಕೊಂಡು ಹೋಗಬಹುದು. ನಿಮ್ಮ ನಿಮ್ಮ ಅನುಕೂಲಕ್ಕಾಗಿ ಏನೆಲ್ಲಾ ಬೇಕೋ ಅವನ್ನೆಲ್ಲಾ ಕೈಕೊಳ್ಳಿ. ಸಣ್ಣ ಊರುಗಳಲ್ಲಿ ತಂಗಿದರೆ ಇಷ್ಟೊಂದು ಮುಂದಿಗೆ ಸೌಕರ್ಯ ದೊರೆಯುವುದು ಕಷ್ಟ."

"ಅದು ಸರಿಯೆ...ನಾನು ಎಲ್ಲಾ ಬಗೆಯ ಜೀವನಕ್ಕೂ ಸಿದ್ಧ...."

ಅವನು ಸ್ವಲ್ಪ ಹೊತ್ತು ಏನೂ ಮಾತಾಡಲಿಲ್ಲ. ಅವನ ನೋಟ ಹೊಗೆಡದ ಮೇಲಿತ್ತು, ನಾನು ಒಂದೆರಡು ಕ್ಷಣ ಯೋಚಿಸಿ ಕೇಳಿದೆ "ನಿನ್ನ ಭವಿಷ್ಯವನ್ನು ಕುರಿತು ನಾನೊಂದು ಪ್ರಶ್ನೆ ಕೇಳಬಹುದೇ?"

"ಏನು ತಿಳಿಯಬೇಕೆಂದು ನಿನ್ನಾಸೆ?" ಎನ್ನುತ್ತ ಭಾಸ್ ನಸುನಕ್ಕ.

"ಏನಾದರೂ ಸ್ವಲ್ಪ..."

"ಕೇಳು ಪರವಾಯಿಲ್ಲ."

"ಮುಂದೆ ಭಾರತಕ್ಕೆ ಹೋಗುವೆಯಾ? ಅಥವಾ ಇಲ್ಲಿಯೇ ನೆಲಸುವೆಯಾ?"

"ಭಾರತಕ್ಕೆ ಹಿಂದಿರುಗುವುದು ದಿಟ. ಯಾವಾಗ ಎಂಬುದು ಇನ್ನೂ ನಿರ್ಧರವಾಗಿಲ್ಲ."

"ಈಗಲೇ ಹೋಗಬೇಕೆಂಬ ತರಾತುರಿಯಂತೂ ಇಲ್ಲವಲ್ಲ?"

"ಅಂತಹದ್ದೇನೂ ಇಲ್ಲ. ನಾಲ್ಕು ವರ್ಷ ಕೆಲಸ ಮಾಡಿ. ಅನಂತರ ಹೋಗುವ ಯೋಚನೆ. ಮುಖ್ಯವಾಗಿ ಇಲ್ಲಿ ಒಳ್ಳೆಯ ಕೆಲಸ ಸಿಕ್ಕಿದೆ ಅಂತ ಅಷ್ಟೆ."

"ನಿಮ್ಮಲ್ಲಿ ಒಳ್ಳೆಯ ಕೆಲಸ ಸಿಗುತ್ತದೆಯೇ?"

"ಭಾರತ ಸರಕಾರ ತಾಂತ್ರಿಕಜ್ಞರನ್ನು ಅಲ್ಲೇ ಉಳಿಸಿಕೊಳ್ಳಲು ಉದ್ಯೋಗಕ್ಕೆ ಅವಕಾಶ ನೀಡುತ್ತಲಿದೆ. ನನಗೂ ಅಂತಹ ಸದವಕಾಶ ಸಿಗಬಹುದು."

"ಕ್ಷಮಿಸು. ಇನ್ನೊಂದು ಪ್ರಶ್ನೆ. ನಿನಗೆ ನಿನ್ನ ದೇಶೀಯರ ನಡೆನುಡಿ ಹಿತ ಎನ್ನೋಣ. ಈಗ, ಈ ದೇಶಕ್ಕೆ ಬಂದು ನಮ್ಮ ನಡೆನುಡಿಯನ್ನು ಅರಿತ ಮೇಲೆ ಹೇಗೆನಿಸುತ್ತೆ?"

"ನಮ್ಮ ನಿಮ್ಮ ಸಂಸ್ಕೃತಿ ತೀರ ಭಿನ್ನಭಿನ್ನವಾದುದು. ನೀನು ಭಾರತೀಯ ಸಂಸ್ಕೃತಿಯನ್ನು ಸ್ವಲ್ಪವಾದರೂ ಅರಿತುಕೊಂಡಿದ್ದಿದ್ದರೆ ಹೇಳಿ ಕೇಳುವುದರಲ್ಲಿ ಪ್ರಯೋಜನ..."

ನಾನು ನಡುವೆ ಬಾಯಿ ಹಾಕಿದೆ.

"ನಾನು ಅಷ್ಟೊಂದು ನಿಷ್ಪ್ರಯೋಜಕಳೇ? ಇಲ್ಲಿರುವ ಎಷ್ಟೊಂದು ಭಾರತೀಯರನ್ನು ನೋಡಿಲ್ಲ. ಎಷ್ಟು ಮಂದಿಯೊಂದಿಗೆ ಒಡನಾಡಿಲ್ಲ? ಸುಮನಾ ಎಂಬ ಬಡೋದೆಯ ಹುಡುಗಿ ನನ್ನ ಕ್ಲಾಸ್‌ಮೇಟ್. ಅವಳು ಇಲ್ಲಿರುವವರೆಗೆ ಅವಳ ಮನೆಯಲ್ಲಿ ಆನಂದದಿಂದ ಕಾಲಹರಣ ಮಾಡಿರುವೆ. ಊಟ ತಿಂಡಿ ಹೊತ್ತು ಹೊತ್ತಿಗೂ ಮಾಡಿರುವೆ. ಅಲ್ಲದೆ ಭಾರತದ ಸಾಕಷ್ಟು ಕತೆ ಕಾದಂಬರಿಗಳನ್ನೂ ಓದಿರುವೆ. ಆದ್ದರಿಂದ ನೀನು ಹೇಳುವುದನ್ನು ಅರಿತುಕೊಳ್ಳುವಷ್ಟು ಚಾತುರ್ಯವು ನನಗುಂಟು."

ಹಾಸ್ಯ ಪ್ರಧಾನವಾಗಿ ನಗುತ್ತ ನಾನು ಹೇಳಿದೆ.

ಅವನು ಭಾವನಾತ್ಮಕವಾಗಿ ನುಡಿದ "ನಮ್ಮವರು ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದವರು. ಆದರೆ, ಒಂದಲ್ಲ ಒಂದು ರೀತಿಯಲ್ಲಿ ಧರ್ಮಪರರು, ನೀತಿವಂತರು. ಭಾರತೀಯರಲ್ಲಿ ಅತ್ಯಂತ ತುಚ್ಛನಾದವನಲ್ಲೂ ಯಾವುದಾದರೊಂದು ಸದ್ಗುಣ ನಮಗೆ ಕಾಣಿಸುತ್ತದೆ. ಅತಿಥಿ ಸತ್ಕಾರ, ಕೌಟುಂಬಿಕ ವ್ಯವಹಾರ, ಮಾತಾಪಿತೃ ಭಕ್ತಿ, ಭ್ರಾತೃಪ್ರೇಮ ಇಂತಿಂಥ ಸದ್ಗುಣಗಳು ತೀರ ಅಜ್ಞಾನದ ನಡುವೆಯೂ, ದಟ್ಟದಾರಿದ್ರ್ಯದ ಉಡಿಯಲ್ಲಿಯೂ ಎದ್ದು ಕಾಣಿಸುತ್ತವೆ. ಕೌಟುಂಬಿಕ ಶಿಥಿಲತೆ, ವಿವಾಹ ವಿಚ್ಛೇದ, ಅತೀವ ಸ್ವಾರ್ಥ ಇವುಗಳಿಂದ ತುಂಬಿದ ಐರೋಪ್ಯರು ನಮ್ಮ ಧರ್ಮಗುರುಗಳನ್ನು ಗಮನಿಸಿದಾಗ ಡಂಗು ಬಡಿದು ಆಶ್ಚರ್ಯ ಚಕಿತರಾಗುವುದು ಸಹಜ. ನೀವು ನಿಜವಾಗಿಯೂ ನಮ್ಮವರಿಂದ ಕಲಿಯಬೇಕಾದುದು ಬಹಳವಿದೆ. ಆದರೆ, ನೂರಾರು ವರ್ಷಗಳ ಪರಾಧೀನತೆಯಿಂದ ವಾತಾವರಣ ಹದಗೆಟ್ಟು, ಸಂಸ್ಕಾರ ಕುಗ್ಗಿದರೂ ಸಮಾಜ ಕಲುಷಿತವಾಗಲಿಲ್ಲ. ಯೋಗ್ಯರೀತಿಯ ಶಿಕ್ಷಣವಿಲ್ಲದಿದ್ದುದರಿಂದ ಈಗಲೂ ಎಷ್ಟೋ ಲೋಪದೋಷಗಳು, ಅಂಧ ಶ್ರದ್ಧೆಗಳು, ಮೂಢ ನಂಬಿಕೆಗಳು ಉಳಿದು

ಕೊಂಡಿವೆ. ಅವೂ ಸಹ ಕಾಲಕ್ರಮದಲ್ಲಿ ನಶಿಸಿ ಹೋಗಬಹುದು. ನಿಮ್ಮ ದೇಶಕ್ಕೆ ಶತಶತಮಾನಗಳ ಅಭಿವೃದ್ಧಿಯಿದೆ. ಜನ ಉತ್ತಮ ಸ್ಥಿತಿಯಲ್ಲಿದ್ದಾರೆ. ವಿದ್ಯೆ ಬುದ್ಧಿಗಳಿಂದ ವಿಜ್ಞಾನ ಮೊಳೆಯಲು ಒಳ್ಳೆಯ ಅವಕಾಶವಿದೆ. ಮಕ್ಕಳು ಬಾಲ್ಯದಿಂದಲೇ ಪ್ರಗತಿಯ ಪಥವನ್ನು ಮೆಟ್ಟುತ್ತಾರೆ. ಮನಃಬುದ್ಧಿಗಳು ದಳದಳವಾಗಿ ಅರಳುತ್ತವೆ. ನಿಜ, ಆದರೆ ಈ ಶ್ರೀಮಂತಿಕೆಯೆಲ್ಲಾ ಇತರ ಸಾಮ್ರಾಜ್ಯಗಳನ್ನು ಶತಶತಮಾನಗಳ ಕಾಲ ಲೂಟಿ ಮಾಡಿ ಗಳಿಸಿದ್ದೆಂಬುದನ್ನು ಮರೆಯಬಾರದು. ಭಾರತದ ಬಡತನ ನಿಮ್ಮವರ ಲೂಟಿಯಿಂದಲೇ ಉಂಟಾದದ್ದು. ಭಾರತೀಯರು ಬಡತನದಲ್ಲಿ ಜೆಂದರೂ ಪರೋಪಕಾರದಲ್ಲಿ ನಿಸ್ಸೀಮರು. ಶತಮಾನಗಳ ಹಿಂದಿನ ಇತಿಹಾಸ ತೆಗೆದರೆ ಇಂಗ್ಲೆಂಡ್ ಹೇಗಿತ್ತು ? ಇತರ ಐರೋಪ್ಯ ರಾಷ್ಟ್ರಗಳು ಹೇಗಿದ್ದುವು ? ನಮ್ಮ ದೇಶವು ಶೋಷಣೆಗೊಳಗಾಗದಿದ್ದರೆ ಇಂದು ಪ್ರಗತಿಯಲ್ಲಿ ಯಾರಿಗೂ ಹಿಂದೆ ಬೀಳುತ್ತಿರಲಿಲ್ಲ. ಇನ್ನೂ ಒಂದು ಶತಮಾನವೇ ಬೇಕು ಅಂದಿನ ಹೊಡೆತದಿಂದ ಸುಧಾರಿಸಿಕೊಳ್ಳಲು."

"ನಿಮ್ಮವರು ಸ್ವಾತಂತ್ರ್ಯವನ್ನು ಕಳೆದುಕೊಳ್ಳುವಾಗ ಎಷ್ಟು ಮೂರ್ಖರಾಗಿದ್ದರೋ ಅಷ್ಟೇ ಅದನ್ನು ಗಳಿಸಿಕೊಳ್ಳುವುದರಲ್ಲಿ ಜಾಣ್ಮೆ ತೋರಿದ್ದಾರೆ. ಅದೂ ವಿಶೇಷವೇ."

"ಅಂದ ಮೇಲೆ, ಲೋಪದೋಷಗಳು ನಮ್ಮಲ್ಲೂ ಇರುತ್ತವೆ; ನಿಮ್ಮಲ್ಲೂ ಇರುತ್ತವೆ. ಅವನ್ನೆಲ್ಲಾ ಜೆದಕುತ್ತಾ ಹೋದರೆ ಅದಕ್ಕೆ ಕೊನೆಯಿಲ್ಲ. ನೂರು–ನೂರೈವತ್ತು ವರ್ಷಗಳ ಹಿಂದೆ ಇಲ್ಲಿ ಸರಿಯಾದ 'ಸಾನಿಟೇಶನ್' ಇತ್ತೇ ? ನಗರದ ಕೊಳಕನ್ನೆಲ್ಲಾ ಥೇಮ್ಸ್ ನದಿಗೆ ಬಿಟ್ಟು ಬಿಡುತ್ತಿದ್ದರು. ಅದೇ ನೀರನ್ನು ಗೌಳಿಗರು ಹಾಲಿಗೆ ಬೆರೆಸಿ ಮಾರುತ್ತಿದ್ದುದರಿಂದ ಹಾಲೆಲ್ಲಾ ಅದೇ ವಾಸನೆ; ಕಾಫಿ ತಿಂಡಿಗಳೂ ವಾಸನೆ ಎಂದು ಪಾರ್ಲಿಮೆಂಟ್ ಸದಸ್ಯರು ಪಾರ್ಲಿಮೆಂಟಿನಲ್ಲಿ ಭಾಷಣ ಮಾಡಿದ ಬಗ್ಗೆ ಅಲ್ಲಿನ ದಾಖಲಾತಿಗಳಲ್ಲಿ ಇಂದಿಗೂ ಕಾಣಬಹುದು. ಇಂಥ ಉದಾಹರಣೆಗಳನ್ನು ಎಷ್ಟೆಷ್ಟೋ ಕೊಡಬಹುದು. ಆದರೆ ಇದೊಂದು ಸಾಕು ತಾನೆ ?"

ನಾನು ನಕ್ಕು ಬಿಟ್ಟೆ.

"ಇಲ್ಲಿನ ದಾಂಪತ್ಯ ಜೀವನ ತೆಗೆದುಕೊ. ಒಂದು ಸಣ್ಣ ಕಾರಣಕ್ಕೂ ದಾಂಪತ್ಯ ವಿಚ್ಛೇದನ ನಡೆಯುತ್ತದೆ. ನಮ್ಮಲ್ಲಿ ಇಂತಹ ಹಲವಾರು ಕಾರಣಗಳಿದ್ದರೂ ಬಾಳಿನ ಬೆಸುಗೆ ಬಿಡುವುದಿಲ್ಲ. ಹೇಗಾದರೂ ಒಬ್ಬರಿಗೊಬ್ಬರು ಸುಧಾರಿಸಿಕೊಂಡು ಹೊಂದಿಕೊಳ್ಳುತ್ತಾರೆ. ಇತ್ತೀಚೆಗೆ ಪಾಶ್ಚಾತ್ಯ ವಾತಾವರಣಕ್ಕನುಸರಿಸಿ ಅಲ್ಲಲ್ಲಿ ವಿವಾಹ ವಿಚ್ಛೇದನಗಳು ನಡೆಯುತ್ತವೆ. ಇವಕ್ಕೆಲ್ಲಾ ಮಹತ್ವ ಕೊಡುವುದಕ್ಕಾಗುವುದಿಲ್ಲ. ಸತಿಯಾದವಳು ಪತಿಯನ್ನು ಎಲ್ಲಾ ರೀತಿಯಿಂದಲೂ ಅನುಸರಿಸುವುದರಿಂದ ಜೀವನಕ್ಕೊಂದು ಕಳೆ. ಅದೇ ನೇರಕ್ಕೆ ಸಂಸ್ಕೃತಿಯ ಬೆಳವಣಿಗೆ. ಇಂತಹ ಜೀವನ ಎಲ್ಲಿರುತ್ತದೆ ಇಲ್ಲಿ? ಹಲೋ ಡ್ಯಾಡ್! ಹಲೋ ಮಮ್! ಎನ್ನಿಸುಕೊಳ್ಳುವುದರಲ್ಲೇ ಸಂತೃಪ್ತಿ ಪಟ್ಟುಕೊಳ್ಳಬೇಕು. ನಿಮ್ಮ ತಂದೆ ತಾಯಿಗಳು. ಇಂತಹ ಜೀವನ ಇದ್ದರೂ ಒಂದೇ; ಇಲ್ಲದಿದ್ದರೂ ಒಂದೇ!"

"ಅಂದರೆ....ನಿನ್ನ ವಿಚಾರಧಾರೆಯನ್ನು ಕೇಳುತ್ತಿದ್ದರೆ ನನಗೊಂದು ಮುನ್ಸೂಚನೆ ಕೊಡುತ್ತಿರುವಂತಿದೆ?"

ಎಂದು ಗಟ್ಟಿಯಾಗಿ ನಕ್ಕುಬಿಟ್ಟೆ. ಅವನೂ ನಗುತ್ತ ಮುಂದುವರೆದ,

"ಹೌದಮ್ಮ ನಾವು ಭಾರತೀಯರು ನಮ್ಮ ಜೀವನ ಒಂದು ನಿರ್ದಿಷ್ಟ ಚೌಕಟ್ಟಿನೊಳಗಿರಬೇಕೆಂಬುದು ನಮ್ಮ ಅಭಿಲಾಷೆ. ಅದರಂತೆಯೇ ನಡವಳಿಕೆ."

"ಹಾಗಾದರೆ...."

ನನ್ನ ಮಾತನ್ನು ಮುಂದುವರಿಸಗೊಡದೆ ಅವನು ಕೇಳಿದ, "ಈಗ ಹೇಳು, ನಿನಗೇನೆನಿಸುತ್ತೆ? ಹೇಗಿರಬೇಕೆಂದು ನಿನ್ನ ಯೋಚನೆ...?"

"ಚೆನ್ನಾಗಿರಬೇಕು.... ಅಂದರೆ ಮನಸ್ಸಿಗೆ ನೆಮ್ಮದಿಯಿರಬೇಕು ಇಷ್ಟು ಮಾತ್ರ ಹೇಳಬಲ್ಲೆ."

"ಅಷ್ಟೇನೆ... ?" ಭಾಸ್ ವ್ಯಂಗ್ಯವಾಗಿ ಕೇಳಿದ.

"ಈಗ ಅದಕ್ಕಿಂತ ಇನ್ನೇನು ಹೇಳಲಾದೀತು ?"

"ಇರಲಿ, ಮುಖ್ಯವಾಗಿ ಸದ್ವರ್ತನೆ ಬೆಳೆಯಬೇಕು."

ಅವನ ವಿಚಾರಧಾರೆ ಒಪ್ಪಿತವಾದರೂ ಏನೋ ಒಂದು ಬಗೆಯ ಕಟ್ಟು ಕಟ್ಟಳೆಯ ಬಿಗಿತವಿದ್ದುದರಿಂದ ನನ್ನ ಮನಸ್ಸಿನ ಮೇಲೆ ಕಳವಳದ ಛಾಯೆ ಸುಳಿದಾಡಿತು. ನಾನು ಆಲೋಚನಾಶೀಲಳಾದೆ. ನನ್ನ ಬಾಯಿಂದ ಮಾತು ಹೊರಡಲಿಲ್ಲ. ಅವನು ನನ್ನ ಮನಃಸ್ಥಿತಿಯನ್ನರಿತು ಮುಗುಳುನಗುತ್ತ ಮುಂದುವರಿದ "ಅಂದರೆ ನಮ್ಮನ್ನು ಕ್ರೂರಿಗಳು ಎಂದೇನೂ ಭಾವಿಸಬಾರದು. ಜೀವನ ಎಂದಮೇಲೆ ನಿಷ್ಠೆ ಇರಲೇಬೇ?ಕಷ್ಟೆ ?" ಒಂದೆರಡುಗಳಿಗೆ ತಡೆದು ಪುನಃ ಮುಂದುವರಿದ "ಇಲ್ಲಿ ಕೇಳು ! ನಮ್ಮ ಧರ್ಮ – ನಮ್ಮ ಸಂಸ್ಕೃತಿಯನ್ನು ಆಳವಾಗಿ ಮನನ ಮಾಡಿದರೆ ಅದರಿಂದ ನಿಮ್ಮ ಧರ್ಮ ನಿಮ್ಮ ಸಂಸ್ಕೃತಿಯನ್ನು ಸುಧಾರಿಸಿಕೊಳ್ಳುವುದು ಸುಲಭ. ಇಂತಹ ಕಾಯಕಲ್ಪ ನಿಮ್ಮ ಸಮಾಜಕ್ಕೆ ಖಂಡಿತ ಬೇಕಾಗಿದೆ."

"ಈ ಬಗೆಯ ಸುಧಾರಣೆ ನಮ್ಮಲ್ಲಿ ಕನಸಿನ ಮಾತು," ಎಂದು ಉದಾಸೀನ ಭಾವ ತಳೆದ ನಾನು ಸ್ವಲ್ಪಹೊತ್ತು ಸುಮ್ಮನಿದ್ದು ಪುನಃ ಗಂಭೀರಭಾವದಿಂದ ಕೇಳಿದೆ "ನಿಮ್ಮಲ್ಲಿ ಜಾತಿಭೇದ, ಅಸ್ಪೃಶ್ಯತೆಗಳು ಈಗಲೂ ರಾಜಾರೋಷವಾಗಿ ತಾಂಡವಾಡುತ್ತಿವೆಯೆಂದು ಕೇಳಿರುವೆ, ಇದಕ್ಕೆ ನೀನೇನು ಹೇಳುತ್ತಿ ?"

"ಆಗಲೇ ಹೇಳಿದೆನಲ್ಲಾ ? ಈ ದೋಷಗಳು ನಮ್ಮ ಗುತ್ತಿಗೆ ಎಂದೇನೂ ಹೇಳುವಂತಿಲ್ಲ. ಜನ ಹಾಗೂ ಇದ್ದಾರೆ; ಹೀಗೂ ಇದ್ದಾರೆ. ಇಲ್ಲಿ ಭಾರತೀಯರ ಬಗ್ಗೆ, ಆಫ್ರಿಕನರ ಬಗ್ಗೆ, ಸ್ಕಾಚ್ ಜನರ ಬಗ್ಗೆ, ಐರಿಷ್ ಜನರ ಬಗ್ಗೆ ಎಷ್ಟೊಂದು ತುಚ್ಛೀಕಾರವಿದೆ ? ಮೂಢನಂಬಿಕೆಗಳು ಇಲ್ಲೇನು ಕಡಿಮೆಯೇ ? ಗೋಲ್ಡನ್ ಸ್ಕ್ವೇರ್‌ನಲ್ಲಿರುವ ಅದ್ಭುತ ಪ್ರಾಸಾದ 'ಸ್ಕ್ವೇರ್ ವ್ಯೂ' ಅನ್ನು ಹಾಂಟೆಡ್‌ಭೂತವಾಸದ್ದು ಎಂದು ಜನ ಹತ್ತು ಹನ್ನೆರಡು ವರ್ಷಗಳಿಂದ ಖಾಲಿ ಬಿಟ್ಟದ್ದನ್ನು ನೀನೂ ಸಹ ಬಲ್ಲೆ. ಕಡೆಗೆ ಆಫ್ರಿಕನ್ನರು ಕೇವಲ ನೂರಿನ್ನೂರು ಪೌಂಡುಗಳಿಗೆ ಇಡೀ ಕಟ್ಟಡವನ್ನು ಬಾಡಿಗೆಗೆ ಹಿಡಿದರು. ಅದರ

ಒಂದೊಂದು ಕೊಠಡಿಗೆ ಅಷ್ಟು ಬಾಡಿಗೆ ಕೊಡಬಹುದಾದಂತಹ ಕಟ್ಟಡ ಅದು. ಅದರಲ್ಲಿ ಅವರು ನಾಲ್ಕಾರು ವರ್ಷ ಯಾವ ತೊಂದರೆಯೂ ಇಲ್ಲದೆ ಇದ್ದ ಮೇಲೆ ಅದು ಜನಾದರಣೀಯವಾದದ್ದು. ಇಂಥಿಂಥ ವಿಚಾರಗಳು ಎಷ್ಟೆಷ್ಟು ಬೆದಕಿದರೆ ಅಷ್ಟಷ್ಟು ಸಿಗುತ್ತವೆ. ಅಂದಮೇಲೆ ತಿಳಿಸಿಕೊಡಬೇಕಾದದ್ದು ಇಂದಿಗೆ ಸಾಕೆ?"

ನಾನು ನಗುಮುಖದಿಂದ ಸುಮ್ಮನಾದೆ.

"ಇದು ಚಳಿದೇಶ, ನೀವು ಬಿಳುಪಾಗಿದ್ದೀರಿ. ನಮ್ಮದು ಉಷ್ಣದೇಶ; ನಾವು ಕಪ್ಪಗಿದ್ದೇವೆ."

ಅವನ ಧ್ವನಿಯಲ್ಲಿ ಗಾಂಭೀರ್ಯವಿತ್ತು. ನಯವಿನಯವಿತ್ತು. ಪ್ರೀತಿಯ ಆಗರವೂ ಇತ್ತು.

ನಾನು ಅಪ್ರತಿಭಳಾದೆ. ನಿಜವಾಗಿಯೂ ಅಂತಹ ವಿಚಾರವಾದಿಯನ್ನು ಈವರೆವಿಗೂ ಕಂಡಿರಲಿಲ್ಲ ಎನಿಸಿತು ನನಗೆ. ಅವನನ್ನು ಹುಬ್ಬೆತ್ತಿ ನೋಡಲೂ ಏನೋ ಒಂದು ಬಗೆಯ ಸಂಕೋಚ. ಆದರೂ, ನನ್ನನ್ನು ನಾನು ಸಾವರಿಸಿ ಕೊಳ್ಳುತ್ತ ಹೇಳಿದೆ "ನಿನ್ನ ವಿಳಾಸ ಗೊತ್ತಿರಲಿಲ್ಲ. ಗೊತ್ತಿದ್ದರೆ ನಾನು ಒಮ್ಮೆಯಾದರೂ ಬಂದು ನಿನ್ನನ್ನು ನೋಡಬಹುದಾಗಿತ್ತು. 'ಪ್ಲೀಸ್ ಪಾರ್ಡನ್ ಮಿ...'

'ಅಂತಹ ಅಗತ್ಯವೇನೂ ಇರಲಿಲ್ಲವಲ್ಲಾ."

"ಬರಿ ಸೌಜನ್ಯಕ್ಕಾಗಿ ಮಾತ್ರ."

"ಅದು ಸಲಿಗೆ ಸ್ನೇಹಿತರಲ್ಲಿ ಮಾತ್ರ. ಸ್ತ್ರೀಪುರುಷರ ಕೂಟದಿಂದ ಮನಸ್ಸು ಕೆಡುತ್ತದೆ."

"ನಾನು ಹೇಗೂ ತನುಮನವನ್ನು ನಿನ್ನಲ್ಲಿ ಸಮರ್ಪಿಸಿಕೊಂಡಿರುವೆ. ನನ್ನ ರಕ್ತವನ್ನೂ ದಾನಮಾಡಿರುವೆ ಅಂತಲೇ ಸ್ವಲ್ಪ ಸಲಿಗೆ."

"ನೀನು ರಕ್ತದಾನ ಮಾಡಿದುದು ನನಗೆ ತಿಳಿದಿದ್ದರೆ ಬೇಡ ಎನ್ನುತಿದ್ದೆ. ಅದು ನನ್ನ ಅರಿವಿಗೆ ಬರುವ ಮೊದಲೇ ಆಗಿಹೋಗಿದೆ. ನಿನ್ನ ಬಯಕೆ ಏನಿದ್ದರೂ ಏಕಪಕ್ಷೀಯವಾದುದು. ಅಂದಮೇಲೆ... ?"

ಹಾ, ನಮ್ಮವರಾಗಿದ್ದರೆ ಇಂತಹ ಅವಕಾಶವನ್ನು ಎಂದೂ ಕೈಬಿಡ್ತು ತ್ತಿರಲಿಲ್ಲ. ತಮ್ಮತಮ್ಮ ವಿಷಯಸುಖವನ್ನು ತೀರಿಸಿಕೊಂಡು ಕೈಬಿಡುವ ಪ್ರಸಂಗ ಬರುತಿತ್ತು. ಹೀಗಾಗಿ ಎಷ್ಟೊಂದು ಅಭೋದ ತರುಣಿಯರು ತಾಯಂದಿರಾಗಿ ಕಷ್ಟಕ್ಕೆ ಸಿಗುತ್ತಾರೆ. ಇದ್ದರೆ ಹೀಗಿರಬೇಕು. ನಮ್ಮವರಿಗೆ ಇದೆಲ್ಲಾ ತಿಳಿಯುವುದೇ ಇಲ್ಲ; ಶುದ್ಧಶುಂಠಿಗಳು. ಭಾರತೀಯರನ್ನೇಕೆ 'ಹೀದನ್ನ'ರು ಎನ್ನುತ್ತಾರೆ ನಮ್ಮವರು ? ಹಾಗೇ ನೋಡಿದರೆ ನಮ್ಮವರೇ ಹೀದನ್ನರು ! ಎದೆಯ ಹಕ್ಕಿ ಚೀರಿತು.

ನನ್ನ ಮನಃಬುದ್ಧಿಗಳು ತರ್ಕದ ಸುಳಿಯಲ್ಲಿ ಸಿಕ್ಕಿರುವಾಗ ಭಾಸ್ ಕೇಳಿದ,

"ಏಕೆ ಸುಮ್ಮನಾಗಿಬಿಟ್ಟೆ ? ನನ್ನ ವಿಚಾರಭಾರೆ ನಿನಗೆ ಹಿಡಿಸಲಿಲ್ಲವೇ ?"

"ಹಿಡಿಸದೆ ಏನು ? ಅದನ್ನೇ ಕುರಿತು ನಾನು ತರ್ಕಿಸುತಿದ್ದೆ. ನಮ್ಮ ವರಾದರೆ ಇಂತಹ ಅವಕಾಶಗಳನ್ನು ಸ್ವಚ್ಛಂದವಾಗಿ ಉಪಯೋಗಿಸಿಕೊಳ್ಳು ತ್ತಾರೆ. ನಿನ್ನ ರೀತಿನೀತಿ ನನಗೆ ನಿಜವಾಗಿಯೂ ಹಿತ. ನನ್ನನ್ನು ದುಸ್ಸಂ ಕಟಕ್ಕೆ ಸಿಕ್ಕಿಸದಂತೆ ನೀನು ವರ್ತಿಸುತ್ತಿರುವೆ. ಇಂತಹವರು ಅಪರೂಪ !"

"ಪರವಾಯಿಲ್ಲ; ನನಗೆ ಒಳ್ಳೆಯ ಸರ್ಟಿಫಿಕೆಟ್ ಕೊಟ್ಟೆ !"

ಭಾಸ್ ನಗುಮುಖದಿಂದ ನುಡಿದ.

ನಾನು ನನ್ನ ಕೈಚೀಲವನ್ನು ತೆಗೆದುಕೊಳ್ಳುತ್ತ ಕೇಳಿವೆ "ನಾನು ನಿನಗಾ ಗಿಯೇ ನನ್ನೆಲ್ಲಾ ಆಶಾಪಾಶಗಳನ್ನು ತೊರೆದು ಕಾದಿರುವೆ. ನೀನು ಮಾತ್ರ ಬಂಡೆಗಲ್ಲಿನಂತೆ ಕಠಿಣವಾಗಿರುವೆ. ನಿನ್ನನ್ನು ಅರ್ಥಮಾಡಿಕೊಳ್ಳುವುದು ನನಗೆ ಈವರೆಗೂ ಆಗಲಿಲ್ಲ. ನೀನೇ ನನಗೆ ಏನಾದರೂ ಹೇಳು !"

"ಏನು ಹೇಳುವುದಕ್ಕೆ ಸಾಧ್ಯ ?"

"ನಿನಗೆ ಹೃದಯವೇ ಇಲ್ಲವೇ ?"

"ಇಲ್ಲ ಎನ್ನುವುದು ಹೇಗೆ ? ಇದೆ, ಆ ವಿಚಾರದಲ್ಲಿ ನಾನು ಏನೂ ಯೋಚಿಸಿಲ್ಲ. ಅವಸರವೇಕೆ ? ಇನ್ನೂ ಬೇಕಾದಷ್ಟು ಕಾಲಾವಕಾಶವಿದೆ."

"ನೀನು ಸ್ವಲ್ಪವಾದರೂ ನಂಬುಗೆಗೆ ಅವಕಾಶಕೊಟ್ಟರೆ ಎಷ್ಟು ದಿನಗಳಾದರೂ ಕಾಯುಬಲ್ಲೆ. ದಯವಿಟ್ಟು ನನ್ನನ್ನು ಹತಾಶಳನ್ನಾಗಿ ಮಾಡಬೇಡ. 'ಐ ವಿಲ್ ಬೆಗ್ ಆಫ್ ಯು...'

ಅವನು ನನ್ನ ಬೆನ್ನನ್ನು ನೇವರಿಸಿ ಅಂದ "ಜೀವನಕ್ಕೆ ಕಾಲಿಡುವ ಮುನ್ನ ಬಹಳವಾಗಿ ಯೋಚಿಸಬೇಕು ಅವಸರವೇಕೆ ?"

"ನನ್ನದು ಅವಸರ ಖಂಡಿತ ಅಲ್ಲ. ಒಂದು ಆಶಾಭಾವನೆ ಅಷ್ಟೆ. ಅದಕ್ಕೆ ಆಸರೆ ಸಿಕ್ಕಿದರೆ ಸಾಕು."

"ಅಷ್ಟೆಲ್ಲಾ ಈಗಲೇ ಏಕೆ ? ಸ್ವಲ್ಪ ನಿಧಾನಿಸು."

ನಾನು ನಿಜವಾಗಿಯೂ ಅತ್ಯಂತ ನಿರಾಶಳಾದೆ. ಹೃದಯಕುಂಡ ಪರಿತಾಪ ಜ್ವಾಲೆಯಿಂದ ಉರಿಯತೊಡಗಿತು. ಎದೆಯ ನೆಲೆಯಲ್ಲಿ ಸಂಜನಿಸಿದ ಕಂಬನಿಗಳು ಜ್ವಾಲೆಯುರಿಯಲ್ಲಿ ಹಿಂಗಿಹೋದುವು. ನಾನು ಖಿನ್ನಮುಖಿಯಾಗಿ ಹೇಳಿದೆ "ದಯವಿಟ್ಟು ಕ್ಷಮಿಸಿಬಿಡು. ನಾನು ಬಾಯಿ ಬಿಟ್ಟು ಕೇಳಿದ್ದು ತಪ್ಪಾಯ್ತು."

"ಇದರಲ್ಲಿ ತಪ್ಪೇನೂ ಇಲ್ಲ. ನೀನು ಇದಕ್ಕಾಗಿ ಚಿಂತಿಸಬೇಡ."

ಇಬ್ಬರೂ ಎದ್ದು ಅಲ್ಲಿಂದ ಎದ್ದು ಹೊರಡುವಾಗ ನಾನು ಕೇಳಿದೆ "ಭಾರತದಿಂದ ನಿನಗೆ ಏನನ್ನು ತರಲಿ ? ನಿನ್ನ ಪ್ರಿಯವಾದ ವಸ್ತು ಯಾವುದು ? ಅದನ್ನಾದರೂ ಹೇಳು."

"ಜನೀ ! ಇದನ್ನು ನೀನೇ ಊಹಿಸಬೇಕಾದುದು. ನಾನು ಹೇಳಿ ಕೇಳಿ ಪಡೆಯುವುದೇನಿದೆ ?"

ನಾನು ನಿರಾಶೆಯ ನಸು ನಕ್ಕು ನುಡಿದೆ "ನಿನ್ನನ್ನು ಈವರೆವಿಗೂ ಅರ್ಥ ಮಾಡಿಕೊಳ್ಳಲಾಗಲಿಲ್ಲ. ಇನ್ನು ನಿನ್ನ ಪ್ರಿಯವಾದ ವಸ್ತುವನ್ನು ಹೇಗೆ ಅರ್ಥ ಮಾಡಿಕೊಳ್ಳಲಿ ?"

"ನಿನಗೆ ಏನು ಪ್ರಿಯವಾಗುವುದೋ ಅದನ್ನೇ ತಾ."

"ಹಾಗೆಂದರೆ ಹೇಗೆ ?"

"ಇರಲಿ, ಇದರಲ್ಲೂ ನಿನ್ನ ಮನೋಧರ್ಮವನ್ನು ಅರಿತುಕೊಳ್ಳ ಬಹುದು !"

"ನೀನು ನನ್ನನ್ನು ಅಗ್ನಿಪರೀಕ್ಷೆಗೆ ಗುರಿ ಮಾಡುತ್ತಿದ್ದಂತೆ ತೋರುತ್ತದೆ !"

"ಅಂತಹದ್ದೇನಿಲ್ಲ. ಹೆದರಿಕೊಳ್ಳಬೇಡ !"

ಅವನು ಹಾಸ್ಯಪ್ರಧಾನವಾಗಿ ನುಡಿದ. ಮುಖ ಅರಳಿದ ಮಂದಾರ ಪುಷ್ಪದಂತಾಯಿತು. ನಾವು ಅಲ್ಲಿಂದ ನಿಧಾನವಾಗಿ ಹೊರಟೆವು. ಸ್ವಲ್ಪ ದೂರ ನಡೆದಮೇಲೆ ನಮ್ಮ ಹಾದಿ ಕವಲೊಡೆಯಿತು. ಅನಂತರ ಭಾರವಾದ ಹೃದಯವನ್ನು ಹೊತ್ತು ನಡೆಯುವಾಗ ಕಾಲುಗಳು ಬಳುಕಿದುವು. ಜನ ಭರಿತವಾದ ಹಾದಿ. ಜನ....ಜನ. ಎಲ್ಲಿ ನೋಡಿದರೂ ಜನ ಸಂತೆಯೇ. ನಾನು ಮಾತ್ರ ಏಕಾಂಗಿ. ಜೊತೆಗಾರರಿಲ್ಲ. ಬಂಧುಗಳೂ ಇಲ್ಲ. ನೀನೇ ಎನ್ನುವವರೂ ಇಲ್ಲ. ಕೈಗಳೆರಡನ್ನೂ ಬೆನ್ನ ಹಿಂದೆಯೇ ಕಟ್ಟಿ ಏಕಾಂಗಿ ಯಾಗಿಯೇ ನಡೆದೆ. ಮನಸ್ಸು ವಿಚಾರವೇದಿಕೆಯನ್ನು ಏರಿ ಅಂಡಲೆಯು ತಿತ್ತು.

...ಒಂದುವೇಳೆ ಸಂಸಾರಿಯಾಗುವುದು ನನ್ನ ಹಣೆಯಲ್ಲಿ ಬರೆಯ ದಿದ್ದರೆ 'ನನ್' ಆಗುವುದು ಖಂಡಿತ. ನಾನು ಪಡೆದುಕೊಂಡ ಸಾಲ ಮೊದಲು ತೀರಲಿ ; ಅನಂತರ ನನ್ನ ಜೀವನವನ್ನು ಯಾವುದಾದರೊಂದು ರೀತಿಯಲ್ಲಿ ಸದ್ವಿನಿಯೋಗ ಮಾಡಿಕೊಳ್ಳಲೇಬೇಕು. ಅದಕ್ಕೆ ಸರಿಯಾದ ಮಾರ್ಗದರ್ಶನ ಭಗವಂತ ನೀಡಲಿ. ಅವನು ಹೇಗೆ ಮಾರ್ಗದರ್ಶನ ಮಾಡುತ್ತಾನೋ ಹಾಗೆ ನಡೆಯುವೆ. ನನ್ನ ಜೀವನ ಅವನಿಗೇ ಮುಡಿಪು. ಇದುವೇ ನನ್ನ ಆತ್ಮ ನಿವೇದನೆ.

o o o o

ಗ್ರೀಷ್ಮ ಋತುವಿನ ಒಂದು ಸುರಮ್ಯವಾದ ಸಂಜೆ.

ಪಶ್ಚಿಮ ದಿಗ್ದೇಶದಲ್ಲಿ ರಂಗುರಂಗಿನ ವರ್ಣಮಾಲೆಯ ಶೋಭೆ.

ಸಂಧ್ಯಾಸೂರ್ಯ ಇಳಿಮುಖನಾಗಿದ್ದಾನೆ. ದಿಸೆಯಿಂದ ದಿಸೆಗೆ ಬೀಡುವ ಶೀತಲ ಶಾಂತ ವಾತಾವರಣ. ನಾನಾ ಪಕ್ಷಿಗಳ ನಾನಾ ರಾಗಗಳ ಸಂಧ್ಯಾಗೀತವು ಮನಮೋಹಕವಾಗಿದೆ. ಅಲ್ಲಲ್ಲಿ ಕಂಡು ಬರುವ ಕ್ಯಾಷಿಯಾ ಮರಗಳು ಪುಷ್ಪಾಲಂಕಾರದಿಂದ ಕೂಡಿ ವೈಭವೋಪೇತವಾಗಿರುವುದನ್ನು ನೋಡುವಾಗ ಕಣ್ಮನಗಳು ಹುಚ್ಚಾಗುತ್ತಿದ್ದುವು. ಪ್ರಾಣವಾಹಿನಿ ಉಕ್ಕೇರುತಿತ್ತು. ಮರದಿಂದ ಮರಕ್ಕೆ ಕಣ್ಣುಗಳು ಮತ್ತ ಭ್ರಮರದಂತೆ ಹರಿದಾಡುತ್ತವೆ. ಹೃದಯವೇ ಕಿತ್ತು ಬಾಯ್ಗೆ ಬಂದಷ್ಟು ಆನಂದ ಸ್ಥಿತಿಯನ್ನು ಅನುಭವಿಸಿ ತಿಳಿಯಬೇಕೇ ಹೊರತು ಮಾತುಗಳಿಂದ ಅಭಿವ್ಯಕ್ತಪಡಿಸುವೆನೆನ್ನುವುದು ವ್ಯರ್ಥ ಪ್ರಯತ್ನವೇ ಸೈ! ದೂರ ಪಯಣದಿಂದ ಆಯಾಸವಾಗಿದ್ದರೂ ಲವಲವಿಕೆಯನ್ನು ಕಳೆದುಕೊಂಡಿರಲಿಲ್ಲ. ನಗರದ ವೈಭವದ ಮೇಲೆ ಅನೇಕರು ಕಣ್ಣಿಟ್ಟಿದ್ದರು. ಬಸ್ಸುಗಳು ನಿಗದಿಯಾದ ನೆಲೆಯನ್ನು ಸೇರುವ ಮುನ್ನ ರಾಜ ಬೀದಿಗಳಲ್ಲಿ ಹರಿಹಾಯ್ದು ಕಣ್ಮನಗಳನ್ನು ತಣಿಸಿದುವು. ನಾವು ಬಿಡಾರ ಹೂಡಿದ್ದು ದೆಹಲಿಯ ವಿಶಾಲವಾದ ಗೆಸ್ಟ್‌ಹೌಸ್, ಅಲ್ಲೇ ಸಮೀಪವಿರುವ ಇನ್ನೆರಡು ಗೆಸ್ಟ್ ಹೌಸ್‌ಗಳಲ್ಲಿ ಪುರುಷವರ್ಗ ಬೀಡು ಬಿಟ್ಟಿತು. ನಮಗೆ ಬೇಕಾದ ಸೌಕರ್ಯವೆಲ್ಲವೂ ಇದ್ದುದರಿಂದ ಯಾವ ಕೊರತೆಯೂ ಇರಲಿಲ್ಲ.

ಗೆಸ್ಟ್‌ಹೌಸಿನ ಸುತ್ತಮುತ್ತಿನ ವಿಶಾಲವಾದ ಅಂಗಣದಲ್ಲಿ ಸುಂದರವಾದ ಹೂದೋಟ. ಮಧ್ಯೆ ಪಚ್ಚೆ ರತ್ನಗಂಬಳಿಯನ್ನು ಮೀರಿಸುವ ಹಸುರು ಹುಲ್ಲಿನ ಹಾಸು. ಎರಡೂ ಬದಿಯಲ್ಲಿ ಗುಲಾಬಿ ಹೂ ಗಿಡಗಳು. ವಿವಿಧ ವರ್ಣದ ಹೂಗಳನ್ನು ನೋಡಿದರೆ ಒಳಹೋಗಲು ಮನಸ್ಸು ಬರುವುದಿಲ್ಲ. ಎಲ್ಲರೂ ತಣ್ಣನೆಯ ಪಾನೀಯ ಮತ್ತು ಕೇಕು ಬಿಸ್ಕತ್ತು ಚಹ ಮುಂತಾದುವುಗಳನ್ನು ಸವಿದು ಗಾಳಿ ಸೇವನೆಗೆ ಹೊರಬಂದು ಅಲ್ಲಲ್ಲೇ ಅಡ್ಡಾಡ ತೊಡಗಿದರು. ನಗರವನ್ನು ಸುತ್ತುವುದಾಗಲೀ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದಾಗಲೀ ಮರುದಿನ ಬೆಳಗಿನಿಂದಲೇ. ಅದುವರೆಗೆ ಸಂಪೂರ್ಣ ವಿಶ್ರಾಂತಿ. ನೀರವ–ನಿಶ್ಶಬ್ದದ ಅಂಚಿನ ಮೇಲೆ ಗೆಸ್ಟ್

ಹೌಸ್ ಸ್ಥಾಪಿತವಾಗಿದ್ದು, ರಸ್ತೆಯ ಸದ್ದುಗದ್ದಲಗಳಿಂದ–ಜನವಾರ್ಧಿಯಿಂದ ದೂರವಿತ್ತು. ನಾನು ತಿರುಗಾಡುತ್ತ ಗೇಟಿನವರೆಗೂ ಹೋಗಿಬಂದೆ. ರಸ್ತೆಯಲ್ಲಿ ಕಾರು ಬಸ್ಸುಗಳ ಓಡಾಟಕ್ಕೆ ಕೊರತೆಯಿರಲಿಲ್ಲ. ವಿಶಾಲವಾದ ರಸ್ತೆಯ ತುಂಬ ಬಗೆಬಗೆಯ ವಾಹನಗಳೇ. ಗೆಸ್ಟ್‌ಹೌಸಿನ ಎದುರಿಗೇ ನಾಲ್ಕಾರು ರಸ್ತೆಗಳು ಕೂಡುವಲ್ಲಿ ವೃತ್ತಾಕಾರದ ಕಟಕಟೆಯ ಮಧ್ಯೆ ಐದು ವಿದ್ಯುತ್ ದೀಪಗಳ ಸ್ತಂಭ. ಅದರ ಸುತ್ತಲೂ ಕಟಕಟೆಯ ರಕ್ಷೆಯಲ್ಲಿ ಸಣ್ಣ ಉದ್ಯಾನ. ಹೂತುಂಬಿದ ಕುಳ್ಳು ಕುಳ್ಳು ಚೆಂಡುಹೂವಿನ ಗಿಡಗಳು. ಬಣ್ಣ ಬಣ್ಣದ ಹೂಗಳ ಜರ್ಬರ ಗಿಡಗಳು. ನೋಡಿದಷ್ಟೂ ಕಣ್ಣಿಗೆ ಹಬ್ಬ. ನಾನು ಸೋಫಿಯೊಂದಿಗೆ ಬಲಭಾಗದ ರಸ್ತೆಯಲ್ಲಿ ತುತ್ತತುದಿಯವರೆಗೂ ನಡೆದು ಹೋದೆ. ಕುಳಿತು ಕುಳಿತು ಜೋಮುಗಟ್ಟಿದ ಕಾಲುಗಳಿಗೆ ಶಕ್ತಿ ಕೂಡಿ ಬಂತು. ಅನಂತರ ಹಿಂದಿರುಗಿ ಗೆಸ್ಟ್‌ಹೌಸಿನ ಉದ್ಯಾನದ ಕಲ್ಲುಬೆಂಚಿನ ಮೇಲೆ ಕುಳಿತುಕೊಂಡಾಗ ಅವಳು ಅಲ್ಲಿನ ವಾತಾವರಣ ಮತ್ತು ಹೂಗಿಡಗಳ ಉದ್ಯಾನದ ಬಗ್ಗೆ ಮೆಚ್ಚಿಗೆ ಸೂಸುತ್ತ ನುಡಿದಳು "ನಾವು ಪ್ರವಾಸ ಹೊರಡದಿದ್ದರೆ ಹಣ ಉಳಿಸಿಕೊಳ್ಳಬಹುದಾಗಿತ್ತು ಅಷ್ಟೆ. ಆದರೆ, ಇಂತಹ ಅಮೋಘವಾದ ಅನುಭವ? ಪ್ಲೇನಾಗಿದ್ದರೆ ನಿಲ್ದಾಣದಿಂದ ನಿಲ್ದಾಣಕ್ಕೆ ಏನೂ ಕಾಣಿಸುತ್ತಿರಲಿಲ್ಲ. ರಸ್ತೆಯ ಪಯಣ ಪ್ರಯಾಸವಾದರೂ ಚಿಂತೆಯಿಲ್ಲ. ಪ್ರವಾಸ ಹಿತಕರ–ಅನುಭವವೇದ್ಯ. ನಿಜಕ್ಕೂ ಆಗಾಗ ಇಂತಹ ಪ್ರವಾಸಗಳನ್ನು ಏರ್ಪಡಿಸಿಕೊಂಡು ದೇಶ ವಿದೇಶಗಳನ್ನು ಸುತ್ತಿ ಸ್ವಂತ ಅನುಭವ ಪಡೆದುಕೊಳ್ಳಬೇಕು. ಅದರಿಂದ ಒಳ್ಳೆಯ ತಿಳುವಳಿಕೆ ಬರುತ್ತದೆ."

ನಾನು ತಲೆದೂಗಿ 'ಹೌದು' ಎಂದು ಸಮ್ಮತಿ ಸೂಚಿಸಿದೆ.

ಅವಳ ಮುಖಬಿಂಬ ಅರಳಿ ಮದನ ಪುಷ್ಪವಾಯಿತು. ತುದಿ ಬೆರಳಿಗೆ ಕರವಸ್ತ್ರವನ್ನು ಸುತ್ತುತ್ತ ಮುಂದುವರಿದಳು "ಭೂತಕಾಲದ ಸರಹದ್ದನ್ನು ದಾಟಿ ವರ್ತಮಾನ ಕಾಲದಲ್ಲಿ ಕಾಲಿರಿಸುವಾಗ ಮೈಯಲ್ಲಿ ಎಂತಹ ಲವಲವಿಕೆ ಇರುವುದೋ ಅಂತಹ ಲವಲವಿಕೆ ಭವಿಷ್ಯತ್ತಿನಲ್ಲಿ ಕಾಲಿರಿಸುವಾಗ ಇರುತ್ತದೆ ಎಂದು ನಂಬಲಾಗುವುದಿಲ್ಲ, ಅಲ್ಲವೇ?"

"ಭವಿಷ್ಯತ್ತು ದೂರ. ಅದು ತಕ್ಷಣಕ್ಕೆ ಕೈಗೆಟುಕುವುದಿಲ್ಲವಾದ್ದರಿಂದ ವರ್ತಮಾನದಲ್ಲೇ ವಿಶ್ವಾಸವಿರುವುದು ಸಹಜ."

"ಭೂತಕಾಲ ವರ್ತಮಾನಕಾಲ ಭವಿಷ್ಯತ್ಕಾಲಗಳು ಕೂಡಿ ಅನಂತಕಾಲ ಎನಿಸಿಕೊಂಡರೂ ಅದರದ್ದೇ ಆದ ಪ್ರತ್ಯೇಕ ಅಸ್ತಿತ್ವವೇನೂ ಇಲ್ಲ. ಆದರೂ ಮುಂದೋಟಕ್ಕೆ ಎಣೆಯೇ ಇಲ್ಲವಲ್ಲ. ದಿನಗಳು ಕೈಗೆಟುಕದಂತೆ ಓಡುತ್ತಿರುತ್ತವೆ. ನಾವು ಇಂಗು ತಿಂದ ಮಂಗನಂತೆ ಕಾಲದಿಂಪ ಕಾಲವನ್ನು ನೋಡಬೇಕು ಅಷ್ಟೆ."

"ಆದರೂ, ಕಾಲಮಾನದೊಂದಿಗೆ ಸ್ಪರ್ಧೆ ಹೂಡುವ ಮನುಷ್ಯನ ರೀತಿಯಂತೂ ವಿಶೇಷವೇ !" ನಾನು ತಲೆದೂಗಿದೆ. ನಮ್ಮ ಬಸ್ಸಿನಲ್ಲಿ ನಲವತ್ತಾರು ಮಂದಿ ಸ್ತ್ರೀಯರು, ಇಬ್ಬರು ಡ್ರೈವರುಗಳು, ಒಬ್ಬ ಕಂಡಕ್ಟರ್. ಆ ಗೆಸ್ಟ್‌ಹೌಸಿನಲ್ಲಿ ಎಷ್ಟೆಷ್ಟು ಬಾತ್‌ರೂಂ-ಗಳಿವೆಯೋ ಅವೆಲ್ಲವನ್ನೂ ಆಕ್ರಮಿಸಿಕೊಂಡಿದ್ದಾರೆ ಸಹ ಪ್ರಯಾಣಿಕರು. ಮಿಂದು ಮಡಿಯಾದವರೆಲ್ಲಾ ಹೊರಬಂದಾಗ ಉಳಿದವರು ಒಳಹೋಗುತ್ತಿದ್ದರು. ನಮ್ಮದಿನ್ನೂ ಸ್ನಾನವಾಗಿರಲಿಲ್ಲ. ಸರದಿಗಾಗಿ ಕಾಯುತ್ತ ನಾನೆಂದೆ "ದೆಹಲಿ ಇಂಡಿಯಾ ದೇಶದ ರಾಜಧಾನಿ. ಎಲ್ಲಾ ರಾಷ್ಟ್ರಗಳ ರಾಯಭಾರ ಕಛೇರಿಗಳೂ ಇಲ್ಲಿವೆ. ನಾವು ಅವನ್ನೆಲ್ಲಾ ಸಂದರ್ಶಿಸಬೇಕು...."

ಅಷ್ಟರಲ್ಲಿ ನಮಗಾಗಿ ಬಂದಿದ್ದ ಗೈಡ್ ಎದುರಾದ. ಅವನು ಮುಖಭಾವದಲ್ಲಿ ಹೊಸಕಳೆಯನ್ನು ಸೂಸಿ ಅಂದ "ನಿಮಗೆ ಇಲ್ಲಿ ಎಲ್ಲಾ ಸೌಕರ್ಯಗಳೂ ಸರಿಯಾಗಿವೆಯಷ್ಟೇ ? ಇನ್ನೂ ಏನಾದರೂ ಅಗತ್ಯವಿದ್ದಲ್ಲಿ ಒದಗಿಸೋಣ."

"ನಾವು ಆಗಲೇ ಕೊಠಡಿಯೆಲ್ಲಾ ನೋಡಿ ಬಂದಾಗಿದೆ. ಎಲ್ಲವೂ ಸಮರ್ಪಕವಾಗಿವೆ. ತುಂಬ ವಂದನೆಗಳು !"

ರಾತ್ರಿಗೆ ಭಾರತೀಯವಾದ ಖಾದ್ಯವಿಶೇಷಕ್ಕೆ ನಮ್ಮವರು ಆರ್ಡರ್ ಕೊಟ್ಟಿದ್ದರು. ಅದರ ರುಚಿ ಭಿನ್ನವಾದುದರಿಂದಲೋ ಏನೋ ಬಲುವಾಗಿ ಹಿಡಿಸಿತು ನಮಗೆ. ಡೈನಿಂಗ್ ಹಾಲ್ ದೊಡ್ಡದು. ನಾವಷ್ಟು ಮಂದಿಯೂ ಒಂದೇ ಬಾರಿಗೆ ಊಟ ಮಾಡಿದ ಮೇಲೆ ಬಹಳ ಹೊತ್ತಿನವರೆಗೆ ಅಂಗಳದಲ್ಲಿ

ಅಡ್ಡಾಡಿ ಮಲಗಲು ಹೋದಾಗ ರಾತ್ರಿ ಹತ್ತು ಗಂಟೆ. ನನಗೂ ಸೋಫಿಗೂ ದೊರಕಿದ್ದು ಒಂದೇ ಕೊಠಡಿ. ನಾವು ಪರಸ್ಪರ 'ಸ್ವೀಟ್ ಡ್ರೀಮ್ಸ್!' ಹೇಳಿ ಹಾಸಿಗೆ ಸೇರಿದೊಡನೆಯೇ ನಿದ್ರೆ ಹತ್ತಿತೋ ಅಥವಾ ಮತ್ತಾವ ಮೋಡಿಯೋ ಮೈಮನಗಳನ್ನು ಹಿಡಿಮುರಿಗಟ್ಟಿತು. ನಾನು ನಿಶ್ಚೇತನಳಂತೆ ಬಿದ್ದುಕೊಂಡೆ.

ದೂರ...ದೂರ ಪಯಣ, ನಾನು-ಭಾಸ್ ! ಭಾಸ್–ನಾನು ! ವೈಭವ ಯುತ ಪಯಣ. ನಿಸರ್ಗಸೌಂದರ್ಯದ ಉಡಿಯಲ್ಲಿ ಅವರ್ಣನೀಯವಾದ ಆತ್ಮೀಯ ವಿಹಾರದಲ್ಲಿ ಸ್ವರ್ಗವಾದರೂ ಏಕೆ ಬೇಕು ? ಎಲ್ಲಿಂದ ಎಲ್ಲಿಯವರೆಗೂ ಹಸುರು ದಟ್ಟೈಸಿದ ವನಧಿಯಲ್ಲಿ ವರ್ಣವರ್ಣದ ಎಳೆದಳಿರಿನ ಆ ಲೋಕ ! ಕಣ್ಣು ಹಾಯಿಸಿದಷ್ಟೂ ಮುಗಿಯದು ; ಆಸ್ವಾದಿಸಿದಷ್ಟೂ ಮನಸ್ಸು ತಣಿಯದು. ಬೆಂಜ್ ಕಾರು ಓಡುತ್ತಲೇ ಇತ್ತು. ಅದಕ್ಕೆ ರಸ್ತೆಯಾಗಲೀ ಮಟ್ಟಸವಾದ ನೆಲವಾಗಲೀ ಬೇಕೇ ಇಲ್ಲ ! ಎಲ್ಲೆಂದರಲ್ಲಿ ಹತ್ತಿ ಇಳಿದು ಪ್ರಕೃತಿಯ ಉಡಿಯಲ್ಲಿ ಪ್ರಕೃತಿಯ ಶಿಶುವಿನಂತೆಯೇ ಓಡುತ್ತಿದೆ ! ಭಾಸ್ ನನ್ನ ಭುಜದ ಮೇಲೆ ಪ್ರೀತ್ಯಾದರದಿಂದ ಕೈಹಾಕಿ ಹೇಳಿದ,

'ನೋಡು ಜಸೀ ! ಕಣ್ತುಂಬ ನೋಡು, ಇದು ಭಾರತ ! ಇಲ್ಲಿಯ ನಿಸರ್ಗ ಸೌಂದರ್ಯವೇ ಸಾರಿ ಹೇಳುತ್ತದೆ ನಮ್ಮ ಸಂಸ್ಕೃತಿಯನ್ನು. ವೇದ ವೇದಾಂತಗಳ ಅದ್ಭುತವಾಹಿನಿ ಹರಿದು ಬಂದುದು ಈ ನಿಸರ್ಗ ಸೌಂದ ರ್ಯದ ಉಡಿಯಿಂದಲೇ. ನೋಡು ! ಇದೇ ಗಂಗೆ ! ಅಂದರೆ ಏನೆಂದು ತಿಳಿ ಯಿತೇ ? ದೇವ ಗಂಗಾನದಿ. ಎಂತೆಂತಹ ಪಾಪಿಗಳೂ ಇದರಲ್ಲಿ ಮಿಂದು ಪುನೀತರಾಗುತ್ತಾರೆ. ಕುಡುಕರು, ಕಟುಕರು, ಕಳ್ಳರು- ದುಷ್ಟರು, ಪಾಪಿ ಗಳು ತಮ್ಮ ತಮ್ಮ ಪಾಪಗಳನ್ನು ಇಲ್ಲಿ ಯಾವತ್ತೂ ತೊಳೆದು ಬಿಡುತ್ತಾರೆ! ಕೇಳು, ನಮ್ಮ ಸಂಸ್ಕೃತಿ, ನಮ್ಮ ಸಂಜೀವನ, ನಮ್ಮ ಸಂಯಾತ್ರೆ ಸದಾ ಊರ್ಧ್ವಗಾಮಿ. ನಾವು ಎಲ್ಲೇ ಇರಲಿ, ನಾವು ಎಲ್ಲೇ ಸಾಯಲಿ ನಮ್ಮ ಸಂಸ್ಕೃತಿಯ ಸರಿಗೆ ಜೀವನ ಚೌಕಟ್ಟನ್ನು ಬಿಗಿಯುತ್ತದೆ. ನಮಗೆ ತಾಯಿ ತಂದೆಯರೆಂದರೆ ದೈವ ಸಮಾನ ! ಅವರ ಕೊನೆಗಾಲದ ಹೊಣೆಗಾರಿಕೆ ನಮ್ಮದೇ.

"ಇನ್ನೂ ಕೇಳು, ನಿಮ್ಮಲ್ಲಿ ಒಂದು ಮಗು ಹುಟ್ಟುವಾಗಲೇ ಸತ್ತಿತು ಎಂಬೋಣ. ಪಾಶ್ಚಿಮಾತ್ಯ ತತ್ವಜ್ಞಾನದ ಪ್ರಕಾರ ಆ ಮಗು ಜಗತ್ತು ಅಂತ್ಯಗೊಳ್ಳುವ ತನಕ ಗೋರಿಯಲ್ಲೇ ಇದ್ದು ಮುಂದೆ ಕೊನೆಯ ದಿನ ದೇವರ ಮುಂದೆ ತನ್ನ ಪಾಪ ಪುಣ್ಯಗಳನ್ನು ಒಪ್ಪಿಸಿ ಸ್ವರ್ಗಕ್ಕೋ ನರಕಕ್ಕೋ ಹೋಗ ಬೇಕು. ಆದರೆ, ಹುಟ್ಟುವಾಗಲೇ ಸತ್ತಿರುವ ಮಗು ಪಾಪಪುಣ್ಯಗಳನ್ನು ಹೇಗೆ ನಿರ್ಣಯಿಸೀತು ? ನಾವು ಹಿಂದೂಗಳು ಅದನ್ನು ನಿರ್ಣಯಿಸುವುದು ಹೀಗೆ:—ಪೂರ್ವಜನ್ಮದ ಕರ್ಮದಿಂದ ಅದು ಹುಟ್ಟುವಾಗಲೇ ಸತ್ತಿತು. ಅದರ ಕರ್ಮಲಾಭ ಅಷ್ಟೆ ಎಂದು. ಇದೇ ಸರಿಯಾದ ಕಲ್ಪನೆ ಎನಿಸುತ್ತೆ ನನಗೆ. ಅಷ್ಟೇ ಅಲ್ಲ, ನಾವು ಜನ್ಮಜನ್ಮಾಂತರಗಳನ್ನು ನಂಬುವವರು. ಅದಕ್ಕನುಗುಣವಾಗಿ ಪೂರ್ವಕರ್ಮ ಸಂಯೋಜನವಶಾತ್ ಹಿಂದಿನ ಜನ್ಮದ ನೆನಪು ಈ ಜನ್ಮದಲ್ಲಿ ಉಂಟಾಗಿರುವ ಅನೇಕ ಉದಾಹರಣೆಗಳು ನಮ್ಮಲ್ಲಿ ಸಿಗುತ್ತವೆ. ತಮಿಳು ನಾಡಿನಲ್ಲಿ ಒಬ್ಬ ಬಾಲಕ ಬೆಂಗಾಲಿಯಲ್ಲಿ ಮಾತಾಡುತ್ತ ತಾನು ಹಿಂದಿನ ಜನ್ಮದಲ್ಲಿ ಬಂಗಾಳದಲ್ಲಿ ಹುಟ್ಟಿ, ಒಂಭತ್ತು ವರ್ಷ ತುಂಬುವ ಮುನ್ನ ಒಂದು ಅಪಘಾತಕ್ಕೀಡಾಗಿ ಪ್ರಾಣತ್ಯಾಗ ಮಾಡಿದು ದರಿಂದ ಈ ನಾಡಿನಲ್ಲಿ ಜನಿಸಿದೆನೆಂದು ಹೇಳುತ್ತಿದ್ದ. ಅವನ ಮನೆಯವ ರಾರಿಗೂ ಬಂಗಾಳಿ ಸುತರಾಂ ಬರುತ್ತಿರಲಿಲ್ಲ. ಇದು ನಮ್ಮ ತತ್ವಕ್ಕನು ಸಾರವಾದ ಉದಾಹರಣೆ..."

ಹಿಂದಿನ ಸೀಟಿನಲ್ಲಿ ಕುಳಿತಿದ್ದ ಮಕ್ಕಳು ತಮ್ಮ ತಮ್ಮೊಳಗೇ ಕಿತ್ತಾಡುತಿದ್ದುದರಿಂದ ಭಾಸ್ ಗದರಿಸಿ ಹೇಳಿದ "ನೀವು ಹೀಗೆ ಜಗಳ ವಾಡುತಿದ್ದರೆ ಇಲ್ಲಿ ಯಾರಾದರೂ ನಕ್ಕಾರು ! ಇದು ಭಾರತ ! ಇಲ್ಲಿ ಪರಸ್ಪರ ಅನ್ಯೋನ್ಯದಿಂದ ಬಾಳುವುದನ್ನು ಕಲಿಯಬೇಕು ; ಸಂಸಾರದಲ್ಲಿ ಹತ್ತಿಪ್ಪತ್ತು ಮಂದಿ ಕೂಡಿ ಬಾಳುವುದನ್ನು ನೋಡಿದರೆ ನೀವು ಆಶ್ಚರ್ಯ ಪಡುತ್ತೀರಿ ! ಅಂತಹ ಪ್ರೇಮದ ಸ್ವಭಾವವಿಲ್ಲದಿದ್ದರೆ ಭ್ರಾತೃಭಾವ ಏನು ಉಳಿಯಿತು ? ಸುಸಂಸ್ಕೃತಿಯಿಂದಲ್ಲವೇ ಈ ಜನೋದ್ಧಾರ ?"

ಆ ಉಪದೇಶ ಅಥವಾ ತತ್ವ ನಿರೂಪಣೆ ಮಕ್ಕಳಿಗೆ ಎಷ್ಟರಮಟ್ಟಿಗೆ ಅರ್ಥವಾಯಿತೋ ಹೇಳಲಾರೆ...ನಾನು ಮೂಕ ಮೌನದಿಂದ ಕೇಳುತ್ತಲಿದ್ದೆ. ಮೈಮನಗಳು ರೋಮ ಹರ್ಷಕವಾಗಿದ್ದುವು.

ಭಾಸ್ ಬ್ರೇಕ್ ಹಾಕಿ ಕಾರನ್ನು ನಿಲ್ಲಿಸಿದಾಗ ನಾನು ಕಣ್ತೆರೆದೆ. ಆದರೆ, ಎಲ್ಲಿಯ ಭಾಸ್ ? ಎಲ್ಲಿಯ ಮಕ್ಕಳು ? ಎಲ್ಲಿಯ ಬೆಂಜ್ ಕಾರು ?

ನಾನು ನಿರಾಸೆಯ ನಿಟ್ಟುಸಿರು ಬಿಟ್ಟರೂ ಮನಸ್ಸು ಪುಳಕಿತ ವಾಯಿತು. ನಾನು ಎದ್ದು ಕುಳಿತು ಕನಸು ನನಸಾಗಲೀ ಎಂದು ಹೃತ್ಪೂರ್ವಕವಾಗಿ ಪ್ರಾರ್ಥಿಸಿದೆ. ಕನಸಿನ ಭ್ರಮೆ ಅಳಿದ ಮೇಲೆ ಹಾಗೇ ಯೋಚಿಸಿದೆ...ಭಾಸ್‌ನ ಬಾಯಿಯಲ್ಲಿ ಇಂತಹದೊಂದು ವಿಚಾರವನ್ನು ಒಮ್ಮೆ ನಾನು ನಿಜವಾಗಿಯೂ ಕೇಳಿದ್ದುಂಟು...ಎಲ್ಲಿ ? ಹಾ...! ಈಗ ನೆನ ಪಾಯಿತು. ಅದೇ ಒಲಂಪಿಯಾ ಹೋಟೆಲಿನಲ್ಲಿ !

ಅನಂತರ ನಿದ್ದೆ ಬಯಸಿದರೂ ಬರಲಿಲ್ಲ. ನೋಟವನ್ನು ಕಿಟಕಿ ಯಲ್ಲಿ ಚೆಲ್ಲಿ ಕೊಟ್ಟೆ. ಇಡೀ ನಗರವೆಲ್ಲಾ ವಿದ್ಯುದ್ದೀಪಗಳಿಂದ ಜಗ ಜಗಿಸುತಿತ್ತು. ಕಣ್ಣ ನೋಟ ಹರಿಯುವವರೆಗೂ ಹಬ್ಬಿತ್ತು ದೆಹಲಿ ನಗರಿ. ಎಲ್ಲಿಂದ ಎಲ್ಲಿಯವರೆಗೂ ನೀರವ, ನಿಶ್ಶಬ್ದ, ನಿಶ್ಪಂದ. ಶೀತಲ ಶಾಂತ ಮಾರುತ ಕಿಟಕಿಯಲ್ಲಿ ನುಗ್ಗಿ ಮುಖ ಮೈಗಳನ್ನು ಮೃದು ಮಧುರ ವಾಗಿ ಮುದ್ದಿಸಿತು. ನಾನು ಸುಖಾನಂದದಿಂದ ಮೈಮರೆತೆ. ಮನಃಪಕ್ಷಿ ಭಾಸ್ಕ್ರಾನನ್ನು ಅರಸಿಕೊಂಡು ಲಂಡನ್ನಿಗೆ ಹಾರಿತು. ಅವನು ಮನಸ್ಸು ಮಾಡುತ್ತಾನೋ ಇಲ್ಲವೋ ಎಂಬ ಯೋಚನೆಯೊಂದಾದರೆ ಅವನ ಹೃದಯ ದಾಳವನ್ನು ಕಂಡುಕೊಳ್ಳಲಾಗಲಿಲ್ಲವಲ್ಲಾ ಎಂಬ ತಳಮಳವೊಂದು ಕಡೆ. ಅವನಿಗೆ ಬಹುಮಾನ ಏನು ತೆಗೆದುಕೊಂಡು ಹೋಗಲಿ ? ಏನಾದರೂ ತೆಗೆದು ಕೊಂಡು ಹೋಗಿ ಹಾಸ್ಯಾಸ್ಪದವಾಗಬಾರದಲ್ಲಾ ಎಂಬ ಯೋಚನೆಯು ಕೂಡ. ಅದೇ ವಿಚಾರದಲ್ಲಿ ಮನವನ್ನು ಹರಿಯಬಿಟ್ಟು ಚಿಂತಾ ಪರ ವಶಳಾದೆ.

ಸೋಫಿ ಸಣ್ಣಗೆ ಗೊರಕೆ ಹೊಡೆಯುತ್ತಿದ್ದಾಳೆ. ಅದೇ ನಿದ್ರೆ ನನ್ನನ್ನು ವಂಚಿಸಿತು. ನೋಟ ಅನಿರೀಕ್ಷಿತವಾಗಿ ಕೈಗಡಿಯಾರದ ಮೇಲೆ ಹೊರಳಿ

ದರೆ ಇನ್ನೂ ಮೂರು ಗಂಟೆ. 'ಅಯ್ಯೋ, ದೇವರೆ! ಬೆಳಗಾಗುವವರೆಗೆ ಹೇಗೆ ಹೊತ್ತು ಕಳೆಯಲಿ?' ಎನಿಸಿತು ನನಗೆ. ಸ್ವಲ್ಪ ಹೊತ್ತು ಕಿಟಕಿಯ ಬಳಿಯಿಂದ ಕದಲದೆ ನಿಂತೆ. ಭಾಸ್ ಚಿತ್ರ ಭಿತ್ತಿಯ ಮೇಲೆ ಮೂಡಿದ. ಅವನ ನಿಲುವು, ಅವನ ಲಕ್ಷಣ. ಅವನ ಉದಾತ್ತ ಭಾವನೆಗಳು ಸ್ವರ್ಗೋಪಮವಾಗಿ ತೋರಿದುವು. ಅವನ ಪ್ರೇಮ ಬಾಂಧವ್ಯವಿಲ್ಲದೆ ಈ ಬದುಕಾದರೂ ಏಕಿರಬೇಕು ಎಂಬ ಪ್ರಶ್ನೆ ಹೃದಯವನ್ನು ಕಾಣದ ಕೈಗಳಿಂದ ಹಿಂಡುತಿತ್ತು. ಆಸೆ–ನಿರಾಸೆಗಳ ಥಾಳಿಯಲ್ಲಿ ಹೃದಯ ದಣಿಯಿತು. ಶೀರ ಬಳಲಿದಂತೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡೆ. ಅನಂತರ ಯಾವಾಗ ನಿದ್ದೆ ಬಂದಿತೋ ಅರಿಯೆ. ಎಚ್ಚರವಾದಾಗ ಭಾರತದ ಸೂರ್ಯ ಕಿರಣಗಳು ಕಿಟಕಿಯಲ್ಲಿ ಇಣುಕುತ್ತಿದ್ದುವು. ಸೋಫಿ ಮುಖ ಮಜ್ಜನ ಮಾಡಿದ್ದಳು. ಅವಳು ನನ್ನನ್ನು ನೋಡಿ ಮುಗುಳು ನಗುತ್ತ "ಏನಮ್ಮಾ; ಒಳ್ಳೆ ನಿದ್ದೆ?"

"ನೀನು ಚೆನ್ನಾಗಿ ನಿದ್ದೆ ಮಾಡಿದ್ದಿ. ನನಗೆ ಮಧ್ಯೆ ಎಚ್ಚರವಾಗಿ ಬಹಳ ಹೊತ್ತು ನಿದ್ದೆ ಬರಲಿಲ್ಲ. ಬೆಳಗಿನ ಝಾವ ನಿದ್ದೆ ಬಂದಿದೆ."

"ಏಳು, ಹೊತ್ತಾಯ್ತು. ನಾವು ಇನ್ನರ್ಧ ಗಂಟೆಯೊಳಗಾಗಿ ಡೈನಿಂಗ್ ಹಾಲ್‌ನಲ್ಲಿರಬೇಕು."

"ಆಗಲಿ" ಎನ್ನುತ್ತ ಸೋಪು ಟವಲ್ಲಿನೊಡನೆ ನಾನು ಶೌಚಗೃಹವನ್ನು ಹೊಕ್ಕಿದೆ.

ಎಲ್ಲರೂ ಪ್ರಾತರ್ವಿಧಿಗಳನ್ನು ಮುಗಿಸಿ ಮಹಡಿಯಿಂದಿಳಿದಾಗ ಗಂಟೆ ಏಳೂವರೆಯಾಗಿತ್ತು. ನಾವು ಎಂಟು ಗಂಟೆಗೇ ನಗರ ದರ್ಶನಕ್ಕೆ ಹೊರಡುವ ಏರ್ಪಾಡು. ತಿಂಡಿಯ ವಿತರಣೆಯಲ್ಲಿ ಎಂಟು ಮಂದಿ ಹುಡುಗಿಯರು ಭಾಗ ವಹಿಸಿದ್ದರು.

"ನಿಮಗೆ ಇದು ಬೇಕೆ? ಈ ಸಿಹಿ ಇಷ್ಟವೇ? ಕಾಫಿ, ಚಹ, ಹಾಲು ಏನು ಬೇಕು?"

ಇಂತಹ ಪ್ರಶ್ನೆಗಳನ್ನು ಮೇಲಿಂದ ಮೇಲೆ ಕೇಳುತ್ತ ಎಲ್ಲರ ಅಗತ್ಯವನ್ನೂ ಸೂಸೂತ್ರವಾಗಿ ಪೂರೈಸಿದರು. ನಾವು ತಿಂಡಿಯನ್ನು ಪೂರೈಸಿ ಹೊರಬಂದಾಗ ಬಸ್ಸುಗಳು ಅಣಿಯಾಗಿದ್ದುವು. ದೂರ ಪಯಣದಿಂದ ಮೆತ್ತಿದ ಧೂಳನ್ನು ತೊಳೆದು ಸ್ವಚ್ಛ ಸ್ನಾನವಾದ ಅದು ಶುದ್ಧಕಾಂತಿಯಿಂದ ಬೆಳಗುತಿತ್ತು. ನಾವು ನಮ್ಮವರಿಗಾಗಿ ಕಾಯುತ್ತ ಹೊರಗಡೆ ಅಡ್ಡಾಡುತ್ತಿರುವಾಗ ಉಳಿದ ಮೂರು ಬಸ್ಸುಗಳೂ ಆಗಮಿಸಿದುವು. ಸರಿ, ನಾವೂ ಹತ್ತಿದ ಮೇಲೆ ನಾಲ್ಕು ಬಸ್ಸುಗಳೂ ಒಟ್ಟಾಗಿ ಹೊರಟವು. ಮುಂದಿನ ಬಸ್ಸಿನಲ್ಲಿ ಗೈಡ್ ಮುಂಡಿಸಿದ್ದ. ದೆಹಲಿಯಲ್ಲಿ ಎಲ್ಲಿ, ಯಾವೆಡೆಗೆ ದೃಷ್ಟಿಯನ್ನು ಹೊರಳಿಸಿದರೂ ಹಸುರು ಹೊತ್ತ ಸಸ್ಯ ದ್ರುಮಗಳು ಸಾಲುಸಾಲಾಗಿ ಗುಂಪುಗುಂಪಾಗಿ ಕಂಡು ಬರುತ್ತವೆ. ಆಧುನಿಕ ಗೃಹ ಶ್ರೇಣಿಗಳು ಮಾತ್ರವಲ್ಲದೆ ಓಬೀರಾಯನ ಕಾಲದ ಹೆಂಚಿನ ಮನೆಗಳಿಗೂ ಗುಡಿಸಲುಗಳಿಗೂ ಕೊರತೆಯಿಲ್ಲ. ದೆಹಲಿ ಗೇಟಿನಿಂದ ಮೂರು ಕಿಲೋಮೀಟರ್ ದೂರದ ಉತ್ತರದಿಕ್ಕಿನಲ್ಲಿ ಮಧುರಾ ರಸ್ತೆಯಲ್ಲಿ ಪುರಾನಕಿಲ ಕೋಟೆ. ಹುಮಾಯೂನ್ ಮತ್ತು ಶೇರ್‌ಶಹರ ಕಾಲದ್ದು. ಅದರ ಮಗ್ಗುಲಿಗೇ ಹೊಂದಿಕೊಂಡಂತೆ ಭೈರವ್ ನಾಥ್ ದೇವಾಲಯ. ಅದು ಸಸ್ಯಸಂಪತ್ತಿನ ಮಧ್ಯೆ ಶೋಭಿಸುವುದೇ ಒಂದು ಚೆಂದ. ಅಲ್ಲಿಂದ ಜೂಯಾಲಜಿಕಲ್ ಗಾರ್ಡನ್ ನೋಡುವಾಗಲೇ ಹೊತ್ತು ನೆತ್ತಿಗೇರಿತ್ತು. ಹುಮಾಯೂನನ ಗೋರಿಯನ್ನು ಸಂದರ್ಶಿಸಿ ಒಬೆರಾಯ್ ಇಂಟರ್‌ನ್ಯಾಶನಲ್ ಹೋಟೆಲಿನಲ್ಲಿ ಮಧ್ಯಾಹ್ನದ ಊಟವನ್ನು ಮುಗಿಸಿ ಒಂದು ಗಂಟೆ ವಿಶ್ರಾಂತಿಯನಂತರ ಸಫ್ದಾರ್ ಜಂಗನ ಗೋರಿಯನ್ನು ನೋಡಿಕೊಂಡು ಅರಬಿಂದೋ ಮಾರ್ಗದ ಮೂಲಕ ಹಾಜ್‌ಖಾಸ್, ಇಂಡಿಯನ್ ಇನ್‌ಸ್ಟ್ಯೂಟ್ ಆಫ್ ಟೆಕ್ನಾಲಜಿ, ಬೇಗಂಪುರಿ ಮಸೀದಿ, ಖಿರ್ಕಿ ಮಸೀದಿ, ಕ್ವಿಲಾರಾಯ್ ಪಿತೋರ, ಕುತುಬ್ ಮಿನಾರ್, ಲಾಲ್‌ಕೋಟೆಗಳನ್ನು ಸಂದರ್ಶಿಸಿ ಅಕ್ಬರ್ ಹೋಟೆಲಿಗೆ ಬಂದು ಚಹ ಮುಗಿಸುವಷ್ಟರಲ್ಲಿ ಐದೂವರೆ ಗಂಟೆ. ಅನಂತರ ಬಿರ್ಲಾಭವನ್, ಲೋಡಿಗೋರಿ ಮತ್ತು ಗಾರ್ಡನ್ ಒಳಗಡೆ ಸುತ್ತು ಹಾಕುವಷ್ಟರಲ್ಲೇ ಕತ್ತಲು ಕವಿಯಿತು.

ಮರುದಿನವೂ ಹೊರಹೊರಟುದುದು ಬೆಳಿಗ್ಗೆ ಎಂಟು ಗಂಟೆಗೆ. ರಾಷ್ಟ್ರಪತಿಭವನ್, ಬುದ್ಧ ಜಯಂತಿ ಪಾರ್ಕ್, ನ್ಯಾಶನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್ಸ್ ಇಷ್ಟನ್ನು ಸಂದರ್ಶಿಸುವಷ್ಟರಲ್ಲೇ ಕಳೆಯಿತು. ಮತ್ತೆ ಮೂರನೇಯ ದಿನವೂ ಇದೇ. ಪಾರ್ಲಿಮೆಂಟ್ ಹೌಸ್, ಗುರುದ್ವಾರ ರಾಕಬ್‌ಗಂಜ್ ಲಕ್ಷ್ಮೀನಾರಾಯಣ ದೇವಸ್ಥಾದ, ರವೀಂದ್ರ ರಂಗಶಾಲೆ, ಕನ್ನಾಟ್ ಪ್ಲೇಸ್ ಸುತ್ತುವುದರಲ್ಲೇ ಕಳೆಯಿತು. ಜಂತರ್‌ಮಂತರ್, ರಾಮಲೀಲಾ ಮೈದಾನ, ರಾಜಘಾಟ್, ಜಾಮಾ ಮಸೀದಿ, ಲಾಲ್ ಕಿಲ, ಗಾಂಧಿ ಮೆಮೋರಿಯಲ್ ಮ್ಯೂಸಿಯಂ, ಅಶೋಕ ಸ್ತಂಭ ಇವಿಷ್ಟು ನಾಲ್ಕನೆಯ ದಿನಕ್ಕೆ. ಹೀಗೆಯೇ ದಿನವೂ ಒಂದಲ್ಲ ಒಂದು ಕಾರ್ಯಕ್ರಮ ಇದ್ದೇ ಇರುತಿತ್ತು. ಗಾಂಧೀಜಿಯವರು ಭಂಗಿ ಕಾಲೋನಿಯಲ್ಲಿ ಅಸ್ಪೃಶ್ಯರೊಂದಿಗೆ ನೆಲೆ ನಿಂತು ಬ್ರಿಟಿಷ್ ಸರಕಾರದೊಂದಿಗೆ ಸಂಧಾನ ನಡೆಸುತಿದ್ದ ತಾಣವನ್ನು ತೋರಿದರು. ಈಗ ಆ ಕಾಲೋನಿ ಸಾಕಷ್ಟು ಸುಧಾರಿಸಿಕೊಂಡಿದೆ. ಜೈನ್ ಮಂದಿರದಲ್ಲಿ ಪಕ್ಷಿಗಳ ಆಸ್ಪತ್ರೆಯಿದ್ದು ಅಲ್ಲಿ ತರಹೆವಾರಿ ಪಕ್ಷಿಗಳಿಗೆ ಚಿಕಿತ್ಸೆ ನೀಡಿ ಅವು ಗುಣಹೊಂದಿದ ನಂತರ ನಗರದ ವಲಯದಿಂದಾಚೆಯ ಸುರಕ್ಷಿತವಾದ ತಾಣಗಳಲ್ಲಿ ಬಿಟ್ಟು ಬಿಡಲಾಗುತ್ತದೆ. ಕೆಲವೊಮ್ಮೆ ಮೊಲಗಳಿಗೂ ಅಲ್ಲಿ ಚಿಕಿತ್ಸೆ ದೊರೆಯುತ್ತೆ. ಅವು ಪಕ್ಷಿಗಳ ಶತ್ರುಗಳಲ್ಲವಾದುದರಿಂದ ಅಲ್ಲಿ ಒಳರೋಗಿಗಳಾಗಿ ಎಷ್ಟೋ ದಿನಗಳು ಇರುತ್ತವೆ. ಇಂತಹ ಒಂದು ಆಸ್ಪತ್ರೆ ಇರುವುದು ಇಂಡಿಯಾ ದೇಶದಲ್ಲಿ ಇದೊಂದೇ.

ನಾವಿಲ್ಲಿ ಕಳೆದುದು ಎಂಟು ದಿನ ಮಾತ್ರ. ಆದರೂ, ದೆಹಲಿಯ ಅರ್ಧಭಾಗವನ್ನು ನೋಡಿದೆವೋ ಇಲ್ಲವೋ ಹೇಳಲಾರೆ. ಮೊಗಲ್ ಸಾಮ್ರಾಜ್ಯದ ಪಳೆಯುಳಿಕೆಗಳಲ್ಲಿ ಕೆಲವಂಶವನ್ನು ಮಾತ್ರ ನೋಡಿದ್ದರೂ ಮನಸ್ಸು ಅಂದಿನ ವೈಭವವನ್ನು ನೆನೆಯುತಿತ್ತು. ಕೆಂಪುಕೋಟೆ, ದಿವಾನ್ ಯಿಯಾಮ್, ಮೋತಿ ಮಸೀದಿ ಮತ್ತು ಮೊಗಲ್ ಗಾರ್ಡನ್‌ಗಳು ಸ್ಮರಣೆಯಲ್ಲಿ ಅಚ್ಚಳಿಯದೆ ಉಳಿಯುವಂತಹ ಸುಂದರ ಸುರಮ್ಯ ಕರಕುಶಲಕಲೆಯ ಸೂಕ್ಷ್ಮಾತಿ ಸೂಕ್ಷ್ಮವೂ ಅತ್ಯಂತ ಗೂಢಾತಿಗೂಢವೂ ಆದ ಚಿತ್ತಾರ ಎನ್ನಬಹುದು. ಕಾಳೀ ದೇವಾಲಯ, ಯೋಗಮಾಯಾ ದೇವಾಲಯ, ಬುದ್ಧ ವಿಹಾರ,

ಸುಪ್ರೀಮ್ ಕೋರ್ಟ್, ರೋಷನಾರ ಗಾರ್ಡನ್, ನಿಕೋಲ್ ಸನ್ ಗಾರ್ಡನ್ ಸೆಂಟ್ರಲ್ ಸೆಕ್ರೆಟರಿಯೆಟ್ ನೋಡಿದ ನಂತರ ಅರ್ಧದಿನ ವಿಶ್ರಾಂತಿ.

ಮರುದಿನ ಬೆಳಿಗ್ಗೆ ಅಲ್ಲಿಂದ ಪ್ರಯಾಣ. ಮೊದಲು ಫತೆಪುರ್ ಸಿಕ್ರಿ. ಅದರ ಸಂದರ್ಶನ ಮುಗಿಯುವ ಹೊತ್ತಿಗೇ ಸೂರ್ಯ ನೆತ್ತಿಯ ಮೇಲಕ್ಕೆ ಏರಿದ್ದ. ವೈಭವೋಪೇತವಾದ ಅರಮನೆಯನ್ನು ನೋಡಿ ಆಗ್ರಾ ಕಡೆ ಹೊರಟವು ಬಸ್ಸುಗಳು. ಅಲ್ಲಿಯ ಪ್ರವಾಸೀ ಮಂದಿರದಲ್ಲಿ ನಮಗೆ ಊಟದ ಏರ್ಪಾಡಾಗಿತ್ತು. ಅಲ್ಲಿಗೆ ತಲುಪಿದ ಮೇಲೆ ಊಟ ಮುಗಿಸಿ ಅಲ್ಪವಿಶ್ರಾಂತಿಯ ನಂತರ ಅಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ಮೊದಲು ಸಂದರ್ಶಿಸಿ ಕೊನೆಯಲ್ಲಿ ತಾಜ್‌ಮಹಲನ್ನು ನೋಡುವುದು ಎಲ್ಲರ ಉದ್ದೇಶ. ಕಾರಣ, ಅಂದು ಪೂರ್ಣಿಮೆ. ತಾಜ್‌ಮಹಲನ್ನು ಪೂರ್ಣ ಚಂದ್ರೋದಯವಾದಾಗ ನೋಡಿದರೆ ಅದರ ನಿಜವಾದ ಸೌಂದರ್ಯವನ್ನು ಕಣ್ತುಂಬ ಕಾಣಬಹುದು ಎಂದು ಗೈಡ್‌ಗಳ ಹೇಳಿಕೆ. ಎಲ್ಲಿಂದ ಎಲ್ಲಿಯವರೆಗೂ ಹಸುರಾಂತ ವನಧಾತ್ರಿಯಲ್ಲಿ ಸರ್ವೇಸಾಮಾನ್ಯವಾದ ಏರುತಗ್ಗುಗಳ ರಸ್ತೆಗಳು, ಎಡಬಲಗಳಲ್ಲಿ ಸಣ್ಣ ದೊಡ್ಡ ಮನೆಗಳು, ನಾಡು ಹೆಂಚಿನ ಮನೆಗಳೂ ಇವೆ. ಕಾಂಕ್ರೀಟಿನ ಮನೆಗಳೂ ಇವೆ. ಆಧುನಿಕತೆ ಹೆಚ್ಚು ಕಾಣಿಸುತ್ತಲೇ ಇಲ್ಲ. ಬಸ್ಸುಗಳು ಊರಿನವಲಯವನ್ನು ದಾಟಿದ ಮೇಲೆ ಮೊಗಲರ ಆಳ್ವಿಕೆಯ ಕುರುಹಾದ ಅರಮನೆಗಳನ್ನೂ ಗೋರಿಗಳನ್ನೂ ಅವುಗಳ ಅದ್ಭುತ ಕರಕುಶಲಕಲೆಯನ್ನೂ ನೋಡಿ ಕಣ್ಮನಗಳನ್ನು ತಣಿಸಿ ಸುಪ್ತ ಮನೋಭಾವಗಳನ್ನು ಹೊಡೆದೆಬ್ಬಿಸಿ ಪ್ರಶ್ನೋತ್ತರ ಮಾಲೆಗಳನ್ನು ಹೆಣೆಯುತ್ತಿರುವಾಗ, ಈ ಎಲ್ಲಾ ಅದ್ಭುತ ಕಲೆಗಳಿಗೆ ಪ್ರತಿದ್ವಂದ್ವಿಯಾಗಿ ಹಿಂದೂಗಳು ನಿರ್ಮಿಸುತ್ತಿರುವ ಇನ್ನೊಂದು ಅದ್ಭುತ ಪ್ರಾಸಾದದ ಕಡೆ ಬಸ್ಸುಗಳು ಹೊರಟವು. ಅದರ ಕರ್ಮಕೌಶಲ್ಯವಂತೂ ಅವರ್ಣನೀಯ. ಅನನ್ಯ ಅನುಪಮ ಸೌಂದರ್ಯರಾಜಿ ! ನವ ನಿರ್ಮಾಣಕ್ಕಾಗಿ ಸಕಲ ಸಿದ್ಧತೆಯನ್ನೂ ಪರಿಪೂರ್ಣಗೊಳಿಸಿ ಅರ್ಧ ಕಟ್ಟುವ ಮೊದಲೇ ಅಸುನೀಗಿದ ನಿರ್ಮಾತೃಗಳ ಗೋರಿಗಳನ್ನೂ ಅಲ್ಲಿಂದ ಸ್ವಲ್ಪ ದೂರದಲ್ಲೇ ನಿರ್ಮಿಸಿದ್ದಾರೆ ಆ ಕಟ್ಟಡದ ಅಂಗಣದಲ್ಲಿ ತರಹೆವಾರಿ ಅಮೃತ ಶಿಲೆಗಳು ಶೇಖರಣೆಯಾಗಿದ್ದು ಅನೇಕವು ಮೇಲಂತಸ್ತಿಗೆ ಜೋಡಿಸಲು ಅಣಿಯಾಗಿದೆ. ರಂಗುರಂಗಿನ

ಅನ್ಪೃತ ಶಿಲೆಗಳಲ್ಲಿ ಮೈಯೊಡೆದ ಹೂಗಿಡ ಬಳ್ಳಿಗಳನ್ನು ನೋಡಿದರೆ ಇವು ಮೂಡಿದುದು ಶಿಲೆಯಮೇಲೋ ಬೆಣ್ಣೆಯ ಮೇಲೋ ಎಂಬ ಆಶ್ಚರ್ಯ ಎಂತಹ ವರಿಗಾದರೂ ಮೂಡೀತು. ಆ ಪುಣ್ಯಶ್ಲೋಕವಾದ ಅ ಕೇಂದ್ರಕ್ಕೆ 'ದರಿಯಾಲ್‌ಬಾಗ್' ಎಂದು ಏಕೆ ಹೆಸರಿಸಿದರೋ ತಿಳಿಯಲಿಲ್ಲ.

ಕೈಗೆಟುಕುವಂತಹ ಆ ಅದ್ಭುತ ಕಲೆಯನ್ನು ನೋಡುತಿದ್ದರೆ ಅಲ್ಲಿಂದ ಕಾಲ್ತೆಗೆಯಲು ಸಾಧ್ಯವಾಗದಷ್ಟು ಮನಃಪ್ರಾಣಗಳು ಉಲ್ಲಾಸಪೂರ್ಣವಾಗಿದ್ದುವು. ನಮ್ಮವರು 'ಎಷ್ಟುರಮ್ಯ ?' ಎಂದು ಬಾರಿ ಬಾರಿಗೂ ಉದ್ಗಾರ ತೆಗೆಯುತ್ತಿದ್ದರೆ ಮುಖಬಿಂಬ ಅರಳಿ ಮಂದಾರ ಪುಷ್ಪವಾಗುತಿದ್ದುವು.

ಇನ್ನೂ ನಿರ್ಮಾಣ ಹಂತದಲ್ಲಿದ್ದ ಆ ಉನ್ನತೋನ್ನತವಾದ ಕರಕುಶಲ ಕಲಾ ಮಂದಿರವನ್ನು ಬಿಟ್ಟು ಹೊರಹೊರಡುವಾಗ ಮತ್ತೆ ಮತ್ತೆ ಹಿಂದಿರುಗಿ ನೋಡುವಂತಾಯಿತು ಕಣ್ಮನಗಳಿಗೆ. ಅಲ್ಲಿಂದ ಸ್ವಲ್ಪ ದೂರದಲ್ಲಿ ಟಾಜ್ ಮಹಲ್ ! ನಾವು ಒಳ ಹೋಗುವುದಕ್ಕೂ ಪೂರ್ವ ದಿಗ್ದೇಶದಲ್ಲಿ ಪೂರ್ಣಿಮೆ ಚಂದ್ರಮ ಉದಯಮಾನವನ್ನು ಆಚರಿಸುವುದಕ್ಕೂ ಸರಿಹೋಯಿತು !

ಓಹ್ ! ನೋಡಬೇಕು ಆ ಅತ್ಯದ್ಭುತ ಅಮೃತ ಲೋಕವನ್ನು ! ಒಂದಲ್ಲ ಹತ್ತುಕಣ್ಣುಗಳಿದ್ದರೂ ಸಾಲದು. ನಿರ್ಮಲವಾದ ನೀಲಾಕಾಶ. ಪೂರ್ಣಿಮೆ ಚಂದ್ರಮ ಸ್ವಲ್ಪಸ್ವಲ್ಪವಾಗಿ ಮೇಲೇಳುತಿದ್ದಾನೆ. ಹೊಂಗಾಂತಿ ದಟ್ಟವಾಗಿ ತಾಜ್‌ಮಹಲಿಗೆ ಮುದ್ದಿಟ್ಟಾಗ ಹೇಳುವುದೇನು ? ಹೃದಯವೇ ಕಿತ್ತು ಬಾಯಿಗೆ ಬರುವಂತಹ ಆನಂದಾಶ್ಚರ್ಯಗಳ ಮಧುರ ಸನ್ನಿವೇಶ ! ಹೆಬ್ಬಾಗಿಲು ದಾಟದ ನಮ್ಮವರು ಹೆಜ್ಜೆ ಕೀಳದೆ ಮಂತ್ರಮುಗ್ಧರಾಗಿ ನಿಂತು ಬಿಟ್ಟರು ! ಯಾವ ಗೋಪುರವನ್ನು ದೂರದಿಂದ ಕಂಡಾಗ ಸರ್ವೇಸಾಮಾನ್ಯ ಎಂದುಕೊಂಡಿದ್ದೆವೋ ಅದು ಕಣ್ಮುಂದೆ ಪ್ರತ್ಯಕ್ಷವಾದಾಗ ಜಗತ್ತಿನ ಒಂದು ಮಹಾ ಅದ್ಭುತವೇ ಹೌದು ! ಬಹುಶಃ ಕೆಲವಾರು ನಿಮಿಷ ನಿಂತಲ್ಲೇ ನಿಂತು ನೋಡುತ್ತಲೇ ಇದ್ದ ಜನಕ್ಕೆ ಮೈಯರಿವು ಮೂಡಲಿಲ್ಲವೇನೋ, ಯಮುನಾ ತೀರದ ಅಮೋಘ ವೈಭವದ ಆಕರ್ಷಣೆಯಲ್ಲಿ !

ಅನಂತರ ಎಲ್ಲರೂ ಒಂದೇ ಬಾರಿಗೆ ಮುಂಬಾಗಿಲ ಬಳಿಯಿಂದ ಮಹಲಿನ ವೇದಿಕೆಯ ಕಡೆಗೆ ಹೋಗಿ ಒಳಹೊರಗೆಲ್ಲಾ ಸುತ್ತಿದ ಮೇಲೆ ಸುತ್ತು ಹಾಕುವಾಗ ಮನಃಪ್ರಾಣಗಳು ಸುಖಾನಂದದಿಂದ ಮಿಡಿದುವು. ಮೌನಗತಿಯಲ್ಲಿ ಆಸಂದಿಸಿತು ಹೃದಯ. ಮುಮ್ತಾಜ್ ಸತ್ತು ಸ್ವರ್ಗವೇರಿ ಎಷ್ಟು ಕಾಲವ್ಯಾಗಿದೆ ? ಆದರೂ, ಆಕೆಯ ಪಾರ್ಥಿವ ಸಂಪತ್ತಿಗೆ ಇಂತಹ ಅಮೋಘವಾದ ಅಮೃತಮಂದಿರ ! ಯಮುನಾ ನದಿಯ ಜುಳು ಜುಳು ಮಂಜುಳ ಗಾನದ ಸಾಂತ್ವನ ! ನಿಜವಾಗಿಯೂ ಆಕೆ ಸೌಭಾಗ್ಯವತಿ ! ಪುಣ್ಯವತಿ !

ಕತ್ತಲು ಕವಿಯುವವರೆಗೂ ನಾವು ಅಲ್ಲಿಂದ ಕದಲಲಿಲ್ಲ. ಅನಂತರ ಚಂದ್ರಸುಧಾಜ್ಯೋತ್ಸ್ನೆಯ ವೈಭವದಲ್ಲಿ ಕಂಗೊಳಿಸುವ ತಾಜ್‌ಮಹಲಿನ ಅಂದವೇ ಬೇರೆ. ಹಗಲಿನ ಬೆಳಕಿನಲ್ಲಿ ಬೆಳಗುತಿದ್ದ ರೀತಿಯೇ ಬೇರೆ. ಆ ಆನಂದಮಯ ಲೋಕವನ್ನು ಕಣ್ತುಂಬ ನೋಡಿ ಸವಿದು ಮೈದುಂಬಿದ ಮೇಲೆಯೇ ನಾವು ಅಲ್ಲಿಂದ ಹೊರಟದ್ದು. ಯಮುನೆಯ ಮೇಲೆ ತೀಡಿಬರುವ ತಂಗಾಳಿ ಮೈಮುದ್ದಿಸಿ ಬೀಳ್ಕೊಟ್ಟಿತು.

ಮುಖ್ಯವಾಗಿ ಅಲ್ಲಲ್ಲಿ ಅನೇಕ ದೇವಾಲಯಗಳನ್ನು ಸಂದರ್ಶಿಸುವ ಸಂದರ್ಭದಲ್ಲಿ ಸ್ಥಳೀಕರ ಭಕ್ತಿಯ ಹಾವಭಾವಗಳನ್ನು ನಾನು ಸೂಕ್ಷ್ಮವಾಗಿ ಗಮನಿಸುತಿದ್ದೆ. ನಾನು ಟೆಂಪಲ್ಸ್ ಆಫ್ ಇಂಡಿಯಾ ಪುಸ್ತಕವನ್ನು ನನ್ನೊಂದಿಗೆ ತಂದಿದ್ದುದರಿಂದ ಅನೇಕ ದೇವಾಲಯಗಳನ್ನು ಸಂದರ್ಶಿಸುವುದು ಸುಲಭವಾಯಿತು. ಹಾಗೆ ಕಾಶಿಯಲ್ಲಿ ವಿಶ್ವೇಶ್ವರ ದೇವಾಲಯವನ್ನು ಸಂದರ್ಶಿಸಿ ಹೊರಬಂದಾಗ ಅನೇಕ ಭಾರತೀಯ ಭಕ್ತರು ಪ್ರಸಾದ ರೂಪವಾದ ಕುಂಕುಮ, ಒಣಹೂಗಳು, ಲೋಹದ ಸಣ್ಣ ಸಣ್ಣ ಚೊಂಬುಗಳನಲ್ಲಿ ನೀರು ತುಂಬಿ ಸೀಲುಮಾಡಿದ ತೀರ್ಥವನ್ನು ಸಂಗ್ರಹಿಸುತಿದ್ದುದನ್ನು ಕಂಡು ಸಖೇದಾಶ್ಚರ್ಯದಿಂದ ಕೇಳಿದೆ " ಇದನ್ನೆಲ್ಲಾ ಏಕೆ ಸಂಗ್ರಹಿಸುತ್ತೀರಿ ?"

"ಇದು ಪವಿತ್ರ ಗಂಗಾಜಲ. ಇದೇ ತೀರ್ಥ. ಮನೆಯಲ್ಲಿಟ್ಟು ಪೂಜಿಸುತ್ತೇವೆ. ಕೊನೆಗಾಲದಲ್ಲಿ ಬಾಯಿಗೆ ಬಿಡುವುದೂ ಇದನ್ನೇ. ಇದರ

ಸ್ನಾನಪಾನಗಳಿಂದ ಎಂತಹ ಪಾಪಿಗಳೂ ಪುನೀತರಾಗುತ್ತಾರೆ. ಭಾರತೀಯ ರಿಗೆ ಇದು ಪವಿತ್ರ!

ಆ ಮಾತು ಕೇಳಿ ನನ್ನ ಮನಸ್ಸು ಭಾಸ್ವಾನ್ ಸುತ್ತಮುತ್ತ ಹರಿದಾ ಡಿತು. ಅವನಿಗೆ ಬಹುಮಾನವಾಗಿ ಇದನ್ನೇ ಏಕೆ ತೆಗೆದುಕೊಳ್ಳಬಾರದು? ಎಂಬ ಪ್ರಶ್ನೆ ನಿಮಿರಿ ನಿಂತಿತು ಮನದಲೆಯಲ್ಲಿ. ನಾನು ಸ್ವಲ್ಪ ಹೊತ್ತು ಯೋಚಿಸಿ ಆ ಪವಿತ್ರ ವಸ್ತುಗಳನ್ನು ಸಂಗ್ರಹಿಸಿಕೊಂಡೆ. ಬಳಿಯಲ್ಲಿದ್ದ ಮಿಸೆಸ್ ಜಾರ್ಜ್ ಟೇಲರ್ ಕೇಳಿದಳು "ಇವೇಕೆ ನಿನಗೆ?"

"ಪವಿತ್ರ ವಸ್ತುಗಳು ಎನ್ನುತ್ತಾರೆ. ಆದರಿಂದ ತೆಗೆದುಕೊಂಡೆ."

ಅವಳು ಕುಂಕುಮದ ಪಟ್ಟಣವನ್ನು ಬಿಚ್ಚಿ ನೋಡಿದಳು. ಅದರಲ್ಲಿ ಕೆಲವು ಅಕ್ಕಿಕಾಳುಗಳೂ ಇದ್ದುವು. ಆಗ ಜಾರ್ಜ್ ಟೇಲರ್ ಭಕ್ತಳನ್ನು ಕೇಳಿ ದಳು "ಇವೇಕೆ ಇದರಲ್ಲಿ?"

"ಅಕ್ಷತೆ ಕಾಳು. ನಾವು ಮದುವೆ ಮುಂಜಿ ಮುಂತಾದ ಶುಭ ಕಾರ್ಯ ಗಳಲ್ಲಿ ಅಕ್ಷತೆಕಾಳನ್ನು ತಲೆಯಮೇಲೆ ತಳೆದು ಆಶೀರ್ವದಿಸುತ್ತೇವೆ. ಕುಂಕುಮ ಹಣೆಯಲ್ಲಿ ಧರಿಸುವ ಮಂಗಳ ದ್ರವ್ಯ. ಈ ಹೂಗಳು ದೇವರಿಗೆ ಪೂಜಿಸಿದವುಗಳಾದುದರಿಂದ 'ಪ್ರಸಾದ' ಎನಿಸುತ್ತವೆ. ಇದರಿಂದ ರೋಗ ನಿವಾರಣೆಯಾಗುತ್ತದೆ. ಮಾನಸಿಕ ನೆಮ್ಮದಿಯೂ ಲಭಿಸುತ್ತದೆ. ನಾವು ದೇವರಿಗೆ ಹರಕೆ ಹೊತ್ತು ಕೆಲಸಕಾರ್ಯಗಳಲ್ಲಿ ಜಯಶಾಲಿಗಳಾಗುತ್ತೇವೆ. ಒಟ್ಟಿನಲ್ಲಿ ನಂಬಿಕೆ-ಭಕ್ತಿ ಮುಖ್ಯ."

ಅವರು ಪ್ರಸಾದವನ್ನು ಕಣ್ಣುಗಳಿಗೊತ್ತಿಕೊಂಡು ತಟ್ಟೆಯಲ್ಲಿಟ್ಟು ಕೊಂಡರು.

ಅವರ ರೀತಿಯನ್ನು ನೋಡಿ ನಾನು ವಿಚಾರ ಪರವಶಳಾದೆ.

ಗಗನ ರಂಗದಲ್ಲಿ ಗುಡುಗುಮಿಂಚುಗಳು ಅಬ್ಬರಿಸುತಿದ್ದುವು. ಬಿರು ಗಾಳಿ ಕ್ಷಣ ಕ್ಷಣಕ್ಕೂ ಬಿರುಸಾಗುತಿತ್ತು. ಸ್ವಲ್ಪ ಹೊತ್ತಿನೊಳಗಾಗಿ ಭೀಕರ ಮಳೆಗಾಳಿಯ ಕಾಳಗ ಆರಂಭವಾಯಿತು. ನಾನು ಇಷ್ಟೊಂದು ಭೀಕರವಾದ

ಮಳೆಗಾಳಿಗಳ ಕಾಳಗಗಳನ್ನು ಕಂಡೇ ಇರಲಿಲ್ಲ. ನಾವು ಬೀಡಿಗೆ ಬರುವುದರೊಳಗಾಗಿ ಸುರಿಯತೊಡಗಿತು ಮಹಾ ಭೈರವ ವರ್ಷ. ಹಾದಿ ಬೀದಿಗಳನ್ನು ತೊಳೆದು ಕೆನ್ನೀರು ಕೆಂಪಗೆ ತೊರೆಯಂತೆ ಹರಿದೋಡುವ ಮಳೆಯ ಭೋರ್ಗರೆತವನ್ನು ನೋಡಿ ಮೈ ರೋಮಾಂಚನವಾಯಿತು. ಸಮ ಶೀತೋಷ್ಣವಾದ ಹವಾಮಾನ, ಬಡತನ ಸಿರಿತನಗಳು ಹಾಸುಹೋಕ್ಕಾಗಿರುವ ಹಾಗೂ ಶ್ರುತಿ ಸ್ಮೃತಿ–ಸಂಸ್ಕೃತಿಗಳು ಸಂಮಿಳಿತವಾಗಿರುವ ನೆಲವೆಂದರೆ ಭಾರತವರ್ಷ ಎಂಬುದಕ್ಕೆ ಭಾವಾತ್ಮಕ ಶ್ರದ್ಧೆಯೇ ಸಾಕ್ಷಿಯಾಗಿರಬಹುದೇ ?

ಆತ್ಮಾನಂದ ತುಂಬಿ ಹೊಮ್ಮಿ ನನ್ನ ನರನರಗಳೂ ಉಲ್ಲಸಿತವಾದುವು ಎಂಬುದನ್ನು ಉಸುರುವುದೂ ಸಹ ಆವಶ್ಯಕವೇ. ಪಯಣದ ಹಾದಿಯಲ್ಲಿ ಮೈ ನಜ್ಜುಗುಜ್ಜಾದುದೊಂದಾದರೆ ಬಾರಿಬಾರಿಗೂ ಹಲ್ಕಿರಿಯುವ ಪೀಟರ್‌ನನ್ನು ಬಲವಂತವಾಗಿ ನಿವಾರಿಸುವ ಭಂಗ ಇನ್ನೊಂದು.

— ೦ —

# ಅಧ್ಯಾಯ

೩

ಮೂರು ತಿಂಗಳುಗಳು ಹೇಗೆ ಉರುಳಿದುವೊ, ಪ್ರವಾಸದ ದೀರ್ಘ ಯಾತ್ರೆ ಹೇಗೆ ಮುಗಿಯಿತೋ ದೇವರಿಗೇ ಗೊತ್ತು. ಎಲ್ಲೂ, ಯಾವ ತೊಂದರೆಯೂ ಆಗದಿದ್ದುದೂ ಪುಣ್ಯವೆಂದೇ ಹೇಳಬೇಕು. ನಮ್ಮವರಿಗೆಲ್ಲಾ ಇದರಿಂದ ಬಹಳ ಸಂತೃಪ್ತಿ. ನಾವು ಬಹಳಮಟ್ಟಿಗೆ ಎಲ್ಲಾ ರಾಜ್ಯಗಳನ್ನು ಸುತ್ತಿಯೇ ಬಂದುದು. ಭಾರತೀಯವಾದರೂ ರಾಜ್ಯರಾಜ್ಯಗಳಿಗೂ ಬಹಳ ಭಿನ್ನತೆಯುಂಟು. ಮುಖ್ಯವಾಗಿ ಭಾಷೆಗಳೂ ಬೇರೆ ಬೇರೆ. ಉಡಿಗೆ–ತೊಡಿಗೆಗಳೂ ಬೇರೆ ಬೇರೆ. ಆಚಾರ ವ್ಯವಹಾರಗಳೂ ಬೇರೆ. ಪದ್ಧತಿಯೂ ಬೇರೆ. ಹವಾಮಾನವೂ ಬೇರೆ. ನಮ್ಮವರು ಕೇರಳ, ಮದರಾಸು, ಗೋವಾಗಳಲ್ಲಿ ಪಡೆದುಕೊಂಡ ಆನಂದ ಅಲ್ಪವೇನಲ್ಲ. ಸಾಗರದಲೆಗಳ ವಿರುದ್ಧ ಬಂಡೆದ್ದು ನುಗ್ಗಿ ಈಸಾಡಿ ಗಂಟೆಗಟ್ಟಲೆ ಮೈದಣಿಸಿ ತೀರಕ್ಕೆ ಬಂದಮೇಲೆ ಎಲ್ಲರೂ ಬಂದಿದ್ದಾರೆಯೋ ಇಲ್ಲವೇ ಎಂಬುದಕ್ಕೆ ಜನರನ್ನು ಎಣಿಸುವ ಪ್ರಸಂಗವೂ ಬರುತಿತ್ತು. ಭಾಸ್ ವಿಳಾಸ ಕೊಟ್ಟಿದಿದ್ದರೆ ಅವನ ಕುಟುಂಬವನ್ನು ನೋಡಬಹುದಾಗಿತ್ತು ಎಂಬ ಯೋಚನೆ ಅನೇಕಬಾರಿ ಬಂದಿತು ನಾವು ಬೆಂಗಳೂರಿನಲ್ಲಿರುವಾಗ. ಆದರೆ ಅವನು ಕೊಟ್ಟಿರಲಿಲ್ಲ.

ನಾನು ಮನೆಯನ್ನು ತಲ್ಪಿದುದು ಶನಿವಾರ. ಭಾನುವಾರ ರಜೆಯಿದ್ದುದರಿಂದ ಮರುದಿನವೆಲ್ಲಾ ಹಾಸಿಗೆಯಮೇಲೆ ಬಿದ್ದುಕೊಂಡು ವಿಶ್ರಾಂತಿ ಪಡೆದುಕೊಂಡೆ. ಚಿತ್ತಭಿತ್ತಿಯ ಮೇಲೆ ಕೇರಳದಲ್ಲಿ ಕಣ್ತುಂಬ ನೋಡಿದ ದೋಣಿ ರೇಸ್ ಸುಳಿಸುಳಿದಳಿದಾಗ ಓ ಇದೀಗ ಪ್ರತ್ಯಕ್ಷವಾಗಿ ನೋಡುತ್ತಿರುವೆನೋ ಎಂಬಷ್ಟು ಸ್ಪಷ್ಟ ಎನಿಸಿತು. ಅನಂತರ ಭರತನಾಟ್ಯ, ಕೂಚಿಪುಡಿ, ಮಣಿಪುರಿ ಡ್ಯಾನ್ಸ್‌ಗಳನ್ನು ನೋಡುವ ಅವಕಾಶ ಲಭಿಸಿತ್ತು. ನಾವು ಕೆಲವೊಮ್ಮೆ ನಾಟಕ ಸಿನಿಮಾಗಳನ್ನೂ ನೋಡಿ ಬರುತಿದ್ದುದುಂಟು. ಈ ಎಲ್ಲ ಮನರಂಜನೆಗಳಲ್ಲಿ ಭರತನಾಟ್ಯವೇ ಶ್ರೇಷ್ಠ ಎನಿಸಿತು ನನಗೆ.

೮೦–ಶ್ರದ್ಧಾಲಯ

ನಾವೊಮ್ಮೆ ರಾಮಕೃಷ್ಣ ಮಿಷನ್ನಿನ ಶ್ರದ್ಧಾನಂದಜೀಯವರನ್ನು ಕಲಿಕತ್ತೆಯಲ್ಲಿ ಭೇಟಿ ಮಾಡುವ ಅವಕಾಶ ಲಭಿಸಿತು. ಅವರು ಸಾರ್ವಜನಿಕ ವಾದ ಒಂದು ಸಭೆಯಲ್ಲಿ ಭಾಷಣ ಮಾಡುತ್ತಿದ್ದರು. ನಾವು ಪೆಂಡಾಲಿನ ಬದಿಯಲ್ಲಿ ಬಸ್ಸುಗಳನ್ನು ನಿಲ್ಲಿಸಿ ಅವರ ಸ್ಫೂರ್ತಿಯುತ ಭಾಷಣವನ್ನು ಕೇಳಿ ಮನನ ಮಾಡುವ ಸುಯೋಗ ಒದಗಿತು. ಜನನ ಎಂದರೆ ಏನು ? ಜೀವಿತ ದಲ್ಲಿಯ ಮಾನವನ ಶ್ರೇಯವೇನು ಪ್ರೇಯವೇನು ? ಧ್ಯೇಯವೇನು ? ಮೊದಲಾದ ಜಟಿಲ ವಿಷಯಗಳನ್ನು ತೀರ ಸರಳವೂ ಸರಾಗವೂ ಆದ ಭಾಷೆಯಲ್ಲಿ ವಿವರಿಸುತ್ತಿದ್ದರು. ಅಂತಹ ಅರ್ಥವಾಗದ ಸೂಕ್ಷ್ಮಾತಿಸೂಕ್ಷ್ಮ ವಾದ ರಹಸ್ಯವನ್ನು ಸುಲಭವಾಗಿ ನನ್ನಿಂದ ತಿಳಿದುಕೊಳ್ಳಲು ಸಾಧ್ಯವಾಗ ದಿದ್ದರೂ ಕೇಳುವುದರಲ್ಲಿ ಹಿತವೆನಿಸಿತು. ಎಳೆಯ ಹೃದಯದ ಮೇಲೆ ಮಾಯದ ಮುದ್ರೆಯೊತ್ತುವ ರೀತಿಯಲ್ಲಿ ಪ್ರವಹಿಸುತಿತ್ತು ಅವರ ವಿಚಾರ ಧಾರೆ. ದಿಟ್ಟ ದಾರ್ಶನಿಕರಾಗಿ ಮಹಾನ್ ವಾಗ್ಮಿಗಳಾಗಿ ಸುಪ್ತ ಭಾವನೆ ಗಳನ್ನು ಪ್ರಚೋದಿಸುವ ಅವರ ವಿಚಾರ ವೈಖರಿ ಮನನೀಯವಾಗಿತ್ತು. ನಮ್ಮವರು ತುಟಿಪಿಟಕ್ಕೆನ್ನದೆ ಕೇಳಿದರು. ಕೊನೆಯದಾಗಿ ಅವರೊಂದು ಪ್ರಶ್ನೆ ಹಾಕಿದರು. ಕವಿ ಯಾರಿಗೋಸ್ಕರ ಕವಿತೆ ಬರೆಯುತ್ತಾನೆ ? ದಾರ್ಶ ನಿಕ ಯಾರಿಗೋಸ್ಕರ ರಸಸ್ರಷ್ಟನಾಗುತ್ತಾನೆ ? ಆ ಪ್ರಶ್ನೆಗೆ ಯಾರೂ ಆ ಸಭೆಯಲ್ಲಿ ಉತ್ತರಿಸಲಿಲ್ಲ. ಆಗ ಅವರೇ ತಮ್ಮ ಪ್ರಶ್ನೆಗೆ ಉತ್ತರಿಸಿದರು ಕೂಡ. ಕವಿ ಬರೆಯುವುದು ತನ್ನ ನಿಮಿತ್ತವೂ, ಜನರ ನಿಮಿತ್ತವೂ ಸಹ. ಅಂತೆಯೇ ದಾರ್ಶನಿಕ ತಾನು ಕಲಿತು ಅರಿತುಕೊಳ್ಳುವುದು ಮಾತ್ರವಲ್ಲ; ಇತರರಿಗೂ ಹಂಚುತ್ತಾನೆ. ಜನ ಮನವನ್ನು ತೊಳೆಯುವ ಮಹೋದ್ದೇಶ ದಿಂದ. ಆದರೆ, ಅವನ್ನು ಯಾವ ರೀತಿ ಕೈಕೊಳ್ಳಬೇಕು ಎಂಬುದು ವಿಚಾ ರಾತ್ಮಕನೇ. ಯಾವ ಸ್ರಷ್ಟಾರ ತನ್ನ ಮತಿಯೆತ್ತರಕ್ಕಲ್ಲದೆ ಜನ ನಿಮಿತ್ತ ವಾಗಿಯೇ ಸೃಷ್ಟಿಸಿದರೆ ಅಂತಹ ಸೃಷ್ಟಿ ಅಥವಾ ಕೃತಿಯಲ್ಲಿ ವೈಯುಕ್ತಿಕ ಭಾಷ್ಯ ಲೋಪಿಸಿ ಸಂವೇದನಾತ್ಮಕತೆ ತಗ್ಗಿ ಅದು ಒಂದು ತೀರ ಸಾಮಾನ್ಯ ಸೃಷ್ಟಿ ಯಾಗುತ್ತದೆ. ಅಲ್ಲದೆ ತನ್ನ ಸಲುವಾಗಿ ಮಾತ್ರವೇ ಸೃಷ್ಟಿಸಿದರೆ ಅದು ಸಾಮಾಜಿಕ ಸ್ಪಂದನೆಗೆ ದೂರವಾಗಿ ಕೇವಲ ವೈಯಕ್ತಿಕ ಭೂಷಣವಾದ ರಸ

ಜಗತ್ತಿಗೆ ಸೀಮಿತವಾಗುವುದೇ ವಿನಾ ಜನಸಾಮಾನ್ಯರ ಮನಃಪ್ರಾಣಗಳನ್ನು ತಣಿಸುವುದು ಅಸಾಧ್ಯ; ಆದ್ದರಿಂದ ಸ್ರಷ್ಟಾರರ ರಸಸೃಷ್ಟಿ ಎರಡು ದೆಶೆಗಳಿಗೂ ಸರಿಹೊಂದುವಂತಿರಬೇಕು. ಅಂದರೆ ಅಂದಿಗೂ ಪೂರೈಸಿದಂತಾಗುವುದಿಲ್ಲ, ಕೊರತೆಯ ಘಟಕ.

ಜನರ ಸಲುವಾಗಿ ಎಂದರೆ ಯಾವ ಜನರ ಸಲುವಾಗಿ ಎಂಬ ಪ್ರಶ್ನೆ ಏಳುತ್ತದೆ. ನಮ್ಮ ಸಮಾಜ ಯಾವತ್ತೂ ಒಂದೇ ತೆರನಾಗಿರುವುದಿಲ್ಲ. ಭಿನ್ನ ಭಿನ್ನ ಜೀವಿತಗಳು, ಭಿನ್ನ ಭಿನ್ನ ಮೂಢ ನಂಬಿಕೆಗಳು, ಭಿನ್ನ ಭಿನ್ನ ವ್ಯವಹಾರಗಳು ಇರುವ ಜನ ಬಾಹುಳ್ಯದಲ್ಲಿ ಹೇಗೆ ಯಾವ ರೀತಿಯ ರಸ ಸೃಷ್ಟಣೆ ಆಗಬೇಕು ? ಬೌದ್ಧಿಕ ಸ್ತರವನ್ನು ದೃಷ್ಟಿಯಲ್ಲಿಟ್ಟುಕೊಂಡು ಭಿನ್ನ ಭಿನ್ನ ಸಾಂಸ್ಕೃತಿಕ ಪ್ರಮಾಣಗಳ ವಿಸ್ತಾರವನ್ನು ಗಮನಿಸಿ, ನಿಮ್ನ ಸ್ತರದ ಜೀವನ ಪ್ರಾಕಾರವನ್ನು ಗುರುತಿಸಿ ಅನ್ನ–ವಸ್ತ್ರ–ವಸತಿ–ಸಂಸ್ಕೃತಿ–ತತ್ತ್ವಗಳನ್ನು ಗಮನದಲ್ಲಿರಿಸಿಕೊಂಡೇ ರಸಸೃಷ್ಟಿಯಾಗಬೇಕು. ಅಷ್ಟಲ್ಲದೆ ಹೋದರೆ ರಚಯಿತರ ಶ್ರಮವೂ ವ್ಯರ್ಥ, ಕಾಲವೂ ವ್ಯರ್ಥ...ಆ ವ್ಯಾಖ್ಯಾನದ ಪುನಃಸ್ಮರಣೆಯಿಂದ ಮೈಮನಗಳು ಪುಳಕಿತವಾದುವು. ದೇಹದಾದ್ಯಂತ ಬಿಸಿನೆತ್ತರು ಚಿಲ್ಲನೆ ಹರಿದಾಡಿತು. ಭಾವೋದ್ವೇಗದಿಂದ ನಾನು ಮೈ ಮರೆತೆ. ಕಣ್ಣುಗಳನ್ನು ನಿದ್ದೆಯ ಮಂಪರವೋ ವೈಚಾರಿಕತೆಯ ಮೋಡಿಯೋ ಮತ್ತಾವುದೋ ಮೆಲ್ಲಮೆಲ್ಲನೆ ಆವರಿಸಿತು.

...ಗಂಗಾ ತೀರ. ಜುಳು ಜುಳು ಮಂಜುಳಗಾನಗೈಯುತ್ತ ಮುಂದೆ ಮುಂದೆ ಹರಿದೋಡುವ ಜಲರಾಶಿ. ಜಲ ತರಂಗಗಳನ್ನು ಕಣ್ದಣಿಯೆ ನೋಡಿ ಆನಂದಿಸುವುದರಲ್ಲಿ ಅದೆಷ್ಟು ಆನಂದವೋ, ನಾನು ಭಾಸ್‌ನೊಂದಿಗೆ ತೀರದ ಸೋಪಾನಗಳ ಮೇಲೆ ಕುಳಿತು ಆನಂದಮಗ್ನಳಾಗಿದ್ದೆ. ಭಾಸ್ ತನ್ನ ಭುಜದ ಮೇಲೆ ಕೈಹಾಕಿ ಹೇಳಿದ "ಭಾರತೀಯತೆ ಮತ್ತು ಭಾರತ ಧರ್ಮಗಳೊಂದಿಗೆ ದೇವಗಂಗಾವಾಹಿನಿ ಹಾಸುಹೊಕ್ಕಾಗಿ ಬೆರೆತುಕೊಂಡಿದೆ. ಈ ಬಾಂಧವ್ಯ ಪವಿತ್ರವಾದುದು ಮತ್ತು ಅನುರವಾದಂತಹುದು. ಹಿಂದೂ ಧರ್ಮವನ್ನು ಮೀರಿ ಸುವ ಧರ್ಮ ಇನ್ನೊಂದಿಲ್ಲ. ಕ್ರೈಸ್ತ ಬಾಂಧವರು ಸಾರ್ವಜನಿಕವಾದ ವಿದ್ಯಾ

ಕ್ಷೇತ್ರಗಳಲ್ಲಿ ಆರೋಗ್ಯ ಕ್ಷೇತ್ರಗಳಲ್ಲಿ ಧರ್ಮ ಕ್ಷೇತ್ರಗಳಲ್ಲಿ ಮುನ್ನುಗ್ಗಿ ಕೆಲಸ ಮಾಡುವಂತಹ ಧೈರ್ಯ ಸ್ಥೈರ್ಯ ಆರ್ಥಿಕ ಸಂಪತ್ತು ಸಹಕಾರಗಳ ಆರ್ಜನೆಯಲ್ಲಿ ಮುಂದಿರುವುದರಿಂದ ಸಮಾಜ ಸೇವೆಯೆಂಬುದು ವ್ಯಾಪಕವಾಗಿ ನಡೆಯುತ್ತದೆ. ಅವರ ತ್ಯಾಗ ಪ್ರೇಮಗಳ ಸಂಬಂಧವೂ ಅದ್ಭುತವೇ ಎನ್ನೋಣ. ನಮ್ಮಲ್ಲಿಯ ಜೀವನಬಂಧ, ಧಾರ್ಮಿಕ ಮನೋವೃತ್ತಿ ಮೆಚ್ಚುವಂತಾದ್ದು. ಇದನ್ನು ನೀನು ಯಾವರೀತಿ ಅರ್ಥೈಸುವೆಯೋ ಕಾಣೆ; ನೀನು ಬೆಳೆದ ವಾತಾವರಣವೇ ಬೇರೆ. ಯೋಚಿಸಿ ನೋಡು, ಪರಸ್ಪರ ಪ್ರೇಮಾನುಬಂಧಗಳ ಪರಿಪಾಕದ ಹೊರತು ಜೀವನ ಸುಖಮಯವಾಗುವುದೆಂತು? ನಮ್ಮಲ್ಲಿ ಒಂದು ಹಳೆಯ ಗಾದೆಯಿದೆ "ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು" ಎಂದು. ಜೀವನ ಎಂದೂ ಹಾಗಾಗಬಾರದು. ಸರಿಯಾದ ತಿಳಿವಳಿಕೆ ಇಲ್ಲದೆ ಹೋದರೆ ಜೀವನಬಂಧ ಸಡಿಲಗೊಳ್ಳುವುದು ದಿಟ. ಯಾವತ್ತೂ ನೀತಿಬಾಹಿರತೆ ದೂರೀಕರಿಸಿ ಡಾಂಬಿಕತೆಗೆ ಮರುಳಾಗದೆ ನಡೆಯುವುದೇ ಜೀವನ ಸೌಖ್ಯಕ್ಕೆ ನಾಂದಿ."

"ಒಂದುವೇಳೆ ಸತಿಪತಿಯರಲ್ಲಿ ಹೊಂದಾಣಿಕೆ ಇಲ್ಲದೆ ಹೋದರೂ ನರಳುತ್ತ ಕೊರಗುತ್ತ ಇರಬೇಕೆಂಬುದು ನಿನ್ನಿಚ್ಛೆಯೋ?"

"ಹಾಗಂತಲ್ಲ. ಜೀವನಗೌರವಕ್ಕೋಸ್ಕರ ಮನಃಪ್ರವೃತ್ತಿಯನ್ನು ಸರಿಪಡಿಸುವುದರಲ್ಲೇ ಆತ್ಮ ಸೌಖ್ಯವಿದೆ ಎಂಬುದನ್ನು ಅನುಭವದಿಂದ ತಿಳಿಯಬೇಕೇ ಹೊರತು ಹಾಗೇ ಅರ್ಥವಾಗುವುದಿಲ್ಲ. ನಿಮ್ಮವರು ಅಲ್ಲಿಯತನಕ ಯೋಚಿಸದಿರುವುದರಿಂದಲೇ ಜೀವನದಲ್ಲಿ ಬಿರುಕು; ಆತ್ಮಗೌರವಕ್ಕೆ ಧಕ್ಕೆ."

ನಾನು ಮಾತಾಡಲಿಲ್ಲ ನೋಟವನ್ನು ಜಲತರಂಗಗಳ ಮೇಲೆ ನೆಟ್ಟು ಅದೇ ಯೋಚನೆಯಲ್ಲಿ ಭಾವಾವಿಷ್ಟಳಾದೆ. ಒಂದೆರಡು ಗಳಿಗೆಗಳು ನಿರಾತಂಕವಾಗಿ ಉರುಳಿದುವೇನೋ. ಚಿತ್ತಭಿತ್ತಿಯಲ್ಲಿ ಭಾರತನಾರಿಯ ಜೀವನಪಥ ಸಾಗಿಹೋಯಿತು. ಸ್ವಾತಂತ್ರ್ಯದಲ್ಲಿ ಬದುಕಿ ಪಾರತಂತ್ರ್ಯದಲ್ಲಿಯೇ ನರಳಿ ನಲುಗಿ ಕಣ್ಣೀರ ಕಡಲಲ್ಲಿ ಮುಳುಗಿಹೋಗುವ ಅವಳ ಬಗೆಗೆ ಏನೆನ್ನಬೇಕೋ ಅರ್ಥ

ವಾಗಲಿಲ್ಲ. ಭಾರತ ಕಥೆ ಕಾದಂಬರಿಗಳ ಮೂಲಕ ಅವಳನ್ನು ಅರ್ಥೈಸುವುದಾದರೆ ಆಕೆ ನಿಜವಾಗಿಯೂ ನತದೃಷ್ಟೆ. ನಾನು ಅದೇ ವಿಚಾರಪರವಶತೆಯಲ್ಲಿ ಮಾತಾಡದಿದ್ದುದರಿಂದ ಭಾಸ್ ಏನೆಂದುಕೊಂಡನೋ ಎನಿಸಿ ಅವನತ್ತ ದೃಷ್ಟಿಯನ್ನು ಹೊರಳಿಸಿದೆ. ಆದರೆ ಅವನು ಅಲ್ಲಿರಲಿಲ್ಲ. ಅರೆ, ಎಂತಹ ಆಶ್ಚರ್ಯ ? ಅವನು ಸದ್ದಿಲ್ಲದೆ ಹೋದುದಾದರೂ ಹೇಗೆ ?....ತುಟಿಗಳ ಮೇಲೆ ಬೆರಳಿಟ್ಟು ಆಶ್ಚರ್ಯವಿಸ್ತೃತ ದೃಷ್ಟಿಯನ್ನು ಹೊರಳಿಸಿ ನೋಡಿದೆ. ಎಲ್ಲಿಯೂ ಅವನ ಸುಳಿವಿಲ್ಲ. ನಾನು ಏಕಾಂಗಿ ! ನನಗೆ ನಿಜವಾಗಿಯೂ ಭಯವಾಯಿತು. ಕಣ್ಣುಗಳನ್ನು ಎರಡು ಕೈಗಳಿಂದ ಉಜ್ಜುತ್ತ 'ಭಾಸ್ !' ಎಂದು ಕೂಗಿ ಕರೆದೆ. ತಕ್ಷಣವೇ ನಿದ್ದೆಯ ಮಂಪರ ಹರಿದು ಕನಸು ತುಂಡು ಗಡಿಯಿತು. ನಾನು ಕಣ್ಣುಗಳನ್ನು ಬಿಟ್ಟು ಬಿರಿಬಿರಿ ನೋಡಿದಾಗ ಕಂಡದ್ದು ಕೊಠಡಿ ಮಾತ್ರ.

ಇಂಗ್ಲೆಂಡಿನ ಸೂರ್ಯ ಮೇಲೇರಿ ಜಗಜಗಿಸುತ್ತಿದ್ದ.

ಹಾಸಿಗೆ ಬಿಟ್ಟೆದ್ದು ಮುಖಮಜ್ಜನ ಮಾಡಿದೆ. ಹೊರಗಡೆ ಉರಿಬಿಸಿಲು ರಣರಣಿಸುತಿತ್ತು. ಒಳಹೋಗಿ ಊಟಕ್ಕೆ ಅಣಿಗೊಳಿಸಿದೆ. ಬೆಮೆಲ್ ಇನ್ನೂ ಬಂದಿರಲಿಲ್ಲ. ತಾಯಿ ಓದುತ್ತಿದ್ದ ವೃತ್ತಪತ್ರಿಕೆಯನ್ನು ಬದಿಗಿಟ್ಟು ಬಂದು ಮೇಜಿನ ಮುಂದೆ ಮಂಡಿಸಿದಳು. ಅವಳು ಖಾದ್ಯದ ಬಟ್ಟಲನ್ನು ಬದಿಗೆ ಸರಿಸುತ್ತ ಕೇಳಿದಳು "ಹೇಗಿದೆ ಭಾರತದ ಜೀವನ ಪರಿಸ್ಥಿತಿ ?"

"ಬಡತನವಿದ್ದೇ ಇದೆ. ಅದೇ ನೇರಕ್ಕೆ ಶ್ರೀಮಂತಿಕೆಯೂ ಇದೆ. ನಗರ ಸ್ಥಳಗಳಲ್ಲಿ ಕೊಳಕು ; ಹಳ್ಳಿಗಳಲ್ಲಿ ಬಡತನ ತುಂಬಾ ಇದೆ. ಇದೆಲ್ಲಾ ಸುಧಾರಿಸಿಕೊಳ್ಳಬೇಕಾದರೆ ಒಂದು ಶತಮಾನವೇ ಬೇಕು. ಅಂದಿಂದಿಗೂ ದೇಶ ತೀವ್ರಗತಿಯಲ್ಲಿ ಮುಂದುವರಿಯುತ್ತಿದೆ ಎಂದು ಅಲ್ಲಿನವರು ಹೇಳುತ್ತಾರೆ. "ಸ್ವಾತಂತ್ರ್ಯಪೂರ್ವ ಇಲ್ಲಿ ಏನಿತ್ತು ? ರಾಜಕೀಯ ಕಿತಾಪತಿ ಇಲ್ಲದಿದ್ದಲ್ಲಿ ಇನ್ನೂ ತ್ವರಿತಗತಿಯಲ್ಲಿ ಮುಂದುವರಿಯುತಿತ್ತು ದೇಶ. ಆದರೂ, ಇದು ವರೆಗೆ ಆಗಿರುವ ಪ್ರಗತಿ ಗಮನೀಯವಾದುದು ಎನ್ನುತ್ತಾರೆ ಜನ ಸಾಮಾನ್ಯರು. ಅಂತೂ, ಜಗತ್ತು ಮೆಚ್ಚಿಕೊಳ್ಳುವ ರೀತಿಯಲ್ಲಿ ಮುಂದು ವರಿಯುತ್ತಿದೆ."

"ಬುದ್ಧಿಹೀನರ ಕೈಗೆ ರಾಜ್ಯಾಡಳಿತ ಸಿಕ್ಕಿದರೆ ಹಾಗೆಯೇ. ಅದೇ ಬ್ರಿಟಿಷರ ಕೈಯಲ್ಲಿ ಇನ್ನೂ ಇದ್ದಿದ್ದರೆ ಈವೊತ್ತಿಗೆ ಗುರಿ ಮುಟ್ಟಿರುತ್ತಿದ್ದರು !"

"ಅದು ಹೇಗೆ ಸಾಧ್ಯ ? ಅಲ್ಲಿನ ಹೆಚ್ಚಿನ ಉತ್ಪತ್ತಿ ಇಂಗ್ಲೆಂಡಿಗೆ ತಾನೆ ಬರುತ್ತಿತ್ತು ?"

"ಆದರೂ ಸಹ, ಹದವರಿತು ಖರ್ಚು ಮಾಡುತ್ತಿದ್ದರು ಬಿಡು."

"ಅದು ನಿನ್ನ ಅಭಿಪ್ರಾಯ ಅಷ್ಟೆ. ಅಲ್ಲಿಯ ಉತ್ಪನ್ನ ಇಲ್ಲಿ ವ್ಯಯವಾದರೆ ಅಲ್ಲಿ ಪ್ರಗತಿಯಾಗುವುದು ಹೇಗೆ ? ನೀನೆ ಯೋಚಿಸಿ ನೋಡು !"

"ಹಾಂ, ನೀನು ಮಾತಿನಲ್ಲಿ ಜಾಣೆ ಅಷ್ಟೆ. ಇಂಗ್ಲೀಷರ ಕೈಯಲ್ಲಿ ಅದರ ಆಡಳಿತವಿದ್ದಾಗ ಎಷ್ಟೆಷ್ಟು ರೀತಿಯಲ್ಲಿ ಸುಧಾರಿಸಿದರು ಗೊತ್ತೆ ? ಅದರ ಮೊದಲು ಅಲ್ಲಿ ಕಾನೂನು ಎಂಬುದು ಇತ್ತೆ ? ರೂಕ್ಷ ಜನತೆ ರೂಕ್ಷ ಗತಿಯಲ್ಲಿ ಬಾಳುತ್ತಿದ್ದರು. ಅಲ್ಲಿ ಸರ್ಕಾರ ಹುಟ್ಟಿದ್ದು ಬ್ರಿಟಿಷರಿಂದಲೇ. ಅನಂತರವೇ ಜನ ವಿದ್ಯೆಬುದ್ಧಿ ಕಲಿಯತೊಡಗಿದ್ದು. ನೀನು ನಿನ್ನೆ ಮೊನ್ನೆಯ ಹುಡುಗಿ. ನಿನಗೆ ಅದೆಲ್ಲಾ ಹೇಗೆ ತಿಳಿಯಬೇಕು ?"

ಆ ಮಾತಿಗೆ ಪ್ರತಿಯಾಡಲು ನಾನು ಇಷ್ಟಪಡಲಿಲ್ಲ. ಅವಳು ಮೊದಲಿಂದಲೂ ಹಾಗೆಯೇ. ಹಿಡಿದ ಪಟ್ಟು ಬಿಡುವವಳೇ ಅಲ್ಲ. ಅವಳೊಂದಿಗೆ ವಾದ ಹೂಡುವುದೆಂದರೆ ತಲೆನೋವಿಗೆ ಕಾರಣ. ಆದ್ದರಿಂದ ಮಾತನ್ನು ಅಷ್ಟಕ್ಕೆ ಮುಗಿಸುವುದು ಒಳ್ಳೆಯದು ಎನಿಸಿತು ನನಗೆ. ಆದರೆ, ಅವಳು ತನ್ನ ಒಂಟಿತನದ ಬೇಸರವನ್ನು ಕಳೆಯಲು ಯಾರಾದರೂ ಮಾತಿಗೆ ಸಿಗುತ್ತಾರೆಯೇ ಎಂದು ಕಾದಿರುವಂತೆ ಮತ್ತೆ ಕೇಳಿದಳು "ಭಾರತೀಯರ ಮತಾಂಧತೆಯೇ ಅವರನ್ನು ಅವನತಿಗೆ ತಳ್ಳುತ್ತಿದೆ ಎನ್ನಬಹುದು. ನಾನು ಹಿಂದೂ ಶಾಸ್ತ್ರ ಪುರಾಣಗಳನ್ನು ಸಾಕಷ್ಟು ಓದಿರುವೆ. ಅವೊಂದಕ್ಕೂ ಅರ್ಥವೇ ಇಲ್ಲ. ಬಹುಶಃ ಅವನ್ನು ಬರೆದವರಿಗೂ ಅವು ಅರ್ಥವಾಗಿರಲಾರದು ಎನ್ನಬಹುದು. ಹೇಳಿದ್ದನ್ನೇ ಹೇಳಿಕೊಂಡು ಹೋಗಿರುವುದರಲ್ಲಿ ತಥ್ಯವೇ ಇಲ್ಲ. ಆ ಹೀದನ್ನರಿಗೆ ಮೂರ್ತಿಪೂಜೆಯಲ್ಲಿ ಎಷ್ಟೊಂದು ವಿಶ್ವಾಸವಿದೆ ? ಎಲ್ಲೆಂದರಲ್ಲಿ ಗುಡಿ ಗೋಪುರ ಕಟ್ಟಿಕೊಂಡು ಹಣ ಹರಿಯುವುದರಲ್ಲಿ ನಿಸ್ಸೀಮರು ! ಕೆಲವೊಂದು

ದೇವಾಲಯಗಳ ಉತ್ಪತ್ತಿ ಸರಕಾರದ ಉತ್ಪತ್ತಿಯನ್ನೂ ಮೀರಿದೆಯಂತೆ ! ಎಂತಹ ಮೋಜು ಅಲ್ಲವೇ ?"

"ಇರಬಹುದು.... ಅಂತಹ ಕಡೆಗಳಲ್ಲೆಲ್ಲಾ ಧರ್ಮದರ್ಶಿಗಳಿದ್ದಾರೆ ! ಹಣ ಸದ್ವಿನಿಯೋಗವಾಗುತ್ತದೆ."

"ನೀನು ಆ ದೇವಸ್ಥಾನಗಳನ್ನು ಬಹಳಷ್ಟು ನೋಡಿರಬಹುದಲ್ಲವೇ ?"

"ಹೌದು. ದೊಡ್ಡದೊಡ್ಡ ದೇವಾಲಯಗಳು ಎಲ್ಲೆಲ್ಲಿ ಇವೆಯೋ ಅಲ್ಲಿಗೆ ನಾವು ನಾವೇ ಹುಡುಕಿಕೊಂಡು ಹೋಗಿ ನೋಡಿಕೊಂಡು ಬಂದಿದ್ದೇವೆ. ಕೆಲವು ದೇವಾಲಯಗಳು ಬಲು ದೊಡ್ಡವು. ಇನ್ನೂ ಕೆಲವು ಚಿಕ್ಕವು. ಕೆಲವು ಬಹಳ ಕಲಾತ್ಮಕವಾಗಿವೆ."

"ಅವರು ಅಷ್ಟೊಂದು ಮೂರ್ತಿಗಳನ್ನಿಟ್ಟು ಪೂಜಿಸುವುದನ್ನು ನೀನು ನೋಡಿದೆಯಲ್ಲವೇ ? ಅದರ ಬಗ್ಗೆ ನಿನಗೇನೆನಿಸುತ್ತೆ ?"

"ನಮ್ಮಂತೆಯೇ ಅವರು. ನಾವು ಏಸು ಮತ್ತು ಮೇರಿ ಮಾತೆಯ ಮೂರ್ತಿಗಳನ್ನಿಟ್ಟು ಪೂಜಿಸುವುದಿಲ್ಲವೇ ? ಸರ್ವವ್ಯಾಪಿಯಾದ ಭಗವಾನ್ ಮೂರ್ತಿಗಳಲ್ಲಿ ಇರಕೂಡದು ಎಂದೇನಿಲ್ಲವಲ್ಲ ?"

"ನೀನು ಬಹಳ ಮಾತು ಕಲಿತ ಹುಡುಗಿ ! ನಮ್ಮ ಭಕ್ತಿಗೂ ಅವರ ಪೂಜೆಗೂ ವ್ಯತ್ಯಾಸವಿಲ್ಲವೇ ? ಅಷ್ಟೇ ಅಲ್ಲ, ಆನೆ ಮುಖ, ಕೋತಿ ಮುಖ ಧರಿಸಿದ ದೇವರುಗಳೆಂದರೆ ಎಂತಹ ರೂಕ್ಷತೆ ? ಇಲಿ, ಹಾವು, ಪಶು, ಪಕ್ಷಿಗಳು ಪೂಜಾರ್ಹ ಆ ಹೀದೆನ್ನರಿಗೆ ! ಬೆಂಕಿ, ಗಾಳಿ, ನೀರು, ಭೂಮಿ, ಆಕಾಶ ಎಲ್ಲಾ ದೇವರೇ ! ಅಹಹ ! ಇಂತಹ ಪಶುತ್ವವನ್ನು ಏನೆಂದು ಮೆಚ್ಚು ವೆಯೋ.... ? ದಟ್ ಈಸ್ ರಬ್ಬಿಷ್ !"

ನನಗೆ ಆ ವಿಚಾರದಲ್ಲಿ ಅಷ್ಟು ಅನುಭವವಿರಲಿಲ್ಲವಾದುದರಿಂದ ಸುಮ್ಮ ನಾದೆ. ಆದರೆ, ಅವಳು ಇಷ್ಟೊಂದು ವಿಷಯವನ್ನು ಹೇಗೆ ಸಂಗ್ರಹಿಸಿದ್ದಾಳೋ ಹೊಳೆಯದೆ ನನ್ನ ಕುತೂಹಲ ಕುದಿಯತೊಡಗಿತು. ಹಾಗೆ ಒಂದು ಗಳಿಗೆ

ಯೋಚಿಸಿ ಕೇಳಿದೆ "ನಿನಗೆ ಇದೆಲ್ಲಾ ಹೇಗೆ ತಿಳಿಯಿತು ? ನೀನೆಂದಾದರೂ ಭಾರತ ಪ್ರವಾಸ ಹೋಗಿದ್ದುಂಟೇ ?"

"ಮೈ ಗರ್ಲ್ ! ಪ್ರವಾಸ ಹೋಗಲು ಎಲ್ಲಿಯ ಅವಕಾಶ ? ನಾನು ತಿಳಿದುಕೊಂಡದ್ದು ಬಹಳಷ್ಟು ಪುಸ್ತಕಗಳನ್ನು ಓದಿ. ಇಲ್ಲಿರುವ ಭಾರತೀಯ ರಿಂದ ಕೇಳಿ ತಿಳಿದುದು ಅಷ್ಟೆ."

ನಾನು ಮುಗುಳ್ನಗೆ ಸೂಸಿ ಸುಮ್ಮನಾದೆ.

ಅವಳು ಪುನಃ ಮುಂದುವರಿದಳು "ನಮ್ಮ ಮತ ಸರ್ವಶ್ರೇಷ್ಠ. ನಮ್ಮ ಉಪಾಸನಾ ಮಾರ್ಗ ಸರ್ವೋತ್ತಮ. ಇನ್ನೆಲ್ಲಾ ಕನಿಷ್ಠ. ಅವು ಇರುವು ದಕ್ಕಿಂತ ಇಲ್ಲದಿರುವುದು ಲೇಸು ! ಆಲ್ ಆರ್ ರೂಟ್ ಲೆಸ್ !"

ನಾನು ಅವಾಕ್ಕಾದೆ. ಇನ್ನೂ ಬೆದಕಿ ಮುಂದುವರಿಸುವುದು ಇಷ್ಟವಾಗ ಲಿಲ್ಲ. ಆದರೂ, ಅವಳು ಅಷ್ಟಕ್ಕೆ ಸುಮ್ಮನಾಗದೆ ತಾನೇ ತಾನಾಗಿ ಮುಂದು ವರಿದಳು "ಇಂಗ್ಲೀಷರು ಇಂಡಿಯಾ ದೇಶವನ್ನು ನೂರಾರು ವರ್ಷಗಳ ಕಾಲ ಆಳಿ, ಮೂರ್ಖಜನರಿಗೆ ನಾಗರಿಕತೆಯನ್ನು ಕಲಿಸಿ ಕೋಟ್ಯಾಂತರ ಜನರನ್ನು ಮತಾಂತರಗೊಳಿಸಿ ವಿದ್ಯೆಬುದ್ಧಿ ಕಲಿಸಿ ಜ್ಞಾನಿಗಳನ್ನಾಗಿ ಮಾಡಿದ್ದು ಸಾಮಾ ನ್ಯವಲ್ಲ. ಆ ಕರಿಯರಿಗೆ–ಶತಮೂರ್ಖರಿಗೆ ಕ್ರಿಶ್ಚಿಯನ್ ಮತಸ್ಥರನ್ನಾಗಿ ಮಾಡಿರಬೇಕಾದರೆ ನಮ್ಮವರ ಹೃದಯ ವೈಶಾಲ್ಯತೆ ಎಷ್ಟಿರಬೇಕು ಯೋಚಿಸಿ ನೋಡು !"

"ಮಮ್ಮಿ ! ನೀನು ತಿಳಿದುಕೊಂಡ ವಿಧಾನ ತಪ್ಪು ಎಂದು ನಾನೆಂದರೆ ಸಿಟ್ಟಾಗಲಾರೆಯಷ್ಟೆ ? ಇಲ್ಲಿ ಕೇಳು, ಅಜ್ಞಾನಿಗಳ – ಹಿಂದುಳಿದು ಅಸ್ಪೃಶ್ಯರೆ ನಿಸಿಕೊಂಡವರ ಅಜ್ಞಾನದ ಲಾಭ ಪಡೆದುಕೊಂಡು, ಎಷ್ಟೋ ತಲೆಮಾರುಗ ಳಿಂದ ರಕ್ತಗತವಾಗಿದ್ದ ವ್ಯಾವಹಾರಿಕ ನ್ಯೂನತೆಗಳನ್ನು ಉಪಯೋಗಿಸಿ ಕೊಂಡು ಆ ಜನರನ್ನು ಮತಾಂತರಿಸಿದ್ದು ವಿಶೇಷವಲ್ಲ. ವಿದ್ಯಾವಂತರಲ್ಲಿ ಬ್ರಾಹ್ಮಣಾದಿ ಉತ್ತಮ ತಿಳಿವಳಿಕಸ್ಥರಲ್ಲಿ ಎಷ್ಟೆಷ್ಟು ಮಂದಿಯನ್ನು ಕ್ರಿಶ್ಚಿಯ ನ್ನರಾಗಿ ಮಾಡಲು ಸಾಧ್ಯವಾಯಿತು ? ಅದರಲ್ಲೂ ನಮ್ಮವರದೇ ಆಡಳಿತವಿ

ದ್ದಾಗ ಎಂಬುದನ್ನೂ ಯೋಚಿಸಬೇಕು ! ನಾವು ಗೋವೆಯಲ್ಲಿ ತಂಗಿದ್ದಾಗ ಪೋರ್ಚುಗೀಸರ ವಿಚಾರವನ್ನು ಕೇಳಿ ತಲೆ ತಗ್ಗಿಸುವಂತಾಯಿತು. ಪೋರ್ಚು ಗೀಸರು ಸ್ಥಳೀಕರಿಗೆ ಎಷ್ಟೆಷ್ಟು ಪರಿಯಲ್ಲಿ ಹಿಂಸೆ ಕೊಟ್ಟಿದ್ದಾರೆ ಎಂಬುದನ್ನು ಕೇಳಿ ಪೂರೈಸುವಂತಿಲ್ಲ. ಜನರನ್ನು ಜೀವಂತ ಸುಟ್ಟಿದ್ದಾರೆ. ಚಿತ್ರಹಿಂಸೆ ಗಳಿಂದ, ಪರಮ ವಂಚನೆಗಳಿಂದ ಮತಾಂತರಗೊಳಿಸಿದ್ದಾರೆ. ಗುಡಿಗಳನ್ನು ಒಡೆದಿದ್ದಾರೆ. ತಮ್ಮ ನಾಗರಿಕ ವಲಯಕ್ಕೆ ಸ್ಥಳೀಕರು ಕಾಲಿಟ್ಟಲ್ಲಿ ಗುಂಡಿ ಟ್ಟಿದ್ದಾರೆ. ಈ ಎಲ್ಲಾ ಚಿತ್ರಹಿಂಸೆಗಳನ್ನು ತಡೆಯಲಾರದೆ ಎಷ್ಟೋ ಮಂದಿ ದೇಶವನ್ನು ಬಿಟ್ಟು ನೆರೆ ಪ್ರಾಂತ್ಯಗಳಿಗೆ ಓಡಿಹೋಗಿದ್ದಾರೆ. ಹಾಗೆ ಬಿಟ್ಟೋ ಡಬೇಕಾದರೆ ಅವರಿಗೆ ಎಷ್ಟು ಸಂಕಟವಾಗಿರಲಿಕ್ಕಿಲ್ಲ ? ಅಷ್ಟು ಮಾತ್ರವಲ್ಲ ಪೋರ್ಚುಗೀಸರ ಕರ್ಮಕಾಂಡಕ್ಕೆ ಬೇಸತ್ತು ಎಷ್ಟು ಮಂದಿ ಕ್ರೈಸ್ತರು ಗೋವೆಯನ್ನು ಬಿಡಲಿಲ್ಲ ? ಇದನ್ನೆಲ್ಲಾ ತಿಳಿದುಕೊಂಡು ನೀನು ಆಲೋಚಿಸಿ ದರೆ ನಿನಗೆ ತಿಳಿಯುತ್ತೆ ಇದು ಏಸು ಸ್ವಾಮಿಯ ವಿಜಯವಲ್ಲ, ಸೈತಾನನ ವಿಜಯ ಎಂದು ! ಏಸು ಈ ಕ್ಷುದ್ರ ರೀತಿಯಲ್ಲಿ ತನ್ನ ಅನುಯಾಯಿಗಳನ್ನು ಗಳಿಸಲಿಲ್ಲ !"

"ಇದೇನು ನೀನು ಹೇಳುವುದು ? ಇದು ಕ್ರೈಸ್ತ ಧರ್ಮದ ತಾತ್ಸಾರವಲ್ಲವಷ್ಟೆ ?"

"ಇಲ್ಲ, ಇಲ್ಲ. ನಾನು ಹಾಗೆಂದೂ ಭಾವಿಸುವವಳಲ್ಲ. ಇದ್ದ ವಿಷಯ ತಿಳಿಸಿದೆ ಅಷ್ಟೆ.'

"ಆದರೆ, ಪರಧರ್ಮವನ್ನು ಸಹಿಸಿಕೊಂಡರೆ ಸ್ವಧರ್ಮವನ್ನು ನಿರ್ಲಕ್ಷಿಸಿ ದಂತಾಗಲಿಲ್ಲವೇ ? ಅದರ ಮೂಲಭೂತವಾದ ಶ್ರೇಷ್ಠತೆಗೆ ಕುಂದುಂಟು ಮಾಡಿದಂತಾಗಲಿಲ್ಲವೇ ?"

"ಹಾಗೆಂದು ನಾನು ಖಂಡಿತ ಭಾವಿಸಲಾರೆ. ಮತಾಂಧತೆಯೆಂಬುದು ಮಾನಸಿಕ ದೌರ್ಬಲ್ಯ ಎಂದು ನನ್ನ ಅಭಿಮತ. ಬಹುತೇಕವಾಗಿ ಭಾರತದಲ್ಲಿ ಆಗಿರುವ ಮತಾಂತರಗಳಿಗೆ ದೈವಿಕಕಾರಣ ಕೊಡುವುದಕ್ಕಿಂತ ಲೌಕಿಕ ಮತ್ತು ಭೌತಿಕ ಕಾರಣಕೊಡುವುದು ಸೂಕ್ತ."

“ನೀನು ಬಹಳ ವಾಚಾಳಿ ಎಂಬುದು ನನಗೆ ಗೊತ್ತು ! ಹಿಂದೊಬ್ಬ ಸಂನ್ಯಾಸಿ. ಆವನ ಹೆಸರು ವಿವೇಕಾನಂದ ಎಂದು. ಅವನು ಭಾರತದ ಮಿಷನರಿಗಳ ವಿರುದ್ಧ ದಂಗೆಯೆದ್ದು ಕ್ರೈಸ್ತದೇಶಗಳಿಗೆ ಹೋಗಿ ಹಿಂದೂ ಧರ್ಮವೇ ಸರ್ವೋತ್ತಮವೆಂದು ಡಂಗೂರ ಬಾರಿಸಿ ಜನರನ್ನು ಮರಳು ಮಾಡಿದ. ಈಗಲೂ ಅವನನ್ನು ಅನುಸರಿಸಿ ಸಂನ್ಯಾಸಿಗಳ ದಂಡು ಕ್ರೈಸ್ತ ದೇಶಗಳಿಗೆ ಮೇಲಿಂದಮೇಲೆ ಹೋಗಿ ತಮ್ಮ ಧರ್ಮವೇ ಸರ್ವೋತ್ತಮವೆಂದು ಸಾರುತ್ತಲೇ ಇದೆ. ಆದರೂ ಸಹ, ನಮ್ಮ ಮಿಷನರಿಗಳು ಭಾರತದಾದ್ಯಂತ ತಮ್ಮ ಕೈಲಾದಷ್ಟು ಸೇವೆಯನ್ನು ಈಗಲೂ ಸಲ್ಲಿಸುತ್ತಲೇ ಇದ್ದಾರೆ. ಇದಲ್ಲವೇ ದೊಡ್ಡಗುಣ ?”

“ಮಮ್ಮಾ ! ವಿವೇಕಾನಂದ ಅಲ್ಲಿಗೆ ಹೋಗಿದ್ದು ಜನರನ್ನು ಮತಾಂತರಗೊಳಿಸುವುದಕ್ಕಲ್ಲ ; ಯಾರ್ಯಾರು ಅವರ ರೀತಿನೀತಿಗಳನ್ನು ಒಪ್ಪಿಕೊಂಡರೋ ಅವರೆಲ್ಲ ಅನುಸರಿಸಿದುದು ಸತ್ಯ ವಿಚಾರ. ಅವರು ಭಾರತಕ್ಕೆ ಹೋಗಿ ಅಲ್ಲಿಯ ಜನಜೀವನಲ್ಲಿ ಬೆರೆತು ಸಮರಸವಾದುದು ಎಲ್ಲರಿಗೂ ತಿಳಿದ ವಿಷಯ. ಅದೆಲ್ಲಾ ಬಲವಂತದಿಂದ ಆದ ಮಾಘಸ್ನಾನವಲ್ಲ ; ಆತ್ಮೀಯತೆಯಿಂದ ಉಂಟಾದ ಭಾವ ಬಂಧನ.”

ಅಲ್ಲಿಗೆ ನಮ್ಮ ಸಂಭಾಷಣೆ ಮುಗಿಯಿತು.

ನಾನು ತಟ್ಟೆ ಲೋಟಗಳನ್ನು ತೊಳೆದಿಟ್ಟು ಮೇಜನ್ನು ಒರಸು ವಷ್ಟರೊಳಗಾಗಿ ಬೆಮೆಲ್ ಬಂದಳು. ಅವಳು ಬಂದ ಸ್ವಲ್ಪ ಹೊತ್ತಿನೊಳಗಾಗಿ ಟಾಮಿಯೂ ಬಂದ. ಇಬ್ಬರೂ ಒಟ್ಟು ಊಟ ಮುಗಿಸಿದ ನಂತರ ಬೆಮೆಲ್ ಕೈಬಾಯಿ ಒರಸಿ ಕೂದಲನ್ನು ತಿದ್ದಿ ಹೊರಹೋಗುತ್ತ ‘ಗುಡ್‌ಬೈ’ ಎಂದಳು.

o o o o

ಹಿರಣ್ಮಯನಾದ ಉಜ್ವಲ ಪ್ರಾತಃಸೂರ್ಯನ ಉತ್ಥಾನ !

ಅರುಣಾಯಿತವಾದ ದಿಗ್ದೇಶದಲ್ಲಿ ಮನಮೋಹನೀಯ ಚಿತ್ತಾರ !

ಕಿಟಕಿಯ ಜಲಿ ಬೆಳಗಿನ ಸ್ವಚ್ಛ ವಾತಾವರಣಕ್ಕೆ ಮುಖವೊಡ್ಡಿ ನಿಂತ ನನಗೆ ಸೂರ್ಯೋದಯವನ್ನು ನೋಡುತ್ತಿದ್ದಂತೆ ಹೃದಯ ಸಾನಂದದಿಂದ ಮಿಡಿಯಿತು. ಹಾಗೇ ನೋಡುತ್ತ ನಿಂತೆ. ಕರಿಯ ಕಾಮಳ್ಳಿಗಳು ಹಿಂಡು ಹಿಂಡಾಗಿ ಹಾರಾಡುತ್ತಿವೆ, ಬೆಳ್ಮುಗಿಲ ಎತ್ತರಕ್ಕೆ. ಬಿಳಿ ಬಟ್ಟೆಯ ಮೇಲೆ ಕರಿ ಬೊಟ್ಟುಗಳಂತೆ ತೋರುವ ಅವು ನಿಜವಾಗಿಯೂ ಸುಂದರ ಸೇಸೆಗಳೇ. ತಂಗಾಳಿ ತಣ್ಣಗೆ ಬೀಡುತಿತ್ತು. ಮಳೆಯಿಲ್ಲದ ದಿನವಾದರೂ ಚಳಿಗೆ ಕೊರತೆಯಿರಲಿಲ್ಲ.

ಒಳಹೋಗಿ ಕೆಲಸಕಾರ್ಯಗಳನ್ನು ಮುಗಿಸಿ ಉಣ್ಣೆಬಟ್ಟೆಯನ್ನು ತೊಟ್ಟು ಆಫೀಸ್ ಕಡೆ ಹೊರಟೆ. ಪ್ರವಾಸದ ಆಯಾಸ ಸಂಪೂರ್ಣ ನಿವಾರಣೆಯಾಗದಿದ್ದರೂ ಮೈ ಲವಲವಿಕೆಯಾಗಿತ್ತು. ಟ್ರಫಾಲ್ಗರ್ ಸ್ಕ್ವೇರ್‌ನಲ್ಲಿ ಯಾರೋ ಪ್ರವಾಸಿಗಳು ಚೀಲದ ತುಂಬ ಗೋಧಿ ಕಾಳನ್ನು ತಂದು ಪಾರಿವಾಳಗಳನ್ನು ಕರೆಯುತ್ತ ಎರಚುತಿದ್ದರು. ಅವು ಭರಭರ ಸದ್ದುಮಾಡುತ್ತ ಹಾರಾಡಿ ಕಾಳನ್ನು ತಿನ್ನುತಿದ್ದುವು. ನೋಟವನ್ನು ಅತ್ತಲೇ ನೆಟ್ಟು ಮುನ್ನಡೆದೆ. ನಾನು ಆ ಸ್ಕ್ವೇರನ್ನು ಮುಟ್ಟುವ ವೇಳೆಗೆ ಅವರ ಕಾಳಿನ ಚೀಲ ಬರಿದಾಗಿತ್ತು. ಅವರು ಅವುಗಳನ್ನು ಕೈಯಿಂದ ಸ್ಪರ್ಶಿಸಿ ಮುದ್ದು ಮಾಡುತಿದ್ದರು. ಮಧ್ಯದಲ್ಲಿದ್ದ ಎತ್ತರವಾದ ಸ್ತೂಪದ ಮೇಲೆ ಕಣ್ಣಿಟ್ಟು ಲಾರ್ಡ್ ನೆಲ್ಸನ್ನನ ಪ್ರತಿಮೆಯನ್ನು ನೋಡುತ್ತಿದ್ದ ಅವರು ನನ್ನನ್ನು ನೋಡುತ್ತಲೂ ಮುಗುಳು ನಗುತ್ತ "ನಾವು ಬರ್ಮಾ ಕಡೆಯಿಂದ ಬಂದ ಪ್ರವಾಸಿಗಳು" ಎಂದರು.

"ಓ ! ಹಾಗೋ ? ನೋಡಿ ನೋಡಿ ! ಚೆನ್ನಾಗಿ ನೋಡಿ !"

ಅವರು ಮುಗುಳು ನಗುತ್ತ ತಮ್ಮ ಗಮನವನ್ನು ಪುನಃ ಪಾರಿವಾಳಗಳ ಕಡೆ ಹರಿಸಿದರು. ಪಾರಿವಾಳಗಳು ಎಡೆಯಿಂದೆಡೆಗೆ ಹಾರಾಡಿ ಕಳಿದುಳಿದ ಕಾಳುಗಳನ್ನು ಉತ್ಸಾಹದಿಂದ ಹೆಕ್ಕುತಿದ್ದುವು. ರಂಗುರಂಗಿನ ಅವು ರೆಕ್ಕೆ ಬಿಚ್ಚಿ ಹಾರುವುದೇ ಒಂದು ಚೆಂದ. ನಾನು ಅವುಗಳ ಚಟುವಟಿಕೆಯನ್ನು ನೋಡಿ ಮನಸ್ಸಿಗೆ ಆನಂದವನ್ನು ತುಂಬಿಕೊಳ್ಳುತ್ತ ನನ್ನ

ದಾರಿ ಹಿಡಿದೆ. ಚಿತ್ರಭಿತ್ತಿಯಲ್ಲಿ ಭಾಸ್ವಾನ್ ಮೂಡಿ ನಿಂತಿದ್ದ. ಎಂದಿಗೆ ಅವನನ್ನು ನೋಡಿ ಪ್ರವಾಸದ ಅನುಭವಗಳನ್ನು ಮುಂದಿಟ್ಟು ಅವನ ಪ್ರತಿಕ್ರಿಯೆ ಏನೆಂಬುದನ್ನು ತಿಳಿದುಕೊಳ್ಳುವೆನೋ ಎಂಬ ಆತುರಕಾತರಗಳು ಮನವನ್ನು ಆವರಿಸಿದ್ದುವು. ಮುಂದಿನ ಹಾದಿ ಹೆಚ್ಚು ಸಮಯ ತೆಗೆದು ಕೊಳ್ಳಲಿಲ್ಲ. ನಾನು ಮೆಟ್ಟಿಲನ್ನು ಹತ್ತಿದಾಗಲೇ ಲೈಲಾ ಎದುರಾದಳು. ಮುಖದಲ್ಲಿ ಮುಗುಳು ನಗುವನ್ನು ಸೂಸಿ ಕೇಳಿದಳು,

"ಹೇಗಿತ್ತಮ್ಮಾ ಪ್ರವಾಸ ?"

"ತುಂಬಾ ಚೆನ್ನಾಗಿತ್ತು. ಓಹ್ ! ವರ್ಣನಾತೀತ...!"

"ಹೋಗಲಿ ಮೈಯಲ್ಲಿ ಸ್ವಲ್ಪವಾದರೂ ಚೇತನವನ್ನು ಉಳಿಸಿ ಕೊಂಡಿರುವೆಯಾ ?"

"ನೋಡು ! ಈ ದಿನದ ನನ್ನ ಕೆಲಸವನ್ನು ನೋಡಿ ನೀನೇ ಹೇಳಿ ಬಿಡು !"

ಅವಳು ನಗುನಗುತ್ತಾ "ಪರವಾಯಿಲ್ಲ, ಅಷ್ಟೊಂದು ಶಕ್ತಿ ಇರುವುದೂ ವಿಶೇಷವೇ. ನಾಲ್ಕು ದಿನ ವಿಶ್ರಾಂತಿ ತೆಗೆದುಕೊಳ್ಳದೇ ಬಂದಿದ್ದಿ ! ಮಾಡು, ಇನ್ನೂ ಹುಡುಗಿ ! ಶಕ್ತಿಯಿದ್ದಾಗ ಮಾಡುವುದು ನ್ಯಾಯವೇ."

ನಾನು ನಸುನಕ್ಕು ಕೆಲಸ ಆರಂಭಿಸಿದೆ. ನನ್ನ ಗಮನವೆಲ್ಲಾ ಕೆಲಸಕ್ಕೆ ಬರುವವರ ಮೇಲಿತ್ತು. ಇನ್ನೇನು ಇಷ್ಟರಲ್ಲೇ ಭಾಸ್ವಾನ್ ಆಫೀಸಿಗೆ ಬರ ಬಹುದು ಎಂಬ ಅಭಿಲಾಷೆ ಮನದಲ್ಲಿ. ಅರ್ಧ ಗಂಟೆಯೊಳಗಾಗಿ ಬರುವವ ರೆಲ್ಲಾ ಬಂದರು. ಆದರೆ, ಭಾಸ್ ದೃಷ್ಟಿಗೆ ಬೀಳಲಿಲ್ಲ. ಯಾರನ್ನಾದರೂ ಕೇಳೋಣವೆಂದರೆ ಸಂಕೋಚ. ಕೆಲಸ ಮುಗಿಸುವ ಹೊತ್ತಿಗೆ ಹಗಲೂ ಉರುಳಿತು. ನಾನು ಆಫೀಸ್ ಬಿಟ್ಟು ಹೊರಬರುತ್ತಾ ಯೋಚಿಸಿದೆ... ಭಾಸ್ ಸಿಗಲಿಲ್ಲ. ಅವನ ಅಭಿಲಾಷೆ ಏನೆಂಬುದು ಅರ್ಥವಾಗಲಿಲ್ಲ. ನನ್ನ ಮುಂದಿನ ಜೀವನವನ್ನು ನಿರ್ಧರಿಸುವುದೇ ಕಷ್ಟವಾಗಿದೆ. ಬ್ಯಾಂಕಿನ ಸಾಲ ತೀರುವನಕ ನಾನು ಈ ಕೆಲಸವನ್ನು ಬಿಡುವಂತಿಲ್ಲ. ಏನು ಮಾಡಲಿ ?

ಅದೇ ಯೋಚನೆಯಲ್ಲಿ ಮನೆಯ ಹಾದಿ ಹಿಡಿದೆ. ಕೈಯಲ್ಲಿ ಕಾಸಿರಲಿಲ್ಲ ವಾದ್ದರಿಂದ ಬಸ್ಸು ಹಿಡಿಯುವ ಯೋಚನೆ ಇರಲಿಲ್ಲ. ನನ್ನ ಸನಿಹದಲ್ಲೇ ನಡೆದು ಬಂದ ಹೆಜ್ಜೆಗಳನ್ನು ಗುರ್ತಿಸಿ ನಾನು ತಿರುಗಿ ನೋಡಿದೆ. ಸೋಫಿ "ನೀನೀಗಾಗಲೇ ಕೆಲಸಕ್ಕೆ ಹೋಗಿದ್ದೆಯಾ ? ನಾನು ಮೂರು ದಿನ ರಜೆ ಹಾಕಿರುವೆ."

"ಈಗ ಈ ಕಡೆಯೇಕೆ ಬಂದಿದ್ದೆ ?"

"ನನ್ನ ತಂಗಿಯ ಮನೆಗೆ ಹೋಗಿದ್ದೆ. ಅಲ್ಲಿ ಎರಡು ಗಂಟೆ ಹರಟೆ ಹೊಡೆದು ಈಗ ತಣ್ಣಗೆ ಮನೆಯ ಕಡೆ ಹಿಂತಿರುಗುತ್ತಿರುವೆ."

"ನಡೆ ಹಾಗಾದರೆ, ಇಬ್ಬರೂ ಒಟ್ಟಿಗೇ ಹೋಗೋಣ."

"ಹೌದು ಮೂರು ತಿಂಗಳು ಸರಿಯಾದ ವ್ಯಾಯಾಮವಿಲ್ಲದೆ ಮೈಭಾರ. ಸ್ವಲ್ಪ ಓಡಾಡಬೇಕು ಎಂದು ನನಗೂ ಅನಿಸುತ್ತೆ."

"ಒಂದಿನ ಲಂಡನ್ ಟವರ್ ಕಡೆ ಹೋದರೆ ಚೆನ್ನಾಗಿ ಸುತ್ತಾಡ ಬಹುದು."

"ವಂಡರ್‌ಫುಲ್ ! ನೀನು ರಜೆ ಹಾಕು. ನಾಡಿದ್ದು ಸುತ್ತಾಡಿ ಬರೋಣ. ಹೇಗೂ ನನಗೆ ನಾಳೆ ನಾಡಿದ್ದು ರಜೆ ಇದೆ. ಇಬ್ಬರೂ ಹೋಗಿ ಬರೋಣ."

ನಾನು ಸ್ವಲ್ಪ ಹೊತ್ತು ಯೋಚಿಸಿದೆ ಒಂದು ದಿನ ರಜೆಯೆಂದರೆ ಒಂದು ದಿನದ ದುಡಿಮೆ ಕೋತ ಬೀಳುತ್ತದೆ. ಏನು ಮಾಡಲಿ ? ಸಾಲ ತೀರಿಸುವ ತನಕ ಕಾಸುಕಾಸನ್ನೂ ಕೂಡಿಸಿಕೊಳ್ಳದಿದ್ದರೆ ಕಷ್ಟವೇ....ಆದರೆ, ಅವಳು ಅಷ್ಟಕ್ಕೇ ಸುಮ್ಮನಾಗದೆ ಒತ್ತಾಯಿಸಿದಳು "ಒಂದು ದಿನಕ್ಕಾಗಿ ಏಕೆ ಚಿಂತೆ? ನನಗಿಂತ ನೀನು ಎರಡು ದಿನ ಹೇಗೂ ಹೆಚ್ಚಾಗಿ ಕೆಲಸ ಮಾಡುತ್ತಿ. ಅಷ್ಟರಲ್ಲಿ ತೃಪ್ತಿಪಟ್ಟುಕೊಳ್ಳಬಾರದೇ ?"

ಆ ಮಾತಿಗೆ ನಾನು ಒಪ್ಪಿ "ಆಗಬಹುದು. ನಾಳೆ ಕೆಲಸ ಮಾಡಿ ನಾಡಿದ್ದಿಗೆ ರಜೆ ಹಾಕಿಕೊಳ್ಳುವೆ" ಎಂದೆ. ಅದರಿಂದ ಅವಳು ಸಂತುಷ್ಟಳಾಗಿ

ನುಡಿದಳು "ನಾನು ಆ ಕಡೆ ಹೋಗಿ ಯಾವ ಕಾಲವಾಗಿತ್ತೋ. ಬಹುಶಃ ಎರಡು ಮೂರು ವರುಷಗಳೇ ಆದುವು ಎಂದು ತೋರುತ್ತೆ."

"ನಾನು ಹೋಗಿ ನಾಲ್ಕೈದು ವರ್ಷಗಳ ಮೇಲಾಗಿದೆ. ತಂದೆ ಇದ್ದ ಕಾಲದಲ್ಲಿ ಹೋಗಿದ್ದು. ಆನಂತರ ಆ ಕಡೆ ಮುಖ ಹಾಕಲಿಲ್ಲ. ಅದರ ನೆನಪೂ ಸಹ ಬಂದಿರಲಿಲ್ಲ ಎನಿಸುತ್ತೆ ನನಗೆ."

ಅವಳು ಕಿಲಕಿಲ ನಕ್ಕು ನುಡಿದಳು "ಜಗತ್ತನ್ನೇ ಮರೆಯುವಂತಹ ಗಹನವಾದ ವಿಷಯ ಏನಿತ್ತು ನಿನ್ನಲ್ಲಿ ?"

ಆ ಪ್ರಶ್ನೆ ಮನದಾಳಕ್ಕೆ ಸರ್ರನೆ ಇಳಿಯಿತು. ನಾನು ಕೆಲವು ಕ್ಷಣ ಯೋಚಿಸಿದೆ. ನಿಜವಾಗಿಯೂ ನನ್ನಲ್ಲಿ ಅಂತಹ ಗಹನವಾದ ವಿಷಯ ಏನೂ ಇರಲಿಲ್ಲ. ಮನೆ, ಆಫೀಸ್, ಹೋಟೆಲ್, ಸಿನೆಮಾ, ಹರಟೆ ಇಷ್ಟೆ. ಹೆಸರಿಸ ಬಹುದಾದಂತಹ ಯಾವ ಕೆಲಸಕಾರ್ಯವೂ ನಡೆದಿಲ್ಲ ಎಂಬುದನ್ನು ದೃಢೀ ಕರಿಸಿದನಂತರ ನಾನೆಂದೆ "ನೀನು ಹೇಳುವುದರಲ್ಲಿ ತಥ್ಯವಿದೆ. ನಾವು ಮೀನ ಮೇಷ ನೋಡುವುದರಲ್ಲೇ ನಮ್ಮ ಕಾಲ ಕಳೆದುಹೋಗುತ್ತದೆ. ಕಾಲದೊಡನೆ ಸ್ಪರ್ಧೆ ಹೂಡುವ ಚಾಕಚಕ್ಯತೆ ನಮಲ್ಲಿದ್ದರೆ ಈ ಬದುಕು ಸಾರ್ಥಕ. ಇಲ್ಲ ದಿದ್ದರೆ ವ್ಯರ್ಥವೇ ಸರಿ.

ಅನಂತರ ನಮ್ಮ ಹಾದಿ ಕವಲೊಡೆಯಿತು. ಅವಳು ವಿಂಡ್‌ಸರ್ ಸರ್ಕಲ್ಲಿನಲ್ಲಿ ಬಲಭಾಗಕ್ಕೆ ತಿರುಗುತ್ತ 'ಬಾಯ್' ಎಂದು ಹೊರಟಳು. ನಾನು ಸ್ವಲ್ಪ ದೂರ ಹೋಗಿ ಬಲಭಾಗದ ರಸ್ತೆಗೆ ತಿರುಗಿಕೊಳ್ಳಬೇಕು. ಅಲ್ಲಿಂದ ಒಂದು ಮೈಲಿಯ ಮೇಲಾಗುತ್ತದೆ ನಮ್ಮ ಮನೆ. ನಾನು ಫುಟ್‌ಪಾತ್ ಮೇಲೆ ನಡೆಯುತ್ತಿದ್ದಾಗ ಪಾರ್ಕಿನ ಕಟ್ಟೆಯ ಮೇಲೆ ಕುಳಿತ ಆನಂದ್ ವಸಂತ್ ದೃಷ್ಟಿಗೆ ಬಿದ್ದರು ನಾನು ಪ್ರಾಸಂಗಿಕವಾಗಿ 'ಗುಡ್ ಈವ್ನಿಂಗ್ !" ಎಂದೆ.

"ಗುಡ್ ಈವ್ನಿಂಗ್ ಮೇಡಂ ! ಎತ್ತ ಪಯಣ ?" ಎಂದ ಆನಂದ್.

"ಮನೆಯ ಕಡೆಗ."

"ಗುಡ್ ಈವ್ನಿಂಗ್ ! ಭಾರತ ಪ್ರವಾಸ ಹೇಗಿತ್ತು ?" ಎಂದ ವಸಂತ್.

ಇಬ್ಬರ ಮುಖಗಳೂ ಹೂ ನಗೆ ಸೂಸಿದುವು.

ಅವರ ಸ್ನೇಹಕ್ಕನುಗುಣವಾಗಿ ಪ್ರತಿನಗುವನ್ನು ಸೂಸಿ ನಾನೆಂದೆ "ಓ... ವಂಡರ್‌ಫುಲ್ !! ಊಟ, ವಸತಿ, ಪ್ರಯಾಣ, ಗಯಡೆನ್ಸ್ ಎಲ್ಲಾ ಸರಿಯಾಗಿತ್ತು. ನೋಡಿದಷ್ಟನ್ನೂ ನಾವು ಕಣ್ತುಂಬ ನೋಡಿ ಆನಂದಿಸಿದೆವು. ಅನೇಕ ದೇವಾಲಯಗಳನ್ನು ನೋಡುವ ಸುಯೋಗವೂ ಒದಗಿತು."

"ನಿಮ್ಮವರೆಲ್ಲಾ ದೇವಾಲಯಗಳನ್ನು ನೋಡುವುದರಲ್ಲಿ ಆಸಕ್ತಿ ತೋರಿದರೇ ?" ಆನಂದನ ಪ್ರಶ್ನೆ.

"ನಿಂತೇ ಮಾತಾಡುತ್ತಿದ್ದೀಯಲ್ಲ ಚಾ, ಹೀಗೆ ಕುಳಿತುಕೋ. ಸ್ವಲ್ಪ ಹೊತ್ತು ಆರಾಮವಾಗಿ ಮಾತಾಡಿದರಾಯ್ತು." ಎಂದ ವಸಂತ್.

"ಯಾರೂ ಅದನ್ನು ವಿರೋಧಿಸಲಿಲ್ಲ. ಕೆಲವರು ನೋಡಿ ಆನಂದಿಸಿದರು. ಕೆಲವರು ಉದಾಸೀನ ತೋರಿದರು ಅಷ್ಟೆ," ಎಂದ ನಾನು ಒಂದೆರಡುಗಳಿಗೆ ತಡೆದು "ನೀವಿಬ್ಬರೇ ಇದ್ದೀರಿ, ಎಲ್ಲಿ ನಿಮ್ಮ ಸ್ನೇಹಿತ ಕಾಣುತ್ತಿಲ್ಲವಲ್ಲ ?"

"ಭಾಸ್ವಾನ್ ಈಗ ಕೇಂಬ್ರಿಡ್ಜ್‌ನಲ್ಲಿದ್ದಾನೆ. ಬಹುಶಃ ಬರುವುದು ಮೂರುನಾಲ್ಕು ತಿಂಗಳು ಆಗಬಹುದೇನೋ. ನಿಮ್ಮ ಕಂಪನಿ ಅವನನ್ನು ಟ್ರೈನಿಂಗ್‌ಗಾಗಿ ಅಲ್ಲಿಗೆ ಕಳುಹಿಸಿದೆ."

"ಓ, ಅದಕ್ಕೇ ಇಂದು ಆಫೀಸಿನಲ್ಲಿ ಕಾಣಸಿಗಲಿಲ್ಲ."

"ಅವನು ಹೋಗಿ ಎರಡುವಾರಗಳ ಮೇಲಾಯ್ತು," ಎಂದ ವಸಂತ್. ಪುನಃ ಅವನೇ ಕೇಳಿದ "ನಿನಗೆ ಭಾರತಕ್ಕೆ ಹೋಗಿ ಬಂದಮೇಲೆ ಏನೆನಿಸುತ್ತೆ ?"

"ದೇಶ ಸುಧಾರಿಸುತ್ತೆ ಎನ್ನುವುದಕ್ಕೆ ಎಲ್ಲೆಲ್ಲಿಯೂ ದೃಷ್ಟಿಗೆ ಬೀಳುವ ಹೊಸ ಹೊಸ ಕಟ್ಟಡಗಳು, ಕಾರ್ಖಾನೆಗಳು ಸಾಕ್ಷಿ. ಆದರೂ, ಸುಧಾರಿಸ

ಬೇಕಾದುದು ಇನ್ನೂ ಬಹಳವಿದೆ ಎಂದು ಒಪ್ಪಿಕೊಳ್ಳಲೇಬೇಕು. ಪ್ರಾಯಶಃ ಒಂದು ಶತಮಾನವೇ ಬೇಕು ಎಲ್ಲಾ ವಿಧದಲ್ಲೂ ಸುಧಾರಿಸಿಕೊಳ್ಳಬೇಕಾದರೆ."

"ನಿಜ... ನಿಜ."

"ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸೂರ್ಯ ಎಂದೂ ಅಸ್ತಮಿಸುವುದಿಲ್ಲ ಎಂದು ನಂಬಿದ್ದ ಇವರು ತಂತ್ರಕುತಂತ್ರಗಳಿಂದ ಪ್ರಪಂಚದ ಅನೇಕ ಭಾಗ ಗಳನ್ನು ಆಕ್ರಮಿಸಿ ಸಾಧ್ಯವಾದಷ್ಟು ದೋಚಿ ತಮ್ಮ ತಮ್ಮ ಹೊಟ್ಟೆ ತುಂಬಿ ಕೊಳ್ಳುತ್ತ ಸ್ವಾರ್ಥಲೋಲುಪ್ತಿಯಲ್ಲಿ ಮುಳುಗಿದ್ದರಷ್ಟೆ ? ಇಂದೇನಾಗಿದೆ ಇವರ ವ್ಯಾಪಾರ ? ಒಳಹೊಕ್ಕು ಪ್ರಮಾಣಿಸಿ ನೋಡುವವರಿಗೆ ಮಾತ್ರ ಕಾಣಿ ಸುತ್ತದೆ ಇಂಗ್ಲೆಂಡಿನ ವಾಸ್ತವ ಚಿತ್ರ ; ಯೂರೋಪ್ ಖಂಡದಲ್ಲಿ ಇದರಷ್ಟು ಹಿಂದುಳಿದ ಸಾಮ್ರಾಜ್ಯ ಮತ್ತೊಂದಿಲ್ಲ. ನಗರದ ಹೊರವಲಯದಲ್ಲಿ ನಿರ್ಮಿ ತವಾಗಿರುವ ಆಧುನಿಕ ಕಟ್ಟಡಗಳನ್ನು ಬಿಟ್ಟರೆ ಇಲ್ಲೇನುಂಟು ? ನಗರ ಗರ್ಭ ದಲ್ಲಿ ನೆಲಕ್ಕೆ ಕುಸಿಯುವಂತಿರುವ ಕಟ್ಟಡಗಳ ಕಡೆಗೆ ಯಾರ ಗಮನವೂ ಹರಿ ದಿಲ್ಲ. ಜಾನ್ ದೊರೆಯ ಕಾಲದಿಂದ ಹೇಗಿತ್ತೋ ಹಾಗೆಯೇ ಇದೆ ನಗರ ಗರ್ಭ. ಅಂದಿಂದಿಗೂ ಬ್ರಿಟಿಷ್ ಗದ್ದುಗೆಯ ಮೇಲೆ ಎಷ್ಟೋ ರಾಜ ರಾಣಿ ಯರು ಮಿನುಗಿ ಮಾಯವಾಗಿದ್ದಾರೆ. ರಾಜರಾಣಿಯರುಗಳ ಪ್ರೇತಗಳೇ ಇಂದು ನಗರ ಗರ್ಭ ನಿವಾಸಿಗಳು. ಯಾವಯಾವ ಕತೆಗಳನ್ನೋ ಹೇಳಿ ಕೊಂಡು ಪ್ರವಾಸಿಗಳನ್ನು ಆಕರ್ಷಿಸಲು ಹೆಣಗಾಡುತ್ತಿದೆ ಲಂಡನ್. ಭೀಮ ವೇಗದಲ್ಲಿ ಮುಂದುವರಿಯುತ್ತಿರುವ ಯುರೋಪ್ ರಾಷ್ಟ್ರಗಳೆತ್ತ ? ಈ ಇಂಗ್ಲೆಂಡ್ ಎತ್ತ ? ತನ್ನ ಪಾಪದಫಲವನ್ನು ಎರಡೂ ಕೈಗಳಿಂದ ಯಾರಾ ದರೂ ಉಣ್ಣಬೇಕಷ್ಟೆ ? ಹೀಗೆಂದನೆಂದು ಬೇಸರಿಸಬೇಡ... ಸಾರಿ !."

ಆನಂದನ ವಿಚಾರಧಾರೆಯನ್ನು ಕೇಳಿ ನಾನು ಮುಗುಳು ನಕ್ಕು ಸುಮ್ಮನಾದೆ. ಉತ್ತರಿಸಲಿಲ್ಲ.

ಅವನು ಅದೇ ಧಾಟಿಯಲ್ಲಿ ಮುಂದುವರಿದ "ಇಂಗ್ಲೆಂಡಿಗೆ ಸಮೀಪದ ರಾಷ್ಟ್ರ ಫ್ರಾನ್ಸ್. ಈ ಎರಡರ ಮಧ್ಯೆ ಸ್ನೇಹ ಸಂಬಂಧಕ್ಕೇನೂ ಕೊರತೆ ಯಿಲ್ಲ. ಎರಡಕ್ಕೂ ಚಾರಿತ್ರಿಕ ಮೈತ್ರಿಯೂ ಉಂಟು. ಅದೇ ನೇರಕ್ಕೆ

ಇಂಗ್ಲೀಷರೆಂದರೆ ಫ್ರೆಂಚರು ಸಿಡಿದು ಬೀಳುತ್ತಾರೆ. ಆದರೂ, ಅವರ ಸಹ ಕಾರಕ್ಕಾಗಿ ಇಂಗ್ಲೆಂಡ್ ಹಾತೊರೆಯುವುದನ್ನು ನೋಡಿದರೆ 'ಅಯ್ಯೋ' ಎನಿಸುತ್ತೆ !"

ವಸಂತ್ ಉತ್ತರಿಸಿದ "ಬಹಳ ಕಂದಾಚಾರಕ್ಕೆ ಕಟ್ಟುಬಿದ್ದ ಜನ ಇವರು. ಹಳತು ಹೋಗದಿರುವುದರಿಂದಲೇ ಹೊಸತನಕ್ಕೆ ಅವಕಾಶವಿಲ್ಲ. ಆರ್ಥಿಕವಾಗಿ ದಿನೇ ದಿನೇ ಕುಗ್ಗುತ್ತಿರುವುದನ್ನು ಎಲ್ಲಾ ಕ್ಷೇತ್ರದಲ್ಲೂ ನಾವು ಕಾಣುತ್ತೇವೆ. ಆದರೂ ಪಟ್ಟು ಬಿಡುವವರಲ್ಲ !"

"ಏರುಪೇರು ಎಲ್ಲಾ ದೇಶಗಳಲ್ಲೂ ಇದ್ದದ್ದೇ, ಏನು ಮಾಡೋಣ ?" ಎಂದೆ ನಾನು.

"ಲಂಡನ್ ಬ್ರಿಡ್ಜ್ ವಿದೇಶಕ್ಕೆ ಮಾರಾಟವಾಗಿದೆ. ಇದೇ ರೀತಿ ಇಲ್ಲಿ ಅನೇಕ ಹಿರಿಯ ಕಟ್ಟಡಗಳಿಗೆ ಅಮೇರಿಕನ್ನರು ಒಡೆಯರು. ಇನ್ನೂ ಮುಂದೆ ಮುಂದೆ ಏನೇನು ಕತೆಯೋ ? ಬಕಿಂಗ್‌ಹ್ಯಾಂ ಅರಮನೆ ನಮ್ಮ ರಾಷ್ಟ್ರದ ಯಾವೊಂದು ಅರಮನೆಯ ಅರ್ಧದಷ್ಟು ಶ್ರೇಷ್ಠತೆಯನ್ನು ಮುಟ್ಟಲಾರದು. ಅಂದಮೇಲೆ, ಈಗೀಗ ಈ ರಾಷ್ಟ್ರದ ಸೂರ್ಯ ಅಸ್ತಮಿಸತೊಡಗಿದ್ದಾನೆ ಎನ್ನಬಹುದೇ ?"

ನಾನು ಮುಗುಳುನಕ್ಕು ನುಡಿದೆ,

"ಏನಾದರೂ ಅಂದುಕೊಳ್ಳಿ. ಸೂರ್ಯ ಉದಯಿಸಲೂ ಬೇಕು. ಅಸ್ತಮಿಸಲೂ ಬೇಕು."

"ಈಸ್ಟ್ ಇಂಡಿಯಾ ಕಂಪನಿಯ ಕಾಲದಿಂದ ಇಡೀ ಜಗತ್ತಿನ ಕಣ್ಣೆದುರಿಗೇ ನಮ್ಮನ್ನು ಮುನ್ನೂರೈವತ್ತು ವರ್ಷಗಳ ಕಾಲ ಅತ್ಯಂತ ಅದ್ದೂರಿಯ ಭೀಭತ್ಸ ಪ್ರಭುತ್ವದಲ್ಲಿ ಆಳಿದ ನಾಡು ! ಅಲ್ಲಿದ್ದಾಗ ನಾವು ಯಾವರೀತಿಯಲ್ಲಿ ಇಂಗ್ಲೆಂಡ್‌ನ್ನು ಚಿತ್ರಿಸಿಕೊಂಡಿದ್ದೆವೊ ಅದು ದೇವರಿಗೇ ಗೊತ್ತು. ಈಗ.... ಇಲ್ಲಿಗೆ ಬಂದು ನೋಡಿದಮೇಲೆಯೇ ಗೊತ್ತು ಬ್ರಿಟಿಷ್ ಸಾಮ್ರಾಜ್ಯದ ಬಂಡವಾಳ."

ಆನಂದ್ ಲೋಕಾಭಿರಾಮವಾಗಿ ನುಡಿದಂತೆ ವಸಂತನಿಗೆಂದ "ಎಷ್ಟೆಷ್ಟು ದೇಶೀಯರ ಕಣ್ಣೀರು ಅಭಿಶಾಪವಾಗಿ ಪರಿಣಮಿಸಿರಲಿಕ್ಕಿಲ್ಲ? ಸಿಪಾಯಿ ದಂಗೆಯಲ್ಲಿ, ಎರಡನೆ ಮಹಾಯುದ್ಧದಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸತ್ತು ಸ್ವರ್ಗವೇರಿದ ಭಾರತೀಯರ ಕಣ್ಣೀರಿನ ಹೊಳೆ. ಮೇಲಾಗಿ, ತಾಯ್ತಂದೆ ಯರ, ಬಂಧು ಜನರ, ಮಕ್ಕಳು ಮತ್ತು ವಿಧವೆಯರ ಕಣ್ಣೀರು ಸಾಮ್ರಾ ಜ್ಯದ ಎಳೆಎಳೆಯನ್ನೂ ಸುಡುತ್ತಿರಬಹುದು ಎಂಬುದು ಯಾರಿಗೆ ಗೊತ್ತಿಲ್ಲ? ಅಭಿಶಾಪ ಎಂಬುದು ಯಾರಿಗೂ ತಪ್ಪಿದ್ದಲ್ಲ."

"ನೀವಿಬ್ಬರು! ನಾನು ಒಬ್ಬಳು. ನೀವೇನು ತಿಳಿದುಕೊಂಡಿದ್ದೀರೋ ಆ ವಿಚಾರದಲ್ಲ ನಾನು ಏನೇನೂ ಅರಿಯದವಳು. ಅಂತಲೇ ನೀವಿಬ್ಬರೂ ಅಟ್ಟಕ್ಕೆ ಏರಿದ್ದೀರಿ!" ನಾನು ಹಾಸ್ಯದ ಚಟಾಕಿ ಹಾರಿಸಿದೆ.

ಅವರಿಬ್ಬರೂ ಎದ್ದು ನಿಲ್ಲುತ್ತ ಹೇಳಿದರು "ಗುಡ್ ಈವ್ನಿಂಗ್! ನಿನ್ನ ಬಹಳ ಸಮಯವನ್ನು ತೆಗೆದುಕೊಂಡುದುದಲ್ಲದೆ ನಿನ್ನ ಮನಸ್ಸನ್ನೂ ನೋಯಿಸಿ ದ್ದೇವೆ ದಯವಿಟ್ಟು ಕ್ಷಮಿಸು!"

"ಪರವಾಯಿಲ್ಲ. ಇದೆಲ್ಲಾ ರಾಜಕೀಯವಾದುದ್ದು. ಅದಕ್ಕೂ ನನಗೂ ಸಂಬಂಧವಿಲ್ಲ. ಬರಿದೆ ಮಾತುಕತೆ ಅಷ್ಟೆ."

"ಹಾಗಾದರೆ ಹೊರಡೋಣವೇ?"

"ಗುಡ್ ಈವ್ನಿಂಗ್!"

"ಗುಡ್ ಈವ್ನಿಂಗ್!"

೦ ೦ ೦ ೦

ಸೋಫಿ ನನ್ನನ್ನು ಚಾರಲ್ಸ್ ಮಕಾರ್ಥಿ ಸ್ಟ್ರೀಟ್‌ನಲ್ಲಿ ಭೇಟಿಯಾದಾಗ ಬೆಳಗ್ಗೆ ಒಂಬತ್ತು ಗಂಟೆ. ಆಕೆಯ ಗಂಡ ಬಂದಿರಲಿಲ್ಲ. ಮಕ್ಕಳಾದ ಜಾರ್ಜ ಕಿಟ್ಲೀ ಹ್ಯಾರಿ ಕಿಟ್ಲೀ ಬಂದಿದ್ದರು. ನಾನು ಅವಳನ್ನು ಕುರಿತು ಕೇಳಿದೆ "ವೆಲ್ಲಿಂಗ್‌ಟನ್ ಕಿಟ್ಲೀ ಬರಲಿಲ್ಲವೇ?"

"ಅವನು ಜರ್ಮನಿಗೆ ಹೋಗಿದ್ದಾನೆ. ಮೂರು ತಿಂಗಳಿಂದ ಕಟ್ಟಿದ ಕಾಲು. ಪಾಪ, ಹಾಯಾಗಿ ಹೋಗಿ ಬರಲಿ."

ಅವಳ ಮಾತಿಗೆ ನಾನು ನಗುತ್ತ ನುಡಿದೆ "ಮಧ್ಯಾಹ್ನದ ಊಟಕ್ಕೆ ಬ್ರೆಡ್ಡು ಹಣ್ಣುಗಳನ್ನು ಕೊಳ್ಳುವುದಿದೆ. ಮುಂದಿನ ಅಂಗಡಿಯಲ್ಲಿ ಕೊಂಡು ಕೊಂಡು ಬಸ್ಸು ಹಿಡಿಯೋಣ."

ಅವಳು ಮಕ್ಕಳಿಗಾಗಿ ತಯಾರಿಸಿದ ಕೆಲವು ಖಾದ್ಯಗಳನ್ನು ತಂದಿದ್ದಳು. ನಾನು ಅವುಗಳಿಗನುಗುಣವಾಗಿ ಕೆಲವು ಬ್ರೆಡ್ಡು ಕೇಕು ಹಣ್ಣು ಮುಂತಾದುವನ್ನು ಕೊಂಡುಕೊಂಡೆ. ಅನಂತರ ಬಸ್ ಸ್ಟಾಪಿನತ್ತ ಹೋಗಿ ನಿಂತ ಕ್ಷೇಲವೇ ನಿಮಿಷಗಳಲ್ಲಿ ಬಸ್ಸು ಬಂದಿತು. ಸೋಫಿಯ ಮಕ್ಕಳಿಬ್ಬರೂ ಬಹಳ ಚಟುವಟಿಕೆಯುಳ್ಳವರು. ಇಬ್ಬರಿಗೂ ಎಂಟು ವರ್ಷ. ಅವಳಿ ಮಕ್ಕಳಾದ್ದರಿಂದ ನೋಡಲೂ ಒಂದೇ ತೆರನಾಗಿದ್ದಾರೆ. ಜಾರ್ಜ ಕಿಟ್ಟೀ ಸ್ವಲ್ಪ ತೆಳುವಾಗಿರುವುದರಿಂದ ಗುರುತಿಸುವುದು ಸುಲಭ, ಇಲ್ಲವಾಗಿದ್ದರೆ ಕಷ್ಟವಿತ್ತು ಎನಿಸುತ್ತೆ.

ನಾವು ಲಂಡನ್ ಟವರ್ ತಲುಪಿದಾಗ ಮಕ್ಕಳ ಆನಂದ ಅಷ್ಟಿಷ್ಟಲ್ಲ. ಒಂದು ಕಾಲದಲ್ಲಿ ಅಧಿಕೃತ ಅರಮನೆ ಎನಿಸಿದ ಅದರಲ್ಲಿ ಬೃಹದ್‌ಕಾರಾಗೃಹವಿದೆ. ಲಂಡನ್ ಇತಿಹಾಸದಲ್ಲಿ ಅತ್ಯಂತ ಹಳೆಯ ಕಟ್ಟಡ. ವಿಲಿಯಂ ದಿ ಕಾನ್ಕರರ್ ಕಟ್ಟಿದ ಕೋಟೆ. ಮಕ್ಕಳಿಗೆ ಅಲ್ಲಿಗೆ ಬಂದದ್ದು ಬಲೂ ಹಿತ. ಎಲ್ಲೆಂದರಲ್ಲಿ ಓಡಾಡುತ್ತ ಎಲ್ಲಾ ಕಡೆಯೂ ಹಣಿಕಿ ನೋಡುತ್ತಾ 'ಇದೇನು ? ಅದೇನು ?' ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳತೊಡಗಿದರು. ಸ್ಟ್ರಾಲ್ ಟವರ್, ವೈಟ್ ಟವರ್ ಮುಂತಾದ ಟವರ್‌ಗಳನ್ನು ತೋರಿಸಿ ವಿವರಿಸುವಾಗ ಹೊತ್ತು ಉರುಳಿದುದೇ ತಿಳಿಯಲಿಲ್ಲ. ಆ ಭೀಕರ ಗೋಪುರಗಳಲ್ಲಿ ನಡೆದ ಹಿಂಸೆ ಮತ್ತು ಹತ್ಯಾಕಾಂಡವನ್ನು ವಿವರಿಸುತಿದ್ದರೆ ಅವರು ನೆಟ್ಟಕಣ್ಣು ಬಿಟ್ಟಬಾಯಿ ಆಗಿ ಕೇಳುತಿದ್ದರು. ಲಂಡನ್ ಟವರ್‌ನಲ್ಲಿ ಡೊಂಬ ಕಾಗೆಗಳಿರುವುದನ್ನು ತೋರುತ್ತ ಸೋಫಿಯೆಂದಳು,

"ಮಕ್ಕಳಿರಾ! ಇವು ಇಲ್ಲಿ ಇರಲೇಬೇಕೆಂಬುದು ಪುರಾತನ ಸಂಪ್ರದಾಯ. ಅದರಂತೆಯೇ ಈವರೆವಿಗೂ ಇವು ಇಲ್ಲಿ ವಾಸವಾಗಿರುವುದೂ ವಿಶೇಷವೇ."

ಜಾರ್ಜ್ ಕಿಟ್ಟಿ ಕೇಳಿದ "ಏಕೆ ? ಇವು ಇಲ್ಲಿರಲೇಬೇಕು ಎಂಬುದಕ್ಕೆ ಕಾರಣವಾದರೂ ಏನು ?"

"ಅವು ಇಲ್ಲವಾದ ದಿನ ಬ್ರಿಟಿಷ್ ಸಾಮ್ರಾಜ್ಯ ನಾಶವಾಗುತ್ತದೆಂದು ಹಿರಿಯರ ನಂಬಿಕೆ. ಆದರೆ, ಅದರಲ್ಲಿ ಎಷ್ಟರಮಟ್ಟಿಗೆ ಸತ್ಯವಿದೆಯೋ ಹೇಳಲಾರೆ. ಅವು ಇಲ್ಲಿ ತಪ್ಪದೆ ವಾಸ ಮಾಡುತ್ತಿರುವುದಂತೂ ನಿಜ."

ಅನಂತರ ಇದರ ಇನ್ನೊಂದು ಭಾಗದಲ್ಲಿ "ಕ್ರೌನ್ ಜ್ಯುಯೆಲ್ಸ್" ಇದೆ. ಅದೇ ಕೊಠಡಿಯಲ್ಲಿ ಆರನೆಯ ಹೆನ್ರಿಯನ್ನು ಕೊಲೆ ಮಾಡಲಾಗಿತ್ತು. ಬ್ರಿಟಿಷ್ ಸಾಮ್ರಾಜ್ಯದ ಕಿರೀಟ, ವಜ್ರ, ವೈಡೂರ್ಯಗಳ ಪ್ರದರ್ಶನವನ್ನು ನೋಡುತ್ತಿರುವಾಗ ರಾಣಿ ಎಲಿಜಬೆತಳ ಕಿರೀಟದಲ್ಲಿರುವ ಭಾರತದ ಕೊಹಿನೂರ್ ವಜ್ರವನ್ನು ಗಮನಿಸುತ್ತ ಹೇಳಿದೆ "ಗಾತ್ರದಲ್ಲಿ ಹಿರಿದಾದರೂ ಹೊಳಪಿನಲ್ಲಿ ಅಷ್ಟು ಶ್ರೇಷ್ಠವೆನಿಸುವುದಿಲ್ಲ ಅಲ್ಲವೇ ?"

"ಈ ಮಹಾನ್ ವಜ್ರ ಬಹಳ ಹೆಸರುವಾಸಿಯಾದುದು. ಇದನ್ನು ಬ್ರಿಟಿಷ್ ರಾಣಿಯರು ಮಾತ್ರ ಧರಿಸುತ್ತಾರೆ. ಇದು ರಾಜರಿಗೆ ಮಾರಕವೆಂದು ನಂಬುಗೆ. ಆದ್ದರಿಂದ ರಾಜರು ಧರಿಸುವುದಿಲ್ಲ. ಗೋಲ್ಕಂಡದ ಈ ವಜ್ರವನ್ನು ಈಸ್ಟ್ ಇಂಡಿಯಾ ಕಂಪನಿ ವಿಕ್ಟೋರಿಯಾ ರಾಣಿಗೆ ಕಾಣಿಕೆಯಾಗಿ ತಂದುಕೊಟ್ಟಿತಂತೆ. ಅಂದಿಂದಿಗೂ ಇದು ರಾಣಿಯ ಕಿರೀಟದಲ್ಲಿ ವಿರಾಜಮಾನವಾಗಿದೆ. ಇದನ್ನು ವಾಪಸ್ ಪಡೆಯುವ ಪ್ರಯತ್ನವನ್ನು ಮಾಡಿತ್ತು ಇಂಡಿಯಾ ಸರಕಾರ. ಅನಂತರ ಅದೇ ತನ್ನ ನಿಲುವನ್ನು ಬದಲಿಸಿಕೊಂಡಿತು ಎನ್ನುತ್ತಾರೆ. ಹೊಳಪು ಸಾಲದು ಎಂದರೆ ಅದರ ಗುಣ–ನಿರ್ಮಾಣಗಳ ಮಟ್ಟ ಹೇಗೋ..."

ನಾವು ಮಧ್ಯಾಹ್ನದ ಊಟವನ್ನು ಬರ್ಚ್‌ವುಡ್ ಮರಗಳ ಗುಂಪಿನಲ್ಲಿ ಮಾಡಿದಾಗ ಮಕ್ಕಳಿಗಾದ ಆನಂದ ಅಷ್ಟಿಷ್ಟಲ್ಲ. ಹಸುರು ಹುಲ್ಲಿನ ಹಾಸಿನ ಮೇಲೆ ಉರುಳಾಡುತ್ತ ಕಿಲಕಿಲ ನಕ್ಕು ಆನಂದ ಸುಧಾಸೂತಿಯನ್ನು ಹರಸಿದರು. ಸಾಯಂಸಮಯದವರೆಗೆ ಇದ್ದು ಅಲ್ಲಿಯ ಭಾಗವಿಭಾಗಗಳನ್ನೂ ಹಲವಾರು ಟವರ್‌ಗಳನ್ನೂ, ಲೋಹದ ಕವಚಗಳನ್ನೂ, ಚಾಪೆಲ್ ಮತ್ತು

ರೋಮನ್ ಗೋಡೆಯ ಅವಶೇಷಗಳನ್ನೂ, ಇನ್ನೂ ಇತರ ಅನೇಕ ಬಗೆಯ ಪ್ರದರ್ಶನಗಳನ್ನೂ ಮಕ್ಕಳಿಗೆ ತೋರಿ ವಿವರಿಸುವಾಗ ನಮ್ಮ ಮನಸ್ಸೂ ಅರಳಿ ಹೂವಾಯಿತು.

ಸಾಯಂವಾತಾವರಣ ಲಂಡನ್ ಟವರನ್ನು ತಣ್ಣಗೆ ಆವರಿಸಿದಾಗ ನಾವು ಅಲ್ಲಿಂದ ಹೊರಡುವ ಯೋಚನೆ ಮೂಡಿತು. ಡೊಂಬ ಕಾಗೆಗಳು ಟವರಿಂದ ಟವರಿಗೆ ಹೆಮ್ಮೆಯಿಂದಲೋ ಎಂಬಂತೆ ರೆಕ್ಕೆ ಬಿಚ್ಚಿ ಹಾರಾಡಿ ಕುಳಿತುಕೊಳ್ಳುತ್ತಿದ್ದುವು, ಸಾಯಂಕಾಲದ ಹೊಸ ಹುರುಪು ಮೂಡಿದಂತೆ. ನಾನು ಮೆಟ್ಟಲಿಳಿಯುತ್ತ ಹಿಂದಿರುಗಿ ನೋಡಿ ಹೇಳಿದೆ,

“ನಿಜವಾಗಿಯೂ ಮಕ್ಕಳಿಂದ ಹೊತ್ತು ಸರಾಗವಾಗಿ ಕಳೆಯಿತು. ನಾವಿಬ್ಬರೇ ಬಂದಿದ್ದರೆ ಯಾವುದೂ ಇಷ್ಟು ರುಚಿಸುತ್ತಿರಲಿಲ್ಲ.”

“ಖಂಡಿತ !“

ಆ ಮಾತಿಗೆ ಹ್ಯಾರೀ ಕಿಟ್ಟೀ ಅಂದ “ಮಮ್ಮೀ ! ಹಾಗಾದರೆ ಇನ್ನು ನಮ್ಮನ್ನೆಂದೂ ತಂಟಿಕೋರರು ಎಂದು ಕರೆಯಬಾರದು ತಿಳಿಯಿತೇ ?”

“ನೀನಿದನ್ನು ಎಂದೂ ಮರೆಯಬಾರದು. ಇಂದಿನಂತೆಯೇ ತಂಟಿ ಮಾಡದ ರೀತಿಯಲ್ಲಿ ಮುಂದೆ ವರ್ತಿಸಬೇಕು” ಎಂದೆ ನಾನು.

“ನಾವು ನಿತ್ಯಾ ಇರುವುದು ಹೀಗೆಯೇ !”

ಇಬ್ಬರೂ ಒಂದೇ ಬಾರಿಗೆ ಹಾಗೆಂದಾಗ “ಅಹಹ! ಇಬ್ಬರೂ ಜಾಣರು!” ಎನ್ನುತ್ತ ನಕ್ಕುಬಿಟ್ಟಳು ತಾಯಿ. ಒಡನೆ ಎಲ್ಲರ ನಗುವಿನ ಲಹರಿಯೂ ಉಕ್ಕಿಹರಿಯಿತು.



ಮೊಗಿ ಪ್ರಭುವಿನ ಒಡ್ಡೋಲಗದಲ್ಲಿ ನಿಚ್ಚಳವಾದ ದರ್ಬಾರು. ಕಿಂಚಿತ್ತೂ ದಯೆಕರುಣೆಗಳ ಅಭಯ ಹಸ್ತವಿಲ್ಲದ ಬಿಗಿತ. ಲಂಗುಲಗಾ ಮಿಲ್ಲದ ದಿಸಚರಿ.

ಹಿಮವೊತ್ತಿ ನೆತ್ತರು ಹೆಪ್ಪುಗಟ್ಟಿ ಸ್ವರ್ಗದ ಸೋಪಾನ ಏರುವ ದುರ್ದೈವಿಗಳಿಗೆ ಕೊರತೆಯಿಲ್ಲ. ಎಷ್ಟೋ ಪ್ರಾಣಿಗಳೂ ಸಹ. ಮಂಜು

ಮುಸುಕಿದ ನೆಲೆಗಳಲ್ಲಿ ಸೂರ್ಯರಶ್ಮಿಗೂ ಅಡೆತಡೆ. ಅನೇಕ ವೇಳೆ ಹಗಲೂ ದೀಪಗಳು ಉರಿಯಬೇಕು. ಅವೂ ಕೂಡ ದಟ್ಟ ಮಂಜಿನಲ್ಲಿ ಉರಿಯಲಾರದೆ ಉರಿಯುತ್ತವೆಯೋ ಎಂಬಂತೆ ಪ್ರಖರವಾದ ಬೆಳಕನ್ನು ಬೀರಲಾರವು, ಮಂಜು ಮಂಜು ! ಹಗಲಿನಲ್ಲಿ ವಾಹನಗಳೂ ದೀಪ ನಂದಿಸುವಂತಿಲ್ಲ. ಇನ್ನು ಕೆಲವೇ ದಿನಗಳಲ್ಲಿ ಮಂಜು ಹೆಪ್ಪುಗಟ್ಟುತ್ತದೆ. ಆಗಂತೂ ಹೊರಬರುವುದೇ ಕಷ್ಟಕರ.

ಒಳ್ಳೆಯ ಸ್ವೆಟರ್ ಕೊಂಡುಕೊಳ್ಳುವ ಸಲುವಾಗಿ ಅಂಗಡಿಯ ಹಾದಿ ಹಿಡಿದೆ. ಹಾದಿಯುದ್ದಕ್ಕೂ ತಮಿಳರು, ತೆಲುಗರು, ಕನ್ನಡಿಗರು ಮುಂತಾದ ಜನರಾಶಿ ಕಂಡುಬರುತ್ತಾರೆ. ಎಲ್ಲರೂ ಅವರವರ ಭಾಷೆಗಳಲ್ಲಿ ಮಾತಾಡುತ್ತಿದ್ದರೆ ಕಲಸುಮೇಲೋಗರವಾದ ವಿಚಾರ ಸಾಹಿತ್ಯ ತಲೆಯನ್ನು ತುಂಬುತ್ತದೆ. ಭಾರತೀಯರೇ ಹೆಚ್ಚಾಗಿ ವಾಸಿಸುವ ತಾಣವಾದುದರಿಂದ ಇಲ್ಲಿ ಸದಾ ಭಾರತೀಯರು ಕಂಡುಬರುತ್ತಾರೆ. ಕೆಲವೊಮ್ಮೆ ಅವರ ಉಡಿಗೆ-ತೊಡಿಗೆ, ನಡೆ-ನುಡಿ ಅಹಿತವಾಗಿ ತೋರುತ್ತದೆ; ಆದರೆ, ಮರುಗಳಿಗೆಯಾವರ್ತನಕ್ಕೆ ಸಿಕ್ಕಿದ ಮನಸ್ಸಿಗದು ಹುಸಿ. ಆ ಸೂಕ್ಷ್ಮಾತಿಸೂಕ್ಷ್ಮವಾಗಿ ಅವರ ನಡೆ ನುಡಿಗಳನ್ನು ಗಮನಿಸುವೆ. ಅದರಲ್ಲಿ ಏನೋ ಒಂದು ಬಗೆಯ ವಿಶಿಷ್ಟತೆ, ಮತ್ತೇನೋ ಒಂದು ಬಗೆಯ ಮಾಧುರ್ಯ, ಇನ್ನೇನೋ ಒಂದು ಬಗೆಯ ವಿಶೇಷ ಕಂಡು ಬರುತ್ತದೆ. ಅದನ್ನು ಬಿಡಿಬಿಡಿಯಾಗಿ ಅಥವಾ ಸಾಮೂಹಿಕವಾಗಿ ಅರಿತು ಅರ್ಥೈಸಲಾರೆ. ಭಾರತೀಯತೆ ವಿಭಿನ್ನವಾದರೂ ರೀತಿನೀತಿಗಳು ಒಂದೇ ಎನಿಸುತ್ತೆ. ಅವರ ಸಂಸ್ಕೃತಿಯ ಪರಿಮಳವೇ ಪರಿಮಳ....ಆದರೆ ವಿಚಿತ್ರ ಎನ್ನಬಹುದೇನೋ.

ಮನೋತೇಜಿಯ ನಾಗಾಲೋಟ ಓಡುತ್ತಲೇ ಇತ್ತು. ನಾನು ನಡೆಯುತ್ತಲೇ ಇದ್ದೆ. ನಾನು ಇಚ್ಛಿತ ಅಂಗಡಿ ಸಿಗುವವರೆಗೂ ಎಡೆವಿಡದೆ ನಡೆಯಿತು ಪದಚಾರಣ. ಅಂಗಡಿಯಲ್ಲಿ ಕೆಲವು ಭಾರತೀಯರು ಸ್ವೆಟರ್‌ಗಳನ್ನು ಆರಿಸಿಕೊಳ್ಳುತ್ತಿದ್ದರು. ನಾನು ಮುಂದೆಮುಂದೆ ಹೋಗಿ ಒಳಾಂತರದಲ್ಲಿ ಸ್ವೆಟರ್‌ಗಳನ್ನು ಆರಿಸತೊಡಗಿದೆ. ಭಾರತೀಯರು ಅವರವರ ತಾಯಂದಿರಿಗೆ

ಆರಿಸುತಿದ್ದ ರೀತಿಯು ಪ್ರೇಮ ಗೌರವಗಳ ದ್ಯೋತಕವಾಗಿತ್ತು. ನಾನವರ ಆರಿಸುವಿಕೆಯನ್ನು ನೋಡುನೋಡುತ್ತ ನನಗಾಗಿ ಆರಿಸಿಕೊಳ್ಳುವುದನ್ನು ಮರೆತುಬಿಟ್ಟೆ ಕೂಡ.

ಅನಂತರ ನನಗಾಗಿ ತೆಗೆದುಕೊಳ್ಳಲಿದ್ದ ಸ್ವೆಟರಿಗೆ ಬದಲಾಗಿ ನನ್ನ ತಾಯಿಗೆ ಒಂದು ಬಿಳಿಯ ಸ್ವೆಟರ್ ತೆಗೆದುಕೊಂಡೆ. ನಾನು ತೆಗೆದುಕೊಂಡು ಹೋಗಿದ್ದ ಹಣ ಒಂದು ಸ್ವೆಟರ್‌ಗಾಗಿ ಮಾತ್ರ. ಆದ್ದರಿಂದ ನನಗಾಗಿ ಕೊಳ್ಳುವ ವಿಚಾರವನ್ನು ಮುಂದೂಡಿದೆ ಭಾರತೀಯ ತಾಯಂದಿರ ತುಟಿಗಳಲ್ಲಿ ಮಿನುಗುತ್ತಿದ್ದ ಸಿತಸ್ಮಿತದ ಸುಂದರ ಹರವು ನನ್ನ ಮನವನ್ನು ಅರಳಿಸಿತು. ಸರಿ, ಅಂತಹುದೇ ಮೃದು ಮಂದಹಾಸ ನನ್ನ ತಾಯಿಯ ಮುಖದಲ್ಲೂ ಅರಳುವುದನ್ನು ಹಾರೈಸಿತು ಎದೆಯ ಹಕ್ಕಿ.

ದಿವ್ಯಾಂಬರದಲ್ಲಿ ಉಜ್ವಲಿಸುತಿದ್ದ ಸೂರ್ಯನ ಕಿರಣಗಳು ಮಂಜಿನ ರಾಶಿಯಲ್ಲಿ ಹುದುಗಿ ಪ್ರಖರತೆಯನ್ನು ಕಳೆದುಕೊಂಡು ತಣ್ಣಗೆ ತನಿಯುಂಡು ವಿಶ್ರಮಿಸಿರುವಂತೆ ತೋರುತಿತ್ತು. ನಡುಗುವ ಮೈ, ಮುದುಡಿದ ಮನ, ಆರ್ತ ಹೃದಯ. ಇನ್ನೂ ಏನೇನೋ. ತಾಳಲಾರೆನೋ ಎಂಬಂತೆ ನರ ನರಗಳೂ ಹುಯ್ಯಲಿಡುತ್ತವೆ. ನಾನು ಸ್ವೆಟರಿನ ಚೀಲವನ್ನು ಎದೆಗಾಂತು ಹಿಡಿದು ಯಾಂತ್ರಿಕವಾಗಿ ಹೆಜ್ಜೆಗಳನ್ನು ಮುಂದಿಟ್ಟೆ.

— ೦ —

# ಅಧ್ಯಾಯ

## ೪

ದಿನಗಳ ಗಾಲಿ ಯಥೋಚಿತವಾಗಿ ಉರುಳಿದುವು.

ಮಳೆಗಾಲ ಕಳೆದು ಮಾಗಿಯ ರಾಜ ಆವಿರ್ಭವಿಸಿದ. ಮೈ ಗಡಗಡ ನಡುಗುವಂತಹ ಚಳಿ. ಭಾಸ್ಕರನ ಸುದ್ದಿ ಏನೂ ತಿಳಿಯಲಿಲ್ಲ. ಅವನು ಒಮ್ಮೆ ಬಂದುಹೋಗಲೂ ಇಲ್ಲ. ನನ್ನ ಜೀವನ ಸಮಸ್ಯೆ ಗಂಟಲಗಾಣ ವಾಗುತ್ತಿದೆ. ಮೂರನೆಯ ತಿಂಗಳು ಕಳೆದು ನಾಲ್ಕನೆಯ ತಿಂಗಳೂ ಆಗಮಿ ಸಿತು. ಹಾ ಹೂ ಎನ್ನುವುದರೊಳಗಾಗಿ ಅದೂ ಉರುಳಿಹೋಯಿತು. ನಾನು ಚಿಂತಿತಳಾದೆ.

ನಾನು ಆಫೀಸಿನಿಂದ ಹಿಮ್ಮರಳಿದಾಗ ತಾಯಿ ಮುಸುಗಿಟ್ಟು ಮಲ ಗಿದ್ದಳು ವಿಪರೀತ ಜ್ವರ ಆವರಿಸಿ. ಅವಳು ಈಚೆಗೆ ಹಾಗೆಯೇ. ಮೇಲಿಂದ ಮೇಲೆ ಜ್ವರ ತಲೆನೋವು ಏನಾದರೂ ಇರುತ್ತೆ. ಅವಳು ಹೆಚ್ಚು ಶ್ರಮ ವಹಿಸಲಾರಳೆಂದು ಮನೆಗೆಲಸದಲ್ಲಿ ನಾನೇ ಮುಂದೆ ನಿಲ್ಲುವೆ. ಆದರೂ, ಅನಾ ರೋಗ್ಯ ತಪ್ಪುವುದಿಲ್ಲ. ಬೆಮಲ್ ಇದ್ದರೂ ಒಂದೇ. ಇಲ್ಲದಿದ್ದರೂ ಒಂದೇ. ಅವಳು ತನ್ನ ಫಿಯಾನ್ಸಿ ಹಾಲ್ಡೇನನ್ನು ಆಗಾಗ ಕರೆತರುತ್ತಾಳೆ. ಟಾಮಿಯೂ ಅಷ್ಟೆ. ತನ್ನವಳನ್ನು ಆಗಾಗ ಕರೆತರುತ್ತಾನೆ. ಎಲ್ಲರ ಅಗತ್ಯವನ್ನು ಪೂರೈಸು ವವರು ನಾವಿಬ್ಬರೇ. ಟಾಮಿ ಕೆಲಸ ಸಿಕ್ಕಿದಮೇಲೆ ಬೇರೆ ಮನೆ ಹಿಡಿಯು ತ್ತೇನೆ ಎಂದು ಹೇಳುತ್ತಿದ್ದಾನೆ. ಆ ಕೆಲಸ ಸಿಗುವುದು ಯಾವಾಗಲೋ.

ನಾನು ತಾಯಿಯ ಸ್ಥಿತಿಯನ್ನು ನೋಡಿ ಅವಳಿಗೆ ಕಾಫಿಯನ್ನು ತಯಾರಿಸಿಕೊಟ್ಟು ಡಾಕ್ಟರ ಬಳಿಗೆ ಹೋಗಿ ಔಷಧ ತಂದೆ. ಒಳಗಿನ ಕೆಲಸ ವೆಲ್ಲಾ ಹಾಗೇ ಉಳಿದಿತ್ತು. ರಾತ್ರಿಯ ಅಡುಗೆಯನ್ನು ತಯಾರಿಸುವುದೂ

ಇತ್ತು. ಮೊದಲು ಅಮ್ಮ ಕೆಲಸ ಮಾಡುತ್ತಿದ್ದ ಹೋಟೆಲಿಗೆ ರಿಂಗ್ ಮಾಡಿ ಮೂರು ದಿನ ರಜೆ ಕೇಳಿಕೊಂಡೆ.

ರಾತ್ರಿ ಹೊತ್ತುಮೀರಿದರೂ ಬೆಮೆಲ್ ಮನೆಗೆ ಹಿಂದಿರುಗಲಿಲ್ಲ. ದೀಪ ನಂದಿಸಿದರೂ ಕಾಯಬೇಕಾದ ಕಹಿಪ್ರಸಂಗ ಬೇರೆ. ಅವಳು ಹದಿಹರೆಯವನ್ನು ಎಂದೋ ದಾಟಿದ್ದರೂ ಬುದ್ಧಿ ಬರಲಿಲ್ಲವಲ್ಲಾ ಎಂಬುದೇ ಕಡು ವ್ಯಸನ. ಅಂದಿಂದಿಗೂ ಅವಳ ವ್ಯವಹಾರ ಮಗ್ಗುಲಿಗೆ ಮುಳ್ಳು, ಹಾಲ್ಡೇನ್ ಕೂಡ ಅಂಥಹವನೇ. ಅವಳಿಗೆ ಸರಿಯಾದ ಜೋಡಿ. ಮುಂದೆ ಅವರ ಜೀವನ ಹೇಗಿರಬೇಡ ? ಅದನ್ನು ಯೋಚಿಸುವುದೂ ಅಸಹ್ಯ...ಜುಗುಪ್ಸೆ.

ನಾನು ಹಾಸಿಗೆಯ ಮೇಲೆ ಅಡ್ಡಾಗಿ ಮೈತುಂಬಾ ಹೊದ್ದಿಕೆಯನ್ನು ಎಳೆದುಕೊಂಡೆ. ಮನಃಭಿತ್ತಿಯಮೇಲೆ ಭಾಸ್ಕರನ್ ಮೂಡಿನಿಂತ. ಆ ವ್ಯಕ್ತಿತ್ವವನ್ನು ಅಳೆಯುವ ಮಾನದಂಡವಾದರೂ ಯಾವುದೋ ಎಂಬ ಪ್ರಶ್ನೆ ಒಮ್ಮೆಲೇ ಎದ್ದಿತು. ಅವನ ಶ್ರೀಮದ್ಗಾಂಭೀರ್ಯವನ್ನು ತುಲನೆ ಮಾಡಿದರೆ ಕಂಡುಬರುವುದು ಲಾಲಿತ್ಯ. ಅದೇ ಲಾಲಿತ್ಯವನ್ನು ತುಲನೆ ಮಾಡಿದರೆ ಘನಗಾಂಭೀರ್ಯವೇ. ಯಾವತ್ತೂ ಹೀಗೇ ಎಂದು ಅರ್ಥೈಸುವುದು ಕಷ್ಟ. ನನ್ನ ತೆರೆದ ಹೃನ್ಮಂದಿರಕ್ಕೆ ಬರುತ್ತಾನೋ ಬಾರನೋ ಊಹಿಸುವುದಂತೂ ಸಾಧ್ಯವಿಲ್ಲದ ಮಾತು. ಅವನಿಗಾಗಿ ಹಗಲಿರುಳೂ ಹಾತೊರೆಯುತ್ತದೆ ಹೃದಯ...ಧ್ಯಾನಿಸುತ್ತದೆ ಮನಸ್ಸು. ಆದರೆ...

ತಲೆಬಾಗಿಲ ಕರೆ ಗಂಟೆ ಕಿರ್ರನೆ ಕೂಗಿ ಕರೆಕೊಟ್ಟಿತು. ನಾನು ಹೋಗಿ ಕದ ತೆರೆದೆ. ಒಳಬಂದವಳು ಬೆಮೆಲ್. 'ಗುಡ್‌ನೈಟ್' ಹೇಳಿ ನಾನು ಕೊಠಡಿಗೆ ಹೋದೆ. ಟಾಮಿ ಇನ್ನೂ ಬಂದಿರಲಿಲ್ಲ. ಅವನು ಬಾರ್‌ರೂಮಿಗೆ ಹೋಗಿರಬಹುದು. ಅವನು ಬರುವುದು ಬೆಳಗಿನ ಝಾವವೇ...... ಆ ಯೋಚನೆ ಬಂದಾಗ ಮೈತುಂಬ ಬೆಚ್ಚಗೆ ಹೊದ್ದು ಮಲಗಿದೆ. ಅನಂತರ ಎಚ್ಚರಾದುದು ಟಾಮಿ ಬಂದಾಗಲೇ.

ಪದೇಪದೇ ಎದ್ದು ಮಲಗಿದುದರಿಂದಲೋ ಏನೋ ಮತ್ತೆ ನಿದ್ದೆ ಬರಲಿಲ್ಲ.

ಬೆಳಿಗ್ಗೆ ತಾಯಿಗೆ ಜ್ವರ ಕಡಿಮೆಯಾದರೂ ಪೂರ್ತಿ ಬಿಡಲಿಲ್ಲ. ನಾನು ಅವಳಿಗೆ ಔಷಧಿಕೊಟ್ಟು ಬೆಳಗಿನ ಉಪಹಾರ ಮತ್ತು ಲಘು ಆಹಾರವನ್ನು ತಯಾರಿಸಿಟ್ಟು, ಬ್ರೆಡ್ಡು ಹಾಲು ಔಷಧಿಗಳನ್ನು ಕೊಟ್ಟು, ಬಿಮೆಲ್ಲಳನ್ನು ಕುರಿತು ಹೇಳಿದೆ "ಇಂದು ನಿನ್ನ ಕೆಲಸವಾದನಂತರ ಮನೆಗೇ ಬಂದುಬಿಡು. ತಾಯಿಗೆ ಜ್ವರ ಪೂರ್ತಿ ಬಿಡಲಿಲ್ಲ."

"ಪ್ರಯತ್ನಿಸುವೆ" ಎಂದಳೇನೋ ಹೌದು. ಆದರೆ, ಅವಳು ಕಲಿತ ಚಾಳಿ ಬಿಡುವವಳಲ್ಲ.

ನಾನು ಅಲ್ಲಿಗೆ ಸುಮ್ಮನಾಗಿ ಆಫೀಸಿಗೆ ಹೊರಟೆ. ಲವಲೇಶವೂ ಶಾಂತಿ ಇರಲಿಲ್ಲ. ಬ್ಯಾಂಕಿನ ಸಾಲ ತೀರದೆ ಮತ್ತೊಂದು ಯೋಚಿಸುವಂತಿರಲಿಲ್ಲ. ಈಚೆಗೆ ಆನಂದ್ ಮತ್ತು ವಸಂತರ ದರ್ಶನವೂ ಆಗಲಿಲ್ಲ. ಅಂದಮೇಲೆ ಸುಮ್ಮನೆ ಕನಸಿನ ಗೋಪುರ ಕಟ್ಟುವುದರಿಂದ ಏನು ಪ್ರಯೋಜನ ? ಮದರ್ ಸುಪೀರಿಯರ್ ಬಳಿಗೆ ಹೋಗಿ ಮುಂದಿನ ಮಾರ್ಗದರ್ಶನಕ್ಕೆ ಬೇಡುವುದೊಂದೇ ದಾರಿ.... ಆದರೆ ಸಾಲ ? ಆ ಪ್ರಶ್ನೆ ಧುತ್ತೆಂದು ನಿಲ್ಲಬೇಕೇ ? ನಾನು ನಿರಾಶಳಾಗಿ ನಿಟ್ಟುಸಿರು ಬಿಟ್ಟೆ.

ದೂರದಲ್ಲಿ ಭವ್ಯವಾಗಿ ತಲೆಯತ್ತಿ ನಿಂದ ವೆಸ್ಟ್ ಮಿನ್‌ಸ್ಟರ್ ಆಬೆಯ ಗೋಪುರ ಕಾಣಿಸುತಿತ್ತು.

ಅದರ ಮೇಲೆ ನಾಲ್ಕಾರು ಕಾಗೆಗಳು ಕುಳಿತು ಬಾಯಿ ಕಿಸಿದು ಕೂಗುತಿದ್ದುವು. ಅಲ್ಲಿಂದ ನೋಟವನ್ನು ರಸ್ತೆಯಕಡೆಗೆ ಹರಿಸಿದಾಗ ಮೊದಲು ದೃಷ್ಟಿಗೆ ಬಿದ್ದುದು ಪೀಟರ್. ಅವನು ಸಮೀಪಗತನಾಗಿ ಒಮ್ಮೆಗೇ ತನ್ನೆಲ್ಲಾ ಹಲ್ಲುಗಳನ್ನು ಪ್ರದರ್ಶಿಸುತ್ತ "ಆಫೀಸಿಗೆ ತಾನೇ ಹೊರಟಿದ್ದು ?"

"ಹೌದು......"

"ನಡೆ, ನಾನೂ ಅಲ್ಲಿಗೇ."

ಅವನ ನುಡಿ ಕೂರಿಗೆಯಂತೆ ಮನವನ್ನು ಹೊಕ್ಕಿತು. ನಾನು ನಡಿಗೆಯನ್ನು ನಿಧಾನಗೊಳಿಸಿ ನುಡಿದೆ "ನೀನು ಹೋಗು. ನಾನು ಬರುವುದು ನಿಧಾನ."

"ಏಕೆ ?" ದನಿ ಆಶ್ಚರ್ಯಯುಕ್ತವಾಗಿತು.

"........"

ಅವನು ಹಿಂತಿರುಗಿ ಒಂದೆರಡು ಕ್ಷಣ ನನ್ನನ್ನು ನೋಡಿ ನಿರಾಶೆ – ಅಸಿ ಅಸಮಾಧಾನ– ದುಗುಡಗಳಿಂದ ನುಡಿದ "ನಿನ್ನ ವಿಚಾರದಲ್ಲಿ ನಾನು ಎಷ್ಟೊಂದು ಆಸೆ ಇಟ್ಟುಕೊಂಡಿದ್ದೆನೋ ಅಷ್ಟೇ ಅಸಡ್ಡೆ ತೋರುತಿದ್ದಿ. ಒಂದುಕಾಲದಲ್ಲಿ ನೀನು ಎಷ್ಟೊಂದು ಸ್ನೇಹಪರಳಾಗಿದ್ದೆ ? ಈಗೇಕೆ ಹೀಗೆ.... ? ನಿನಗೆ ನನ್ನಲ್ಲಿ ಕಂಡುಬಂದ ಕುಂದಾದರೂ ಏನು ?"

"ನೀನು ದಯವಿಟ್ಟು ಏನೂ ಕೇಳಬೇಡ....... ನಾನು ಉತ್ತರಿಸಲಾರೆ. ಪ್ಲೀಸ್ ಗೋ ಅವೇ........"

ಅವನು ತೀವ್ರ ಅಸಮಾಧಾನದಿಂದ - ಸಿಟ್ಟಿನಿಂದ ದಡದಡನೆ ನಡೆದು ಹೋದ. ನಾನು ನಡಿಗೆಯನ್ನು ಸ್ವಲ್ಪ ನಿಧಾನಿಸಿದೆ. ಮನಸ್ಸು ಹಲವಾರು ಚಿಂತೆಗಳಿಂದ ನುಚ್ಚುನೂರಾಗಿತ್ತು. ಹಾದಿ ಸಾಗಿದುದೂ ಸಹ ಗಮನಕ್ಕೆ ಬರಲಿಲ್ಲ. ಆಫೀಸಿನ ಮೆಟ್ಟಲೇರಿದಾಗ ಭಾಸ್ಕರ್ ಡೈರೆಕ್ಟರೊಂದಿಗೆ ಮಾತಾ ಡುತ್ತ ನಿಂತುದುದನ್ನು ಕಂಡು ನನ್ನ ಹೃದಯ ಆನಂದದ ಹೆದ್ದೆರೆಗಳಿಂದ ತುಂಬಿ ತುಯ್ಯಲಾಡಿತು. ಒಂದು ಕ್ಷಣ ಹುಬ್ಬೆತ್ತಿ ನೋಡಿದೆ. ತುಟಿಗಳಲ್ಲಿ ಹೂನಗೆ ಅರಳಿತು. ಅವನ ಮುಖದಲ್ಲೂ ಪ್ರತಿನಗು ಮಿನುಗಿ ಮಾಯ ವಾಯಿತು, ನಾನು ನೇರವಾಗಿ ನನ್ನ ಮೇಜಿನ ಮುಂದೆ ಕುಳಿತುಕೊಂಡೆ. ಭಾವೋದ್ವೇಗದಿಂದ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು. ನರನರ ಗಳೂ ಉಲ್ಲಸಿತವಾದುವು. ಅವನ ಜೀವನೋತ್ಕರ್ಷ, ಅವನ ಅನುಭೂತಿ, ಅವನ ಆಲೋಚನಾ ಶ್ರವಂತಿ ಮುಂತಾದುವು ದಿವ್ಯ 'ಮನೀಷಿತ್ವ'ಕ್ಕೆ ದಾರಿ ಮಾಡಿಕೊಡುವಂತಹವು. ಅಂತಹ ಮಹೋನ್ನತ ವ್ಯಕ್ತಿ ನನ್ನಂತಹ ಯಃಕ ಶ್ಚಿತಳನ್ನು ಮೆಚ್ಚಿ ಒಲಿಯುವುದು ಸಾಧ್ಯವೇ ? ಎಂಬ ಪ್ರಶ್ನೆಯೆದ್ದು ಚಿತ್ತ ಭಿತ್ತಿಯ ಮೇಲೆ ನರ್ತಿಸತೊಡಗಿತು. ನಾನು ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ಕೆಲಸ ಆರಂಭಿಸಿದೆ.

೧೦೬–ಶ್ರದ್ಧಾಲಯ

ಸಂಜೆ ಆಫೀಸು ಬಿಟ್ಟಾಗ ನಾನು ಎಲ್ಲರಂತೆಯೇ ಹೊರಬಿದ್ದೆ. ಭಾಸ್ಕರ ನನಿಗಾಗಿ ಕಾಲುಗಳು ನಿಧಾನವಾಗಿ ಚಲಿಸಿದುವು. ಕಣ್ಣುಗಳು ಅವನನ್ನೇ ತಡುಕುತಿದ್ದುವು. ಉಸಿರು ಅವನಿಗಾಗಿಯೇ ಏರಿಳಿಯುತ್ತಿತ್ತು. ಸರಿ; ಜನರ ಗುಂಪಿನ ಮಧ್ಯೆ ಅವನೊಬ್ಬ ಕಾಣಿಸಿಕೊಂಡು ಹೆಜ್ಜೆಹೆಜ್ಜೆಗೂ ಸನಿಹಕ್ಕೆ ಬರತೊಡಗಿದ. ನಾನು ಅವನಿಗಾಗಿ ಕಾದು ನಿಂತೆ. ಅವನು ಬರಬರುತ್ತಲೇ ಕೇಳಿದ "ನೀನು ಮನೆಗೆ ಹೊರಟೆಯಾ ?"

"ಹೌದು...." ಲಜ್ಜಾಭಾವದಿಂದ ಹುಬ್ಬೆತ್ತಿ ನೋಡದೆ ನುಡಿದೆ.

ಅತ್ಯಂತ ನಿರಾಸೆಯ ದನಿಯಲ್ಲಿ ಭಾವನಾತ್ಮಕವಾಗಿ ಅವನು ಬಿತ್ತರಿಸಿದ "ನಾನು ಕೇಂಬ್ರಿಡ್ಜ್‌ಗೆ ಟ್ರೈನಿಂಗ್‌ಗಾಗಿ ಹೋಗಿದ್ದೆ, ನಿನಗೆ ಗೊತ್ತಿರಬಹುದು. ಅಲ್ಲಿ ಐದಾರು ತಿಂಗಳಿದ್ದು ಕಳೆದವಾರ ಇಲ್ಲಿಗೆ ಹಿಂತಿರುಗಿದೆ. ತೀವ್ರ ಮಾನಸಿಕ ಹೊಯ್ದಾಟದಿಂದ ನಾನು ಕೊಠಡಿಯನ್ನು ಬಿಟ್ಟು ಹೊರಹೋಗಲಿಲ್ಲ. ಆಫೀಸಿಗೆ ಬಂದು ರಿಪೋರ್ಟ್ ಮಾಡಿಕೊಳ್ಳಬೇಕಾಗಿತ್ತು. ಅದಕ್ಕೂ ಬರಲಾಗಲಿಲ್ಲ."

"ಈಗಿಲ್ಲಿ ಕೆಲಸ ಮಾಡುತಿದ್ದೀಯಷ್ಟೆ ?"

"ಹೌದು..."

"ಮತ್ತೇನು ಅಂತಹ ಪರಿತಾಪ ?"

"ಜೀವನ ಅಂದಮೇಲೆ ಏನಾದರೂ ಇರುತ್ತೆ. ಯಾರೇ ಆಗಲಿ ಸಾಮಾಜಿಕ ಪ್ರಾಕಾರವನ್ನು ದಾಟಿ ಹೋಗುವುದು ಸಾಧ್ಯವಾಗದು. ಜೀವನದ ಸುತ್ತಮುತ್ತ ಸಾಮಾಜಿಕ ಬಂಧ ಇದ್ದೇ ಇರುತ್ತದೆ."

"ಇರಲಿ, ಪ್ರಜ್ಞೆ ಪುಷ್ಟಿಯಾಗಿದ್ದರೆ ಸಮಾಜಕ್ಕಾಗಲೀ ಸಾಮಾಜಿಕ ಒತ್ತಡಕ್ಕಾಗಲೀ ನಾವು ಮಣಿಯಬೇಕಾಗಿಲ್ಲವಲ್ಲ."

ಹಾದಿಸಾಗುತ್ತಲೇ ಇತ್ತು. ನಾವು ಪಬ್ಲಿಕ್ ಹೆಲ್ತ್ ಆಫೀಸಿನ ಎದುರಿಗೆ ಬಂದಾಗ ನಾನೆಂದೆ "ನಾವು ಸ್ವಲ್ಪಹೊತ್ತು ಇಲ್ಲಿ ಕೂಡೋಣವೇ?"

ಹಸುರು ಹುಲ್ಲು ಹಾಸಿನ ಸುತ್ತಲೂ ಇದ್ದ ಹತ್ತಾರು ಕಲ್ಲು ಬೆಂಚುಗಳು ಬಾಬಾರೆಂದು ಆಹ್ವಾನಿಸುವಂತಿದ್ದುವು. ಆಗಲೇ ಅಲ್ಲಿ ಸಾಲ್ಕಾರು ಜೋಡಿ ಕುಳಿತು ಮಾತುಕತೆ ನಡೆಸುತಿದ್ದಾರೆ. ನನ್ನ ಕೇಳಿಕೆಯಿಂದ ಭಾಸ್ವಾನ್ ಅತ್ತ ಕಣ್ಣು ಹೊರಳಿಸಿ ನೋಡಿ 'ಆಗಬಹುದು' ಎಂದ.

ನಾವಿಬ್ಬರೂ ಆ ಪ್ರಾಕಾರವನ್ನು ದಾಟಿ ಒಂದು ಕಲ್ಲು ಬೆಂಚಿನಮೇಲೆ ಕುಳಿತುಕೊಂಡನಂತರ ಭಾಸ್ ಕೇಳಿದ "ಹೇಗಿತ್ತು ನಿನ್ನ ಭಾರತ ಪ್ರವಾಸ ?"

"ಬಲು ಸೊಗಸಾಗಿತ್ತು. ನಾನು ಅನೇಕ ಬಾರಿ ನಿನ್ನನ್ನು ಜ್ಞಾಪಿಸಿ ಕೊಂಡೆ. ನೀನೂ ಬಂದಿದ್ದರೆ ಇನ್ನಷ್ಟು ಕಳೆ ಕಟ್ಟುತಿತ್ತು."

ಅವನು ನಗು ಮುಖದಿಂದ ಅಂದ "ನೂರಿನ್ನೂರು ಮಂದಿಯ ಪ್ರವಾಸಕ್ಕೆ ನನ್ನೊಬ್ಬನಿಂದ ಕಳೆಕಟ್ಟುವುದೆಂತು ? ನಿನ್ನ ಹೇಳಿಕೆ ಬಲೂ ಬಾಲಿಶವಾದುದು !"

ಆ ಮಾತಿಗೆ ಒಂದು ಕ್ಷಣ ಯೋಚಿಸಿ ನಾನೆಂದೆ "ಯಾರಿಗಲ್ಲವಾದರೂ ನನ್ನ ಮನಸ್ಸಿಗಂತೂ ಆಗುತಿತ್ತು."

"ವೈಯಕ್ತಿಕ ಕಾಮನೆಗಳಿಗೆ ಹೆಚ್ಚು ಬೆಲೆ ಕೊಡುವುದರಿಂದೇನು ಪ್ರಯೋಜನ ? ಯಾವುದು ಸೂಕ್ತವೋ ಅದಕ್ಕೆ ಕೊಡಬೇಕು."

"ನಿಜ...."

"ಈಗ ಹೊತ್ತಾಯ್ತು. ನನಗೊಂದಿಷ್ಟು ಕೆಲಸವೂ ಇದೆ.... ಇನ್ನು ಮುಂದೆ ನಮ್ಮನಮ್ಮಲ್ಲಿ ಹೆಚ್ಚಿನ ಸ್ನೇಹಸಂಬಂಧವನ್ನು ಬೆಳಸುವುದು ಬೇಡ. ನನ್ನ ತಂದೆ ತೀರ ಸಂಪ್ರದಾಯ ಶರಣರು. ಅವರು ಯಾವತ್ತು ಅಂತರ್ಜಾತಿ ವಿವಾಹಕ್ಕೆ ಒಪ್ಪಿಗೆ ಕೊಡುವವರಲ್ಲ. ಆದ್ದರಿಂದ ದಯವಿಟ್ಟು ಕ್ಷಮಿಸು. ನೀನಿದನ್ನು ತಪ್ಪಾಗಿ ಭಾವಿಸಬೇಡ..."

ಆ ಮಾತು ಹೊರಟಿತೋ ಇಲ್ಲವೋ ನನ್ನ ಕಣ್ಣುಗಳಲ್ಲಿ ನೀರಾಡಿತು. ನಾನು ಏನೂ ಹೇಳಲಾರದೇ ಹೋದೆ. ಹೃದಯ ಕರಂಡ ಸಿಡಿದೊಡೆಯುವಂತೆ

ಬೇಯತೊಡಗಿತು. ನಾನು ನನ್ನನ್ನು ಸಾವರಿಸಿಕೊಳ್ಳಬೇಕಾದರೆ ಎಷ್ಟು ಕಷ್ಟವಾಯಿತೋ ದೇವರಿಗೇ ಗೊತ್ತು. ಬಿಸಿಯುಸಿರು ಏರಿ ಇಳಿಯುತ್ತಿದ್ದಂತೆ ನಾನು ನುಡಿಯಲಾರದೇ ನುಡಿದೆ "ನಾನು ನಿನಗಾಗಿ ಭಾರತದಿಂದ ಒಂದು ಸಣ್ಣ ಬಹುಮಾನವನ್ನು ತಂದಿರುವೆ. ಅದನ್ನು ಸ್ವೀಕರಿಸುವಷ್ಟು ಸಹೃದಯ ವನ್ನಾದರೂ ತೋರು."

"ಆಗಲಿ, ದಯವಿಟ್ಟು ನೊಂದುಕೊಳ್ಳಬೇಡ."

"ನಾನು ಎಂದೋ ನಿನ್ನವಳಾಗಿರುವೆ. ನನ್ನ ಆತ್ಮ ಸಮರ್ಪಣೆ ಮತ್ತು ರಕ್ತ ಸಮರ್ಪಣೆಗಳನ್ನು ಮನಃಪೂರ್ವಕವಾಗಿಯೆ ಮಾಡಿಕೊಂಡಿರುವೆ. ಅವು ತಿರಸ್ಕೃತವಾದರೂ ಅವು ನಿನ್ನಲ್ಲಿಯೇ ಉಳಿಯುವಕಾರಣ ನನಗೇನೂ ದುಃಖವಿಲ್ಲ; ಆದರೆ ಸಂಕಟವಿದೆ; ಪರಿತಾಪವಿದೆ. ನಿನ್ನಿಂದ ದೂರವಿರುವುದಾಗಲೀ ಮರೆಯು ವುದಾಗಲೀ ನನಗೆ ಬಹಳ ಕಷ್ಟ. ಹುಟ್ಟಿಸಿದ ದೇವರು ಹೇಗಾದರೂ ಹಾಲುಣಿಸಿ ಯಾನು ಎಂಬ ನಂಬಿಕೆಯಲ್ಲಿ ಕಾಲಹರಣ ಮಾಡುವೆ...."

ಅಷ್ಟು ಮಾತು ಮುಗಿಯುವುದರೊಳಗಾಗಿ ನನ್ನ ಕಣ್ಣುಗಳಲ್ಲಿ ಕಂಬನಿಗ ಳುಕ್ಕಿದುವು. ಆಗ ಭಾಸ್ವಾನ್ ಮನಕರಗಿ ಬೆನ್ನನ್ನು ನೇವರಿಸುತ್ತ ಅಂದ, "ಖಂಡಿತ ಶೋಕಿಸಬೇಡ. ನಿನ್ನ ಮಾತುಗಳಿಂದ ನನ್ನ ಹೃತ್ಕಮಲವೂ ಸಂಕಟಾಗ್ನಿಯಿಂದ ದಹಿಸುತ್ತಿದೆ. ಆದರೆ, ನಮ್ಮನ್ನು ನಾವು ಸುಧಾರಿಸಿ ಕೊಳ್ಳುವುದರಲ್ಲೇ ಆತ್ಮ ಗೌರವವಿದೆ. ಜೀವನ ಸೌಖ್ಯವಿದೆ."

ಅನಂತರ ಅವನಾಗಲೀ ನಾನಾಗಲೀ ಒಂದೂ ಮಾತಾಡಲಿಲ್ಲ. ಇಬ್ಬರ ಗಂಟಲೂ ಕಟ್ಟಿದಂತಾಯ್ತು. ನಾನು 'ಗುಡ್ ಈವ್ನಿಂಗ್ !" ಹೇಳ ಲಾರದೆ ಹೇಳಿದೆ. ಅವನೂ ಪ್ರತಿವಂದಿಸಿ ಹೊರಟೇಬಿಟ್ಟ. ಅವನ ರೀತಿ ಯನ್ನು ನೋಡಿದರೆ ಅವನಿಗೂ ಸಂಕಟವಾಗಿರಬೇಕು ಎನಿಸಿತು ನನಗೆ. ದುಃಖ ದುಗುಡ ಸಂಕಟಗಳಿಂದ ಭಾರವಾದ ಹೃದಯವನ್ನು ಹೊರಲಾರದೇ ಹೊತ್ತು ಮನೆಯನ್ನು ಮುಟ್ಟಿದಾಗ ತಾಯಿ ಜ್ವರದ ತಾಪದಿಂದ ಬಳಲು ತಿದ್ದಳು. ಟಾಮಿಯಾಗಲೀ ಬೆಮಲ್ ಆಗಲೀ ಯಾರೂ ಇರಲಿಲ್ಲ. ನಾನು

ಅವಳಿಗೆ ಔಷಧೋಪಚಾರ ಮಾಡಿ ಅಡಿಗೆ ಮನೆಗೆ ಹೋದೆ. ಮನಸ್ಸು ಒಡೆದ ಕನ್ನಡಿಯಂತೆ ನುಚ್ಚುನೂರಾಗಿತ್ತು. ಅಲ್ಲಿ ಒಬ್ಬಳೇ ಕುಳಿತು ಮನಃ ಪೂರ್ತಿ ದುಃಖವನ್ನು ಹೊರಹರಿಯಬಿಟ್ಟು ಹೃದಯವನ್ನು ಸ್ವಲ್ಪ ಹಗುರ ಮಾಡಿಕೊಂಡೆ.

ಆದರೂ....ಮನಸ್ಸು ಯೋಚನಾಂಬುಧಿಯಲ್ಲಿ ಮುಳುಗಿತು.

ಆ ಬಳಿಕ ಮೂರು ದಿನಗಳ ಪರ್ಯಂತ ಆಫೀಸಿಗೆ ಹೋಗಲಾಗಲಿಲ್ಲ. ತಾಯಿಗೆ ಸ್ವಾಸ್ಥ್ಯವಿಲ್ಲದಿದ್ದುದು ಇನ್ನೊಂದು ಕಾರಣ. ಬರಿದಾದ ಹೃದಯದ ಸಂಕಟ ಕೀಟದಂತೆ ಕೊರೆಯುತಿತ್ತು ಮನಃಪ್ರಾಣಗಳನ್ನು. ನಾನು ಅತೀವ ಕಷ್ಟದಿಂದ ಕಾಲಹರಣ ಮಾಡಿದೆ. ಭಾಸ್‌ಗೆ ಬಹುಮಾನ ತಂದಿರುವೆ ಎಂದು ಹೇಳಿಯಾಗಿದೆ. ಅದನ್ನಂತೂ ಅವನಿಗೆ ಕೊಡಲೇಬೇಕು...ಎಂಬ ಯೋಚನೆ ಬಂದಾಗ ಅಂಗಡಿಗೆ ಹೋಗಿ ಒಂದು ಚಿಕ್ಕ ಕಾಗದದ ಪೆಟ್ಟಿಗೆಯನ್ನೂ ಅದಕ್ಕೆ ಸುತ್ತುವ ಬಣ್ಣದ ಕಾಗದವನ್ನೂ ಕೊಂಡು ತಂದೆ. ಗಂಗಾಜಲದ ಕರಂಡ ವನ್ನೂ ಅರಿಸಿನ ಕುಂಕುಮಗಳ ಪೊಟ್ಟಣವನ್ನೂ ಒಣ ಹೂಗಳನ್ನೂ ಹೃಷಿ ಕೇಶದ ಮೃತ್ತಿಕೆಯನ್ನೂ ಅದರಲ್ಲಿ ಕ್ರಮವತ್ತಾಗಿ ಜೋಡಿಸಿ ಬಣ್ಣದ ಕಾಗದ ದಿಂದ ಸುತ್ತಿ ಒಂದು ಚಿಕ್ಕ ರಿಬ್ಬನ್ ಸುತ್ತಿ ಅಲಂಕರಿಸಿ ನನ್ನ ಬ್ಯಾಗಿ ನಲ್ಲಿ ಇಟ್ಟುಕೊಂಡೆ. ಭರಣಿ ಪುಟ್ಟದಾದುದರಿಂದ ಅದು ಸುಖವಾಗಿ ಹಿಡಿಸಿತು. ನಾನು ಆಫೀಸಿಗೆ ಹೊರಡುತ್ತ ತಾಯಿಯನ್ನು ಕೇಳಿದೆ "ನಾನು ಇಂದು ಆಫೀಸಿಗೆ ಹೋಗಲೇ ?"

"ಹೋಗಿ ಬಾ ಮಗಳೇ !"

ಅವಳಿಗೆ ಜ್ವರ ಬಿಟ್ಟಿದ್ದರೂ ಬಹಳ ನಿಶ್ಶಕ್ತಿಯಿತ್ತು. ನಾನು ಹೊರ ಹೊರಡುತ್ತ ಗಡಿಯಾರದ ಮೇಲೆ ದೃಷ್ಟಿಯನ್ನು ಹೊರಳಿಸಿದೆ. ಆಗಲೇ ಒಂಭತ್ತುಮುಕ್ಕಾಲು. ಇನ್ನು ಹದಿನೈದು ನಿಮಿಷಗಳೊಳಗಾಗಿ ಆಫೀಸನ್ನು ಮುಟ್ಟಬೇಕು....ಯೋಚಿಸುತ್ತಲೇ ಮೆಟ್ಟಿಲಿಳಿದೆ. ಬಹಳ ದಿನಗಳಿಂದ ಬಸ್ಸನ್ನು ಹತ್ತಿರಲಿಲ್ಲ ಕೂಡ. ಈ ದಿನ ಹತ್ತದೆ ವಿಧಿಯಿರಲಿಲ್ಲ. ನೇರವಾಗಿ ಬಸ್ ನಿಲ್ದಾಣಕ್ಕೆ ಹೋದೆ. ನೋಡಿದರೆ ಅಲ್ಲಿ ಭಾಸ್ ! ಅವನ ದೃಷ್ಟಿ ಬೇರೆಲ್ಲೋ

ಹರಿದಿದ್ದುದರಿಂದ ನನ್ನನ್ನು ನೋಡಲಿಲ್ಲ. ನಾನು ಸನಿಹಕ್ಕೈದುತ್ತಲೂ ಅವನ ದೃಷ್ಟಿ ಇತ್ತ ಹರಿಯಿತು. ನನ್ನನ್ನು ನೋಡಿ ಸುಖ ದುಃಖ ಮಿಶ್ರಿತ ಭಾವನೆಯಿಂದ ಬಿಸಿಯುಸಿರನ್ನು ಹೊರಹಾಕಿ ಕೇಳಿದ "ಎಲ್ಲಿಗೆ ಹೊರಟೆ ? ಆಫೀಸಿಗೆ ತಾನೆ ?

"ಹೌದು"

"ಇನ್ನೂ ಆರು ನಿಮಿಷಗಳಿವೆ ಬಸ್ಸು ಬರುವುದಕ್ಕೆ"

ನಾನು ಆ ಕ್ಷಣವೇ ನನ್ನ ಬ್ಯಾಗಿನಲ್ಲಿದ್ದ ಚಿಕ್ಕ ಪೆಟ್ಟಿಗೆಯನ್ನು ತೆಗೆದು ಅವನ ಕೈಗಿಡುತ್ತ ಹೇಳಿದೆ "ಭಾರತದಲ್ಲಿ ಯಾವ ವಸ್ತುವನ್ನು ತೆಗೆದು ಕೊಳ್ಳಬೇಕೋ, ಯಾವುದರಲ್ಲಿ ಏನು ವಿಶೇಷವೋ ಇಷ್ಟರ ಮೇಲೆ ನಿನ್ನ ಇಷ್ಟವೇನೋ ಅದನ್ನೂ ನಾನರಿಯೆ. ನನ್ನ ಮನಸ್ಸಿಗೆ ಆ ಮುಹೂರ್ತದಲ್ಲಿ ಏನು ಹೊಳೆಯಿತೋ ಅದನ್ನು ತಂದಿರುವೆ. ನಿನಗೆ ಬೇಡವಾದರೆ ಎಸೆದು ಬಿಡು."

"ಇರಲಿ, ನೀನು ಎಷ್ಟು ಕೀಳು ವಸ್ತುಗಳನ್ನು ತಂದಿದ್ದರೂ ಪರವಾಗಿಲ್ಲ. ಅದು ಭಾರತದ್ದು ಎಂದರೆ ಅಷ್ಟೇ ಸಾಕು."

ಅವನು ಎರಡೂ ಕೈಗಳಿಂದ ಸ್ವೀಕರಿಸಿ ನುಡಿದ "ನೀನು ರಕ್ತದಾನ ಮಾಡಿ ನನ್ನ ಪ್ರಾಣವನ್ನು ಉಳಿಸಿದುದಲ್ಲದೆ ನನ್ನ ಸೇವೆಯನ್ನು ಮನಮುಟ್ಟಿ ಮಾಡಿರುವೆ. ಮೇಲಾಗಿ ಈ ಬಹುಮಾನವನ್ನೂ ತಂದಿರುವೆ. ನಾನಂತೂ ನಿನಗೇನನ್ನೂ ಮಾಡಲಿಲ್ಲ. ಸಮಯ ಸಿಕ್ಕಿ ಸಹಾಯ ಮಾಡಬಲ್ಲೆನಾದರೆ ಖಂಡಿತ ಮಾಡುವೆ. ನಿನಗೇನಾದರೂ ಅಗತ್ಯವಿದ್ದರೆ ಹೇಳು. ಸಂಕೋಚ ಮಾಡಬೇಡ. ಸ್ನೇಹಾಚಾರದಲ್ಲಿ ಸಂಕೋಚವಿರಕೂಡದು."

ನನ್ನ ಕಣ್ಣುಗಳಲ್ಲಿ ಮಿನುಗಿದ ಹನಿಯೇ ಉತ್ತರವಾಯಿತು. ನಾನು ಏನೂ ಹೇಳಲಿಲ್ಲ. ದುಃಖದುಗುಡಗಳಿಂದ ಹೃದಯ ಏರಿ ಇಳಿಯತೊಡಗಿತು. ಆದರೂ ಮನೋದೌರ್ಬಲ್ಯವನ್ನು ತೋರಗೊಡದಿರಲು ಕೂಡಲೇ ಬೇರೆಡೆಗೆ ಮೊಗ ತಿರುವಿ, ಕರವಸ್ತ್ರದಿಂದ ಮುಖವನ್ನು ಒರಸಿಕೊಳ್ಳುವ ನೆವದಲ್ಲಿ

ಕಣ್ಣುಗಳನ್ನು ಒರೆಸಿಕೊಂಡೆ. ಆಗ ಅವನಿಗೇನೆನಿಸಿತೋ ಹೇಳಲಾರೆ. ಅದೇ ಕ್ಷಣದಲ್ಲಿ ಬಸ್ಸು ಬಂದು ನಿಂತಿತು. ನಾನು ಇತ್ತ ತಿರುಗಿದಾಗ ಅವನ ಮುಖಬಿಂಬ ಕೆಂಪು ಕೆಂಪಾದುದನ್ನು ಕಂಡೆ. ಓ ವಾಟ್ ಎ ಜಂಟಲ್ ಮ್ಯಾನ್ !

ಇಬ್ಬರೂ ಬಸ್ಸು ಹತ್ತಿದೆವು. ನಮ್ಮೊಂದಿಗೆ ಇನ್ನೂ ಅನೇಕರು ಬಸ್ಸು ಹತ್ತಿದರು. ನಾನು ಹತ್ತಿದುದು ನಿಧಾನವಾದುದರಿಂದ ಸೀಟಿಗಾಗಿ ಮುಂದೆ ಮುಂದೆ ನಡೆಯಬೇಕಾಯಿತು. ಭಾಸ್ ಆಗಲೇ ಸೀಟಿನಲ್ಲಿದ್ದ. ನಾನು ಮುಂದೆ ಹೋಗಿ ಡ್ರೈವರ್ ಪಕ್ಕದ ಸೀಟಿನಲ್ಲಿ ಕುಳಿತೆ. ಆಫೀಸಿನ ಕೆಲಸ ಯಾಂತ್ರಿಕವಾಗಿ ನಡೆಯಿತು. ಅನಂತರ ಮೂರು ದಿನ ಭಾಸ್‌ನನ್ನು ನಾನು ಕಾಣಲಿಲ್ಲ. ತದನಂತರ ಐದು ದಿನ ಸಾರ್ವತ್ರಿಕ ರಜ.

ಅವನು ಏಕೆ ಬರಲಿಲ್ಲವೋ ನನಗೆ ಅರ್ಥವಾಗಲಿಲ್ಲ. ನನ್ನ ಬಹುಮಾನ ದಿಂದ ಸಮಾಧಾನವಾಯಿತೋ ಅಸಮಾಧಾನವಾಯಿತೋ ದೇವರಿಗೇ ಗೊತ್ತು. ಅವನು ನನ್ನನ್ನು ಪರಿಗ್ರಹಿಸುವುದಿಲ್ಲ ಎಂದಮೇಲೆ ಏನಾದರೂ ಸರಿಯೇ ಎಂಬ ಉದಾಸೀನ ಮೂಡುವುದುಂಟು. ಅವನನ್ನು ಪ್ರೀತಿಸಿದ್ದು ಗೋಡ್ಕಲ್ಲಮೇಲೆ ನೀರೆರೆದಂತೆಯೇ ಸರಿ. ಹೋಗಲಿ, ನನ್ನ ಹಣೆಯಲ್ಲಿ ಏನು ಬರೆದಿದೆಯೋ ಅದಾಗುತ್ತೆ ಎಂಬ ತೀರ್ಮಾನ ಮನಃಪ್ರಾಣಗಳಲ್ಲಿ. ಆದ ರೇನು ? ದಗ್ಧ ಹೃದಯದ ತಾಪ-ಪರಿತಾಪಗಳು ನರನರಗಳನ್ನೂ ಸುಡು ತ್ತವೆ. ತಾಳಲಾರೆ, ಅನುಭವಿಸಲಾರೆ. ಬಿಡುವಿನ ವೇಳೆಯಲ್ಲಿ ಭಗವದ್ಗೀತೆ ಯನ್ನು ಹಿಡಿದುಕೊಂಡು ಹಾಸಿಗೆಯಮೇಲೆ ಬಿದ್ದುಕೊಳ್ಳುವೆ. ಆದರಿಂದ ನನಗೆ ಅಂತಹ ಸಹಾಯವಾಗಲಿಲ್ಲ. ಅಥವಾ ನಾನೇ ಪಡೆದುಕೊಳ್ಳಲು ಅಶಕ್ತ ಳಾದೆ. ಮಾನಸಿಕ ವಿಭ್ರಮೆ ಕಾಣದ ಕೈಗಳಿಂದ ಹೃದಯವನ್ನು ಹಿಂಡುವಾಗ ಜೀವ ಯಾಂತ್ರಿಕವಾಗಿ ಉಸಿರಾಡುತ್ತದೆ, ದಿನಚರಿಗೆ ಪೂರಕವಾಗಿ.

ಆ ಏಳೆಂಟು ದಿನಗಳೂ ಕ್ರಮವತ್ತಾಗಿ ಉರುಳಿಹೋದುವು. ಮತ್ತೆ ಯಥಾಪ್ರಕಾರವಾದ ದಿನಚರಿ. ಅಂದು ಭಾಸ್ ಆಫೀಸಿಗೆ ಬಂದಿರಲಿಲ್ಲ. ಮರುದಿನವೂ ಬರಲಿಲ್ಲ. ಹಾಗೇ ಸೂಕ್ಷ್ಮವಾಗಿ ವಿಚಾರಿಸಿದಾಗ ಅವನು

ಹತ್ತು ದಿನದ ರಜೆ ಬರೆದಿದ್ದಾನೆಂದು ತಿಳಿಯಿತು. ಏನು ಕಾರಣವೋ ತಿಳಿಯಲಿಲ್ಲ. ಕಾಯಿಲೆ ಬಿದ್ದಿರಬಹುದೇ ಎಂಬ ಪ್ರಶ್ನೆಯೂ ಎದ್ದಿತೊಮ್ಮೆ. ಆದರೆ ಹೇಳುವವರಾರು ? ಕೈಗಳು ಯಾಂತ್ರಿಕವಾಗಿ ಕೆಲಸ ಮಾಡಿದುವು. ಒಂದೊಂದು ಕ್ಷಣವೂ ದೀರ್ಘ ದೀರ್ಘವಾಗಿ ಉರುಳುತ್ತಿರುವಷ್ಟು ಬೇಸರ. ಮೇರಿ ನನ್ನ ರೀತಿಯನ್ನು ಗಮನಿಸಿ ಕೇಳಿದಳು "ಏಕೆ ಏನೋ ಒಂದು ಬಗೆಯಾಗಿದ್ದಿ ? ಆರೋಗ್ಯ ಚೆನ್ನಾಗಿಲ್ಲವೇ ?"

ಅವಳು ಆ ಪ್ರಶ್ನೆ ಕೇಳಿದ್ದು ನನಗೆ ಸುಲಭವಾಗಿ ಉತ್ತರಿಸಲು ದಾರಿ ಮಾಡಿಕೊಟ್ಟಿತು. ನಾನೆಂದೆ,

"ನನಗಲ್ಲಮ್ಮ. ನನ್ನ ತಾಯಿಗೆ ಆರೋಗ್ಯ ಸರಿಯಾಗಿಲ್ಲ. ಮನೆಯಲ್ಲಿ ಬೇರೆಯಾರೂ ಇರುವುದಿಲ್ಲವಾದುದರಿಂದ ನನಗವಳದೇ ಚಿಂತೆ. 'ಓ ಮದರ್ ಈಸ್ ಎ ಮದರ್."

ಹಾಗೆಂದುದು ನಿಜವಾಗಿಯೂ ನನ್ನ ಆತ್ಮವಿರೋಧವೇ. ಅವಳ ಬಗೆ ಚಿಂತೆಯಿಲ್ಲ ಎಂದೇನಿಲ್ಲವಾದರೂ ಪೂರ್ತಿ ಅದೇ ಆಗಿರಲಿಲ್ಲ. ಅದನ್ನು ಮನಸಲ್ಲೇ ಆತ್ಮನಿವೇದನೆ ಮಾಡಿಕೊಂಡೆ. ನೀಳವಾದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು.

ಂ ಂ ಂ ಂ ಂ

ನಸುಗತ್ತಲೆ ಮುಸುಕುವ ಸಮಯ.

ರಸ್ತೆಯಲ್ಲಿ ವಿರಳವಾದ ಜನ. ಹಾರ್ಡಿಂಜ್ ರಸ್ತೆಯಲ್ಲಿ ಹಾದು ವಿಲ್ಲಿಂಗ್‌ಟನ್ ಸರ್ಕಲನ್ನು ಸೇರುವುದಕ್ಕೆ ಇನ್ನೂ ಹತ್ತುಮಾರು ನಡೆಯಬೇಕಿತ್ತು. ಅಷ್ಟರಲ್ಲಿ ಸರ್ರನೆ ಬಂದ ಕಾರೊಂದು ಗಕ್ಕನೆ ಬಳಿಯಲ್ಲಿ ನಿಂತಿತು. ಅದರಲ್ಲಿದ್ದ ಮೂವರೂ ನನ್ನತ್ತಲೇ ನೋಡಿದರು. ಪೀಟರ್ ಕೇಳಿದ "ಎಲ್ಲಿಗೆ ಹೋಗಬೇಕು ಹೇಳು ? ನಿನಗೆ ಲಿಫ್ಟ್‌ಕೊಡುವೆ."

ನಾನು ಅವನನ್ನು ದುರುಗುಟ್ಟಿ ನೋಡಿ "ನೋನೋ....ಎನ್ನುತ್ತ ಎರಡು ಹೆಜ್ಜೆ ಮುಂದಿಡುವಷ್ಟರಲ್ಲಿ ಅವನು ನನ್ನನ್ನು ಎತ್ತಿ ಕಾರಿನಲ್ಲಿ ಒಗೆದ ! ಅವನ ಗೆಳೆಯರು ನನ್ನನ್ನು ಅದುಮಿ ಹಿಡಿದರು ! ನಾನು ಕಿರುಚಿ ಒದ್ದಾಡುತ್ತಿರು ವಾಗಲೇ ಅವನು ಕಾರು ಹತ್ತಿ ಸ್ಟಾರ್ಟ್ ಮಾಡಿದ. ಅದೇ ಹೊತ್ತಿಗೆ ಹಿಂದಿ ನಿಂದ ಯಾರೋ ಕಾರಿನ ಚಕ್ರಕ್ಕೆ ಗುಂಡಿಟ್ಟರು. ಟಯರ್‌ಗೆ ಸರಿಯಾದ ಏಟು ಬೀಳಲಿಲ್ಲವೇನೋ, ತಕ್ಷಣ ಇನ್ನೊಂದು ಚಕ್ರಕ್ಕೂ ಏಟು ಬಿತ್ತು ಟ್ಯೂಬಿನ ಗಾಳಿ ಪುಸ್ಸೆಂದು ಹೊರಹೋಗಿ ಚಕ್ರಗಳು ಕುಸಿದು ಕುಳಿತುವು. ಹಿಂದಿಲಿಂದ ಬಾಬಿ (ಪೋಲೀಸ್) ಧಾವಿಸಿ ಬರುತಿದ್ದಾಗಲೇ ಭಾಸ್ ಆನಂದ್ ವಸಂತ್ ಮೂವರೂ ಅಲ್ಲಿ ಪ್ರತ್ಯಕ್ಷರಾದರು. ನಾನು ಕಾರಿನಿಂದ ಹಾರಿ ಕೆಳಗಿಳಿದೆ. ಭಯ ಭೀತಿಗಳಿಂದ ಹೃದಯ ಡಬಡಬನೆ ಬಡಿದುಕೊಳ್ಳುತಿತ್ತು. ಭಾಸ್ ಬಳಿಗೆ ಒಂದೇ ಬಾರಿಗೆ ಜಿಗಿದು ಅವನ ಬೆನ್ನ ಮರೆಹೊಕ್ಕು ಗಳಗಳನೆ ಅತ್ತುಬಿಟ್ಟೆ. ಪೋಲೀಸಿನವ ಆ ಮೂವರೆಡೆಗೆ ನುಗ್ಗುವುದರೊಳಗಾಗಿ ಪೋಲೀಸ್ ವ್ಯಾನ್ ಬಂದು ನಿಂತಿತು. ಅದರಿಂದ ಬಾಬಿಗಳು ಇಳಿದು ಮೂವ ರನ್ನೂ ವ್ಯಾನಿನೊಳಗೆ ದಬ್ಬಿದನಂತರ ನನ್ನ ಬಳಿಗೆ ಹಿರಿಯ ಅಧಿಕಾರಿ ಬಂದು ಕೇಳಿದ "ಏನಾಯಿತು ? ಯಾವ ಕಾರಣಕ್ಕಾಗಿ ನಿನ್ನನ್ನು ಬಲಾತ್ಕಾರವಾಗಿ ಹಿಡಿದೊಯ್ಯುತಿದ್ದರು ?"

ಸಣ್ಣಗೆ ನಡುಗುತಿದ್ದ ನಾನು ಉತ್ತರಿಸಲು ಪ್ರಯತ್ನಿಸಿದರೂ ಗಂಟಲು ಒಣಗಿದ್ದುದರಿಂದ ಸಾಧ್ಯವಾಗದೆ ಭಾಸ್‌ನ ಭುಜದಮೇಲೆ ತಲೆಯಿಟ್ಟು ಬಿಕ್ಕ ತೊಡಗಿದೆ. ವಸಂತ್ ಆನಂದ್ ಮೂಕ ಪ್ರೇಕ್ಷಕರಾಗಿದ್ದರು. ಭಾಸ್ ನನ್ನ ತಲೆಯನ್ನು ಅದುಮಿ ಹಿಡಿದು ಸಂತೈಸುವ ಧಾಟಿಯಲ್ಲಿ ಹೇಳಿದ "ಗಂಡಾಂತರ ತಪ್ಪಿತಲ್ಲ, ಈಗ ಮತ್ತೇಕೆ ದುಃಖ ? ಬಾಬಿಗಳಿಗೆ ಉತ್ತರ ಹೇಳು."

"ಇದು ಬರೀ ದ್ವೇಷದಿಂದ ಕೂಡಿದ್ದು. ಮೊದಲಿಂದಲೂ ಅವನಿಗೆ ನನ್ನನ್ನು ಮದುವೆಯಾಗುವ ಉದ್ದೇಶವಿತ್ತು. ಆದಕ್ಕೆ ನಾನು ಒಪ್ಪದಿದ್ದು ದರಿಂದ ಈ ಕ್ರಮ ಕೈಕೊಂಡಿದ್ದಾನೆ."

ಅನಂತರ ನಾನು ಪೋಲೀಸ್ ಸ್ಟೇಷನ್ನಿಗೆ ಹೋಗಿ ಹೇಳಿಕೆ ಕೊಟ್ಟು ಹಿಂದಿರುಗುತ್ತ ಭಾಸ್ ಕೇಳಿದ "ಪೀಟರ್ ಈಗ ನಮ್ಮ ಕಂಪನಿಯಲ್ಲಿ ಕೆಲಸ ಮಾಡುತ್ತಿಲ್ಲವಷ್ಟೆ ?"

"ಅವನು ಕೆಲಸ ಬಿಟ್ಟು ತಿಂಗಳ ಮೇಲಾಯಿತು. ಅವನು ಲಂಡನ್ನಿನಲ್ಲಿಲ್ಲ. ಬರ್ಲಿನ್ನಿಗೆ ಹೋಗಿದ್ದಾನೆಂದು ಕೇಳಿದ್ದೆ. ಈಗ ಇಲ್ಲಿಗೆ ಹೇಗೆ ಹಠಾತ್ ಬಂದನೋ ತಿಳಿಯದು" ಎಂದೆ ಆಶ್ಚರ್ಯ ಸೂಸಿ–"ಅವನಿಗೆ ಖಂಡಿತ ನನ್ನ ಮೇಲೆ ಸೇಡು ತೀರಿಸಿಕೊಳ್ಳುವ ದುರುದ್ದೇಶವಿತ್ತು. ಅದಕ್ಕೆ ಹೀಗೆ...ಹಠಾತ್ತಾಗಿ ದುಷ್ಕೃತ್ಯ ಕೈ ಕೊಂಡಿದ್ದಾನೆ."

"ನಿನ್ನ ಅರಚಾಟದ ಧ್ವನಿ ಕೇಳಿದಾಗ ಯಾರೋ ಎಂದುಕೊಂಡಿದ್ದೆ..." ಎಂದ ಭಾಸ್.

"ಅವನಿಗೆ ಮೂಳೆ ಮುರಿಯುವಂತೆ ಒದೆಯಬೇಕಿತ್ತು !" ವಸಂತ್ ಹಲ್ಲು ಕಚ್ಚಿದ.

"ನೀವೆಲ್ಲಾ ಇಲ್ಲದಿದ್ದರೆ ನನ್ನ ಗತಿ ಏನಾಗುತಿತ್ತೋ..." ನಡುಗುವ ದನಿಯಲ್ಲಿ ನುಡಿದೆ ನಾನು.

"ಪೋಲೀಸ್ ವ್ಯಾನು ಸಮಯಕ್ಕೆ ಸರಿಯಾಗಿ ಬಂದುದೇ ವಿಶೇಷ. ಅವನು ಗುಂಡು ಹಾಕಿದೊಡನೆ ವಿಶಿಲ್ ಕೇಳಿಸಿತು. ಆ ತಕ್ಷಣವೇ ಪೋಲೀಸ್ ವ್ಯಾನು ಹಿಂದೆಯೇ ಧಾವಿಸಿ ಬಂತು. ಎಲ್ಲಾ ಕೆಲವು ನಿಮಿಷಗಳಲ್ಲೇ ನಡೆದು ಹೋಯಿತು." ಭಾಸ್ ಅಷ್ಟೆಂದ ಬಳಿಕ ಒಂದೆರಡು ಗಳಿಗೆ ತಡೆದು ನುಡಿದ "ಆನಂದ್–ವಸಂತರ ಕೋಠಡಿ ಇಲ್ಲೇ....ಅವರೊಂದಿಗೆ ಕೂಡುವುದಕ್ಕಾಗಿ ನಾನಿಲ್ಲಿಗೆ ಬಂದಿದ್ದೆ."

"ನಾನು ಸೋಫಿಯೊಂದಿಗೆ ಶಾಪಿಂಗ್ ಮುಗಿಸುವಾಗ ಇಷ್ಟು ಹೊತ್ತಾಯ್ತು. ಅವಳು ಸರ್ಪೆಂಟೈನ್ ರಸ್ತೆ ಹಿಡಿದಳು. ನಾನು ಹೀಗೆ ಬಂದೆ, " ಎಂದೆ ಗದ್ಗದ ಕಂಠದಿಂದ.

ಅನಂತರ ವಸಂತ್ ಆನಂದ್ ಹಿಂದೆ ಉಳಿದರು. ಅವರಿಗೆ 'ಗುಡ್‌ಬೈ' ಹೇಳಿ ಟ್ಯಾಕ್ಸಿ ಸ್ಟ್ಯಾಂಡ್‌ವರೆಗೆ ಬಂದು ನನ್ನನ್ನು ಕಳಿಸುವುದಾಗಿ ಭಾಸ್ ಹೇಳಿದುದರಿಂದ ನಾನು ನಿಶ್ಚಿಂತಳಾಗಿ ಅವನೊಂದಿಗೆ ನಡೆದೆ. ಅಲ್ಲಿಂದ ಸರ್ಕಲ್ ದಾಟಿದರೆ ಬಸ್‌ಸ್ಟ್ಯಾಂಡ್. ಭಾಸ್ ಮನಬಿಚ್ಚಿ ಏನೂ ಹೇಳಲಿಲ್ಲ. ನನ್ನ ಬಹುಮಾನದ ಬಗ್ಗೆ ಅವನು ಚಕಾರವೆತ್ತದುದರಿಂದ ನಾನು ಕೇಳಲಿಲ್ಲ. ಹಾದಿ

ಸ್ವಲ್ಪಹೊತ್ತಿನೊಳಗಾಗಿ ಕಳೆಯಿತು. ನಾವು ಟ್ಯಾಕ್ಸಿಸ್ಟ್ಯಾಂಡಿಗೆ ಹೋದ ನಂತರ ಭಾಸ್ ಒಂದು ಟ್ಯಾಕ್ಸಿಯನ್ನು ಹಿಡಿದು ಅದರ ಬಾಡಿಗೆಯನ್ನು ತಾನೇ ಕೊಟ್ಟು ನನಗೆ 'ಗುಡ್‌ಬೈ' ಹೇಳಿದನಂತರ "ಹೆದರಿಕೊಳ್ಳಬೇಡ" ಎಂದ. ನನಗೆ ಏನು ಹೇಳಬೇಕೋ ತಿಳಿಯದೆ ಸುಮ್ಮನೆ 'ಹೂಂ' ಎಂದೆ.

ಟ್ಯಾಕ್ಸಿ ಹೊರಟಿತು. ನನ್ನ ಕಣ್ಣುಗಳು ಮತ್ತೆ ಮತ್ತೆ ತೇವವಾದುವು.

ಮನೆ ಮುಟ್ಟಿದಾಗ ರಾತ್ರಿ ಎಂಟು ಗಂಟೆ. ಮೂವರೂ ಊಟಕ್ಕೆ ಕುಳಿತುಕೊಳ್ಳುತ್ತ ಹತ್ತು ಮಾತಿನಲ್ಲಿ ನಡೆದ ಘಟನೆಯನ್ನು ವಿವರಿಸಿ ಹೇಳಿದಾಗ ಜೆಮೆಲ್ "ನೀನು ಬರೀ ಸಪ್ಪೆ. ಇನ್ನಾರಾದರೂ ಆಗಿದ್ದಿದ್ದರೆ ನಾಲ್ಕು ಬಾರಿಸದೆ ಇರುತ್ತಿರಲಿಲ್ಲ" ಎಂದಳು.

"ಅವರು ಮೂರು ಮಂದಿ. ನಾನೊರ್ವಳೇ ಏನು ಮಾಡಲು ಸಾಧ್ಯ?"

"ನಿನ್ನ ಶಕ್ತಿ ಎಷ್ಟಿದೆಯೋ ಅಷ್ಟನ್ನಾದರೂ ತೋರಿಸಬೇಕಿತ್ತು !"

"ಆ ಗಳಿಗೆಯಲ್ಲಿ ಹೊಡೆಯುವುದಿರಲಿ, ಕೂಗಿಕೊಳ್ಳುವ ಶಕ್ತಿಯೂ ಇರಲಿಲ್ಲ. ನನಗೆ ! ಹಿ ಈಸ್ ಎ ಬ್ರೂಟ್ !"

"ದೇವರು ದೊಡ್ಡವನು. ಅಂತೂ ಗಂಡಾಂತರದಿಂದ ಪಾರಾದೆ. ನಿನಗೆ ಆ ಕ್ಷಣ ಸಹಾಯ ಸಿಕ್ಕದಿದ್ದರೆ ಏನು ಮಾಡುತಿದ್ದರೋ ಧೂರ್ತರು !" ಎಂದಳು ತಾಯಿ ಕಳಕಳಿಯಿಂದ.

ಟಾಮಿ ಅಂದ "ಆ ರಸ್ತೆಯಲ್ಲಿ ಜನ ಸಂಚಾರ ಕಡಿಮೆ. ನೀನಲ್ಲಿಗೆ ಹೋಗಬಾರದಿತ್ತು."

"ಹೊತ್ತಾಗಿದ್ದುದರಿಂದ ಆ ದಾರಿ ಹಿಡಿದೆ. ಅದರಲ್ಲಿ ಬಂದರೆ ಬಹಳ ಹತ್ತಿರ.

"ಅಂತಹವರನ್ನು ಗುಂಡಿಟ್ಟು ಕೊಲ್ಲಬೇಕು !" ಟಾಂ ತುಟಿ ಕಚ್ಚಿದ.

ನಾನು ಏರಿಳಿಯುವ ಎದೆಯಿಂದ ನಿಟ್ಟುಸಿರನ್ನು ಹೊರಹಾಕಿದೆ.

ಆ ರಾತ್ರಿ ಬಹಳ ಹೊತ್ತು ನಿದ್ದೆ ಬರಲಿಲ್ಲ. ಅತ್ತಿಂದಿತ್ತ ಹೊರಳುವುದರಲ್ಲೇ ಹೊತ್ತು ಉರುಳಿತು. ಮಧ್ಯರಾತ್ರಿ ಕಳೆದನಂತರ ಕಣ್ಣುಗಳಿಗೆ ಜೊಂಪು ಹತ್ತಿದರೂ ತಕ್ಷಣ ಹೊಡೆದೆಬ್ಬಿಸಿದಂತೆ ಮಿಡುಕಿ ಬೀಳುತಿದ್ದೆ. ಆ

ಭಯ ಮನಸ್ಸಿನ ಅಲೆಗಳಲ್ಲಿ ಹುದುಗಿದ್ದು ಎದೆಯ ಕರಂಡದಲ್ಲಿ ಕೈಯಾಡಿಸು ತಿತ್ತು. ಕೊನೆಗೂ ಬೆಳಗಿನ ಝಾವ ಪ್ರಯತ್ನಪೂರ್ವಕವಾಗಿ ನಿದ್ದೆಯನ್ನು ಬರಮಾಡಿಕೊಂಡೆ. ಕಣ್ಣುಗಳಿಗೆ ಜೊಂಪುಹತ್ತಿದುದು ಮನವರಿಕೆಯಾದಾ ಗಲೇ ಯೋಚನೆಯಲೆಗಳನ್ನು ತಳ್ಳಿ ಹೊದ್ದಿಕೆಯನ್ನು ಮೈಮೇಲೆಳೆದುಕೊಂಡೆ.

...ಅದೊಂದು ಪಾರ್ಕ್. ಭಾಸ್‌ನೊಂದಿಗೆ ಹೂದೋಟದ ಸುಂದರ ಹಾದಿಯಲ್ಲಿ ನಡೆಯುತಿದ್ದೆ. ಎಡಬಲಗಳ ಪಾತಿಗಳಲ್ಲಿ ಹೊಗೊಂಚಲುಗಳು ನಳನಳಿಸುತ್ತ ತಂಗಾಳಿಗೆ ತಲೆದೂಗುತಿದ್ದುವು. ಭಾಸ್ ಭುಜದ ಮೇಲೆ ಕೈ ಹಾಕಿ ಅಂದ "ನಿನ್ನಿಂದ ದೂರವಿರಬೇಕು ಎಂದು ಪ್ರಯತ್ನಿಸುತ್ತಿರುವೆ. ಆದರೂ ಆಗುತ್ತಿಲ್ಲ. ವಿಧಿ ಕತ್ತಿಗೆ ಕೈ ಹಾಕಿ ದಬ್ಬುತ್ತದೆ. ನಾನು ದಿಕ್ಕೆಟ್ಟಂತೆ ಇತ್ತಲೇ ಬರುತ್ತೇನೆ."

ನಾನು ನಗುತ್ತ ನುಡಿದೆ "ನನ್ನ ಪಾಡೂ ಅಷ್ಟೆ."

"ದೈವಚಿತ್ತ ಹೇಗಿದೆಯೋ ಹಾಗಾಗುತ್ತೆ"

ಅಷ್ಟರಲ್ಲಿ ನಾವು ಮಂಟಪದ ಬಳಿಯಲ್ಲಿನ ಕಲ್ಲುಬೆಂಚಿನ ಬಳಿಗೆ ಬಂದಾ ಗಿತ್ತು. ನಾವಿಬ್ಬರೂ ಅದರ ಮೇಲೆ ಕುಳಿತುಕೊಂಡು ನೋಟವನ್ನು ಹಾದಿಯ ಕಡೆ ಹೊರಳಿಸುವಷ್ಟರಲ್ಲಿ ಲಿಝಿಬ್ರೌನ್ ಇತ್ತ ಬರುತ್ತಿದ್ದುದು ಕಂಡುಬಂತು. ಅವಳು ನನ್ನ ತಾಯಿಯ ಆತ್ಮೀಯ ಗೆಳತಿ. ಒಂದು ಕಾಲದಲ್ಲಿ ಅವಳು ವಾಸಿಸುತ್ತಿದ್ದುದು ನಮ್ಮ ಮನೆಯ ಪಕ್ಕದಲ್ಲಿ. ಈಚೆಗೆ ಬೇರೆಕಡೆ ಮನೆಯನ್ನು ಕೊಂಡುಕೊಂಡು ಅಲ್ಲಿಗೆ ಹೋಗಿದ್ದಾಳೆ. ಅವಳು ಹತ್ತಿರ ಬರುತ್ತಲೂ ಒಂದು ಕ್ಷಣ ತಬ್ಬಿಬ್ಬಾದಂತೆ ನಮ್ಮನ್ನು ನೋಡುತ್ತ ಹಾಗೇ ನಿಂತುಬಿಟ್ಟಳು. ಅವಳ ಮುಖಬಿಂಬದಲ್ಲಿ ಅತ್ಯಾಶ್ಚರ್ಯದ ಮುದ್ರೆಯೊತ್ತಿತು. ನಾನು ಆಕ್ಷಣವೇ 'ಗುಡ್ ಮಾರ್ನಿಂಗ್ ಆಂಟೀ ! ಇವನು ನನ್ನ ಪತಿ ಭಾಸ್ಕರ್ ! ಈದಿನವಷ್ಟೇ ನಮ್ಮ ಮದುವೆಯಾಯಿತು !"

ತಕ್ಷಣ ಅವಳ ಮನಸ್ಸಿಗೆ ಆಘಾತವಾದಂತೆ ಒಂದೆರಡು ಕ್ಷಣ ಸ್ತಬ್ಧಗತಿ ಯಲ್ಲಿ ನೋಡಹತ್ತಿದಳು.

ಭಾಸ್ ವಿನಯದಿಂದ "ಗುಡ್ ಮಾರ್ನಿಂಗ್ ಆಂಟೀ !" ಎಂದ.

ಪ್ರತಿವಂದಿಸಿದ ಅವಳು ತೀವ್ರ ಅಸಮಾಧಾನದಿಂದ ನುಡಿದಳು "ಜನೀ ! ನೀನು ತುಂಬ ಒಳ್ಳೆಯ ಹುಡುಗಿ ಎಂದುಕೊಂಡಿದ್ದೆ. ಇವನನ್ನು ಕೂಡಿಕೊಂಡಿರುವುದನ್ನು ನೋಡಿದರೆ ನನ್ನ ಮೊದಲಿನ ಭಾವನೆಯನ್ನು ಅಳಿಸಿಹಾಕಬೇಕಾಗುತ್ತದೆ!"

ನಾನು ಮಾತಾಡದೆ ನಕ್ಕುಬಿಟ್ಟೆ.

ಅವಳು ಮುಂದುವರಿದಳು "ಇದು ಸೂಕ್ತವಲ್ಲದ ಸಂಬಂಧ ! ಈ ದರಿದ್ರ ಇಂಡಿಯನ್ ನಿನ್ನನ್ನು ಭಾವಿಗೆ ತಳ್ಳಿ ಆಳ ನೋಡದಿದ್ದರೆ ಕೇಳು ! ಇವರಿಗೆ ಮನುಷ್ಯತ್ವ ಸ್ವಲ್ಪವಾದರೂ ಇದೆಯೇ ? ಇವರ ಕುವಿಚಾರ ಕುಸಂಸಾರ ಕುವಿದ್ಯೆ ಯಾರು ಕೇಳಿಲ್ಲ ? ಕಂಡಿಲ್ಲ ? ಇಂತಹ ಕೀಳರೊಡನೆ ನೀನೇನು ಸುಖಪಟ್ಟೀಯೆ ? ಹೊಸ ವಿಚಾರಗಳಲ್ಲಿ ತಲೆ ಹಾಕಬೇಕಾದರೆ ಹತ್ತು ಬಾರಿ ಯೋಚಿಸಬೇಕು ಮಗಳೇ ! ನಾಲ್ಕಾರು ಮಂದಿಯ ಅಭಿಪ್ರಾಯ ಕೇಳಬೇಕು. ಇದು ಶುದ್ಧ ತಲೆಗೇಡಿತನ ! ನಿನ್ನ ತಾಯಿ ಹೇಗೆ ಇದಕ್ಕೊಪ್ಪಿದಳು ?"

ಅವಳು ಎಂದೂ ಹೀಗೆಯೇ. ಮುಖಾಮುಖಿಯಾಗಿ ಮಾತಾಡುವವಳೇ ! ಅವಳಿಗೆ ಮೊದಲಿನಿಂದಲೂ ಭಾರತೀಯರಲ್ಲಿ ತಾತ್ಸಾರ ಭಾವನೆ. ಆದರೆ ಎದುರಿಗೇ ಇಷ್ಟು ತಿರಸ್ಕರಿಸುವಳೆಂದು ನಾನು ಭಾವಿಸಿರಲಿಲ್ಲ. ಸಿಟ್ಟು ದುಃಖಗಳ ಗಣಿಯಾಯಿತು ಮನಸ್ಸು. ಆ ಕ್ಷಣದಲ್ಲಿ ಏನು ಹೇಳಬೇಕೋ ತಿಳಿಯದೆ ದಿಗ್ಮೂಢಳಾಗಿ ತಲೆಬಾಗಿದೆ. ಭಾಸ್ ಮಾತ್ರ ಸ್ವಲ್ಪವೂ ವಿಚಲಿತನಾಗಲಿಲ್ಲ. ನಗುಮುಖದಿಂದಲೇ ಅವಳ ಕೋಪಾಟೋಪವನ್ನು ಗಮನಿಸುತ್ತಿದ್ದ. ಅವನ ತಾಳ್ಮೆಯನ್ನು ನೋಡಿ ನಾನೂ ಸಹ ತಾಳ್ಮೆಯಿಂದಲೇ ನುಡಿದೆ "ಹೋಗಲೀ ಬಿಡು ಆಂಟೀ ! ಏನಾಗಬೇಕೋ ಅದು ಆಗಿಯೇ ತೀರುತ್ತೆ ! ಅದನ್ನು ಯಾರೂ ತಡೆಯಲಾರರು."

"ಅದೆಲ್ಲಾ ಕೈಯಲ್ಲಾಗದವರ ಸೂತ್ರ. ಚೀಃ ! ನಾಚಿಕೆಗೇಡು !"

ಭಾಸ್ಕರ್ ಮನಸ್ಸಿಗೆ ತೆಗೆದುಕೊಳ್ಳದಿದ್ದುದು ಮನಸ್ಸಿಗೆ ಸ್ವಲ್ಪ ಸಮಾಧಾನವಾದರೂ ನನ್ನ ಮುಂದೆಯೇ ಅವಮಾನವಾದುದು ಅತ್ಯಂತ ದುಃಖವುಂಟುಮಾಡಿತು. ನಾನು ಅವನಿಗೆಂದೆ "ದಯವಿಟ್ಟು ಕ್ಷಮಿಸು.

ನೀನಿದನ್ನು ಮನಸ್ಸಿಗೆ ತೆಗೆದುಕೊಳ್ಳಬೇಡ. ಅವಳ ವರ್ತನೆ ಮೊದಲಿನಿಂದಲೂ ಹೀಗೆಯೇ. ಈ ಹಳೆ ಮುದುಕಿಯರು ಬಹಳ ಕಟು. ಬಹುಶಃ ನಿಮ್ಮಲ್ಲೂ ಇರಬಹುದು ಇಂತಹ ತಾತ್ಸಾರ ಭಾವನೆ–ಕೋಪ–ನುಡಿ–ಮತ್ತೊಂದು–ಮಗ ಹೊಂದು."

"ಇರುತ್ತೆ ಅದಕ್ಕೇನು ಕೊರತೆ? ಏನಾದರೊಂದು ಅಂದುಕೊಳ್ಳಲಿ, ಅದರಿಂದ ನಮಗಾಗುವ ನಷ್ಟವೇನು? ಎಲ್ಲರಿಗೂ ಅವರವರ ಅಭಿಪ್ರಾಯ ಇದ್ದೇ ಇರುತ್ತೆ. ಅದಕ್ಕೇಕೆ ಬೇಸರ?"

ಆ ಮಾತಿಗೆ ನಾನು ಸುಮ್ಮನಾದರೂ ಮನಸ್ಸು ಒಳಗಿಂದೊಳಗೇ ಪರಿತಪಿಸುತಿತ್ತು. ಹೃದಯಕುಂಡ ನೋವಿನಾಗರವಾಗಿತ್ತು. ಎದ್ದು ಹೋಗೋಣವೇ ಎಂದು ಯೋಚಿಸಿದರೆ ಭಾಸ್ ಅಲ್ಲಾಡದೆ ಕುಳಿತಿದ್ದಾನೆ. ಆಕೆ ಹೆಜ್ಜೆ ತೆಗೆಯದೆ ಕೈಬುಟ್ಟಿಯಲ್ಲಿದ್ದ ಮ್ಯಾಗಜೈನ್ ಒಂದನ್ನು ತೆಗೆದು ಕೊಡುತ್ತ ಹೇಳಿದಳು. "ಇದೋ ಇದಕ್ಕೆ ಎಪ್ಪತ್ತು ಷಿಲ್ಲಿಂಗುಗಳು. ನಾನು ಇದರ ಮಾರಾಟಕ್ಕಾಗಿಯೇ ಇಲ್ಲಿಗೆ ಬಂದದ್ದು. ನೀನೊಂದು ಕೊಂಡುಕೋ."

ಅವಳನ್ನು ಆದಷ್ಟು ಬೇಗನೆ ಅಲ್ಲಿಂದ ತೊಲಗಿಸುವ ಯೋಚನೆಯಿಂದ ಪರ್ಸಿಗೆ ಕೈಹಾಕಿದೆ. ಷಿಲ್ಲಿಂಗಿಗಿಂತ ಮೊದಲು ಸಿಕ್ಕಿದ್ದು ಒಂದು ಪೌಂಡ್. ಅದನ್ನೇ ಅವಳ ಕೈಗೆ ಕೊಟ್ಟು ಮ್ಯಾಗ್‌ಜೈನ್ ತೆಗೆದುಕೊಂಡೆ.

"ನನ್ನ ಬಳಿ ಚಿಲ್ಲರೆ ಇಲ್ಲ."

"ಪರವಾಯಿಲ್ಲ ಇಟ್ಟುಕೋ."

"ನೀನು ಬಹಳ ಅವಸರ ಪಟ್ಟೆ. ನಿನ್ನ ಬಳಿ ಚಿಲ್ಲರೆ ಇದೆಯೋ ನೋಡು!"

"ಇಟ್ಟುಕೋ ಆಂಟೀ! ಅದು ಬಹಳ ಸಣ್ಣ ಮೊತ್ತ! ಅದಕ್ಕೇಕೆ ಅಷ್ಟೊಂದು ಪರಿತಾಪ?"

ಅವಳು ಹಣವನ್ನು ಹಿಂದಕ್ಕೆ ನೀಡುತ್ತ "ಇನ್ನೊಮ್ಮೆ ನೋಡು!" ಎಂದಳು ಒತ್ತಾಯಪೂರ್ವಕವಾಗಿ. ಆಗ ನಾನು ಪರ್ಸಿಗೆ ಕೈಹಾಕದೆ ವಿಧಿ ಇರಲಿಲ್ಲ. ಒಳ ಪದರದಲ್ಲಿದ್ದ ಎಪ್ಪತ್ತು ಷಿಲ್ಲಿಂಗನ್ನು ತೆಗೆದುಕೊಟ್ಟು ಅವಳಿಂದ ಪೌಂಡನ್ನು ಪಡೆದುಕೊಂಡೆ. ಅವಳು ಮುನ್ನಡೆಯುತ್ತ ಕೊನೆಯ

ದಾಗಿ ನನಗೆ ಆದೇಶ ನೀಡಿದಳು "ಎಚ್ಚರಿಕೆ ! ಜೀವನ ಹೂವಿನ ಹಾಸಿಗೆ ಯಲ್ಲ ! ಮುಳ್ಳಿನ ಪಂಕ !"

ನಾನು ಮಾತಾಡಲಿಲ್ಲ; ಅವಳು ಹೊರಟಳು.

ಭಾಸ್ವಾನ್ ನನ್ನನ್ನು ನಿಟ್ಟಿಸಿನೋಡುತ್ತ ಹುಬ್ಬೇರಿಸಿ "ಪಾಪ, ಮುದುಕಿ !" ಎಂದ.

"ನಿನ್ನ ಸಹನೆ–ಕರುಣೆ ಎರಡೂ ವಿಶೇಷವೇ !"

"ವಿಶೇಷವಿದ್ದರೆ ಜೀವನ ಶೋಭೆ !"

"ಅದು ನಿಜ...."

ಅನಂತರ ಅವನೆಂದ ನಾನು ತಂದೆಯವರನ್ನು ನೋಡಿ ನಮ್ಮ ಮದುವೆಗೆ ಅವರ ಅನುಮತಿಯನ್ನು ಬೇಡಿಕೊಂಡೆ. ಆದರೆ, ಕಿಂಚಿತ್ತೂ ಒಪ್ಪಲಿಲ್ಲ. ನನ್ನನ್ನು ತಿರಸ್ಕರಿಸಿ ಹೊರದೂಡಿದರು. ಬಹಳ ಹಳೆಯ ಸಂಪ್ರದಾಯ ದವರನ್ನು ಒಪ್ಪಿಸುವುದು ಕಷ್ಟವೇ. ನಾನು ಈವರೆವಿಗೆ ನಿನ್ನನ್ನು ಕಾಯಿಸಿದ್ದು ಅವರ ಒಪ್ಪಿಗೆಯನ್ನು ಪಡೆದುಕೊಳ್ಳುವುದಕ್ಕಾಗಿಯೇ. ಅವರಿಗೆ ಅವಿಧೇಯತೆ ಯನ್ನು ತೋರಿದ್ದಕ್ಕಾಗಿ ನನಗೆ ಅತೀವ ವ್ಯಥೆಯುಂಟಾಗಿದೆ. ಆದರೆ, ಮಾಡು ವುದೇನು ? ವಿಧಿ ಯಾವೊಂದು ಉದ್ದೇಶಕ್ಕಾಗಿ ನಮ್ಮಿಬ್ಬರ ಹೃದಯವನ್ನು ಬೆಸೆಯಿತೋ ನಾನರಿಯೆ. ತಂದೆಯವರ ಕೋಪಕ್ಕೆ–ತೀವ್ರ ವಿರೋಧಕ್ಕೆ ಕಾರಣವಿಲ್ಲದಿಲ್ಲ. ನಾನು ಜ್ಯೇಷ್ಠ ಪುತ್ರನಾಗಿದ್ದು ಸಂಸಾರದ ಹೊಣೆಯನ್ನು ಹೊರುವುದು ನ್ಯಾಯವೂ ಆಗಿದೆ. ನಿಜವಾಗಿಯೂ ನಾನು ಅಪ್ಪಟ ಭಾರತೀಯ. ನನ್ನಲ್ಲಿರುವುದು ಸ್ವಚ್ಛ ಭಾರತೀಯ ರಕ್ತ. ಆದರೂ, ನಾನು ನಿನಗೆ ಮರುಳಾದುದು ತುಂಬ ಶೋಚನೀಯ. ನಿನ್ನಿಂದ ನನ್ನ ಹಿರಿಯ ಉದ್ದೇಶಕ್ಕೆ ಕೊಡಲಿಪೆಟ್ಟು ಬಿತ್ತಾದರೂ ನಾನು ನನ್ನ ಕರ್ತವ್ಯ ನಿರ್ವಹಣೆ ಯಲ್ಲಿ ಖಂಡಿತ ಹಿಂದೆಬೀಳುವುದಿಲ್ಲ. ಅದು ಸತ್ಯ..."

"ಮತ್ತೇಕೆ ಅಸಮಾಧಾನ ?

"ಅಷ್ಟು ಸುಲಭವಲ್ಲ, ಈ ಜೀವನಸಮಸ್ಯೆ. ನಮ್ಮ 'ಕರ್ತವ್ಯ' ಎಂಬ ಅಗ್ನಿ ಜ್ವಾಲೆಯಲ್ಲಿ ಸದಾ ಬೇಯುತ್ತಲೇ ಇರುತ್ತವೆ ಪುನಃಪ್ರಾಣಗಳು. ಕರ್ತವ್ಯದಲ್ಲಿ ಸ್ವಲ್ಪ ಕುಂದಾದರೆ ಶ್ರಮವೂ ವ್ಯರ್ಥ. ಬದುಕೂ ವ್ಯರ್ಥ. ಮಾನವತೆಯೂ ವ್ಯರ್ಥ."

"ಹಾಗೆಂದು ಅವನ್ನೇ ಹಚ್ಚಿಕೊಂಡರೆ ಹತ್ತು ತಲೆಗಳಿಂದ ಕುಟುಕುತ್ತದೆ ಕರ್ತವ್ಯದ ಕಾಳೋರಗ. ಅದನ್ನು ಸಹ ನೀವು ಯೋಚಿಸಬೇಕಷ್ಟೆ.?

"ಹಾ...! ಹಾ ಅಂತಹ ಭಯಭೀತಿಯನ್ನು ಮನಸ್ಸಿಗೆ ಹುಟ್ಟಿಸದಿರು !"

"......."

"ನೀನು ವೀರಪತ್ನಿಯಾದರೇನೇ ಜೀವನೋತ್ಕರ್ಷ....ಇಲ್ಲವಾದರೆ ಏನೂ ಪ್ರಯೋಜನವಿಲ್ಲ. ಈ ಮದುವೆ ನಿನ್ನ ಭಾಗಕ್ಕೆ ಗೆಲುವು. ನನ್ನ ಭಾಗಕ್ಕೆ ಸೋಲು ! ಒಂದೆರಡು ಕ್ಷಣ ತಡೆದು ಪುನಃ ಭಾವೋದ್ವೇಗದಿಂದ ಅಂದ "ಸೋಲು-ಗೆಲುವು ಯಾವತ್ತೂ ಸ್ಥಿರವಿಲ್ಲ. ಇಂದು ಸೋತರೆ ನಾಳೆ ಗೆಲುವು ಕಟ್ಟಿಟ್ಟ ಬುತ್ತಿ !"

ಅವನ ಕಣ್ಣುಗಳು ಉಜ್ವಲವಾಗಿ ಬೆಳಗಿದುವು.

ಬೆಳಗಿನ ಝಾವದ ತಂಗಾಳಿ ರೊಯ್ಯನೆ ಬೀಸಿದಾಗ ಕಿಟಕಿಯಲ್ಲಿ ನುಗ್ಗಿ ತಣ್ಣಗೆ ಹಿಮವೊತ್ತಿ ಮೈ ಚಿಲ್ಲನೆ ನಡುಗಿಸಿತು. ನಾನು ತಟ್ಟನೆ ಕಣ್ತೆರೆದೆ. ಒಳಗೆಲ್ಲಾ ಕಣ್ಣುಗಳನ್ನು ಕಿವಿಯುವಂತಹ ಕಗ್ಗತ್ತಲು. ಹಾ ! ಎಂತಹ ಕನಸು. ನಿಜ ಜೀವನದಲ್ಲಿಯೂ ನಾನು ಅವನ ಗೃಹಿಣಿ ಆಗಬಲ್ಲೆನೇ ? ಭಗವಂತ ! ನನಗೆ ಅಷ್ಟು ಕರುಣೆದೋರಬಲ್ಲೆಯಾ ? ? ನನ್ನ ಆತ್ಮ ನಿವೇದನೆಯನ್ನು ಇನ್ನಾರಲ್ಲಿ ಮಾಡಿಕೊಳ್ಳಲಿ ? ನೀನಲ್ಲದೆ ನನಗಿನ್ನಾರು ಸಹಾಯ ಮಾಡಬಲ್ಲರು ?

— ೦ —

# ಅಧ್ಯಾಯ

೪

ಅವನು ಭಾವನಾತ್ಮಕವಾಗಿ ನಿಮೀಲಿತ ನೇತ್ರಗಳಿಂದ ಡೇಲಿಯಾ ಹೂಗಳನ್ನು ನೋಡುತ್ತ ಅಂದ,

"ನೋಡು, ಶುಭೆ ! ವರ್ಷಾನುಕಾಲ ನಾನು ತಳ್ಳಿಕೊಂಡು ಬಂದುದೇ ತಂದೆಯವರಿಗಾಗಿ. ಹತ್ತು ದಿನ ರಜೆ ಪಡೆದುಕೊಂಡು ಊರಿಗೆ ಹೋಗಿ ಬಂದುದೂ ಅದಕ್ಕಾಗಿಯೇ. ಆದರೆ, ಅವರು ಒಪ್ಪಲೇ ಇಲ್ಲ. ತೀವ್ರವಾಗಿ ತುಚ್ಛೀಕರಿಸಿದರು. ನಾನು ಎಷ್ಟೆಷ್ಟು ರೀತಿಯಲ್ಲಿ ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ. ನಾನು ಹತಾಶನಾಗಿ ಹಿಂದಿರುಗಿ ಬಂದೆ. ನೀನು ಸಂಪೂರ್ಣವಾಗಿ ಹಿಂದುತ್ವವನ್ನು ಒಪ್ಪಿಕೊಳ್ಳುವೆ ಎಂದು ಪ್ರಮಾಣವಚನ ನೀಡಿದ್ದಿ. ನಮ್ಮಲ್ಲಿಯ ಕೌಟುಂಬಿಕ ಪದ್ಧತಿ ಒಂದು ವಿಶೇಷ. ನಾವು ಎಲ್ಲೆಲ್ಲಿದ್ದರೂ ಪರಸ್ಪರ ಕಷ್ಟ ಸುಖಗಳಲ್ಲಿ ಒಂದುಗೂಡುತ್ತೇವೆ. ಪರಸ್ಪರ ಸಹಕಾರ–ಸಹಾಯಗಳು ದೊರೆಯುತ್ತವೆ. ಪ್ರೀತಿ ವಿಶ್ವಾಸಗಳು ಜೀವನದ ಹಾಸುಹೊಕ್ಕಾಗಿರುತ್ತವೆ. ಅಂದಮೇಲೆ, ಈ ಎಲ್ಲವನ್ನೂ ನೀನು ಸಂಪೂರ್ಣ ಗಮನಿಸಬಲ್ಲೆಯಾ ?"

"ದಯವಿಟ್ಟು ನನ್ನನ್ನು ನಂಬು ! ಈ ಯಾವುದರಲ್ಲೂ ಶಂಕೆಯಿಟ್ಟುಕೊಳ್ಳಬಾರದು."

"ಜನೀ ! ಯಾವುದೋ ಒಂದು ಗಳಿಗೆಯಲ್ಲಿ ನಮ್ಮಿಬ್ಬರ ಹೃದಯಗಳು ಹತ್ತಿರವಾಗಿವೆ. ಜೀವನದುದ್ದಕ್ಕೂ ಬೆಸುಗೆಯ ಬಿಗಿಗಟ್ಟು ಬಿಗಿಯಾಗಿ ಅವುಗಳನ್ನು ಬಿಗಿದರೇನೇ ಜೀವನ ಸೌಖ್ಯ. ಇಲ್ಲದಿದ್ದರೆ ಬಾಳು ನರಕ. ಜೀವನಕ್ಕೆ

ಕಾಲಿಡುವ ಮುನ್ನ ಈ ಎಲ್ಲವನ್ನೂ ಯೋಚಿಸಬೇಕು. ಭಾರತೀಯರಾದ ಮೇಲೆ ಭಾರತೀಯತ್ವಕ್ಕೆ ಹೊರತಾಗುವಂತಿಲ್ಲ. ಇಲ್ಲಿ ಒಂದೆರಡು ವರ್ಷ ನಾನು ಇರಬಲ್ಲೆನಾದರೂ ಅನಂತರ ನನಗೆ ಭಾರತವೇ ಗತಿ. ಅದನ್ನು ನೀನು ಎಂದೆಂದಿಗೂ ತಿಳಿದಿರತಕ್ಕದ್ದು. ಜೀವನ ಎಂದರೆ ಮಕ್ಕಳಾಟವಲ್ಲ. ಈ ದೇಶದಲ್ಲಿ ಜೀವನಕ್ಕೆ ಬೆಲೆಯೇ ಇಲ್ಲ. ಕಸಕ್ಕಿಂತ ಕಡೆಯಾಗಿ ಎಸೆದುಬಿಡುತ್ತಾರೆ. ಭಾರತೀಯ ಜೀವನ ಎಂದೆಂದೂ ಅಭಂಗ. ಸಣ್ಣಪುಟ್ಟ ಕಾರಣವನ್ನು ಯಾರೂ ಗಮನಿಸುವುದಿಲ್ಲ. ತೀರ ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಜೀವನಭಂಗ. ಆದ್ದರಿಂದ ಜೀವನಕ್ಕೆ ಆತುರಕಾತರದಿಂದ ಕಾಲಿಡಲೇ ಕೂಡದು. ನಾವು 'ಪ್ರೇಮ' ಎಂದು ನೆಚ್ಚಿಕೊಂಡಿರುವ 'ಕಾಮ' ಮುಂದೆ ಧೂಳೀಪಟವಾಗಬಹುದು. ಆದ್ದರಿಂದ ಕಾಮಕ್ಕೆ ಬೆಲೆ ಕೊಡಲೇ ಬಾರದು..."

ಅವನು ಇನ್ನೂ ಏನೇನು ಹೇಳಿದನೋ ದೇವರಿಗೇ ಗೊತ್ತು. ನಾನು ಮಂತ್ರಮುಗ್ಧಳಂತೆ ಕೇಳುತ್ತಲೇ ಇದ್ದೆ. ಕಣ್ಮನಗಳು ಅಂತರ್ಮುಖಿಯಾಗಿದ್ದುವು. ಹೃದಯದ ಮಿಡಿತವನ್ನು ಆಲೈಸಿದರೆ ಎಲ್ಲಾ ನಿಯಮಗಳನ್ನೂ ಒಪ್ಪಿಕೊ, ಖಂಡಿತ ಒಪ್ಪಿಕೋ ಎಂದೇ ಕೇಳಿಸುತ್ತದೆ. ಒಡನೆ ಆತುರ–ಕಾತರಗಳ ಒಕ್ಕೂಟವಾಗಿ ನನ್ನನ್ನು ನಾನೇ ಸುಧಾರಿಸಿಕೊಳ್ಳುತ್ತ ನುಡಿದೆ "ನಾನು ನಿನ್ನೆಲ್ಲಾ ಆಸೆ–ಆಕಾಂಕ್ಷೆ–ಆದೇಶಗಳನ್ನು ಅಕ್ಷರಶಃ ಪಾಲಿಸುವೆ. ನೀನು ಆ ಬಗ್ಗೆ ಕಿಂಚಿತ್ ಶಂಕೆಯನ್ನೂ ಇಟ್ಟುಕೊಳ್ಳಬಾರದು. ನನ್ನನ್ನು ಇತರ ಐರೋಪ್ಯ ಸ್ತ್ರೀಯರಂತೆ ಎಂದು ಭಾವಿಸಬೇಡ. ನಾನು ಖಂಡಿತ ನಿನ್ನ ಜೀವನಶೋಭೆಯನ್ನು ಕೆಡಿಸಲಾರೆ. ಇದು ಸತ್ಯ."

"ಸಂತೋಷ. ಆದರೆ ಐರೋಪ್ಯರಕ್ತದಲ್ಲಿ ಅಷ್ಟೊಂದು ಘನತೆಯಿದೆಯೇ ಎಂಬುದೇ ಸಂದೇಹ, ಅಂದರೆ ನಿನಗೆ ಕೋಪವಿಲ್ಲವಷ್ಟೆ ?"

"ಕೋಪವೇಕೆ ? ಯೋಚಿಸಬೇಕಾದುದನ್ನು ಯೋಚಿಸಲೇಬೇಕು."

ಅನಂತರ ಸ್ವಲ್ಪಹೊತ್ತು ರುದ್ರಮೌನಗತಿಯಲ್ಲಿ ನಿರಾತಂಕವಾಗಿ ಉರುಳಿಹೋಯಿತು.

ಗಿಡದ ಪೊದೆಯಲ್ಲಿ ಸಣ್ಣ ಹಕ್ಕಿಗಳೆರಡು ಪ್ರೇಮಾಲಾಪದಲ್ಲಿ ಮುಳುಗಿ 'ಚ್ಚೀ ಪ್ಪೀ' ಎನ್ನುತಿದ್ದುವು. ನನ್ನ ಗಮನ ಅತ್ತಹರಿದಾಗ ನರನಾಡಿಗಳಲ್ಲಿ ರಕ್ತಸಂಚಾರ ತೀವ್ರವಾದಂತೆ ಭಾಸವಾಯಿತು. ಮನಃಪ್ರಾಣಗಳಲ್ಲಿ ಏನೋ ಒಂದು ರೀತಿಯ ಯೋಚಿಸಿದರೂ ಅರ್ಥೈಸಲಾಗದ ಗಲಿಬಿಲಿ. ಇನ್ನೂ ನಿರ್ಣಯವಾಗದ ಭವಿಷ್ಯ. ಏನೋ ಎಂತೋ ಎಂಬ ಆಶಂಕೆ ತಲೆಯಲ್ಲಿ ಹುಚ್ಚೆದ್ದು ನರ್ತಿಸುತ್ತದೆ. ಎಷ್ಟೇ ಪ್ರಯತ್ನಿಸಿದರೂ ಶಾಂತಿ ಎಂಬ ಮೂರಕ್ಷರದ್ವಾರಾ ಎಲ್ಲವನ್ನೂ ತಣಿಸುವ ಮನೋದೇವತೆ ದೂರದೂರದಲ್ಲಿ ರಸಸ್ಥಾಯಿಯಾಗಿರುವುದನ್ನು ಕಂಡು ನನ್ನ ಹೃದಯವನ್ನು ನಾನೇ ಹಿಸುಕಿಕೊಳ್ಳುವಂತಾಯಿತು. ನಾನು ನೋಟವನ್ನು ಡೇಲಿಯಾ ಹೂಗಳಮೇಲೆ ಹರಿಸಿ ಮೌನವ್ರತ ಹೂಡಿದೆ. ಕ್ಷಣಕ್ಷಣಗಳೂ ಗಳಿಗೆಗಳಿಗೆಗಳೂ ನಿರಾತಂಕವಾಗಿ ಉರುಳಿಹೋದುವು. ಎಪಯಾಳದಲ್ಲಿ ಬಿಸಿಯುಸಿರು ಸದ್ದಿಲ್ಲದೆ ಹರಿದಾಡುತಿತ್ತು.

ಬಹಳ ಹೊತ್ತಿನನಂತರ ಭಾಸ್ ಮೌನ ಮುರಿದ.

"ಜನೀ ! ನೀನು ತಂದುಕೊಟ್ಟ ಬಹುಮಾನ ನನ್ನ ಮನವನ್ನು ಪರಿವರ್ತನೆಗೊಳಿಸಲು ಬಹಳಮಟ್ಟಿಗೆ ಕಾರಣ. ಅಲ್ಲದೆ ಅಂದಿನ ನಿನ್ನ ರಕ್ತದಾನ ಸ್ವಲ್ಪಮಟ್ಟಿಗೆ ಕಾರಣ. ಅಂದಿಂದಿಗೂ ನೀನು ನಿಷ್ಠೆಯಿಂದ ಕಾದಿರುವುದು ಸ್ವಲ್ಪಮಟ್ಟಿಗೆ ಕಾರಣ. ಈ ಎಲ್ಲಾ ಸಾಂದರ್ಭಿಕವಾದ ರೀತಿನೀತಿ, ಪ್ರೇಮ ವಿಶ್ವಾಸಗಳ ಪರ್ಯಾಯ ನನ್ನನ್ನು ಪಿತೃದ್ರೋಹಿಯನ್ನಾಗಿ ಮಾಡುತ್ತಿದೆ. ಹೋಗಲಿ, ನಿನಗಾಗಿ ಮತ್ತು ನನ್ನ ಆತ್ಮವಿಕಾಸಕ್ಕಾಗಿ ನಿನ್ನ ಸಾಂಗತ್ಯವನ್ನು ಮನಃಪೂರ್ವಕವಾಗಿ ಒಪ್ಪಿಕೊಳ್ಳುವೆ. ನನ್ನ 'ಆತ್ಮವಿಕಾಸ' ಎಂದ ಮಾತ್ರಕ್ಕೆ ಇದೊಂದು 'ಸಾಹಸಕಾರ್ಯ' ಎಂದು ಅರ್ಥೈಸಬಾರದು. 'ಸಂಕುಚಿತಭಾವ'ವನ್ನು ದೂರೀಕರಿಸುವುದು ಎಂದು ಮಾತ್ರ ತಿಳಿದುಕೋ. ಬಹಳ ಕಾಲದಿಂದ ನಿನ್ನನ್ನು ಕಾಯಿಸಿ ದಣಿಸಿ ತ್ರಿಶಂಖು ಸ್ವರ್ಗದಲ್ಲಿಟ್ಟು ನಿನ್ನ ಹೃದಯವನ್ನು ಗಾಣದ ಚಕ್ರಕ್ಕೆ ಕೊಟ್ಟಿದ್ದೇನೆ. ಅದರಿಂದ ನಿನಗೆ ಎಷ್ಟು ಹಿಂಸೆಯಾಗಿದೆ ಎಂಬುದು ನನಗೆ ಗೊತ್ತು. ದಯವಿಟ್ಟು ನನ್ನ ಉದ್ಧಟತನವನ್ನು ಕ್ಷಮಿಸಿಬಿಡು. ಇದುವರೆಗಿನ ಪರೀಕ್ಷೆ ಇನ್ನು ಸಾಕು. ಸಧ್ಯದಲ್ಲೇ

ನನಗೊಂದು ಮನೆ ಸಿಕ್ಕುವ ಸಂಭವವಿದೆ. ಅದು ಸಿಕ್ಕಿದ ನಂತರ ನಿನ್ನ ಪಾಣಿಗ್ರಹಣ ಮಾಡಿಕೊಳ್ಳುವೆ. ಅಲ್ಲಿಯುವರೆಗೆ ಸ್ಥೈರಿಸು.... !

....ಅಲ್ಲಿಯುವರೆಗೆ ಸ್ಥೈರಿಸು.

ಆ ಮಾತಿನ ಮಾಧುರ್ಯ ಮನದಾಳಕ್ಕೆ ಸರ್ರನೆ ಇಳಿಯಿತು. ನಾನು ಒಮ್ಮೆಲೇ ದೇಹದಾದ್ಯಂತ ಪುಳಕಿತಳಾದೆ. ಹೃದಯದ ನೆಲೆಯಲ್ಲಿ....ಅಲ್ಲಿಯು ವರೆಗೆ ಸ್ಥೈರಿಸು ! ಎಂಬ ನುಡಿ ತಾನೇ ತಾನಾಗಿ ಕೇಳಬರುತ್ತಿದೆ. ಬೀಸಿ ಬರುವ ತಂಗಾಳಿಯಲ್ಲಿಯೂ ಸಹ.

ನಾನು ಅವನ ಹೃದಯದ ನೆಲೆಯಲ್ಲಿ ವಿಶ್ರಮಿಸಿದೆ. ನಾಲ್ಕೂ ಕೈಗಳು ಗಾಢಾಲಿಂಗನಗೈದುವು.

೦ ೦ ೦ ೦

ಅನಂತರ ಕೇವಲ ಎರಡು ತಿಂಗಳ ಪರ್ಯಂತ ತಾಯಿಯೊಂದಿಗೆ ಸಹ ಜೀವನ. ಒಮ್ಮೆ ಬಿಚ್ಚುಮನದಿಂದ ನನ್ನ ಭವಿಷ್ಯವನ್ನು ಕುರಿತು ಆಕೆ ಯೊಡನೆ ಹೇಳಿ–ಕೇಳುವ ಪ್ರಸಂಗಕ್ಕೆ ಕೈಹಾಕಿದೆ. ಆಗ ತಾಯಿ ಊಟದ ಮೇಜಿನ ಮುಂದೆ ಕುಳಿತು ಎಡಗೈ ಹಸ್ತದ ಮೇಲೆ ಶಿರೋಭಾರವನ್ನಿಳುಹಿ ಸಣ್ಣಪತ್ರಿಕೆಯೊಂದರ ಮೇಲೆ ಕಣ್ಣಾಡಿಸುತ್ತಿದ್ದಳು. ನಾನು ಓದುತ್ತಿದ್ದ ಮ್ಯಾಗಜೈನ್ ಸಹಿತ ಅವಳ ಎದುರಿಗೆ ಕುಳಿತುಕೊಂಡು ಹೇಳಿದೆ "ಅಮ್ಮಾ ! ನಿನ್ನನ್ನೊಂದು ಪ್ರಶ್ನೆ ಕೇಳುವುದಕ್ಕಾಗಿ ಯೋಚಿಸಿರುವೆ. ಇದು ನನ್ನ ಭವಿಷ್ಯದ ವಿಚಾರ. ನೀನು ಅಪ್ಪಣೆ ಕೊಡುತ್ತಿ ಎಂದು ಖಂಡಿತ ಭಾವಿಸುವೆ...!"

"ಅಂದರೆ...? ಮತ್ತೆ ಅದೇ ಹಿಂದಿನ ಪುರಾಣವೇ ?"

"ಹೌದು..."

"ಅದಕ್ಕಾದರೆ ನನ್ನನ್ನೇಕೆ ಕೇಳಬೇಕು ? ನಿನಗೆ ಗೊತ್ತು ನನಗಿಷ್ಟ ವಿಲ್ಲ ಎಂದು. ಮತ್ತೇಕೆ ಆ ಪ್ರಸ್ತಾಪ ? ಇಷ್ಟು ಹೇಳಿಯೂ ನೀನು ಅರ್ಥ ಮಾಡಿಕೊಳ್ಳದೇ ಹೋದರೆ ಅದು ನಿನ್ನ ದುರಾದೃಷ್ಟವೇ ಸರಿ."

"ಮಮ್ಮೀ! ನಿನಗೆ ಗೊತ್ತಿಲ್ಲ. ಅವನು ಬಹಳ ವಿದ್ಯಾವಂತ. ತುಂಬ ಒಳ್ಳೆಯವ. ನೀನು ಆಕ್ಷೇಪಿಸುವಂತಹ ಯಾವ ದುರ್ಗುಣವೂ ಅವನಲ್ಲಿಲ್ಲ. ಖಂಡಿತ ಯಾರಾದರೂ ಮೆಚ್ಚುವಂತಹ ವ್ಯಕ್ತಿ."

"ಛಿ! ನೀನು ಏನಾದರೂ ಅನ್ನು. ಇಂಡಿಯನ್ ಎಂದಮೇಲೆ ಎಷ್ಟು ಬೆಲೆ ಕೊಡಬಹುದೋ ಅದು ನನಗೆ ಗೊತ್ತು. ನಮ್ಮವರು ಎಷ್ಟು ಮಂದಿ ಇಲ್ಲ? ಏಕೆ ಕೀಳು ಜನರ ಸಹವಾಸ? ಇದೆಲ್ಲಾ ಸರಿಯಿಲ್ಲ ಬಿಡು. ಐ ನೆವರ್ ಲೈಕ್ ದಿಸ್ ಕನೆಕ್ಷನ್! ಡೋಂಟ್ ಟೇಕ್ ಹೇಸ್ಟಿ ಡಿಸಿಷನ್.

"......."

ಅವಳು ಸ್ವಲ್ಪಹೊತ್ತು ಸುಮ್ಮನಿದ್ದು ಅನಂತರ ಮುಂದುವರಿದಳು, "ಜೀವನದ ಮೇಲೆ ಲಕ್ಷ್ಯವಿಟ್ಟುಕೊಂಡೇ ಜೀವನಕ್ಕೆ ಕಾಲಿಡಬೇಕು. ಅದರ ಆಗು-ಹೋಗುಗಳನ್ನು ಇಂದೇ ನಿರ್ಣಯಿಸುವ ಚಾಣಾಕ್ಷತೆ ಇರಬೇಕು. ಅದಿಲ್ಲದೆ ಹೋದರೆ ಜೀವನ ವ್ಯರ್ಥ; ವಿದ್ಯೆಬುದ್ಧಿಗಳೂ ವ್ಯರ್ಥ."

"ಅವನು ಮಹೋನ್ನತ ಸ್ಥಾನದಲ್ಲಿದ್ದಾನೆ. ಅವನಲ್ಲಿರುವ ಗಾಢಾನುಭೂತಿ ಅಪೂರ್ವವಾದುದು. ಅವನು ನನ್ನಂತಹ ಯಃಕಶ್ಚಿತಳನ್ನು ಮದುವೆಯಾಗಲು ಒಪ್ಪಿರುವುದು ಸಹ ವಿಶೇಷವೇ!"

"ಹಾ....! ಎಂತಹ ಮಾತು? ನೀನು ನಿನ್ನನ್ನೇಕೆ ತುಚ್ಛವಾಗಿ ಭಾವಿಸುತ್ತಿ? ಅದು ಕೂಡದು. ಎಲ್ಲರಿಗೂ ಅವರವರ ಆತ್ಮ ಗೌರವವಿರಲೇಬೇಕು!"

ನಾನು ವಿಚಲಿತಳಾಗದೆ ಅಂದೆ-"ಅವನ ವಿದ್ಯೆಬುದ್ಧಿಗಳಿಗೆ ಹೋಲಿಸಿಕೊಂಡು ನಾನು ಹೇಳಿದ್ದು. ಅವನು ಏರಿದ ಎತ್ತರಕ್ಕೆ ನಾನು ಖಂಡಿತ ಏರಿಲ್ಲ. ಅವನೊಬ್ಬ ಮಹೋನ್ನತ ವ್ಯಕ್ತಿ!"

"ಅಹಹ! ನೀನಲ್ಲದೆ ಇನ್ನಾರು ಹೇಳಬೇಕು ಮಹೋನ್ನತ ಎಂದು?"

"ಮಮ್ಮೀ....!"

"ನನ್ನ ಒಪ್ಪಿಗೆ ಇಲ್ಲವೇ ಇಲ್ಲ! ಮಾಡಿಕೊಳ್ಳುವುದಾದರೆ ನಿನ್ನ ಇಷ್ಟ!"

"......"

"ಸಮಾಜಕ್ಕಿಂತ ವ್ಯಕ್ತಿ ಎಂದೂ ಹಿರಿಯನಲ್ಲ. ಜೀವಿತದಲ್ಲಿ ನಿಯಮಗಳು ಸಂಬಂಧಗಳು ಇರುತ್ತವೆ. ಯಾವುದನ್ನೂ ಅಲ್ಲಗಳೆಯುವಂತಿಲ್ಲ. ಎಲ್ಲವನ್ನೂ ಕೂಡಿ ಬಾಳಿದರೇನೇ ಜೀವನ ಶೋಭೆ. ಇಲ್ಲದಿದ್ದರೆ ಏನುಂಟು ? ಜೀವನಕ್ಕೆ ಕಾಲಿಡುವ ಮುನ್ನ ಸರಿಯಾಗಿ ಯೋಚಿಸದೆಹೋದರೆ ಏಟು ತಿನ್ನಬೇಕಾಗುತ್ತದೆ ! ಜೋಕೆ ! ಬಿ ವೆರಿ ವೆರಿ ಕೇರ್ ಫುಲ್ !"

"......"

"ಪ್ರಪಂಚ ವಿಶಾಲವಾಗಿದೆ ನಿಜ. ಎಲ್ಲಿ ಬೇಕಾದರೂ ಬಾಳಬಹುದು. ಅದಕ್ಕೆ ಅಡ್ಡಿಯಿಲ್ಲ. ಆದರೆ, ಈ ಜೀವನಕ್ಷೇತ್ರ ಅಷ್ಟೇ ಸಂಕುಚಿತವಾದುದು. ನೀರಮೇಲಣ ಗುಳ್ಳೆಯಂತೆ ಕ್ಷಣಿಕ. ಆದ್ದರಿಂದ ಇದನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಹೊಂದಿಸಿಕೊಳ್ಳುವುದರಲ್ಲಿ ಅರ್ಥವಿದೆ. ಉನ್ನತಿಯಿದೆ."

ದಿವಾನಖಾನೆಯಲ್ಲಿ ಕುಳಿತು ನಮ್ಮ ಮಾತುಕತೆಯನ್ನು ಕಿವಿಯಮೇಲೆ ಹಾಕಿಕೊಂಡ ಬಿಮಲ್ ಒಳಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ "ನೀನು ಯಾವುದನ್ನು ಉನ್ನತ ಎಂದು ಬಾಯಿತುಂಬ ಬಣ್ಣಿಸುತ್ತಿರುವೆಯೋ ಅದರ ಬಂಡವಾಳವೆಲ್ಲಾ ನನಗೆ ಗೊತ್ತು ! ಹಾಳಾಗಿ ಹೋಗುವುದರಲ್ಲೇ ನಿನಗೆ ಅಭಿರುಚಿಯಿದ್ದರೆ ಹೋಗು ಕಟ್ಟಿಕೋ !" ಎಂದಳು ವ್ಯಂಗ್ಯವಾದ ಧ್ವನಿಯಲ್ಲಿ.

ಇನ್ನು ಇವರ ಮುಂದೆ ಮಾತು ವ್ಯರ್ಥ ಎನಿಸಿತು ನನಗೆ. ಅವಳಿಗೆ ಉತ್ತರಿಸಲಾಗಲೀ, ನನ್ನನ್ನು ಸಮರ್ಥಿಸಿಕೊಳ್ಳಲಾಗಲೀ ನನ್ನ ಆತ್ಮ ಸಮ್ಮತಿಸಲಿಲ್ಲ. ತಲೆಬಾಗಿ ಮ್ಯಾಗಜೈನ್‌ನಲ್ಲಿ ಕಣ್ಣಾಡಿಸಿದೆ. ಬಿಮಲ್ ಅಷ್ಟಕ್ಕೆ ಸುಮ್ಮನಾಗಲಿಲ್ಲ. ಮತ್ತೆ ಬಾಯ್ತೆರೆದಳು,

"ನಾವು ಎಷ್ಟು ಮಂದಿ ಇಂಡಿಯನ್ಸ್ ನೋಡಲಿಲ್ಲ ? ಅವರ ರೀತಿಗಳು ಎಷ್ಟು ಅಸಹ್ಯ ? ಎಷ್ಟು ಕೊಳಕು ? ಅಂತಹವರನ್ನು ನೀನಲ್ಲದೆ ಯಾರು ಮೆಚ್ಚಬೇಕು ?"

ಸೋನಲ್ಲಿಂದ ಎದ್ದು ಹೋದೆ. ಮನಸ್ಸು ಮುಗಿಲೆತ್ತರಕ್ಕೆ ಏರಿತ್ತು.... ಎಲ್ಲರದ್ದೂ ಒಂದೇ ಧಾಟಿ. ಒಂದೇ ಧೋರಣೆ, ಮತ್ತೇಕೆ ಮಾತು? ಅಜ್ಞಾನ-ಸ್ವಾರ್ಥ-ಸಂಕುಚಿತತ್ವ ಇವೇ ಮಹತ್ತರವಾಗಿರುವಾಗ ಮತ್ತೇತರ ಸಂಪ್ರದಾಯ ?...ಆ ಯೋಚನೆ ಬಂದಾಗ ಏಕಾಂತಕ್ಕಾಗಿ ಕೊಠಡಿಗೆ ಕಾಲಿಟ್ಟೆ. ಅಲ್ಲಿಗೆ ಸುಮ್ಮನಾಗಲಿಲ್ಲ ಬೆಮಲ್. ಇಂಡಿಯನ್ಸ್ ವಿಚಾರವಾಗಿ ಅಸಂಬದ್ಧವಾದ,ಅಸಂಗತವಾದ ಏನೇನೋ ವಿಚಾರಗಳನ್ನು ಒದರಹತ್ತಿದಳು. ಆ ವಿಡಂಬನೆ ವ್ಯಂಗ್ಯಗಳಿಗೆ ಸರಹದ್ದುಗಳಿರಲಿಲ್ಲ. ನಾನು ಕದ ಮುಚ್ಚಿ ಕಿಟಕಿಯ ಬಳಿಗೆ ಹೋದೆ. ಸಂಜೆಯ ಸೊಂಪಿನ ಅಂಚಿನ ಮೇಲ್ಲಿದ್ದ ನಿಶ್ಶಬ್ಧದ ಮೂರ್ತರೂಪ ನಿಶಿಯ ಸಾಮ್ರಾಜ್ಯಕ್ಕೆ ಜಗಿಯಲು ಹವಣಿಸುತ್ತಿರುವುದನ್ನು ಸಂಭಾವಿಸಿ ನೋಡಿದೆ ಇನ್ನು ಸ್ವಲ್ಪ ಹೊತ್ತಿಗೆ ನಿಶಿಯ ಅಂಚಿನಿಂದ ಬ್ರಾಹ್ಮೀ ಮುಹೂರ್ತದ ಅಂಚಿಗೆ ಜಗಿಯುವ ಹವಣಿಕೆಯಿಂದಾಗಿ ಪುನಃಪುನಃ ರೂಪಾಂತರಗೊಳ್ಳುತ್ತದೆ ನಿಶ್ಶಬ್ದದ ಪ್ರತಿಮಾರೂಪ, ಎನಿಸಿತು ನನಗೆ.

ಕಿಟಕಿಯ ಬದಿಯಲ್ಲಿ ಹಾದುಹೋಗುವ ಜನರಾಶಿಯನ್ನು ನೋಡುತ್ತ ನಿಂತೆ.

ಹೆಂಗಸರೂ ಮಕ್ಕಳೂ ಗುಂಪುಗುಂಪಾಗಿ ಹೋಗುತ್ತ ಹೋಗುತ್ತ ಸಣ್ಣದಾಗಿ ಕಾಣಿಸುವವರೆಗೆ ನೇರರಸ್ತೆಯಲ್ಲಿನ ದೃಶ್ಯ ಬಲೂ ಆಪ್ಯಾಯಮಾನ. ಕದಡಿ ಬಗ್ಗಡವಾದ ಮನಸ್ಸಿಗೆ ಸಮಾಧಾನವನ್ನು ನೀಡಲು ಅದು ಸ್ವಲ್ಪ ಸಹಾಯ ಮಾಡಿತೇನೋ.



ಕ್ರಿಸ್‌ಮಸ್ ಹಬ್ಬಕ್ಕಾಗಿ ನಾಲ್ಕೈದು ದಿನಗಳಿಂದ ತಯಾರಿ ನಡೆಸಿದ್ದೆ. ಮನೆಗೆ ಸುಣ್ಣ ತೊಡೆದು ನೆಲವನ್ನು ಬ್ರೆಷ್‌ನಿಂದು ತೊಳೆದು ಸ್ವಚ್ಛಗೊಳಿಸಿದ್ದು ಮೊದಲನೆಯ ಅಂಕ. ಅನಂತರ ಸಾಮಾನು ಸರಂಜಾಮುಗಳನ್ನು ಒರೆಸಿ ಧೂಳನ್ನು ಝಾಡಿಸಿದ್ದು ಎರಡನೆಯ ಅಂಕ. ಮೂರನೆಯದಾಗಿ ಶಾಪಿಂಗ್ ಮಾಡಿ ಮನೆಯ ಅಲಂಕಾರಕ್ಕಾಗಿ ಕೊಂಡುತಂದ ವಸ್ತುಗಳು ಬೇರೆ. ಊಟ ಉಪಚಾರಕ್ಕಾಗಿ ತಂದ ವಸ್ತುಗಳು ಬೇರೆ. ಮನೆಯ ಅಲಂಕರಣವೇ ದಿನವೆಲ್ಲಾ

ಹಿಡಿಯಿತು. ಅನಂತರ ತಾಯಿಯೊಂದಿಗೆ ಸಹಿ ಭಕ್ಷ್ಯಗಳ ತಯಾರಿ ಈ ಯಾವುದರಲ್ಲೂ ಬೆಮೆಲ್ ಭಾಗವಹಿಸಲಿಲ್ಲ. ಎಂದಿನಂತೆಯೇ ನಿರಾಳ–ನಿರಾಸಕ್ತಿಯಲ್ಲಿ ಆವಳ ಕಾರ್ಯಕ್ರಮ.

ಇಂದು ಕ್ರಿಸ್‌ಮಸ್ಸಿನ ಸಡಗರ. ಚರ್ಚಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿ ಹಿಂದಿರುಗುವ ವೇಳೆಗೆ ಒಂಭತ್ತೂವರೆ ಗಂಟೆ. ಚರ್ಚಿಗೆ ಹೋದ ಅಣ್ಣಂದಿರು ತಮ್ಮ ಪತ್ನಿಯರೊಂದಿಗೆ ಆಗಮಿಸಿದಾಗಲೇ ಎಲಿಜ ತನ್ನ ಪತಿಯೊಂದಿಗೆ ಆಗಮಿಸಿದಳು. ಬೆಮೆಲ್ ಮತ್ತು ಟಾಮಿಯವರು ಹೋಗಿ ತಮ್ಮ ತಮ್ಮ ಜೋಡಿಯನ್ನು ಕರೆತಂದರು. ನಾನು ಮಾತ್ರ ಒಂಟಿಯಾಗಿ ಉಳಿದೆ. ಮನೆಯಲ್ಲಾ ಗಲಾಟೆ ಗದ್ದಲಮಯ. ಅಡಿಗೆ ಮನೆಯಲ್ಲಿ ತಾಯಿಯೊಂದಿಗೆ ಮನಃಪೂರ್ವಕವಾಗಿ ಕೂಡಿದವಳು ನಾನೊಬ್ಬಳೇ. ಎಲಿಜ ಊಟದ ಟೇಬಲ್ ಹೊಂದಿಸಿದಳು. ಅತ್ತಿಗೆಯರಿಬ್ಬರೂ ಅಲ್ಲಿ ಇಲ್ಲಿ ಅಲ್ಪಸ್ವಲ್ಪ ಕೈಯಾಡಿಸಿ ಲೋಕಾಭಿರಾಮವಾಗಿ ಮಾತುಕತೆಯಲ್ಲಿ ತೊಡಗಿದ್ದು ನಗೆಯ ಚಟಾಕಿ ಹಾರಿಸುತ್ತಿದ್ದರು.

ಫ್ರೆಡ್ಡಿ ಚಹಪಾನ ಮಾಡುತ್ತ ಕೇಳಿದ 'ಏನಾದ ನಿನ್ನ ಇಂಡಿಯನ್ ಫೂಲ್ ?"

ಒಡನೆ ಎಲ್ಲರೂ ನಗೆಯ ಗುಲ್ಲೆಬ್ಬಿಸಿದರು. ಮಾತು.... ನಾನಾ ವಿಧವಾದ ಮಾತುಗಳು ಹೊರಬಿದ್ದು ಪುನಃ ನಗೆಯ ಹೊನಲು ಹರಿಯಿತು. ಎಲ್ಲರೂ ಅತ್ಯಂತ ಹೀನಾಯವಾಗಿ ಮಾತಾಡಿ ತೆಗಳಹತ್ತಿದ್ದರಿಂದ ನನ್ನ ಪರಿಸ್ಥಿತಿ ಹದ ಗೆಟ್ಟಿತು. ಆದರೂ, ಅದನ್ನು ತೋರಗೊಡಬಾರದೆಂದು ಪ್ರಯತ್ನಿಸಿದರೂ ಕಣ್ಣುಗಳು ವಂಚಿಸಿದುವು. ಮುಖವನ್ನು ಒರೆಸಿಕೊಳ್ಳುವ ನೆವದಲ್ಲಿ ಕಣ್ಣುಗಳನ್ನೂ ಒರೆಸಿಕೊಂಡು ಕೆಲಸ ಕಾರ್ಯಗಳಲ್ಲಿ ನನ್ನನ್ನು ನಾನೇ ನಿಯೋಜಿಸಿಕೊಂಡೆ. ಆದರೂ, ಹೀಯಾಳಿಕೆ ತೆಗಳಿಕೆಗಳು ನಿಲ್ಲಲಿಲ್ಲ. ಕ್ರಿಸ್‌ಮಸ್ ನನ್ನ ಪಾಲಿಗೆ ನರಕವಾಯಿತು. ನಾನು ಯಾರಿಗೂ ಏನೂ ಹೇಳದೆ ಮನೆಯಿಂದ ಹೊರಬಿದ್ದೆ. ಆದರೆ, ಹೋಗುವುದೆಲ್ಲಿಗೆ ? ಸುಮ್ಮನೆ ಅಡ್ಡಾಡಿ ಹೊತ್ತು ಕಳೆದರಾಯಿತು ಎಂಬ ಯೋಚನೆಯಲ್ಲಿ ಹಾದಿಯನ್ನು ಸವೆಸಿದೆ. ಭಾಸ್

ಎಲ್ಲಿದ್ದಾನೋ, ಇಂದು ರಜೆಯಾದ್ದರಿಂದ ಎಲ್ಲಾದರೂ ಅಡ್ಡಾಡಲು ಹೋಗಿರಬಹುದು ಎಂಬ ಯೋಚನೆಯೂ ಬಂತು. ಮನೆಮನೆಯಲ್ಲೂ ಕ್ರಿಸ್‌ಮಸ್ ಸಡಗರ. ಹಾಲ್ಗೆನ್ನೆಯ ಮುದ್ದುಮಕ್ಕಳು ರಂಗುರಂಗಿನ ತೊಡಿಗೆ ತೊಟ್ಟು ಕಿಲಕಿಲ ನಗುವಿನ ಲಹರಿಯನ್ನು ಹರಿಸುತ್ತ ಆನಂದೋತ್ಸಾಹವನ್ನು ಸೂಸುತಿದ್ದಾರೆ. ಅವರ ಅಭಿರಾಮ ಭಂಗಿಯನ್ನು ನೋಡಿದರೆ ಮನಸ್ಸು ಅರಳಿ ಮಂದಾರ ಪುಷ್ಪವಾಗುತ್ತದೆ. ಒಂದು ಕಾಲದಲ್ಲಿ ನಾನೂ ಹಾಗೇ ನಕ್ಕು ನಲಿಯುತಿದ್ದೆ.

ಮನಃಪ್ರಾಣಗಳು ಪುಟಪುಟಿಯುತಿದ್ದುವು. ಈ ದುರ್ದಿನಗಳು ಹೆಜ್ಜೆಹೆಜ್ಜೆಗೂ ತೊಡಕು. ಜೀವನ ದುಃಖದುಗುಡಗಳ ಪಾಲು. ಈ ಮನೆ ಬಿಟ್ಟಲ್ಲದೆ ಮನಃಪ್ರಾಣಗಳಿಗೆ ಸಾಂತ್ವನ ಮಾಡುವುದು ಅಸಾಧ್ಯ. ಅಂಥ ಮೇಲೆ ಎಷ್ಟುಬೇಗ ಬಿಟ್ಟರೆ ಅಷ್ಟು ಸೌಖ್ಯ... ಓ ಆ ದಿನ ನನ್ನ ಜೀವನದ ಅತ್ಯಂತ ಸುದಿನ ! ಅದು ಬಹಳ ಬೇಗನೆ ಬರಲಿ !

ಮನಃಪ್ರಾಣಗಳು ಏಕಪ್ರಕಾರವಾಗಿ ಪ್ರಾರ್ಥಿಸಿದುವು. ಅದೇ ಚಿಂತನೆಯಲ್ಲಿ ಮನನೆಟ್ಟು ಅಲ್ಲಲ್ಲೇ ಅಡ್ಡಾಡಿದೆ. ನೆತ್ತಿ ಉರಿಯುವಂತಹ ಸುಡುಬಿಸಿಲು. ಬೇಸರವನ್ನು ನೀಗಲು ಗ್ರೇಟ್ ಪೋಸ್ಟ್ ಆಫೀಸ್ ಕಡೆ ಹೋದೆ. ಆ ಸುಂದರ ಸುರಮ್ಯ ಗೋಪುರವನ್ನೇರಿ ನಗರದ ಮಹಾ ವಿಸ್ತೀರ್ಣದ ಮೇಲೆ ದೃಷ್ಟಿಯನ್ನು ಹಾಯಿಸಿ ರಸವೀಕ್ಷಣೆಯಲ್ಲಿ ಮನವನ್ನು ನೆಟ್ಟೆ.

ಆದರೂ, ದಕ್ಷಿಣಾ ಮುಖಿಯನ್ನು ಯಾವ ಕಡೆ ತಿರುಗಿಸಿದರೂ ದಕ್ಷಿಣ ದಿಕ್ಕಿಗೇ ಮರಳುವಂತೆ ಮನಃಚಕ್ಷು ನಿಲ್ಲುತಿದ್ದುದು ಮನೆಯ ಹಗರಣದ ದುರ್ದಾಂತ ಬಿಂದುವಿನಲ್ಲೇ. ಆದೊಂದು ತೊಡೆಯಲಾಗದ ಮಾನಸಿಕ ಹಿಂಸೆ...ಸಂಕಟ. ನನಗೆ ಇದೇ ಕೊನೆಯ ಕ್ರಿಸ್‌ಮಸ್. ಮನೆಯಲ್ಲಿ ಎಲ್ಲರೊಂದಿಗೆ ಆನಂದದಿಂದ ಕಾಲಹರಣಮಾಡುವ ಆಸೆ ಇತ್ತು. ಅದು ಪ್ರಥಮ ಅಂಕದಲ್ಲೇ ಮುರುಟಿತು. ಇರಲಿ, ಇವರ ಟೀಕೆ ಟಿಪ್ಪಣಿಗಳು ಬಾಲಮುದುಡುವಂತೆ ಬಾಳಬಲ್ಲೆನಾದರೆ ಅದೇ ಜೀವನ ಶೋಭೆ; ಅದೇ ಬದುಕಿನ ಸಾರ್ಥಕತೆ; ಅದೇ ಪ್ರೇಮದ ಜೀವಾಳ.

ಬೆನ್ನ ಹಿಂದುಗಡೆ ಪಾದ ಸಪ್ಪಳ ಕೇಳಿಬರುತ್ತಲೂ ನಾನು ತಟ್ಟನೆ ಹಿಂತಿರುಗಿ ನೋಡಿದೆ. ತನ್ನ ಗೆಳೆಯರೊಡನೆ ಬೂಟ್ಸಿನ ಪಟಪಟ ಸದ್ದು

ಮಾಡುತ್ತ ಭಾಸ್ ಇತ್ತಲೇ ಬರುತಿದ್ದುದು ಕಂಡು ಹೃದಯ ಹಿರಿಹಿರಿ ಹಿಗ್ಗಿತು. ಮುಗುಳು ನಕ್ಕು ಎದ್ದುನಿಂತೆ.

"ಇದೇನು ? ನೀನೊಬ್ಬಳೇ ಇಲ್ಲಿ ? ಅದರಲ್ಲೂ ಹಬ್ಬದ ದಿನ ?" ಭಾಸ್ ಕೇಳಿದ. ಕಣ್ಣುಗಳಲ್ಲಿ ಸಖೇದಾಶ್ಚರ್ಯದ ಮಿಂಚುಮಿನುಗಿತು.

ನನ್ನ ಪ್ರತ್ಯುತ್ತರವನ್ನು ಆನಂದ್ ವಸಂತ್ ಸಹ ನಿರೀಕ್ಷಿಸುತಿದ್ದುದು ನನ್ನ ಗಮನಕ್ಕೆ ಬಂತು. ಆಗ ನನ್ನ ಪರಿಸ್ಥಿತಿಯನ್ನು ಹೇಳಲೇಬೇಕಾಯಿತು. ಎಲ್ಲವನ್ನೂ ನಾಲ್ಕು ಮಾತುಗಳಲ್ಲಿ ತಿಳಿಯಪಡಿಸಿ ಖಿನ್ನಮುಖಿಯಾಗಿ ನುಡಿದೆ, "ನನಗೆ ಮನೆಯಲ್ಲಿ ಕಾಲಹರಣ ಮಾಡುವುದೇ ಕಷ್ಟವಾಗಿದೆ."

"ಹಾಗೆಂದರೆ ಹೇಗೆ? ಏನಿದ್ದರೂ ಮನಸ್ಸಿಗೆ ಹಾಕಿಕೊಳ್ಳದಿದ್ದರಾಯಿತು." ಅಷ್ಟೇ ನಿರಾಳವಾಗಿ ಹೊರಬಿತ್ತು ಭಾಸ್ವಾನನ ದನಿ.

ನಾನು ಮಾತಾಡಲಿಲ್ಲ. ನನ್ನ ಎದೆಯಾಳದಿಂದ ನಿಟ್ಟುಸಿರೊಂದು ಮೆಲ್ಲನೆ ತಪ್ಪಿಸಿಕೊಂಡಿತು.

ಆನಂದ್ ಮಧ್ಯೆ ಬಾಯಿ ಹಾಕಿದ "ಹೇಗೂ ಎರಡು ಕುಟುಂಬದವರೂ ಒಪ್ಪುದಿಲ್ಲವೆಂದಮೇಲೆ ಮತ್ತೇಕೆ ಹಗರಣ ? ಇಷ್ಟಕ್ಕೆ ಕೈ ಬಿಡುವುದು ಪರಮ ಲೇಸು."

ವಸಂತ್ ಸಹ ಅದನ್ನು ಅನುಮೋದಿಸಿದ. ಭಾಸ್ ಗೆಳೆಯರ ಸಲಹೆಯನ್ನು ಮನದಲ್ಲೇ ತರ್ಕಿಸುತ್ತ ಸುಮ್ಮನಾದ. ನನ್ನ ಜೀವನ ಒಳಗಿಂದೊಳಗೇ ತುಡಿಯಹತ್ತಿತು. ಭಾಸ್ ಎಲ್ಲಿ ತನ್ನ ಗೆಳೆಯರ ಸಲಹೆಗೆ 'ಅಸ್ತು' ಎಂದು ಬಿಡುವನೋ. ಅವರು ಮೂವರ ಮುಂದೆ ಏಕಾಂಗಿಯಾದ ನಾನು ಏನು ಹೇಳಲಾದೀತು ಎಂಬ ಪರಿತಾಪ ಮನವನ್ನು ಕೊರೆಯಹತ್ತಿತು. ಮೂಕಮೌನಭಾರದಿಂದ ತಲೆಬಾಗಿ ಕುಳಿತೆ. ಭಾಸ್‌ನ ಪ್ರತಿಕ್ರಿಯೆಗಾಗಿ ಕಿವಿಗಳು ನಿಮಿರಿದ್ದುವು, ಕ್ಷಣಕ್ಷಣಗಳೂ ಭಯಾಬ್ಧಿಯ ಸುಳಿಯಲ್ಲಿ ಸಿಕ್ಕಿ ತಳಮಳಿಸುತ್ತ ಉರುಳುತಿದ್ದುವು. ನಾನು ಉಸಿರನ್ನು ಬಿಗಿಹಿಡಿದಂತೆ ಮೆಲ್ಲನೆ ಉಸಿರಾಡಿದೆ.

ಭಾಸ್ ಸ್ವಲ್ಪ ಹೊತ್ತು ಸುಮ್ಮನೆ ತನ್ನಲ್ಲೇ ಯೋಚಿಸುತಿದ್ದು ಅನಂತರ ಬಿಸಿಯುಸಿರು ಬಿಟ್ಟುಹೇಳಿದ" ನಾನು ಅದಕ್ಕೆಂದೇ ಒಂದು ವರ್ಷದಿಂದ ತಳ್ಳಿಕೊಂಡು ಬಂದೆ. ಆಗಿನಿಂದ ಪರಸ್ಪರ ಭೇಟಿಗೂ ಹೆಚ್ಚಿನ ಅವಕಾಶ ಕೊಡುತ್ತಿರಲಿಲ್ಲ. ಆದರೂ, ಸಹ ಈಗೀಗ ಹೃದಯಗಳು ತೀರ ಹತ್ತಿರವಾಗಿವೆ. ಮನಸ್ಸು ಒಂದಾಗಿವೆ. ಇನ್ನು ದೂರವಾಗುವುದೆಂದರೆ ಅವಳಿಗೂ ಕಷ್ಟ. ನನಗೂ ಕಷ್ಟ. ಈ ವೈಪರೀತ್ಯ ನನಗೂ ಕಷ್ಟಕ್ಕೆ ತಂದಿದೆ...."

ಮುಂದೆ ಹೇಳುವುದೇನಿತ್ತೋ ಭಾವಾತ್ಮಕತೆಯಿಂದ ಗಂಟಲು ಒತ್ತಿದು ದರಿಂದ ಅವನು ಅಷ್ಟಕ್ಕೇ ಸುಮ್ಮನಾದ. ನಾನೂ ಏನಾದರೂ ಪ್ರತಿಕ್ರಿಯೆ ವ್ಯಕ್ತಪಡಿಸಬಹುದೆಂದು ಮೂವರೂ ನಿರೀಕ್ಷಿಸಿದರೇನೋ. ನಾನು ಒಂದೂ ಮಾತಾಡಲಿಲ್ಲ. ನನ್ನ ಮ್ಲಾನವದನ ಅವರಿಗೆ ಉತ್ತರ ಹೇಳಿರಬೇಕು. ಭಾಸ್ ತಾನೇ ತಾನಾಗಿ ಮುಂದುವರಿದ "ಮೊನ್ನೆಯಷ್ಟೇ ಅವಳಿಗೆ ಮದುವೆಯಾಗುವು ದಾಗಿ ಮಾತು ಕೊಟ್ಟಿರುವೆ. ಇನ್ನು ವಚನಭಂಗ ಮಾಡುವುದೂ ಸರಿಯಲ್ಲ. ವಿಧಾತ ನಮ್ಮ ಹಣೆಯಲ್ಲಿ ಏನು ಬರೆದಿದ್ದಾನೋ ಹಾಗಾಗುತ್ತೆ. ನಾನಂತೂ ಮನಸ್ಸು ಮಾಡಿದ್ದೇನೆ, ಕಾರಣ : ಹಿಂದೂತತ್ವದಲ್ಲಿ ಅವಳಿಗಿರುವ ನಂಬಿಕೆ ಮತ್ತು ಪೂಜ್ಯತೆ. ಭಾರತದಿಂದ ಗಂಗಾಜಲವನ್ನೂ ಪ್ರಸಾದವನ್ನೂ ಪವಿತ್ರ ಭಾವನೆಯಿಂದ ನನಗರ್ಪಿಸಿದಾಗಲೇ ನಾನು ಅವಳಿಗೆ ಮಾರುಹೋಗಿದ್ದೇನೆ. ಅದಕ್ಕಾಗಿಯೇ ಊರಿಗೆ ಹೋದೆ...."

ಆಗ ಆನಂದ್ ನನ್ನನ್ನು ಕುರಿತು ಅಂದ "ಭಾಸ್ ತಂದೆ ವಿರುದ್ಧವಾಗಲು ಕಾರಣವಿಲ್ಲದಿಲ್ಲ. ಅವರಿಗೆ ಇನ್ನೊಬ್ಬ ಮಗನಿದ್ದರೂ 'ಇಮ್ಮೆಚ್ಯುರ್' ಆಗಿರುವುದರಿಂದ ಇವನನ್ನು ತಮ್ಮ ಕಣ್ಣಿನಂತೆಯೇ ಭಾವಿಸಿರುವುದು ಸಹಜ. ಅವರು ಸಂಪ್ರದಾಯಸ್ಥರೂ ಕೂಡ. ಈಗ ಅವರ ಮಗ ವಿದೇಶೀ ಕನ್ಯೆಯನ್ನು ಕೈಹಿಡಿಯುತ್ತಾನೆಂದರೆ ಅವರಿಗೆ ಸಂಕಟ ಸಹಜವೇ.

ಆ ಮಾತಿನಿಂದ ನನ್ನ ಮನಸ್ಸಿನ ಅಲೆಗಳು ಸಂಪೂರ್ಣವಾಗಿ ಸ್ತಬ್ಧ ವಾದುವು. ನಾನು ಭಾಸನತ್ತ ದೃಷ್ಟಿಯನ್ನು ಹರಿಸಿ ಅವನ ಪ್ರತಿಕ್ರಿಯೆಯನ್ನು

ನಿರೀಕ್ಷಿಸಿದೆ. ಆಗ ಅವನು ಆನಂದನನ್ನು ಕುರಿತು ಅಂದ "ಆದರೂ ಕಾಲ ಗತಿಗೆ ಹೊಂದಿಕೊಳ್ಳುವುದರಲ್ಲಿ ಆತ್ಮೋನ್ನತಿಯಿದೆ," ಎಂದನಂತರ ನನ್ನನ್ನು ಕುರಿತು ಅಂದ "ನಿನ್ನವರು ಎಷ್ಟೇ ಹೀನಾಯವಾಗಿ ಕಂಡರೂ ಮದುವೆ ಯಾಗುವತನಕ ನೀನು ಹೊರಬರುವುದು ಬೇಡ. ಅದುವರೆಗೆ ತಾಳಿಕೋ."

ನನಗಾಗ ಸ್ವರ್ಗದ ಹೆಬ್ಬಾಗಿಲೇ ತೆರೆದಂತಾಯಿತು. ನಾನು ನನ್ನಲ್ಲೇ ಆನಂದಸಾಗರದಲ್ಲಿ ಮುಳುಗಿರುವಾಗ ಆನಂದ್ "ಹಾರ್ಟೀ ಕಂಗ್ರಾಟ್ಸ್! ಎಂದ. ಕೂಡಲೇ ವಸಂತನೂ ದನಿಗೂಡಿಸಿದ "ನನ್ನ ಅಭಿನಂದನೆಗಳನ್ನೂ ಸ್ವೀಕರಿಸಿರಿ."

ನಾನು ಇಬ್ಬರಿಗೂ ಪ್ರತಿವಂದಿಸಿದೆ. ಅನಂತರ ನಾವು ಹಬ್ಬದೂಟ ಮುಗಿಸಿದ್ದೂ ಅಲ್ಲೇ.

ನಿಜಕ್ಕೂ ಹೇಳುವುದಾದರೆ ನಾನು ಬಯಸಿದ್ದು ಕಮನೀಯ ಕಾಮ ಕಾಮನೆಗಳಿಂದ ಕೂಡಿದ ಸಂಸಾರವನ್ನಲ್ಲ. ನನಗೆ ಆತ್ಮಪೂರ್ವಕವಾದ ಶ್ರದ್ಧಾಲಯವೇ ಬೇಕು. ನಾನೀಗ ಗೃಹಹೀನೆ. ನಾವೊಂದು ಪುಟ್ಟ ಗೃಹ ವನ್ನು ಪಡೆದುಕೊಂಡನಂತರ ಗೃಹಿಣೀಪದವನ್ನು ಸ್ವೀಕರಿಸುವುದು ಶ್ರದ್ಧಾಲಯದಲ್ಲಿ. ಜೀವನ ಶ್ರದ್ಧೆ ಧಾರ್ಮಿಕ ಶ್ರದ್ಧೆ ಪಾರಮಾರ್ಥಿಕ ಶ್ರದ್ಧೆ ಗಳಿಂದ ಕೂಡಿದ ಬಾಳಿಗೆ ಶ್ರದ್ಧಾಲಯವೇ ಬೇಕು.

ಅನಂತರ ಸ್ವಲ್ಪ ದೂರ ಒಟ್ಟಿಗೇ ನಡೆದೆವು. ಬಳಿಕ ನಮ್ಮ ನಮ್ಮ ಹಾದಿ ಕವಲೊಡೆಯಿತು. ಹಾಯ್‌ಬಾಯ್‌ಗಳ ವಿನಿಯೋಗವಾದನಂತರ ಎಲ್ಲರೂ ಅಗಲಿದೆವು. ನಾನು ಸ್ವಲ್ಪ ದೂರ ನಡೆದನಂತರ ಹಿಂದಿರುಗಿ ನೋಡಿದೆ. ಅದೇನು ಹೃದಯಗಳ ಗುರುತ್ವಾಕರ್ಷಣೆಯೋ ಎಂಬಂತೆ ಭಾಸ್ ಸಹ ಆಗಲೇ ತಿರುಗಿ ನೋಡಿದ.

ನಾನು "ಚೀರಿಯೋ" ಎಂದೆ.

"ಚೀರಿಯೋ...!"

o o o o

ಭಾವಾವೇಶದ ರಸ ತರಂಗಿಣಿಯ ಮಹಾ ಪಾರವಾರ.

ಸಹಜಾನುಭೂತಿ ಎಷ್ಟೇ ಸಾಧುವಾದರೂ ಜೀವನ ನೌಕೆಗೆ ಚುಕ್ಕಾಣಿ ಸಹೇತುಕ. ಅಂತಲೇ ಆಧುನಿಕ ಜೀವನ ಧರ್ಮವನ್ನು ಒಪ್ಪಿ ಪರಸ್ಪರ ರಾಗ ಭಾವದಿಂದ ರಸಪ್ರಜ್ಞೆಯನ್ನು ಅರಳಿಸಿದ್ದು. ಇನ್ನು ಜೀವನಮಾರ್ಗಯೋಗ ನೇರವಾಗಿ ಗಮ್ಯಸ್ಥಾನಕ್ಕೆ ಎಂಬ ಸತ್ಯವನ್ನು ಆತ್ಮ ಒಪ್ಪಿಕೊಳ್ಳುತ್ತದೆ. ಹೃನ್ಮನಗಳು ತಾತ್ವಿಕ ದೃಷ್ಟಿಯಿಂದ ಪ್ರಾಧಾನ್ಯ ಕೊಡುತ್ತವೆ.

ಏನೇ ಇರಲಿ. ಕೇವಲ ಎರಡು ತಿಂಗಳೊಳಗಾಗಿ ನಾನು ಭಾಸ್ ನೊಂದಿಗೆ ಗೃಹಸ್ಥಾಶ್ರಮಿಯಾದುದು ಹೀಗೆ. ನನ್ನ ಬಂಧುಜನರಾಗಲೀ ಭಾಸ್‌ನ ಬಂಧುಜನರಾಗಲೀ ಯಾರೂ ಇಲ್ಲ. ಕೇವಲ ನಮ್ಮನಮ್ಮ ಆತ್ಮೀಯ ಗೆಳೆಯರು ಮಾತ್ರ. ಮದುವೆ ರಿಜಿಸ್ಟರ್ ಮೂಲಕ. ಅನಂತರ ನಮ್ಮವರಿಗೊಂದು ಟೀಪಾರ್ಟಿ. ಭಾಸ್‌ನ ಗೆಳೆಯರ ಮಡದಿಯರು ನನಗೆ ಸೀರೆ ಉಡಿಸಿ ಹಣೆಗೆ ತಿಲಕವಿಟ್ಟು ಬೈತಲೆಯಲ್ಲಿ ಸಿಂಧೂರವನ್ನು ಹಚ್ಚಿದ್ದರು. ನಾನು ಭಾರತೀಯ ಉಡುಪನ್ನು ಮೆಚ್ಚಿ ಕನ್ನಡಿಯಲ್ಲೇ ಕಣ್ಣಿಟ್ಟು ಒಮ್ಮೆ ಕಣ್ತುಂಬ ನೋಡಿಕೊಂಡಾಗ ದೇವಲೋಕದ ರಂಭೆಯಂತೆಯೇ ಕಂಡುಬಂದೆ.... ಆ ಉಡುಪು ನನಗೆ ತುಂಬಾ ಹಿಡಿಸಿತು. ಕಣ್ಣುಗಳು ಕನ್ನಡಿಯತ್ತ ಪುನಃ ಪುನಃ ಹೊರಳುತಿದ್ದುವು. ಆದರೆ, ಹೆಚ್ಚು ಸಮಯವಿರಲಿಲ್ಲವಾದ್ದರಿಂದ ಕಾರು ಹತ್ತಿದೆ. ರಿಜಿಸ್ಟ್ರೇಶನ್ ಐದು ನಿಮಿಷಗಳೊಳಗಾಗಿ ಮುಗಿಯಿತು. ಅನಂತರ ಟೀಪಾರ್ಟಿಯಲ್ಲಿ ಕೇವಲ ಕೆಲವೇ ಮಂದಿ. ಆದರೆ, ಅದರ ಹಿರಿಮೆಗೆ ಸಂಖ್ಯೆ ಮಾನದಂಡವಾಗಲಾರದು. ಸಂಖ್ಯೆಗಿಂತ ಸಾರಕ್ಕೇ ಇಲ್ಲಿ ಪ್ರಾಧಾನ್ಯ. ಭಾಸ್ ನನ್ನ ಬೆರಳಿಗೆ ಉಂಗುರವಿಟ್ಟು ಹಣೆಗೆ ತಿಲಕ ಹಚ್ಚಿ ನನಗೆ 'ಜಾನಕೀ' ಎಂದು ನಾಮಕರಣ ಮಾಡಿದಾಗ ಎಲ್ಲರೂ ಚಪ್ಪಾಳೆ ತಟ್ಟಿ ಹರ್ಷೋದ್ಗಾರ ಮಾಡಿದರು. ಆನಂದ್ ಮತ್ತು ವಸಂತ್ ನಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದರು.

ಮದುವೆಗೆ ಮುನ್ನ ನನಗೆ ಸೀರೆ ಉಡಿಸಿ ಅಲಂಕರಿಸುತ್ತಿದ್ದ ಭಾರತೀಯ ಲಲನೆಯರು ಭಾರತೀಯವಾದ ನಡವಳಿಕೆ–ರೀತಿ ನೀತಿ ಮತ್ತು ನಾರೀತತ್ವ ಗಳನ್ನು ಬಿಡಿಸಿ ಹೇಳಿದರು, ....ನಾರೀ ಜೀವನ ಇರುವುದೇ ಸೇವಾಸೌಜನ್ಯ

ಕ್ಕಾಗಿ. ಸೌಜನ್ಯದಿಂದಲೇ ಜೀವನಶೋಭೆ. ಮಿತಭಾಷೆ, ಮಿತವ್ಯಯ, ಆಚಾರ ವ್ಯವಹಾರಗಳಲ್ಲಿ ಹಿತಮಿತ, ಪೂಜೆ ಪುರಸ್ಕಾರಗಳಲ್ಲಿ ಗೌರವ, ಗುರು ಹಿರಿಯರಲ್ಲಿ ಭಕ್ತಿಭಾವ, ಕಿರಿಯಲ್ಲಿ ಆತ್ಮೀಯತೆ, ಸಂಸಾರದಲ್ಲಿ ಶ್ರದ್ಧೆ ಇವು ಮುಖ್ಯವೇ ಹೊರತು ಶೋಕಿ ಜೋಕಿಗಳಲ್ಲಿ ಭಾರತೀಯತೆ ಬೆಳಗುವುದಿಲ್ಲ. ಪಾಶ್ಚಿಮಾತ್ಯ ಸ್ತ್ರೀಯರು ಕಾಲಮೇಲೆ ಕಾಲುಹಾಕಿ ಕುಳಿತು ಸಿಗರೇಟು ಸೇದುವುದು, ವಿಸ್ಕಿ ಸೇವನೆಯಿಂದ ಪಾನಮತ್ತರಾಗಿ ಹೀನಾಯವಾಗಿ ವರ್ತಿಸುವುದು, ಬದುಕಿನಲ್ಲಿ ಡಾಂಬಿಕತೆ ಇವುಗಳಲ್ಲಿ ನಿಸ್ಸೀಮರು. ನಮ್ಮಲ್ಲಿ ಅತಿಥಿ ಸತ್ಕಾರ, ಹಿರಿಯರಲ್ಲಿ ಸೇವಾಸೌಜನ್ಯತೆ, ಗೃಹಾಲಂಕಾರ, ಪ್ರೀತಿ ವಿಶ್ವಾಸ ಅನುಬಂಧ ಇವುಗಳಿಗೇ ಪ್ರಾಶಸ್ತ್ಯ. ಅಂಗಾಂಗಳ ಪ್ರದರ್ಶನ ಹಾವಭಾವಗಳಲ್ಲಿ ಕಾಮ ಪ್ರಚೋದನೆ ಇವೆಲ್ಲಾ ಹೀನಾಯ. ನೀನು ಭಾರತೀಯತೆಯನ್ನು ಸೂಕ್ಷ್ಮವಾಗಿ ತಿಳಿದು ಅಭ್ಯಸಿಸಬೇಕು. ಅಲ್ಲವಾದರೆ ನೀನು ಸಮಾಜದ ಕಣ್ಣಿಗೆ ಕೀಳಾಗಿ ತುಚ್ಛವಾಗಿ ಕಾಣಿಸುತ್ತಿ. ಆದ್ದರಿಂದ, ನೀನು ಭಾರತೀಯರ ಕೂಟದಲ್ಲಿ ಕೂಡಿ ನಮ್ಮ ರೀತಿನೀತಿಗಳನ್ನು ಅಭ್ಯಸಿಸಿ ಕಲಿತು ನುರಿತು ಅನನ್ಯ ಗೌರವವನ್ನು ನೀಡಿ, ಗೌರವವನ್ನು ಸಂಪಾದಿಸಬೇಕು...

ಅಹ !...ಎಂತಹ ಹಿತವಾದ ? ನನ್ನ ಅಂತರಂಗವೆಲ್ಲಾ ವಿಚಾರ ದ್ರವ್ಯದಿಂದ ತುಂಬಿ ತುಳುಕಿತು. ದಿ ರೂಟ್ಸ್ ಆಫ್ ಎಜುಕೇಶನ್ ಆರ್ ಬಿಟ್ಟರ್, ಬಟ್ ದಿ ಫ್ರೂಟ್ ಈಸ್ ಸ್ವೀಟ್.

ಯಾರು ಹಾಗೆಂದಿದ್ದು...?

ಅದನ್ನು ಯೋಚಿಸಿ ತಿಳಿಯಲು ಕಾಲಾವಕಾಶವಾದರೂ ಎಲ್ಲಿತ್ತು ?

ಆನಂದ ಮೋದದಿಂದ ಕೂಡಿದ ಸುಖಸಂತೋಷದ ಸಮಾರಂಭ....

ಮಾತುಮಾತಿಗೂ ಹಾಸ್ಯರಸಾಯನ ಹರಿಯುತಿತ್ತು. ಮಾಡು ಮುಟ್ಟುವಂತಹ ಮಾತಿನ ಮೊಳಗು ನಗೆಯ ರಸಾಲ್ಲಾಪಗಳು ಮಾಡುಮುಟ್ಟಿ ಪ್ರತಿಧ್ವನಿ ಪಡೆದುವು. ತಮಾಷೆ ತಮಾಷೆ...

ಎರಡು ತಾಸುಗಳು ರಸವತ್ತಾಗಿ ಸ್ನೇಹಪೂರ್ಣವಾಗಿ ಉರುಳಿದುವು. ನನ್ನ ಮನಃಪ್ರಾಣಗಳು ಪರಮಾನಂದ ಪುಳಕಿತವಾದುವು. ನಾನು ನಿಜ

ವಾಗಿಯೂ ಸ್ವರ್ಗಸೌಖ್ಯವನ್ನು ಪಡೆದೆ. ಪುಳಕದಾನಂದಪೂರಿತವಾಗಿ ಮನೋ ದೇವತೆಗೆ ಆತ್ಮನಿವೇದನೆ ಮಾಡಿಕೊಂಡೆ.

ಪಾರ್ಟಿ ಪೂರೈಸಿದನಂತರ ಎಲ್ಲಾ ಮಿತ್ರಬಳಗದೊಡನೆ ನಾನು ಭಾಸ್ ನೊಂದಿಗೆ ಹೊರಟೆ. ಭಾರತೀಯ ನೀರೆಯರು ನಮ್ಮನ್ನು ಬಾಗಿಲ ಹೊರಗೆ ನಿಲ್ಲಿಸಿ ಆರತಿಯೆತ್ತಿದರು. ಭಾಸ್ ಆರತಿಯ ಹರಿವಾಣಕ್ಕೆ ನೂರು ಪೌಂಡು ಗಳನ್ನು ಇಟ್ಟು ಕೈಮುಗಿದ. ಆಗ ನಳಿನೀ ಶ್ರೀಕಾಂತ್ ಹಾಸ್ಯಪ್ರಧಾನ ವಾಗಿ ನುಡಿದಳು "ನಾವು ಮೂವರು ಆರತಿ ಹಿಡಿದಿದ್ದೇವೆ. ನೂರು ಪೌಂಡ್ ಹಾಕಿದರೆ ಹೇಗೆ ? ಇನ್ನೂ ಇನ್ನೂರು ಪೌಂಡ್ ಇಡಿ !" ಎಂದಳು. ಇನ್ನಿಬ್ಬರೂ ಹಾಗೆಂದೇ ನುಡಿದರು. ಭಾಸ್ ಹಿಂದೆ ಮುಂದೆ ನೋಡದೆ ಇನ್ನೂ ಇನ್ನೂರು ಪೌಂಡ್ ತಟ್ಟೆಗಿಟ್ಟು ಕೈಮುಗಿದ.

"ಥ್ಯಾಂಕ್ಸ್ ಭಾಸ್ಸಾನ್ ! ನಿಮ್ಮ ಜೀವನ ಹಾಲುಸಕ್ಕರೆಯಂತೆ ಬೆರೆತು ಸುಖವಾಗಿರಲಿ" ಎಂದು ಶುಭ ಹಾರೈಸಿದರು. ಉಳಿದವರೆಲ್ಲಾ ಕೈಚಪ್ಪಾಳೆ ತಟ್ಟಿದರು. ಮಾತಿನ ರಸಮಾಲೆಗೆ ತಾಳ ತಟ್ಟಿದಂತಾಯಿತು ಎಲ್ಲರ ಚಪ್ಪಾಳೆ. ಲಲನಾ ಮಣಿಯರು ನಮ್ಮಿಬ್ಬರಿಗೂ ತಿಲಕ ಹಚ್ಚಿ ಅಕ್ಕಿಯ ಅಕ್ಷತೆಗಳನ್ನು ತಲೆಯಮೇಲೆ ಎರಚಿದರು. ಅನಂತರ ಹೂದಳಗಳನ್ನು ದಂಡಿಯಾಗಿ ತಲೆಯ ಮೇಲೆ ಎರಚಿದರು. ಮನೆಯೆಲ್ಲಾ ಹೂದಳ--ಅಕ್ಕಿಯ ಕಾಳುಗಳು ಚೆಲ್ಲಾ ಡಿದುವು. ನನಗಿದು ಹೊಸದು. ಹಿಂದೊಮ್ಮೆ ಭಾರತೀಯ ಗೆಳತಿಯ ಮದುವೆಗೆ ಹೋಗಬೇಕೆಂದು ಹಾರೈಸಿ ಅಣಿಯಾಗಿದ್ದೆ ಕೂಡ. ದುರದೃಷ್ಟ ವಶಾತ್ ಅಂದೇ ತಾಯಿ ಕಾಹಿಲೆ ಬಿದ್ದು ಆಸ್ಪತ್ರೆಗೆ ಸೇರಿದುದರಿಂದ ಹೋಗಲಾಗಲಿಲ್ಲ. ಅಂದು ಜೆಸೆಲ್ ಮತ್ತು ಎಲಿಜ ಇರಲಿಲ್ಲವಾದ್ದರಿಂದ ನಾನೇ ನೋಡಿಕೊಳ್ಳಬೇಕಾಗಿ ಬಂದಿತು. ನಾನು ಮನದಾಸೆಯನ್ನು ಹತ್ತಿಕ್ಕಿ ತಾಯಿಯ ಶುಶ್ರೂಷೆಯನ್ನು ಕೈಕೊಂಡೆ. ಅನಂತರ ಹೊಸ್ತಿಲು ಪೂಜೆ ಮಾಡಿಸಿದರು. ಅವರು ಹೇಳಿದಂತೆಯೇ ಹೊಸ್ತಿಲು ಪೂಜೆ ಮಾಡಿದೆವು. ಆ ಬಳಿಕ ಗೃಹ ಪ್ರವೇಶ. ಮೇಜಿನ ಮೇಲೆ ಹೂ ದಾನಿಯಲ್ಲಿ ಘಮಘಮಿಸುವ ಪರಿಮಳಯುಕ್ತ ಹೂಗಳ ಶೃಂಗಾರ. ಗೋಡೆಯ ಬದಿಯಲ್ಲಿನ ಒಂದು

ಚಿಕ್ಕ ಅಲ್ಮೈರಾದ ಮೇಲೆ ಲಾರ್ಡ್ ಕೃಷ್ಣನ ವಿಗ್ರಹ. ಎಡಬಲಕ್ಕೆ ನಾನು ಭಾರತದಿಂದ ತಂದಿದ್ದ ಗಂಗಾಜಲದ ಗಿಂಡಿ ಮತ್ತು ಮಂಗಳ ದ್ರವ್ಯಗಳ ಭರಣಿಯಿತ್ತು. ಭಾಸ್ವಾನ್ ನನ್ನನ್ನು ಕೈಹಿಡಿದುಕೊಂಡು ಒಳಪ್ರವೇಶ ಮಾಡಿ ಲಾರ್ಡ್‌ಕೃಷ್ಣನ ಮುಂದೆ ನಿಂತು ಕೈಮುಗಿದು ಪ್ರಾರ್ಥನೆ ಸಲ್ಲಿಸಿದ. ನಾನೂ ಅವನನ್ನೇ ಅನುಕರಿಸಿದೆ. ಅನಂತರ ಪುಷ್ಪಾರ್ಚನೆ. ಮಂಗಳಾರತಿ. ಮಂಡಿಯೂರಿ ನಮಸ್ಕಾರ.

"ಆಗ ಭಾಸ್ವಾನ್ ನನ್ನ ನೆತ್ತಿಯ ಮೇಲೆ ಹೂಮುತ್ತನಿತ್ತು "ನೀನೀಗ ನನ್ನ ಅರ್ಧಾಂಗಿ ಡಾರ್ಲಿಂಗ್" ಎಂದ. ನಾನು ಅವನ ಮುಂಗೈಯನ್ನು ಸಂತಸದಿಂದ ಮುದ್ದಿಟ್ಟುಕೊಂಡೆ. ಹೃದಯದ ಹಕ್ಕಿ ನೂರು ದೇವರುಗಳನ್ನು ನೆನೆಯಿತು. ಚಿತ್ತಭಿತ್ತಿಯಲ್ಲಿ ಭಾರತೀಯ ಮಹಾನ್ ದೇವಾಲಯಗಳು ಚಲನಚಿತ್ರಗಳಂತೆ ಸುಳಿಸುಳಿದಳಿದುವು. ಅನಂತರ ರಾತ್ರಿಯ ವಿಶೇಷ ಭೋಜನ ಪಕ್ಕದ ಹೋಟೆಲ್ ವಿಕ್ಟೋರಿಯಾದಲ್ಲಿ. ಭಾರತೀಯವಾದ ರಸ ಭೋಜನ...ಹಾ ! ಅದೆಷ್ಟು ಆಪ್ಯಾಯಮಾನವಾಗಿತ್ತೋ ಹೇಳಿ ವರ್ಣಿಸಿ ಪೂರೈಸಲಾರೆ. ಈ ಹಿಂದೆಯೂ ಎಷ್ಟೋ ಭಾರಿ ಭಾರತೀಯವಾದ ಖಾದ್ಯ ಗಳನ್ನು ಸೇವಿಸಿರುವೆ. ಆದರೆ, ಇಂದಿನ ವಿಶೇಷವೇ ವಿಶೇಷ ! ಅದು ನಿಜ ವಾಗಿಯೂ ಖಾದ್ಯ ವಿಶೇಷವೋ ಅಥವಾ ನಮ್ಮ ಮಧುರ ಮಿಲನದ ವಿಶೇಷವೋ ಊಹಿಸಲಾರದಾದೆ. ಅತಿಥಿಗಳೆಲ್ಲರೂ ಭೋಜನ ತುಂಬಾ ರುಚಿಯಾಗಿದೆ ಎಂದು ಹೇಳುತಿದ್ದುದರಿಂದ ನಿಜವಿರಬಹುದು ಎಂದುಕೊಂಡೆ. ಊಟ ಮುಗಿಯುವಷ್ಟರಲ್ಲಿ ರಾತ್ರಿ ಹನ್ನೆರಡರ ಅಂಚನ್ನು ದಾಟಿತ್ತು ಸಮಯ.

ಆನಂದವನ್ನೇ ಪರಮಾನಂದಗೊಳಿಸುವಂತಿತ್ತು ಸನ್ನಿವೇಶ. ಗೆಳೆಯರ ಬಳಗ ವಿಸ್ಕಿ ಬ್ರಾಂದಿ ಮುಂತಾದ ಪೇಯಗಳನ್ನು ಹೀರಿದರೂ ಭಾಸ್ವಾನ್ ಮುಟ್ಟಲಿಲ್ಲ. ನಾನೂ ಅಷ್ಟೆ. ನನಗದು ಮೊದಲಿನಿಂದಲೂ ದೂರ ದೂರವೇ.

ನಳಿನಿ ಕೇಳಿದಳು "ನೀನು ಈ ಹಿಂದೆ ಎಲ್ಲೂ ಕುಡಿಯಲಿಲ್ಲವೇ ? ಅಥವಾ ಇಂದು ಭಾಸ್ವಾನನಿಗಾಗಿ ಮುಟ್ಟಲಿಲ್ಲವೇ ?"

"ನನಗೆ ಮೊದಲಿಂದಲೂ ಹಿಡಿಸುವುದಿಲ್ಲ."

"ನಿಜವಾಗಿ...?"

"ಹೌದು."

"ಪರವಾಯಿಲ್ಲ ! ನೀನು ಭಾರತೀಯ ರಮಣೀತ್ವಕ್ಕೆ ಪಕ್ಕಾಗಿರುವೆ !"

ಭಾಸ್ ಅದನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದ. ಅವನ ಸುರಸುಂದರ ಮುಖಮಂಡಲದಲ್ಲಿ ಬೆಳದಿಂಗಳಂತಹ ಹೂನಗೆ ಅರಳಿತು. ನಾನೂ ಮೃದು ಹಾಸದ ಪ್ರತ್ಯುತ್ತರ ನೀಡಿದೆ.

ಭೋಜನ ಮುಗಿಯಿತು. ನಾವಿಬ್ಬರೂ ಎಲ್ಲರನ್ನೂ ಆದರದಿಂದ ಎರಡೂ ಕೈಗಳನ್ನೂ ಜೋಡಿಸಿ ಮುಗಿದು ಬೀಳ್ಕೊಟ್ಟೆವು. ಎಲ್ಲರೂ ನಮಗೆ ಮತ್ತೊಮ್ಮೆ ಶುಭ ಹಾರೈಸಿ ಹಸನ್ಮುಖಿಗಳಾಗಿ ಹೊರಟರು. ನಾನು ಭಾಸ್ವಾನನ ತೋಳತೆಕ್ಕೆಯೊಡನೆ ನಮ್ಮ ಮನೆಗೆ ಹೊರಟೆ. ಕೇವಲ ಹತ್ತು ಮಾರು ದೂರವಿದ್ದ ಹಾದಿ ಕೆಲವೇ ನಿಮಿಷಗಳಲ್ಲಿ ಮುಗಿಯಿತು. ಭಾಸ್ ಮುಂದಾಗಿ ಬೀಗ ತೆಗೆದು ಒಳಹೆಜ್ಜೆಯಿಟ್ಟ. ಹೂದಳಗಳು ಅಕ್ಕಿಯ ಕಾಳುಗಳು ಕಿಂಚಿತ್ತೂ ಬಾಡಿರಲಿಲ್ಲ. ಭಾಸ್ ರಾತ್ರಿಯುಡಿಗೆ ತೊಡಲು ಶೌಚಾಲಕ್ಕೆ ಹೋಗಿ ಬಾಗಿಲು ಹಾಕಿಕೊಂಡ. ನಾನು ಕಿಟಕಿಯಲ್ಲಿ ಮೊಗ ವಿಟ್ಟು ನೋಡಿದೆ. ಆಕಾಶಮಂಡಲದಲ್ಲಿ ಅರ್ಧಚಂದ್ರಮ ಬೆಳಗುತಿದ್ದ. ಬೆಳುದಿಂಗಳ ಕಾಂತಿಯಲ್ಲಿ ಜಗತ್ತಿನ ಪಾಪ–ಪುಣ್ಯ, ರಾಗ–ಭೋಗ, ಸತ್ಯ–ಧರ್ಮ, ಆತ್ಮ–ಪರಮಾತ್ಮಗಳ ಕಾಂತಿ ದ್ವಿಗುಣಿತವಾದಷ್ಟು ಶೋಭಾ–ಶೈಲಿ.

ಕೆಲವು ಕ್ಷಣ ಅಲ್ಲ, ಕೆಲವು ಗಳಿಗೆ, ಅಲ್ಲವೇ ಅಲ್ಲ. ಅನೇಕಾನೇಕ ಗಳಿಗೆಗಳ ಪರ್ಯಂತ ಆನಂದಾನುಭವವನ್ನು ಮೂಕ ಪ್ರೇಕ್ಷಕಳಾಗಿ ಸವಿಯುತ್ತ ಸ್ವಾನುಭವವನ್ನು ಪಡೆದುಕೊಳ್ಳುತಿದ್ದೆ. ಪ್ರಾಣಸ್ಪಂದನದಿಂದ ತುಂಬಿದ ಆತ್ಮೀಯ ಪ್ರೇಮಭರಿತ ರಸಜೀವಿತವು ಒಂದು ವಿಶಿಷ್ಟ ಶೈಲಿಯಲ್ಲಿ ಮುಂದು ವರಿಯಲಿ ಎಂಬ ಶುಭಾಶಯದಿಂದ.

೦ ೦ ೦ ೦

ಭಾಸ್ ದಿನದಿನಕ್ಕೂ ವಿಜ್ಞಾನ ವಿಭಾಗದಲ್ಲಿ ಉತ್ತುಂಗಕ್ಕೇರುತ್ತಿದ್ದ.

ನಾನು ಯಥಾಪ್ರಕಾರ ಟೈಪಿಸ್ಟ್. ನನಗೆ ಅದರಿಂದ ಅತೃಪ್ತಿಯೇನೂ ಇರಲಿಲ್ಲ. ಭಾಸ್ ಸಣ್ಣ ಕೆಲಸವೆಂದು ಅದನ್ನು ವಿರೋಧಿಸಲೂ ಇಲ್ಲ. ದಿನಗಳು ಸರಾಗವಾಗಿ ಓಡುತಿದ್ದುವು. ಸಂಜೀವನ ಕುಸುಮ ದಳದಳವಾಗಿ ಅರಳುವಂತೆ.

ಇತಿ ಮಧ್ಯೆ, ಆನಂದ್ ಮತ್ತು ವಸಂತ್ ಭಾರತಕ್ಕೆ ಹಿಂದಿರುಗಿ ವಿವಾಹಿತರಾಗಿ ತಮ್ಮ ತಮ್ಮ ಮಡದಿಯರೊಂದಿಗೆ ಬಂದು ಲಂಡನ್ ನಗರ ದಲ್ಲೇ ನೆಲಸಿದರು. ವಸಂತನ ಸತಿ ನಾಗಿನಿ. ಆನಂದನ ಸತಿ ಇಳಾ. ಇಬ್ಬರೂ ವಿದ್ಯಾವಂತರು; ಇಂಗ್ಲೀಷ್ ಬಲ್ಲವರು; ಸುಸಂಸ್ಕೃತರು. ಆಗಾಗ ಅವರುಗಳು ನಮ್ಮಲ್ಲಿಗೆ ಬಂದು ಮಾತಾಡುತ್ತ ಸಾನಂದದಿಂದ ಹೊತ್ತು ಗಳೆಯುತ್ತಾರೆ. ಮೊಟ್ಟಮೊದಲಿಗೆ ಭಾಸ್ ಗೆಳೆಯರಲ್ಲಿದ್ದ ಐರೋಪ್ಯರಕ್ತದ ಮೇಲಿನ ತಿರಸ್ಕಾರ ಭಾವನೆ ಈಚೆಗೆ ಕಾಣಿಸುತ್ತಿರಲಿಲ್ಲ. ನಾವೂ ಕೈಬಿಡುವು ದೊರೆತಾಗ ಅವರಲ್ಲಿಗೆ ಹೋಗಿ ಬರುವ ಪದ್ಧತಿ ಬೆಳೆದುಕೊಂಡಿತು. ನಮ್ಮ ನಮ್ಮಲ್ಲಿ ಪರಸ್ಪರ ಹೊಂದಿ ಬೆಳೆದ ಸ್ನೇಹ–ಪ್ರೀತಿ–ವಿಶ್ವಾಸಗಳು ಅಪಾರ. ಭಾರತೀಯ ಹಬ್ಬಗಳನ್ನು ಅವರು ವಿಜೃಂಭಣೆಯಿಂದ ಆಚರಿಸುವ ಸಂದರ್ಭ ದಲ್ಲಿ ನಮಗೆ ತಪ್ಪದೆ ಆಹ್ವಾನ ನೀಡುತ್ತಾರೆ ಅವರಿಂದ ಹಬ್ಬಗಳ ವಿವರ ವನ್ನು ತಿಳಿದುಕೊಳ್ಳುವುದರಲ್ಲಿ ನನಗೆ ಮೈಯೆಲ್ಲಾ ಮನಸ್ಸಾಗುವಷ್ಟು ಅತ್ಯಾ ಸಕ್ತಿ. ಅದರ ರೀತಿ ನೀತಿಗಳನ್ನು ಅವರಿಂದಲೇ ಕೇಳಿ ತಿಳಿದುಕೊಳ್ಳುವೆ.

ಅಂತಹ ಒಂದು ಸಂದರ್ಭದಲ್ಲಿ ಆನಂದ್ ಮನೆಗೆ ಆಹ್ವಾನಿತರಾಗಿದ್ದೆವು ನಾವು. ಅಂದು ದೀಪಾವಳಿ ಹಬ್ಬ. ಭಾರತದಲ್ಲಿ ದೀಪಾವಳಿ ಆಚರಿಸುವಾಗ ಮನೆಯ ಹೊರಗೆ ದೀಪಾಲಂಕಾರ ಮಾಡುವ ಪದ್ಧತಿ. ಇಲ್ಲಿ ಅದಕ್ಕೆ ಅವ ಕಾಶವಿಲ್ಲದುದರಿಂದ ಮನೆಯೊಳಗೇ ದೀಪಾಲಂಕಾರ ಮಾಡಿದ್ದಾರೆ. ದೇವ ದೇವಿಯರ ಪಟಗಳೂ ಶ್ರೀಕೃಷ್ಣನ ವಿಗ್ರಹಗಳೂ ಪೂಜಿಸಲ್ಪಟ್ಟಿವೆ. ತೈಲಾಂಜನ ಉರಿಸಿ ಹಣ್ಣುಹಂಪಲುಗಳನ್ನು ಮುಂದಿಟ್ಟಿದ್ದರು. ಆನಂದ್ ದಂಪತಿಗಳಿಗೆ ಎಲ್ಲಿಲ್ಲದ ಉತ್ಸಾಹ. ನಮ್ಮನ್ನು ಅತ್ಯಂತ ಆದರ ಪೂರ್ವಕವಾಗಿ ಪ್ರಸನ್ನ ಮುಖದಿಂದ ಬರಮಾಡಿಕೊಂಡರು. ನಾವು ಅವರಲ್ಲಿಗೆ ಹೋಗುವು

ದಕ್ಕಿಂತ ಸ್ವಲ್ಪ ಮುಂಚಿತವಾಗಿ ವಸಂತ್ ದಂಪತಿಗಳು ಅಲ್ಲಿಗೆ ಆಗಮಿಸಿದ್ದರು. ಅಲ್ಲದೆ ಇನ್ನೂ ಅನೇಕ ಭಾರತೀಯ ಬಳಗ ಬಂದು ಕೂಡಿದರು. ಒಂದು ಗಂಟೆಯ ಸರಳ ಸಮಾರಂಭ ಸಂತಸ–ವಿನೋದ–ಔತಣಗಳಿಂದ ಮೋದಪ್ರದ ವಾಗಿತ್ತು.

ವಸಂತ್ ನನ್ನನ್ನು ಕುರಿತು ಹೇಳಿದ "ನಿಮ್ಮವರಾರೂ ನಿಮ್ಮೊಂದಿಗೆ ಸಂಪರ್ಕ ಇಟ್ಟುಕೊಂಡಿಲ್ಲವೆಂದು ತೋರುತ್ತೆ."

"ಬಂಧುತ್ವ ಎಂಬುದು ಭೂತಕಾಲಕ್ಕೇ ಆಯಿತು. ವರ್ತಮಾನಕ್ಕೆ ಏನೂ ಉಳಿಯಲಿಲ್ಲ. ಹೋಗಲಿ ಬಿಡಿ. ಯಾರಿಗೂ ಇಷ್ಟವಿಲ್ಲ ಎಂದ ಮೇಲೆ ಮುಗಿಯಿತು. ನಾನೂ ಹೋಗಲಿಲ್ಲ."

"ಹಾಗಾದರೆ ನಿಮ್ಮ ಬಂಧುತ್ವ ಅಲ್ಲಿಗೇ ಮುಗಿಯಿತು ?"

ನಾನು ನಕ್ಕುಬಿಟ್ಟೆ. ಅವನ ಮುಖದಲ್ಲೂ ಪ್ರತಿ ನಗು ಅರಳಿತು.

"ಭಾಸ್ಕರ್ ಶ್ರೀಕೃಷ್ಣಭಕ್ತ. ನೀವೂ ಅವನನ್ನು ಅನುಸರಿಸುತ್ತೀರಷ್ಟೆ?"

"ಹೌದು ಭಾಸ್‌ನೊಂದಿಗೆ ಸಾಸ್ಟಾಂಗನಮಸ್ಕಾರ ಹಾಕುವುದು ನಿತ್ಯ ಕ್ರಮವಾಗಿದೆ. ಅವನಿಂದ ಒಂದು ಸಣ್ಣ ಶ್ಲೋಕದ ತುಣುಕನ್ನು ಕಲಿತು ಕೊಂಡಿರುವೆ. ಅದರ ಉಚ್ಚಾರ ಅಷ್ಟು ಕ್ರಮವಾಗಿ ಬರುವುದಿಲ್ಲ. ಆದರೂ, ಪ್ರಯತ್ನಿಸುತ್ತಿರುವೆ."

ಆಗ ಇಳಾ ಉಲ್ಲಾಸಪೂರ್ಣ ಧ್ವನಿಯಲ್ಲಿ ನುಡಿದಳು "ನೀನು ರಜೆ ಯಿದ್ದಾಗ ನಮ್ಮ ಮನೆಗೆ ಬಾ. ಶ್ರೀ ಕೃಷ್ಣನನ್ನು ಪ್ರಾರ್ಥಿಸುವ ಶ್ಲೋಕ ಗಳನ್ನು ನಾನು ಎಷ್ಟಾದರೂ ನಿನಗೆ ಕಲಿಸಬಲ್ಲೆ. ನಾಗಿನಿಗೆ ಇವೆಲ್ಲಾ ಮೊದಲು ಬರುತ್ತಲೇ ಇರಲಿಲ್ಲ. ನಾನವಳಿಗೆ ಎಷ್ಟೋ ಕಲಿಸಿರುವೆ. ಎಲ್ಲಿ ನಿನಗೆ ಯಾವ ಶ್ಲೋಕ ಬರುತ್ತೆ ಹೇಳು ?"

"ಓಂ ನಮೋ ವಾಸುದೇವಾಯಃ"

ಒಡನೆಯೇ ಎಲ್ಲರೂ ನಕ್ಕುಬಿಟ್ಟರು. ಕಾರಣ ಅದರ ಉಚ್ಚಾರ ಸರಿ ಯಾಗಿರಲಿಲ್ಲ. ನಾನು ಅವರೊಂದಿಗೆ ನಗುವಿನ ಲಹರಿಯನ್ನು ಹರಿಯಬಿಟ್ಟೆ.

ನಾವು ಅಲ್ಲಿಂದ ಹೊರಟಾಗ ಆನಂದ್ ದಂಪತಿಗಳಿಗೆ ವಂದನೆಯನ್ನು ಅರ್ಪಿಸಿದೆ. ಅವರು ಅತ್ಯಂತ ಆತ್ಮೀಯತೆಯಿಂದ ಬೀಳ್ಕೊಟ್ಟರು.

o o o o

ಮರುವರ್ಷದ ಮಧ್ಯಭಾಗದಲ್ಲಿ ತಮ್ಮ ಪ್ರೇಮದ ದ್ಯೋತಕವಾದ ಒಂದು ಸುಂದರ ಹೆಣ್ಣು ಮಗುವನ್ನು ಪಡೆದೆ. ನೂತನ ಸತ್ಯವನ್ನು ಭಾಸ್ ಮುಕ್ತ ಹೃದಯದಿಂದ ಸ್ವೀಕರಿಸಿದ. ಅದರ ಲಾಲನೆ ಪಾಲನೆಗಳಲ್ಲಿ ಅವನೇ ಮುಂದು. ಅವನ ಆನಂದಕ್ಕೆ ಪಾರವೇ ಇಲ್ಲದಷ್ಟು ಹಿಗ್ಗು. ತನ್ನ ಮಿತ್ರ ಮಂಡಳಿಯನ್ನೆಲ್ಲಾ ಬರಮಾಡಿಕೊಂಡು ಮಗುವಿಗೆ 'ಸತ್ಯಭಾಮಾ' ಎಂದು ನಾಮಕರಣ ಮಾಡಿ ಎಲ್ಲರಿಗೂ ಸಿಹಿಹಂಚಿ ಉಚಿತ ರೀತಿಯಲ್ಲಿ ಸತ್ಕರಿಸಿದ. ಎಲ್ಲರೂ ತುಂಬು ಹೃದಯದಿಂದ ಶುಭಾಶಯಗಳನ್ನು ಅರ್ಪಿಸಿದಾಗ ನಾವು ಅತ್ಯಂತ ಹೆಮ್ಮೆಯ ತಾಯಿತಂದೆಗಳು ಎನಿಸಿಕೊಂಡು ಆನಂದಶೀಲರಾದೆವು, ಎಂದರೆ ಅತ್ಯುಕ್ತಿಯಾಗಲಾರದು. ನಾನು ಒಂದು ತಿಂಗಳು ರಜೆ ತೆಗೆದು ಕೊಂಡಿದ್ದೆ. ಅನಂತರ ಒಬ್ಬ ಒಳ್ಳೆಯ ಸಾಕುತಾಯಿಯನ್ನು ನೇಮಕ ಮಾಡಿಕೊಂಡು ಆಫೀಸಿಗೆ ಹೋಗುವಾಗ ಅವಳಲ್ಲಿ ಬಿಟ್ಟು, ಬರುವಾಗ ಕರೆ ತರುತಿದ್ದೆ.

ಇಂದು ಆನಂದ್ ಇಳಾ ಆಗಮಿಸಿದಾಗ ಸಂಜೆಯ ಮಸುಗಪ್ಪು ಮುಸುಗುತಿತ್ತು. ಇಳಾ ಮಗುವನ್ನು ಎತ್ತಿಕೊಂಡು ಮುದ್ದಿಸುತ್ತ "ಭಾರತೀಯ ರೂಪು, ಪಾಶ್ಚಾತ್ಯ ಬಣ್ಣ ಒಂದುಗೂಡಿದುದರಿಂದ ನಿಜ ವಾಗಿಯೂ ಬಲುಮುದ್ದು. ಮಗುವಿಗೆ ಸತ್ಯಭಾಮ ಹೆಸರು ಕೂಡ ಚೆನ್ನಾಗಿ ಒಪ್ಪುತ್ತದೆ" ಎಂದಳು, ಆನಂದಪೂರ್ಣ ದನಿಯಲ್ಲಿ.

ಭಾಸ್ಕರ್ ಆನಂದನನ್ನು ಕುರಿತು "ನಾನು ಅಂದಿಂದಿಗೂ ಊರಿಗೆ ಕಾಗದ ಬರೆಯುತ್ತಲೇ ಇರುವೆ. ತಂದೆಯವರು ಉತ್ತರ ಬರೆಯುತ್ತಿಲ್ಲ ವಾದರೂ ಅಕ್ಕ ಭಾವ ಬರೆಯುತ್ತಾರೆ. ಮೊನ್ನೆಯ ಕಾಗದದಲ್ಲಿ ತಂದೆಯವ ರಿಗೆ ಆರೋಗ್ಯ ಕೆಟ್ಟಿದೆಯೆಂದೂ ವೈದ್ಯರು ನೋಡುತ್ತಿದ್ದು ಆತಂಕವೇನೂ

ಇಲ್ಲವೆಂದೂ ಕಾಗದಬಂತು. ಸಧ್ಯದಲ್ಲೇ ಒಮ್ಮೆ ಹೋಗಿಬರಬೇಕೆಂದು ಯೋಚಿಸುತ್ತಿರುವೆ. ಅಲ್ಲಿಗೆ ಕೇಬಲ್ ಮಾಡಿರುವೆ. ಇನ್ನೂ ಸಂಪರ್ಕ ದೊರಕಿಲ್ಲ. ಈಗ ದೊರಕಬಹುದು.

"ನಿನ್ನ ಪ್ರೋಗ್ರಾಂ ಏನು ? ಇಲ್ಲಿ ಎಷ್ಟು ವರುಷ ಇರುವ ಯೋಜನೆ ?"

"ಇಲ್ಲಿ ಹೆಚ್ಚು ದಿನ ಇರಲಾರೆ. ಅಲ್ಲಿ ಒಳ್ಳೆಯ ಕೆಲಸ ಸಿಕ್ಕಿದರೆ ಹೊರಟೇ ಬಿಡುವೆ. ದೆಹಲಿಯಿಂದ ನನ್ನ ಸ್ನೇಹಿತ ಕಾಗದ ಬರೆದಿದ್ದಾನೆ. ನಾನು ಅಲ್ಲಿಗೆ ಹೋದರೆ ಕೆಲಸ ಸಿಗುವ ಸಂಭವವಿದೆಯಂತೆ. ಒಮ್ಮೆ ಹೋಗಿ ನೋಡ ಬೇಕು."

ಆಗ ಇಳಾ ನನ್ನನ್ನು ಕೇಳಿದಳು "ಅವರು ಇಂಡಿಯಾಕ್ಕೆ ಹೋದರೆ ನೀವೂ ಹೋಗಬೇಕಲ್ಲ ?"

"ಹೋಗಲೇ ಬೇಕು. ಹೋಗುವೆ." ನಾನು ತಲೆದೂಗಿದೆ. ಸಮ್ಮತಿ ಪೂರ್ವಕವಾಗಿ ಮುಗುಳ್ನಗೆ ಅರಳಿತು.

"ನಿಮ್ಮ ದೇಶವನ್ನು ಬಿಟ್ಟುಬಿಡಲು ನೀವು ತಯಾರಿದ್ದೀರಾ ?"

"ಓಹೋ ! ಭಾಸ್ ಎಲ್ಲಾದರೂ ಇರಲಿ, ಅವನೊಂದಿಗೆ ನಾನು ಇರುವವಳೇ."

ಭಾಸ್ ಕೇಳಿದ "ಒಂದು ವೇಳೆ ನಾನು ನರಕಕ್ಕೆ ಹೋದರೆ...?" ದನಿ ಹಾಸ್ಯ ಪ್ರಧಾನವಾಗಿ ಹರಿದು ಬಂತು. ಕಣ್ಣು ಮಿಸುಕಿದ,

"ಅದೂ ಸರಿಯೆ. ನಿನಗೆ ನರಕ ಹಿತವಾದರೆ ನನಗೂ ಹಿತವೇ ?"

ಎಲ್ಲರ ಮುಖದಲ್ಲೂ ಎಳೆನಗುವಿನ ಲಹರಿ ಉಕ್ಕಿ ಹರಿಯಿತು. ತೊಡೆಯ ಮೇಲಿದ್ದ ಮಗು ನಮ್ಮ ಮುಖವನ್ನು ನೋಡಿ ತಾನೂ ನಕ್ಕಿತು. ಅದರ ಖುಷಿಯನ್ನು ನೋಡಿ ಎಲ್ಲರಿಗೂ ಅಷ್ಟೇ ಆನಂದ. ಎಲ್ಲರೂ ನಗುತಿದ್ದರೆ ಅದಕ್ಕೂ ಅಷ್ಟೇ ನಗು. ಅವರಿಗೆ ಚಹ ಬಿಸ್ಕತ್ತುಗಳನ್ನು ಕೊಟ್ಟು ಅತಿಥಿ ಸತ್ಕಾರ ಮಾಡಿದೆ. ಅವರು ಹಿಂದಿರುಗಿದನಂತರ ನಾನು ಅಡುಗೆಯ ಮನೆಗ

ಹೋದಾಗ ಭಾಸ್ ಮಗುವಿನ ಬಳಿ ಕುಳಿತು ಪತ್ರಿಕಾವಲೋಕನದಲ್ಲಿ ಮನ ನೆಟ್ಟಿದ್ದ. ನಾನು ಒಳಗಣ ವ್ಯವಹಾರವನ್ನು ಕೈಕೊಂಡೆ.

ಸ್ವಲ್ಪ ಹೊತ್ತಿನೊಳಗಾಗಿ ಭಾಸ್ ಮನೆಗೆ ಕೇಬಲ್ ಸಂಪರ್ಕ ಸಿಕ್ಕಿತು. ಭಾಸ್ ತಂದೆಯವರು ಒಂದು ವಾರ ಚೆನ್ನಾಗಿರಲಿಲ್ಲವೆಂದೂ ಈಗ ಉತ್ತಮವಾಗುತ್ತಿರುವುದಾಗಿಯೂ ತಿಳಿಯಿತು. ಆಗ ಭಾಸ್ ಅಂದ,

"ಆದರೂ, ನಾವೊಮ್ಮೆ ಹೋಗಿಬರುವುದು ಲೇಸು. ಮೂರು ವಾರ ರಜೆ ಹಾಕುವೆ."

"ಆಗಬಹುದು...ಹೋಗೋಣ."

"ಮಗುವಿನ ಬಗ್ಗೆ ಯೋಚಿಸಬೇಕಾಗಿಲ್ಲ. ಅಲ್ಲಿ ಎಲ್ಲಾ ಸೌಕರ್ಯಗಳೂ ಲಭಿಸುತ್ತವೆ."

"ಸರಿ...ಸರಿ" ಎನ್ನುತ್ತ ನಾನು ಒಳಹೋದೆ. ಇಳಾ–ನಾಗಿನಿಯರ ಸ್ನೇಹ–ಪ್ರೇಮಗಳನ್ನು ಸವಿದ ಮನಸ್ಸಿಗೆ ಭಾರತೀಯರ ಬಗ್ಗೆ ಆಶಂಕೆಯೇನೂ ಮೂಡಲಿಲ್ಲ. ಯಥಾಪ್ರಕಾರವಾಗಿ ನನ್ನ ಕೆಲಸದಲ್ಲಿ ಗಮನ ಕೊಟ್ಟೆ. ನಿಶ್ಚಿಂತೆ ನಿರಾತಂಕಗಳಿಂದ ಹೃದಯ ಹಗುರವಾಗಿತ್ತು.

"ಜಾನಕೀ !"

ಕರೆ ಕಿವಿಯನ್ನು ಮುಟ್ಟಿತು. ನಾನು ಓಗೊಡುವುದರೊಳಗಾಗಿ ಪುನಃ ಭಾಸ್ ಧ್ವನಿ ಮೊಳಗಿತು. 'ಜಾನಕೀ'

ನಾನು ಹೊರಬಂದೆ. ಭಾಸ್ ಓದುತ್ತಿದ್ದ ಪತ್ರಿಕೆಯನ್ನು ಮಡಿಸುತ್ತ ಅಂದ, ಕ್ರೈಸ್ತ ಮಿಷನರಿಗಳು ಸಾಮಾನ್ಯ ಜನರನ್ನು ಮತಾಂತರಿಸುವುದನ್ನು ಇನ್ನೂ ಬಿಟ್ಟಿಲ್ಲ ನೋಡು ! ಆ ಮತ ಈ ಮತ ಎಂಬುದೆಲ್ಲಾ ವ್ಯರ್ಥಾಲಾಪ! ಮನುಜಮತವೊಂದೇ ನಿಜ ಮತ! ಮಾನವತೆಯನ್ನು ಉಳಿಸಿಕೊಳ್ಳಲು ಏನೇನು ಬೇಕೋ ಅಷ್ಟನ್ನು ನಾವು ಗಳಿಸಿಕೊಂಡರೆ ಧನ್ಯರು ! ಅದನ್ನು ಅಂದಿಂದಿಗೂ ಮಿಷನರಿಗಳು ಅರಿತುಕೊಳ್ಳಲಿಲ್ಲವಲ್ಲಾ ಅದೇ ಆಶ್ಚರ್ಯ. ತಮ್ಮ ಕ್ರೈಸ್ತ ಧರ್ಮದ ಹಿರಿಮೆಯನ್ನು ಎಲ್ಲಿಂದ ಎಲ್ಲಿಯವರೆಗೂ ಡಂಗೂರ ಬಾರಿಸ ಹೊರಟಿದ್ದಾರೆ...! ಅದರಲ್ಲೂ ಮತಾಂತರಿಸುವ ಕ್ರಮಗಳು

ಎಂತಹವುಗಳು ಗೊತ್ತೇ ? ಕೇವಲ ವಾಮಮಾರ್ಗಗಳ ಸಾಧನೆ ? ಹೆಣ್ಣಿನ ಆಸೆ, ಕುಡಿತ–ಕುಣಿತಗಳ ಪ್ರಲೋಭನೆ, ನೌಕರಿಯ ಆಮಿಷ ಇವೇ ಮುಂತಾದ ಬಲಾತ್ಕಾರ ಮಾಘಸ್ನಾನಗಳು ! ಇವೆಲ್ಲಾ ಪೈಶಾಚಿಕ ಮಾರ್ಗಗಳು ! ಭಾರತದಲ್ಲಿ ಶತಶತಶತಮಾನಗಳ ಆಂಗ್ಲ ರಾಜಾಶ್ರಯದಲ್ಲಿ ಮಿಷನರಿಗಳು ಹಿಂದೂಗಳನ್ನು ಮತಾಂತರಗೊಳಿಸಿದ ಒಂದೊಂದು ಕತೆಯೂ ದಾರುಣವೇ. ಆಗ ಇಡೀ ಹಿಂದೂ ಸಮಾಜವನ್ನು ಕ್ರೈಸ್ತೀಕರಣಗೊಳಿಸಬೇಕೆಂದು ಟೊಂಕ ಕಟ್ಟಿದವರು ಈ ಮಿಷನರಿಗಳು. ಜನರಿಗೆ ಎಷ್ಟೆಷ್ಟು ರೀತಿಯಲ್ಲಿ ದುರ್ಬೋಧನೆ ಮಾಡಿದ್ದಾರೆ ಗೊತ್ತೇ ?. ಆದರೇನು ? ಭಾರತ ತಮ್ಮ ಹಿಡಿತದಲ್ಲಿದ್ದ ಕಾಲದಲ್ಲೂ ಸಹ ವಿದ್ಯಾವಂತರು, ಬುದ್ಧಿವಂತರು, ತಿಳುವಳಿಕಸ್ಥರು ಇಂತಿಂತಹವರನ್ನು ಅಲುಗಾಡಿಸಲಾಗಲಿಲ್ಲ ಎನ್ನೋಣ. ದುರ್ಬಲರ ದೌರ್ಬಲ್ಯವನ್ನೂ, ಅಸ್ಪೃಶ್ಯರ ಅವನತಿಯನ್ನೂ ಉಪಯೋಗಿಸಿಕೊಂಡು ಕ್ರೈಸ್ತರನ್ನಾಗಿ ಮಾಡುವುದು ಸಾಧ್ಯವಾಯಿತೇ ಹೊರತು ಬೇರಾವ ವಿಧಾನದಲ್ಲೂ ಅವರು ಯಶಸ್ವಿಗಳಾಗಲಿಲ್ಲ. ನಮ್ಮಲ್ಲಿಯ ಸಾಮಾನ್ಯ ಹಿಂದೂವಿನ ಮನಸ್ಸು ಎಷ್ಟು ಪ್ರಬಲವಾಗಿತ್ತೆಂದರೆ, ಆಂಗ್ಲೇಯರ ಆಳ್ವಿಕೆಯಲ್ಲಿಯೇ ಅಗಾಧವಾದ ಪ್ರಯತ್ನ ಬೇಕಾಯಿತು ಮಿಷನರಿಗಳಿಗೆ. ಬಡತನದ ಕಪಿಮುಷ್ಟಿ ಮತ್ತು ಸ್ವಾತಂತ್ರ್ಯಹೀನತೆ ಅವರ ಮನಸ್ಸಿನ ಮೇಲೆ ಕಪ್ಪು ತೆರೆ ಎಳೆಯದಿದ್ದರೆ ಜನ ಕ್ರೈಸ್ತಮತಾವಲಂಬಿಗಳಾಗುತ್ತಿರಲಿಲ್ಲ. ದೈವವಶಾತ್ ಗಾಂಧೀಜಿಯವರ ಪರಿಶ್ರಮದಿಂದ ಸಕಾಲದಲ್ಲಿ ಆಂಗ್ಲರ ಆಳ್ವಿಕೆ ಕೊನೆಗೊಂಡುದು ನಮ್ಮ ಅಹೋಭಾಗ್ಯ! ಗಾಂಧೀಜಿ ಜನ್ಮಜನ್ಮಾಂತರಕ್ಕೂ ಪ್ರಾತಃಸ್ಮರಣೀಯರು !"

"ಈಗೇಕೆ ಈ ಅನಿರೀಕ್ಷಿತ ಪ್ರಸ್ತಾಪ ?" ನಾನು ಆಸಕ್ತಿಯಿಂದ ಕೇಳಿದೆ.

"ಈ ಪತ್ರಿಕೆಯ ಸುದ್ದಿಯಿಂದ ಕೇರಳದಲ್ಲಿ ನೂರಾರು ಮಂದಿ ಅಸ್ಪೃಶ್ಯರನ್ನು ಸಾಮೂಹಿಕವಾಗಿ ಕ್ರೈಸ್ತ ಮತಾವಲಂಬಿಗಳನ್ನಾಗಿ ಮಾಡಿದ್ದಾರೆ ಮಿಷನರಿಗಳು ! ಭಾರತೀಯ ಹಿಂದೂ ಸಮಾಜದಲ್ಲಿ ಒಗ್ಗಟ್ಟಿಲ್ಲದಿರುವುದೊಂದು ದೊಡ್ಡ ಕುಂದು. ಆದರೆ ನವನಿರ್ಮಾಣಕ್ಕೆ ಕ್ರೈಸ್ತಧರ್ಮಾವ

ಲಂಬಿಗಳಾಗಿ ಎನ್ನುವುದು ಶುದ್ಧ ಅವ್ಯವಹಾರ ಕಾರ್ಯ. ಮಿಷನರಿಗಳು ಇಷ್ಟು ಧೈರ್ಯ ಮಾಡುತ್ತಿರುವುದು ವಿಶೇಷವೇ ! ನ್ಯೂಕಾಸಲ್‌ಗೆ ಕಲ್ಲಿದ್ದಲನ್ನು ಸಾಗಿಸುವ ವ್ಯವಹಾರ ನಮ್ಮದು ಎಂಬುದರ ಅರಿವಾದಾಗ ತಮ್ಮ ಪ್ರಯತ್ನವನ್ನು ನಿಲ್ಲಿಸಿಯಾರೇನೋ.

"ಆಂಗ್ಲೇಯರ ಆಳ್ವಿಕೆಯಲ್ಲಿ ಸಾಂಕ್ರಾಮಿಕ ರೋಗಗಳಿಂದ ಜನ ಕ್ರಿಮಿ-ಕೀಟಗಳಂತೆ ಸಾಯುತ್ತಿದ್ದರೂ ರೋಗ ನಿರೋಧಕ ಸಾಧನಾ ಕ್ರಮವನ್ನಾಗಲೀ ಉತ್ತಮ ಚಿಕಿತ್ಸೆಯನ್ನಾಗಲೀ ಕೈಕೊಳ್ಳದೆ ಸಾಯುವಷ್ಟು ಸಾಯಲಿ ಎಂದು ಸರಕಾರ ಸುಮ್ಮನಿದ್ದಾಗ ಈ ಮಿಷನರಿಗಳು ಎಲ್ಲಿದ್ದರು ? ಆಗ ಕೇಶವ ಚಂದ್ರ ಸೇನ ವಿವೇಕಾನಂದ ಮುಂತಾದ ಮಹನೀಯರು ಸೇವಾ ಸಂಘಗಳನ್ನು ಸ್ಥಾಪಿಸಿ ಜನರ ಶುಶ್ರೂಷೆ ಮಾಡಿದ ಕಾರ್ಯ ಚಿರಸ್ಮರಣೀಯವಾದುದು. ಅವರ ಕೈಯ್ಯಲ್ಲಿ ಧನವಾಗಲೀ ಅಧಿಕಾರವಾಗಲೀ ಇರಲಿಲ್ಲ. ಕೇವಲ ಜನ ಸಹಕಾರವೊಂದೇ ನಿತ್ಯ ರಾಮಬಾಣ. ದುಡ್ಡು ದುಗ್ಗಾಣಿಯಿಲ್ಲದೇ ಅವರು ಪಟ್ಟ ಕಷ್ಟ ದೇವರಿಗೇ ಗೊತ್ತು ! ಈಗ ಮಿಷನರಿಗಳು ಶಾಲಾ ಕಾಲೇಜುಗಳನ್ನೂ ಆಸ್ಪತ್ರೆ ವೃದ್ಧಾಶ್ರಮಗಳನ್ನೂ, ಧನಿಕರ ಧನಸಹಾಯದಿಂದ ನಡೆಸುತಿದ್ದಾರೆ ಎನ್ನೋಣ. ಅವರಲ್ಲಿರುವ ನಿಷ್ಠೆ–ಶ್ರದ್ಧೆ–ಉತ್ಸಾಹ–ಸೇವಾಮನೋಧರ್ಮ ಮೆಚ್ಚುವಂತಾದ್ದೆ. ಅದನ್ನು ಹಿಂದೂಗಳು ಕಲಿತು ತನ್ಮೂಲಕ ತಮ್ಮ ಶ್ರೇಯೋಭಿವೃದ್ಧಿಯನ್ನು ಸಾಧಿಸಿದರೆ ಸಿದ್ಧಿ ದೂರವಿಲ್ಲ. ಮಹಮ್ಮದೀಯರ ಬಂಧುತ್ವ, ಕ್ರೈಸ್ತರ ಪ್ರಸಾರೋತ್ಸಾಹ, ಬೌದ್ಧಭಿಕ್ಷುಗಳ ತ್ಯಾಗ ಹಿಂದೂ ಸಮಾಜದಲ್ಲಿ ಮೊಳೆಯಬೇಕು ಎಂದಿದ್ದಾರೆ ವಿವೇಕಾನಂದರು ಆ ಮಾತಿನಲ್ಲಿ ಎಂತಹ ಸತ್ವವಡಗಿದೆ ನೋಡು."

"ಈಗೀಗ ಸಂಘ–ಸಂಸ್ಥೆಗಳು ಬೇಕಾದಷ್ಟು ಹುಟ್ಟಿಕೊಂಡಿವೆ. ಸರಕಾರದ ಸಹಾಯವನ್ನು ಹಾರೈಸದೆ ಎಷ್ಟೋ ದಿಶೆಯಲ್ಲಿ ದುಡಿಯುತಿದ್ದಾರೆ. ಆದರೆ, ದೇಶ ದೊಡ್ಡದು; ದುಡಿಯುವ ಕೈಗಳು ಏನೇನೂ ಸಾಲವು. ಆದ್ದರಿಂದ ಕಾರ್ಯವಿಧಾನ ನಿಧಾನ. ಇಂದು ಮುಖ್ಯವಾಗಿ ಜಡನಿದ್ದೆಯನ್ನು ಕೆರಳಿಸುವ ಕಾರ್ಯವನ್ನಷ್ಟೇ ಮಾಡಿದರೆ ಸಾಕು. ಮಾನಸಿಕ ಬೆಳವಣಿಗೆ

ಆಗುತ್ತದೆ. ಕ್ರೈಸ್ತರು ಈ ಅವ್ಯವಹಾರ ಮಾಡುವುದಕ್ಕಿಂತ ಬರೀ ಸೋಷಿಯಲ್ ಸರ್ವಿಸ್ ಮಾಡಿದರೆ ಎಷ್ಟು ಶ್ರೇಯಸ್ಸು ! ಎಷ್ಟು ಗೌರವ !"

ಭಾಸ್ ಬಹಳ ಸ್ಫೂರ್ತಿಯಿಂದ ಮಾತಾಡಿದ, ಅವನ ಮನಸ್ಸು ಉದ್ರೇಕಗೊಂಡಿತ್ತು. ನಾನು ಹಿಂದೂ ಸಂಪ್ರದಾಯವನ್ನು ಸ್ವೀಕರಿಸುವ ವರೆಗೆ ಅವನು ಪರಿಗ್ರಹಿಸದಿದ್ದುದು ಅವನ ನಿಷ್ಠೆಗೆ ಸರಿಯಾದ ಸಾಕ್ಷಿ. ಅವನ ಮೈಯಲ್ಲಿ ಹರಿಯುತ್ತಿರುವುದು ಅಪ್ಪಟ ಹಿಂದೂ ರಕ್ತ. ಅವನು ಎಂದೆಂದೂ ಪರಧರ್ಮೀಯರ ಹಸ್ತಕ್ಷೇಪವನ್ನು ಸಹಿಸಲಾರ ಎಂಬುದು ನನಗೆ ಗೊತ್ತು. ಆದರೆ, ಪಾಶ್ಚಾತ್ಯ ಸಂಸ್ಕೃತಿಯ ನಾಗರೀಕತೆಯಲ್ಲಿ ಹುಟ್ಟಿ ಬೆಳೆದು, ಏನೋ ಒಂದು ಬಗೆಯ ಪಾಶವಿಕ ಸುಖಸಂಪತ್ತಿಯ ಮೇಲೆ ಮಂಡಿಸಿದ ನನಗೆ ಇನ್ನೂ ಆತನ ಉದಾತ್ತ ಗುಣಗಳನ್ನು ಅರ್ಥಮಾಡಿ ಕೊಳ್ಳುವುದು ಕಷ್ಟವೇ. ಎಷ್ಟೋ ಸಲಿ, ಅವನ ವಿಚಾರಧಾರೆಯ ಬಿಗಿತ ದಲ್ಲಿ ತತ್ತರಿಸಿದಾಗ–ಅವನ ಎದೆಯಲ್ಲಿ ಜ್ವಲಂತವಾಗಿ ಪ್ರಕಾಶಿಸುವ ಮಾನ ವೀಯ ಮೌಲ್ಯವನ್ನು ಗ್ರಹಿಸಲಾರದೇ ದಿಗ್ಮೂಢಳಾದಾಗ ಅವನೇ ಅತ್ಯಂತ ವಿವೇಚನೆಯಿಂದ ವಿವರಿಸುತ್ತಿದ್ದ; ವಿಶ್ಲೇಶಿಸಿ ತಿಳಿಸುತ್ತಿದ್ದ. ನಾನು ಮಂತ್ರಮುಗ್ಧಳಂತೆ ಮನನ ಮಾಡುತಿದ್ದೆ.

ಭಾಸ್ ನನಗೆ ಇಂಗ್ಲೀಷಿಗೆ ಅನುವಾದಿತವಾಗಿರುವ ಭಾರತೀಯ ಉದ್ಗ್ರಂಥಗಳನ್ನು ತಂದುಕೊಟ್ಟು ಓದು ಎನ್ನುವ. ನನಗೆ ಅವು ಗಳಲ್ಲಿ ಕೆಲವು ಅರ್ಥವಾಗದೆ ಅವನ ಬಾಯಿಂದಲೇ ಓದಿಸಿ ಕೇಳಿ ಅರ್ಥ ವನ್ನು ತಿಳಿಯುವೆ. ಈ ಸಲ ವಿವೇಕಾನಂದರ ಗ್ರಂಥಮಾಲೆಯನ್ನು ತಂದಿಟ್ಟು ಹೇಳಿದ,

" 'ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ ನಿಬೋಧತ' ಎಂಬುದರ ಪೂರ್ಣ ಅರ್ಥ ಇವುಗಳಲ್ಲಿ ಲಭಿಸುತ್ತದೆ ಓದು !"

ನಾನು ಮೊದಲ ಅಧ್ಯಾಯವನ್ನು ತೆರೆದಾಗ ಹೆಡ್ಡಿಂಗ್ ಕೆಳಗಣ ಪಂಕ್ತಿಯಮೇಲೆ ದೃಷ್ಟಿ ಹರಿಯಿತು.

೧೪೬–ಶ್ರದ್ಧಾಲಯ

"Arise ! Awake ! and stop not till the goal is reached"

ಮನಸ್ಸು ವಿಚಾರಪರವಶವಾಗಿ ಜೀವನ ಮಾರ್ಗಯೋಗದ ಮೈಲಿ ಮೈಲಿಗಳ ಮೇಲೆ ಸೂಕ್ಷ್ಮಾತಿಸೂಕ್ಷ್ಮವಾಗಿ ಹರಿದಾಡಿತು. ರಾಮಾಯಣ ಮಹಾಭಾರತ ಮುಂತಾದ ಮಹದ್ಗ್ರಂಥಗಳ ಕಡೆ ರಸನಿಷ್ಠೆಯಿಂದ ಗಮನಿಸಿ ಸೀತಾರಾಮರ ಪ್ರೀತಿ; ದ್ರೌಪದಿಯ ಪತಿಭಕ್ತಿ, ಶ್ರೀರಾಮನ ಪಿತೃಗೌರವ, ಪಾಂಡವರ ಭ್ರಾತೃಪ್ರೇಮ, ಶ್ರೀರಾಮ–ಶ್ರೀಕೃಷ್ಣರಲ್ಲಿದ್ದ ಸಾತ್ವೀಕತೆ, ಕುಂತಿ–ಕೌಸಲ್ಯೆಯರಲ್ಲಿದ್ದ ಅಪಾರವಾದ ಪುತ್ರವಾತ್ಸಲ್ಯ ಮತ್ತು ಹಲವಾರು ಬಗೆಯ ಸದ್ಗುಣಗಳ ವಿಜೃಂಭಣೆ ಇವು ನಿಜವಾಗಿಯೂ ಮಾನವೀಯ ಗುಣಗಳೋ ದೈವೀಕವೋ ಎಂಬ ಭಾವವಿವಾದಗಳಲ್ಲಿ ಮನಸ್ಸು ಅಂಡಲೆಯುತ್ತಿರುವಾಗಲೇ ಸ್ವಾಮಿ ವಿವೇಕಾನಂದರ ಉದ್ಗ್ರಂಥಗಳನ್ನು ನೋಡಿ ನನಗೆ ದಿಗ್ಭ್ರಮೆಯೇ ಉಂಟಾಯಿತು. ಆದರೂ ಸಹ, ನಾನವುಗಳನ್ನು ಓದಿ ಜೀರ್ಣಿಸಿಕೊಳ್ಳಬೇಕೆಂಬ ಉದ್ದೇಶದಿಂದ ಎತ್ತಿಟ್ಟುಕೊಂಡೆ. ವಾಸ್ತವವಾಗಿ ಹೇಳುವುದಾದರೆ ನನ್ನ ದಿನಚರಿಯ ಕಾರ್ಯಕ್ರಮಗಳಲ್ಲಿ ದಿನಕ್ಕೆ ನಾಲ್ಕಾರು ಪುಟಗಳನ್ನು ಓದುವುದೂ ಸಹ ಕಷ್ಟವೇ. ದಿನವೂ ರಾತ್ರಿ ಹತ್ತರ ಮೇಲೇ ಓದಬೇಕಾದರೆ. ಆಗಲೂ ನಿದ್ದೆಯ ಮಂಪರ ಆವರಿಸಿತೆಂದರೆ ಮುಗಿಯಿತು. ಈ ಎಲ್ಲಾ ಅಡೆತಡೆಗಳಲ್ಲೂ ನನ್ನ ಪಾರಾಯಣ ನಡೆಯುತಿತ್ತು.

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾಽಮೃತಂಗಮಯ
ಓಂ ಶಾಂತಿಃ ಶಾಂತಿಃ ಶಾಂತಿಃ

ಎಂಬ ಉಪನಿಷದ್ ವಾಕ್ಯವನ್ನು ಅವನು ಪೂಜಾಕ್ರಮದಲ್ಲಿ ಪಠಿಸುವ ಕ್ರಮವನ್ನಿಟ್ಟುಕೊಂಡಿದ್ದುದಲ್ಲದೆ ನನಗೂ ಅದರ ಅಕ್ಷರ ಅಕ್ಷರವನ್ನೂ ವಿವರಿಸಿ ಕಲಿಸಿದ್ದ. ನನಗೀಗ ಅನ್ನಿಸುತ್ತಿದೆ ನಾನು ಕತ್ತಲೆಯಿಂದ

ಬೆಳಕಿನೆಡೆಗೆ ಸರಿಯುತ್ತಿದ್ದೇನೆ, ಮುಂದೆ ಎಂದಾದರೊಮ್ಮೆ ಪೂರ್ಣ ಬೆಳಕನ್ನು ಕಾಣುವೆ ಎಂದು. ಆ ಕಾಲ ಬೇಗ ಬರಲಿ ಎಂದು ಹಾರೈಸುತ್ತದೆ ಎಳೆಯ ಹೃದಯ.

ಅಂದು ಸಾಯಂಕಾಲ ನಾವು ಮನೆಗೆ ಬಂದಾಗ ಟಪ್ಪಾಲಿನ ಮೇಲೆ ಕಣ್ಣು ಹೊರಳಿಸಿದರೆ ಇಂಡಿಯಾಕ್ಕೆ ಏರ್ ಟಿಕೆಟ್ ಲಭಿಸಿರುವ ವರ್ತಮಾನ ವಿತ್ತು. ಪಯಣ ಈ ವಾರವೇ. ಭಾಸ್ ಉತ್ಸಾಹಿತನಾದ. ಮರುದಿನ ಭಾಸ್ಕರನಿಗೆ ದೆಹಲಿಯ ಮಿತ್ರನಿಂದ ಬಂದ ಕಾಗದದಲ್ಲಿ "ದೆಹಲಿ ಗೌರ್ನ್ಮೆಂಟಿನ ವಿಜ್ಞಾನ ಕ್ಷೇತ್ರದಲ್ಲಿ ಒಂದು ಉನ್ನತ ಹುದ್ದೆ ಖಾಲಿಯಿದೆಯೆಂದೂ, ನೀನು ಹೊರಟು ಬಂದರೆ ಬಹಳವಾಗಿ ಸಿಕ್ಕುವ ಸಾಧ್ಯತೆಯಿದೆಯೆಂದೂ" ನಿರೂಪಣೆಯಿತ್ತು. ಭಾಸ್ ಕೂಡಲೇ ಗೌರ್ನ ಮೆಂಟಿಗೆ ತನ್ನ ಅರ್ಹತೆ, ಅನುಭವ ಮುಂತಾದುವುಗಳನ್ನು ವಿವರಿಸಿ ಒಳ್ಳೆಯ ಹುದ್ದೆಯನ್ನು ಕೋರಿ ಅರ್ಜಿ ಬರೆದು ಹಾಕಿದ. ನನ್ನ ಬಗೆಗೆ ಹೇಳುವುದಾದರೆ, ನಮ್ಮವರನ್ನು ಬಿಟ್ಟು ದೂರವಾಗಿ ಎಂದೋ...ನಾನು ಮನೆಯನ್ನು ಬಿಟ್ಟಮೇಲೆ, ಒಮ್ಮೆ ಹೋಗಿ ತಾಯಿಯನ್ನು ನೋಡಿ ಬರುವ ಯೋಚನೆ ಅನೇಕ ಬಾರಿ ಮೂಡಿದ್ದರೂ, ಹೋಗಿ ಬರುವ ಸಾಹಸ ಮಾಡಿರಲಿಲ್ಲ. ಇಂಡಿಯಾಕ್ಕೆ ಹೊರಡುವ ಮುನ್ನ ನೋಡಿ ಬರುವುದು ಒಳ್ಳೆಯದು ಎಂಬ ಯೋಚನೆಯು ಬಂತು. ನಮ್ಮವರ ಸಂಪರ್ಕವೇ ಇಲ್ಲದ ನಮಗೆ ಇಂಗ್ಲೆಂಡಾದರೂ ಒಂದೇ; ಇಂಡಿಯಾ ಆದರೂ ಒಂದೇ. ಅನಂತರ ಎರಡು ದಿನಗಳು ಬಿಡುವಿಲ್ಲದೆ ಕಳೆದುಹೋದುವು. ನಾನು ಆಫೀಸಿಗೆ ಹೊರಡುವ ಮುನ್ನ ಭಾಸ್‌ನನ್ನು ಕುರಿತು ಹೇಳಿದೆ "ನೀನು ಆಫೀಸಿನಿಂದ ಬರುವಾಗ ಮಗುವನ್ನು ಕರೆದುಕೊಂಡು ಬರುವು ದಾದರೆ ನಾನೊಮ್ಮೆ ನನ್ನ ತಾಯಿಯನ್ನು ನೋಡಿ ಬರುವೆ."

ಭಾಸ್ ಗಟ್ಟಿಯಾಗಿ ನಕ್ಕು ನುಡಿದ "ಎಷ್ಟು ವರ್ಷಗಳ ಮೇಲೆ ?"

ನಾನೂ ನಕ್ಕುಬಿಟ್ಟೆ.

"ತಾಯಿ ಎಷ್ಟೇ ಸಿಟ್ಟು ಮಾಡಲಿ. ತಾಯಿ ತಾಯಿಯೇ ! ನೀನು

ಹೋಗುವಾಗ ಮಗುವನ್ನೂ ಕರೆದುಕೊಂಡು ಹೋಗು. ಆಕೆ ನೋಡಿದರೆ ಸಂತೋಷಪಟ್ಟಾಳು. ಮದರ್ ಈಸ್ ಮದರ್ !"

ನನಗೂ ಅದು ಹೌದೆನಿಸಿತು. ಭಾಸ್‌ನೊಂದಿಗೆ ಮಗುವನ್ನು ಕರೆದುಕೊಂಡು ಹೋಗಿ, ಸಾಕುತಾಯಿಯಲ್ಲಿ ಬಿಟ್ಟೆ. ಆಫೀಸ್ ಕೆಲಸವನ್ನು ಮುಗಿಸಿದನಂತರ ಅವನೇ ನನ್ನನ್ನು ಮಗುವಿನೊಂದಿಗೆ ತಾಯಿ ಮನೆಗೆ ಮುಟ್ಟಿಸಿದ. ನಾನು ಒಳಹೋದಾಗ ತಾಯಿಯೊಬ್ಬಳೇ ಪಲ್ಲಂಕದಮೇಲೆ ಬಿದ್ದುಕೊಂಡಿದ್ದಳು. ಮನೆ ಬಿಕೋ ಎನ್ನುತಿತ್ತು. ನನ್ನ ಪಾದಸಪ್ಪಳ ಕೇಳಿ ನನ್ನೆಡೆಗೆ ದೃಷ್ಟಿ ಹರಿಸಿದಾಗ ಮುಖಬಿಂಬ ಸ್ವಲ್ಪಮಾತ್ರ ಬಿರಿಯಿತು. ನಾನು ಬಳಿಯಲ್ಲಿ ಕುರ್ಚಿಯಮೇಲೆ ಕುಳಿತುಕೊಂಡೆ. ಮೊಟ್ಟಮೊದಲಿಗೆ ಏನೂ ಹೇಳಲು ತೋರಲಿಲ್ಲವೇನೋ, ಅವಳು ಮಾತಾಡಲೇ ಇಲ್ಲ. ನಾನೇ ಮೌನಮುರಿದೆ "ಹೇಗಿದ್ದೀಯಮ್ಮಾ ?"

ಬಹಳ ನೀರಸವಾದ ದನಿಯಲ್ಲಿ ಉತ್ತರಿಸಿದಳು "ಈಗ ಪರವಾಯಿಲ್ಲ"

"ಅಂದರೆ...ನಿನಗೆ ಆರೋಗ್ಯ ಕೆಟ್ಟಿತ್ತೇ ?"

"ಹೌದು, ಕಳೆದವಾರವೆಲ್ಲಾ ಜ್ವರವೇ. ಮೂರು ನಾಲ್ಕು ದಿನಗಳಿಂದ ಜ್ವರವಿಲ್ಲ."

"ಬೆಮೆಲ್ ಇಲ್ಲೆ ಇದ್ದಾಳೆಯೋ ?"

"ಇಲ್ಲ....ಅವಳೂ ಅವಳ ಗಂಡನೂ ಇಲ್ಲೇ ಕೂತು ತಿನ್ನತೊಡಗಿದುದರಿಂದ ನಾನೇ ಕಳುಹಿಸಬೇಕಾಯಿತು...ಟಾಮಿಯೂ ಬೇರೆ ಮನೆ ಮಾಡಿಕೊಂಡು ಹೋಗಿದ್ದಾನೆ. ಈಗ ನಾನೊಬ್ಬಳೇ." ಎಂದ ಅವಳು ಮುಖವನ್ನು ಒರಿಸಿಕೊಳ್ಳುತ್ತ ಕೇಳಿದಳು "ಇದು ನಿನ್ನ ಮಗುವೇ ?"

"ಹೌದು."

"ಬಲೂ ಮುದ್ದಾಗಿದೆ."

ನಾನು ಮುಗುಳು ನಕ್ಕು ಕೇಳಿದೆ. "ಅಕ್ಕ ಅಥವಾ ಅಣ್ಣಂದಿರು ಯಾರಾದರೂ ಬಂದು ಹೋಗುತ್ತಾರೆಯೋ ? ಜ್ವರ ಬಂದಾಗ ಹೇಗೆ ಅಡಿಗೆ ಮಾಡಿಕೊಂಡೆ ?"

"ಯಾರೂ ಇಲ್ಲ. ಎಲ್ಲರೂ ಮೊದಲಿನಂತೆಯೇ. ಕ್ರಿಸ್‌ಮಸ್‌ಗೆ ಮಾತ್ರ ಬರುತ್ತಾರೆ. ಆಗ ಔತಣ ಮಾಡುವುದೊಂದು ಗೋಳು. ಬೆಮೆಲ್ ಆಗಾಗ ಬಂದು ಹಣಕ್ಕೆ ಗಂಟು ಬೀಳುತ್ತಾಳೆ. ಎಲಿಜ ಸಹ ಅಷ್ಟೆ. ಆದರೆ, ಅವಳು ಬರುವುದು ಅಪರೂಪ. ಬೆಮಲ್‌ದೊಂದು ತಲೆನೋವು. ಎಷ್ಟೋ ಸಲಿ ಸಾಮಾನಿಗಾಗಿ ಕೊಟ್ಟ ಹಣವನ್ನೆಲ್ಲಾ ತಾನೇ ಬಳಸಿಕೊಂಡಿದ್ದಾಳೆ."

ನಾನು ಸುತ್ತಲೂ ಕಣ್ಣಾಡಿಸಿದೆ. ಮನೆಯೆಲ್ಲಾ ಅಸ್ತವ್ಯಸ್ತ. ತಾಯಿಯ ದೇಹವೂ ಬಹಳವಾಗಿ ಸೊರಗಿತ್ತು. ಬೆಳಿಗ್ಗೆ ತಯಾರಿಸಿದ ಚಹ ಮೇಜಿನಮೇಲೆ ಹಾಗೇ ಉಳಿದು ತಣ್ಣಗಾಗಿದೆ. ಇನ್ನು ಮಧ್ಯಾಹ್ನ ಊಟ ಮಾಡಿದಾಳೋ ಇಲ್ಲವೋ...ಆ ಯೋಚನೆ ಬಂದಾಗ ನಿಜವಾಗಿಯೂ ನನ್ನ ಮನದಲ್ಲಿ ಅನುಕಂಪ ಮೂಡಿತು. ನಾನು ಕೇಳಿದೆ "ಮೇಜಿನ ಮೇಲೆ ಚಹ ಹಾಗೇ ಉಳಿದಿದೆ. ಮಧ್ಯಾಹ್ನ ಊಟ ಮಾಡಿದೆಯಾ ?"

"ನಾಲಿಗೆ ಕೆಟ್ಟಿದೆ. ಊಟ ಏನು ಸೇರೀತು ? ಬ್ರೆಡ್ಡು ಹಾಲು ತೆಗೆದುಕೊಂಡೆ."

"ಹಾಗಾದರೆ ನಾನೊಂದಿಷ್ಟು ಏನಾದರೂ ತಯಾರಿಸಿಕೊಡುವೆ. ಆಗ ಬಹುದೇ ?"

"ಆಗಬಹುದು...ಏನು ಮಾಡಿಕೊಡುತ್ತಿ ?"

"ಒಂದಿಷ್ಟು ಖಾದ್ಯ ಅಥವಾ ಪಾರಿಡ್ಜ್ ?"

"ಸರಿ; ಮಾಡು ಮಗಳೇ ! ಪಾರಿಡ್ಜೇ ಇರಲಿ," ಮುಖದ ಮೇಲಿನ ಅಸಂಖ್ಯಾತ ರೇಖೆಗಳ ಮಧ್ಯೆ ಎಳೆನಗುವನ್ನು ಬೀರಿ ಹೇಳಿದಳು "ನೀನು ಇಷ್ಟಾದರೂ ಹೇಳುತ್ತಿ, ಬೆಮೆಲ್ ಒಂದಿನವೂ ಮಾಡಿಕೊಡಲಿಲ್ಲ. ಜ್ವರ ಬರುತ್ತಿದ್ದಾಗಲೂ ಇಲ್ಲ. ಬರೀ ಬ್ರೆಡ್ಡು ಹಾಲುಗಳಲ್ಲೇ ಕಾಲಹರಣ ಮಾಡಿದೆ."

"ಅವಳು ಮೊದಲೂ ಅಷ್ಟೆ, ತಾನೇ ? ಈಗ ಎಲ್ಲಿದ್ದಾಳೆ ಅವಳು ?"

"ಇಲ್ಲೇ ಕ್ರಿಷ್ಟೋಫರ್ ಲೇನಿನಲ್ಲಿ."

ನಾನು ಅಲ್ಲಿನ ಅವ್ಯವಸ್ಥೆಯನ್ನು ಸ್ವಚ್ಛಗೊಳಿಸಿ ಅವಳಿಗೆ ಪಾರಿಡ್ಜನ್ನು ತಯಾರಿಸಿಕೊಟ್ಟು ಕಸವನ್ನು ಝಾಡಿಸಿ ಮನೆಯನ್ನು ಚೊಕ್ಕಗೊಳಿಸಿದೆ. ತಾಯಿ ಪಾರಿಡ್ಜನ್ನು ಕುಡಿಯುತ್ತ ಹೇಳಿದಳು "ನಾನೀಗ ಅಡಿಗೆ ಮಾಡಿಕೊಳ್ಳುವ ಗೋಜಿಗೆ ಹೋಗುವುದೇ ಇಲ್ಲ. ರೆಸ್ಟೋರೆಂಟಿಂದ ಬೇಕು ಬೇಕಾದ ಖಾದ್ಯಗಳನ್ನು ತರಿಸಿಕೊಳ್ಳುವೆ. ಬ್ರೆಡ್ಡನ್ನೋ ಅನ್ನವನ್ನೋ ಸೇವಿಸಿದರಾಯಿತು."

ಅಲ್ಲಲ್ಲಿ ಹರಡಿಬಿದ್ದಿದ್ದ ಪತ್ರಿಕೆಗಳನ್ನು ಜೋಡಿಸಿ ಬೀರುವಿನಲ್ಲಿಡುತಿದ್ದಾಗ ತಾಯಿ ಕೇಳಿದಳು "ನಿನ್ನ ಗಂಡ ಇಂಡಿಯಾಕ್ಕೆ ಹೊರಟರೆ ಏನು ಮಾಡುತ್ತಿ ?"

"ಅಲ್ಲಿಗೇ ಹೋಗುವೆ. ಮುಂದಿನವಾರದಲ್ಲಿ ನಾವೊಮ್ಮೆ ಹೋಗಿ ಬರುವುದುಂಟು. ಬಹುಶಃ ಮೂರುವಾರಗಳು ನಾವು ಇಲ್ಲಿರುವುದಿಲ್ಲ."

"ಓ ಹಾಗೋ ?" ಎಂದ ಅವಳು ಸ್ವಲ್ಪ ಹೊತ್ತಿನ ಬಳಿಕ "ನಿನಗೆ ಅಲ್ಲಿಯ ಸಂಸ್ಕೃತಿಗೆ ಹೊಂದಿಕೊಳ್ಳುವುದು ಕಷ್ಟವಲ್ಲವೇ ? ನಿನ್ನಲ್ಲಿರುವುದು ಸ್ವಚ್ಛ ಐರೋಪ್ಯ ರಕ್ತ."

"ಎಲ್ಲರಿಗೂ ಅವರವರದು ಸ್ವಚ್ಛ."

"ಇರಲಿ, ನಾನು ಏನು ಹೇಳಿದ್ದೆನೋ ಅದನ್ನು ನೀನು ಇಂಡಿಯಾಕ್ಕೆ ಹೋದಮೇಲೆ ಅರಿತುಕೊಳ್ಳಲಿದ್ದಿ."

"ನಾನು ಈಗಾಗಲೇ ಇಂಡಿಯಾ ವಿಚಾರ ತಿಳಿದುಕೊಂಡಿರುವೆ. ಅಲ್ಲಿ ಹುಟ್ಟಿಬೆಳೆದ ತತ್ವಜ್ಞಾನಿಗಳೂ, ದ್ರಷ್ಟಾರರೂ, ಸ್ರಷ್ಟಾರರೂ, ವೇದಾಂತಿಗಳೂ, ಮುನಿಋಷಿಗಳೂ ಒಬ್ಬರೇ ಇಬ್ಬರೇ ? ಅಂಥ ಪುಣ್ಯಧಾತ್ರಿಯಾದ ಭಾರತದಲ್ಲಿ ಸಾಮಾಜಿಕ ಶ್ರೇಷ್ಠತೆ ಇಲ್ಲ ಎಂದೇನಿಲ್ಲ. ಒಂದು ವೃಕ್ಷದ ಸತ್ವ ಅದು ಕೊಡುವ ಫಲಸಂಪತ್ತಿನಲ್ಲಿ ವ್ಯಕ್ತವಾಗುತ್ತದೆ. ಅಂದಮೇಲೆ ನಾನು ನಿರಾಶಳಾಗಲಾರೆ."

"ಇಲ್ಲಿ ಕೇಳು ! ಪಾಶ್ಚಿಮಾತ್ಯ ದೇಶಗಳ ಹಿರಿಮೆ ಆ ದೇಶಕ್ಕೆ ಎಲ್ಲಿಂದ ಬರಬೇಕು ? ನಮ್ಮಲ್ಲಿಯ ತತ್ವಜ್ಞಾನ, ತಂತ್ರಜ್ಞಾನ ಆ ದೇಶ

ಗಳಲ್ಲುಂಟೇ ? ಇವನ್ನು ನೀನು ಇನ್ನೂ ಅರ್ಥಮಾಡಿಕೊಂಡಿಲ್ಲವಲ್ಲ ?"

"ಮಮ್ಮಿ! ನಮ್ಮ ದೇಶಗಳಲ್ಲಿ ಒಬ್ಬ ಏಸು, ಒಬ್ಬ ಪಾಲ್, ಒಬ್ಬ ಸಾಕ್ರೆಟೀಸ್ ಜನ್ಮಯೆತ್ತಿದ್ದರೆ ಅದೇ ದೊಡ್ಡ ವಿಷಯ. ಅದೇ ಭಾರತದ ಪ್ರಾಚೀನ ಕಾಲದಲ್ಲಿ ಹುಟ್ಟಿದ ಪರಮಶ್ರೇಷ್ಠರಾದ ವೇದಪುರುಷರೆಷ್ಟು ? ಅನಂತರ ಹುಟ್ಟಿಬಂದ ಧರ್ಮಪ್ರವರ್ತಕರೆಷ್ಟು ? ವರ್ತಮಾನ ಯುಗದಲ್ಲಿ ವಿಜೃಂಭಿಸಿದ ದ್ರಷ್ಟಾರರೆಷ್ಟು ? ಓಹ್ ! ನೆನಸಿಕೊಂಡರೆ ಮೈಪುಳಕಿತವಾಗುತ್ತದೆ. ನೀನಿನ್ನೂ ಅಲ್ಲಿಯ ಸಾಹಿತ್ಯವನ್ನು ಓದಿಲ್ಲವಾದುದರಿಂದ ವಿಷಯ ತಿಳಿದುಕೊಂಡಿಲ್ಲ, ಅಷ್ಟೆ. ಇಲ್ಲಿ ಧರ್ಮವೆಂದರೆ ಬೈಬಲ್ ಒಂದೇ! ಅಲ್ಲಿ....? ವೇದೋಪನಿಷತ್ತುಗಳು, ಧರ್ಮಗ್ರಂಥಗಳು, ತತ್ವಮೀಮಾಂಸೆಗಳು ಎಂತಹ ವಿಪುಲ ಸಮುದಾಯ ! ಅದು ಅಲ್ಲಿಯ ಸಮಾಜದಲ್ಲಿ ಬೆಳೆದ ಪ್ರತಿಭಾವಂತರ ಮತ್ತು ಮಹಾಜ್ಞಾನಿಗಳ ಸಂಖ್ಯಾ ಸೂಚನೆಯಲ್ಲವೇ ? ಥಿಂಕ್ ಓವರ್ ಇಟ್."

ಆ ಮಾತಿಗೆ ತಾಯಿ ಅಂತಹ ಹರ್ಷಿತಳೇನೂ ಆಗಲಿಲ್ಲ. ಸ್ವಲ್ಪ ಹೊತ್ತು ಗಂಭೀರವಾಗಿ ಯೋಚಿಸುತ್ತಿದ್ದು ಅನಂತರ ನುಡಿದಳು–"ಇತ್ತೀಚಿನ ಪರಿಸ್ಥಿತಿ ನಿನಗೇನು ಗೊತ್ತು ? ಆಂಗ್ಲರ ಆಳ್ವಿಕೆ ಕೊನೆಯಾದ ಬಳಿಕ ರಾಜಕೀಯ ದುಸ್ಥಿತಿಯಿಂದ ಸಮಾಜ ಪದದಲಿತವಾಗಿ ನಿರ್ಜೀವವಾಗಿ ಅಜ್ಞಾನ–ಬಡತನ–ಸ್ವಾರ್ಥಗಳ ಪರಮಾವಧಿಯಲ್ಲಿ ಸಿಕ್ಕಿ ತತ್ತರಿಸಿ ಕಂಗಾಲಾಗಿದೆ. ಅದನ್ನು ಸುಧಾರಿಸುವುದು ಹೇಗೆ ಸಾಧ್ಯ ? ಎಂಬುದನ್ನು ಯೋಚಿಸಿದರೆ ಅದು ತಂತ್ರಜ್ಞಾನದಿಂದಲೇ ಹೊರತು ತತ್ವಜ್ಞಾನದಿಂದಲ್ಲ ಎಂಬುದು ಹೊಳೆಯುತ್ತದೆ. ಮೊದಲು ಹಸಿದವರಿಗೆ ಅನ್ನ–ವಸನ–ವಸತಿಗಳ ಅಗತ್ಯವೇ ಹೊರತು ತತ್ವಬೋಧೆಯಲ್ಲ...."

ಅವಳ ಮಾತನ್ನು ಮುಂದುವರಿಯಗೊಡದೆ ನಾನು ನಡುವೆ ಬಾಯಿ ಹಾಕಿದೆ "ಹಾಗೆಂದರೆ ಹೇಗೆ ? ದೇಶಕ್ಕೆ ಸ್ವಾತಂತ್ರ್ಯ ಬಂದುದು ಇತ್ತೀಚೆಗಷ್ಟೆ ? ಇಷ್ಟರೊಳಗಾಗಿ ಏನೆಲ್ಲಾ ಸಾಧ್ಯ ? ಮಾಡುವಷ್ಟು ಮಾಡುತಿದ್ದಾರೆ. ಆಗುವಷ್ಟು ಆಗುತ್ತಿದೆ. ಎಲ್ಲಕ್ಕೂ ಕಾಲಾವಕಾಶ ಬೇಕಲ್ಲವೇ ?"

"ಆಗಲಿ ಅದನ್ನು ಒಪ್ಪೋಣ. ಆದರೂ, ಅಲ್ಲಿ ಸುಖಜೀವನಕ್ಕೆ ಕಾಲ ಪರಿಪಕ್ವವಾಗಿಲ್ಲ ಎಂದರೆ ಒಪ್ಪಿಕೊಳ್ಳುತ್ತೀಯಷ್ಟೆ ?"

"ಬರೀ ನಮ್ಮ ಸುಖಜೀವನವನ್ನಷ್ಟೇ ನೋಡಿಕೊಂಡರೆ ಏನು ಬಂದೀತು ? ಕಾಲೋಚಿತವಾಗಿ ನಡೆಯುವುದನ್ನು ನಾವು ಅಭ್ಯಾಸ ಮಾಡಿಕೊಳ್ಳಬೇಕು."

ಅಲ್ಲಿಗೆ ಭಾಪತೀಯ ವಿಚಾರ ಕೊನೆಗೊಂಡಿತು. ನಾನು ಡಾಕ್ಟರನ್ನು ಕುರಿತು ಕೇಳಿದೆ "ಡಾಕ್ಟರು ಇಲ್ಲಿಗೆ ಬರುತ್ತಾರೋ ನೀನೇ ಹೋಗು ವೆಯೋ ?"

"ನಾನು ತೀರಾ ಸುಸ್ತಾದಾಗ ಒಮ್ಮೆ ರಿಂಗ್ ಮಾಡಿದ್ದೆ. ಅವರೇ ಬಂದು ಹೋದರು. ಅನಂತರ ನಾನೇ ಹೋಗಿ ಬಂದೆ. ಈಗ ಅವರ ಆದೇಶದ ಪ್ರಕಾರ ಔಷಧ ತೆಗೆದುಕೊಳ್ಳುವುದಷ್ಟೆ. ಇನ್ನೊಂದು ವಾರದಲ್ಲಿ ಸುಧಾರಿಸಿಕೊಳ್ಳಬಹುದು" ಎಂದ ಅವಳು ಸ್ವಲ್ಪಹೊತ್ತು ಯೋಚಿಸಿದನಂತರ ಹೇಳಿದಳು "ಹೀಗೆ ಆಗಾಗ ದೇಹಸ್ಥಿತಿ ಕೆಡುತ್ತಲೇ ಇರುತ್ತದೆ. ಮುಂದಿನ ದಿನಗಳಲ್ಲೂ ಹೀಗೇ ಆದರೆ ನಾನು ಎಂದಾದರೂ ಕೊನೆಯ ಉಸಿರು ಎಳೆಯುವವಳೇ."

ಆ ಮಾತು ಹೊರಬಿದ್ದಾಗ ಅವಳ ಕಣ್ಣುಗಳು ತುಂಬಿ ಬಂದುವು. ನಾನು ಎದ್ದು ಅವಳನ್ನು ಆತ್ಮೀಯತೆಯಿಂದ ಅಪ್ಪಿಕೊಂಡು ಹೇಳಿದೆ, "ಭಗವಂತನಲ್ಲಿ ನಿನಗಾಗಿ ಪ್ರಾರ್ಥಿಸುವೆ. ಅವನು ನಿನ್ನನ್ನು ಬಹಳಕಾಲ ಚೆನ್ನಾಗಿಟ್ಟಿರಲಿ !"

ಅವಳ ಕಣ್ಣೀರು ಕೆನ್ನೆಯಮೇಲೆ ಧಾರೆಧಾರೆಯಾಗಿಳಿಯಿತು.

ನಾನು ಅವಳನ್ನು ಸಂತೈಸಿದನಂತರ ಹೇಳಿದೆ. "ನೀನು ಇನ್ನು ಮುಂದೆ ಕೆಲಸಮಾಡಲಾರೆ. ಒಳ್ಳೆಯ ವೃದ್ಧಾಶ್ರಮವನ್ನು ಸೇರಿಕೊಳ್ಳ ಬಹುದು ಅಥವಾ ನೀನು ಇಷ್ಟಪಡುವೆಯಾದರೆ ಮುಂದೆ ನಮ್ಮೊಂದಿಗೆ ಕಾಲಹರಣ ಮಾಡುವುದರಲ್ಲಿ ನಮ್ಮ ಆಭ್ಯಂತರ ಖಂಡಿತಾ ಇಲ್ಲ. ಮುಖ್ಯ

ವಾಗಿ ನೀನು ನಮ್ಮ ಬಾಂಧವ್ಯವನ್ನು ಒಪ್ಪಿಕೊಂಡು ಹೊಂದಿಕೊಂಡರೆ ಒಳ್ಳಿತು. ಈಗಿನ ಒಂದೆರಡು ವರ್ಷಗಳಲ್ಲಿ ಹೀಗೆಯೇ ಕಾಲಹರಣ ಮಾಡಬಹುದು. ಅನಂತರ ಶಕ್ತಿ ಕುಗ್ಗಿದ ಮೇಲೆ ಮುಂದೆ ಮುಂದೆ ನಿನಗೆ ಬಹಳ ಕಷ್ಟವಾಗಬಹುದು. ಆದ್ದರಿಂದ ನನ್ನೊಂದಿಗೆ ಇರುವುದನ್ನು ಒಪ್ಪಿಕೊ. ನಿನ್ನನ್ನು ನಾನು ಹೃದಯಪೂರ್ವಕವಾಗಿ ನೋಡಿಕೊಳ್ಳುವೆ. ನೀನು ಒಪ್ಪಿಕೊಳ್ಳುವೆಯಾದರೆ ನಾನು ಧನ್ಯಳಾಗುವೆ."

ಅವಳು ಮಾತಾಡಲಿಲ್ಲ. ಮೂಕಮೌನಿಯಾದಳು. ಪ್ರಸನ್ನ ಮುಖದಲ್ಲಿ ಹೂನಗೆ ಅರಳಿತು ಮಾತ್ರ. ನನಗೆ ಎಂದೋ ಓದಿದ ಒಂದು ವಾಕ್ಯ ನೆನಪಿಗೆ ಬಂತು,

"The most general survey shows us that the two faces of human happiness are pain and boredom."

ನಾನು ಭಾವವಿಷ್ಟಳಾದೆ. ಮನಸ್ಸು ಜೀವನೀಯ ನಾನಾ ಖಂಡಗಳ ಮೇಲೆ ಹರಿದಾಡಿ ಕಣ್ಣುಗಳಲ್ಲಿ ತಳಕ್ಕನೆ ಸಣ್ಣಗೆ ನೀರಾಡಿತು. ನಾನು ಮುಖವನ್ನು ಒರಿಸಿಕೊಳ್ಳುವ ನೆವದಲ್ಲಿ ಕಣ್ಣುಗಳನ್ನು ಒರಿಸಿಕೊಳ್ಳುವುದು ಅನಿವಾರ್ಯವಾಯಿತು. ಒರಿಸಿಕೊಂಡೆ.

— ೦ —

# ಅಧ್ಯಾಯ

## ೫

...ವಾತಾವರಣವನ್ನು ಭೇದಿಸಿಕೊಂಡು ಮುನ್ನುಗ್ಗುತ್ತಲಿದೆ ಶಬ್ದಾಯ ಮಾನವಾದ ವಿಮಾನ.

ಹಿತಕರ ವಾತಾವರಣವಾದುದರಿಂದ ಯಾನವೂ ಹಿತ.

ಇನ್ನೇನು ಯಾನ ಮುಗಿಯಲಿದೆ. ಬೆಂಗಳೂರು ನಗರವನ್ನು ಒಂದು ಸುತ್ತುಹಾಕಿ ನಿಲ್ದಾಣದತ್ತ ಸಾಗುವ ವಿಮಾನದಿಂದ ನಗರ ದರ್ಶನ ಮಾಡಿದೆ. ತೂಗು ತೊಟ್ಟಿಲಲ್ಲಿ ಮಗು ಸುಖವಾಗಿ ಮಲಗಿತ್ತು. ವಿಮಾನ ಭೂಸ್ಪರ್ಶ ಮಾಡಿದಮೇಲೆ ಪಯಣಿಗರು ಇಳಿದರು. ನಾವೂ ಇಳಿದೆವು ಮಗುವಿನೊಂದಿಗೆ. ನಾವು ಲಾಂಜಿಗೆ ಬಂದಾಗ ಒಬ್ಬ ಹಿರಿಯ ವ್ಯಕ್ತಿ ಎದುರಾದರು. ಅವರನ್ನು ನೋಡುತ್ತಲೂ ಭಾಸ್ ಅವರಿಗೆ ಆತ್ಮೀಯ ಆಲಿಂಗನ ಮಾಡಿ ನನಗೆಂದ "ನನ್ನ ಭಾವ ಶಾಂತಿಪ್ರಸಾದ್." ಅದೇ ನೇರಕ್ಕೆ ನನ್ನನ್ನೂ ಪರಿಚಯ ಮಾಡಿಕೊಟ್ಟ. ಶಾಂತಿ ಪ್ರಸಾದ್ ಖಾದಿ ಉಡುಪಿನಿಂದ ಅಲಂಕೃತರಾಗಿದ್ದರು. ಭಾಸ್ ಅನೇಕವೇಳೆ ಕಾಂಗ್ರೆಸ್ಸಿಗರನ್ನು 'ಖಾದಿ ಬಾಸ್ಟರ್ಡ್‌ಗಳು' ಎಂದು ತಿರಸ್ಕಾರ ಭಾವನೆಯಿಂದ ಅಂದದ್ದುಂಟು. ಈಗ ನೋಡಿದರೆ ಇವರೇ ಖಾದಿಧಾರಿಗಳು. ನಾನು ಮುಗುಳ್ನಗೆಯಿಂದ ಕರಗಳನ್ನು ಜೋಡಿಸಿದೆ. ಅವರೂ ಪ್ರತಿವಂದಿಸಿ ಕೇಳಿದರು "ಪಯಣ ಸುಖಕರವಾಗಿತ್ತೇ ?"

"ಹೌದು ನೀವೆಲ್ಲಾ ಕ್ಷೇಮವೇ ?"

ಅವರು ಮಗುವಿನ ಕೆನ್ನೆಯನ್ನು ಮುದ್ದಿಸಿ ನಮ್ಮ ಸಾಮಾನನ್ನು ತೆಗೆದುಕೊಳ್ಳಲು ಭಾಸ್‌ನೊಂದಿಗೆ ಹೋದರು. ಲಾಂಜಿನಲ್ಲಿ ವಿಪರೀತ ಜನಸಂದಣಿ. ಪ್ರವಾಸೋದ್ಯಮ ಇಲ್ಲಿ ಬಹಳವಾಗಿ ಬೆಳೆದಿದೆ ಎಂದು ಕೊಂಡೆ.

ನಾವು ಸೂಟ್‌ಕೇಸುಗಳನ್ನು ಪಡೆದುಕೊಂಡಮೇಲೆ ಕಾರುಹತ್ತಿದೆ. ಹಾದಿಯುದ್ದಕ್ಕೂ ಅವರಿಬ್ಬರೂ ಆತ್ಮೀಯತೆಯಿಂದ ಮಾತಾಡಿದರು. ಭಾಸ್ ತಂದೆಯವರ ಕ್ಷೇಮ ಸಮಾಚಾರವನ್ನು ಪೂರ್ತಿ ಇಲ್ಲಿಯೇ ತಿಳಿದು ಕೊಂಡು ಹರ್ಷಿತನಾದ. ಹತ್ತಿಪ್ಪತ್ತು ನಿಮಿಷಗಳ ಪಯಣ ಮುಗಿದ ನಂತರ ಕಾರು ಒಂದು ಮನೆಯ ಪ್ರಾಕಾರದ ಒಳಹೊಕ್ಕು ಪೋರ್ಟಿಕೋ ದಲ್ಲಿ ನಿಂತಿತು. ಒಬ್ಬ ವ್ಯಕ್ತಿ ವರಾಂಡದ ಕುರ್ಚಿಯಮೇಲೆ ಕುಳಿತಿದ್ದರು. ಅವರನ್ನು ನೋಡಿದೊಡನೆಯೇ ಅವರೇ ಭಾಸ್ವಾನನ ತಂದೆ ಇರಬಹುದು ಎಂದು ಹೊಳೆಯಿತು ನನಗೆ. ಭಾಸ್ವಾನ್ ಥಟ್ಟನೆ ಕಾರಿಂದಿಳಿದು ಬಳಿಗೆ ಹೋಗಿ ಕಾಲಿಗೆ ನಮಸ್ಕರಿಸಿ ಮಾತಾಡಿಸಿದ. ಇಬ್ಬರೂ ನಗುಮುಖದಿಂದ ಮಾತಾಡುತ್ತಿದ್ದಂತೆಯೇ ನಾನು ಕಾರಿನಿಂದಿಳಿದು ಅವರ ಪಾದಗಳಿಗೆ ನಮಸ್ಕರಿಸಿದೆ, ಭಾಸ್‌ನನ್ನು ಅನುಸರಿಸಿ. ಭಾಸ್ ನನ್ನನ್ನು ಪರಿಚಯಿಸಿದ. ಅದೇ ವೇಳೆಗೆ ಒಳಗಡೆಯಿಂದ ಹಿರಿಯ ಸ್ತ್ರೀ ಬಂದಳು. ಭಾಸ್ವಾನ್ ಅವಳನ್ನು ತನ್ನ “ಅಕ್ಕ!” ಎಂದು ಪರಿಚಯ ಮಾಡಿಕೊಟ್ಟ. ಹಿರಿಯ ಹಿರಿಯ ವ್ಯಕ್ತಿ–ಅಂದರೆ ನನ್ನ ಮಾವ ಕೈನೀಡಿ ಮಗುವನ್ನು ಸ್ವಲ್ಪ ಸಮಯ ಎತ್ತಿಕೊಂಡು ನೋಡಿ ಮುದ್ದಿಸಿ ಮಂಜುಳೆಯ ಕಡೆಗೆ ನೀಡಿದರು. ಅನಂತರ ಅವರು ನನ್ನನ್ನು ಬಳಿಯಲ್ಲಿ ಕುಳಿತುಕೊಳ್ಳಹೇಳಿದರು. ನಾನು ಕುಳಿತ ನಂತರ “ನೀನು ಈ ಮನೆಗೆ ಹಿರಿಯ ಸೊಸೆಯಾದ್ದರಿಂದ ಹಿರಿಯ ಜವಾಬ್ದಾರಿಯಿರುತ್ತದೆ ಎಂಬುದು ಗೊತ್ತೇ ?” ಎಂದರು ಪ್ರಸನ್ನವದನ ದಿಂದ.

ನಾನು ಒಂದು ಕ್ಷಣ ಯೋಚಿಸಿ “ನೀವು ಹೇಗೆ ಹೇಳಿದರೆ ಹಾಗೆ” ಎಂದೆ.

ಅನಂತರ ನಮ್ಮ ಕ್ಷೇಮ ಸಮಾಚಾರವನ್ನು ವಿಚಾರಿಸಿದರು. ತಮ್ಮ ಮನದಲ್ಲಿ ಅಸಮಾಧಾನವಿದೆ ಎಂಬುದನ್ನು ಸ್ವಲ್ಪವೂ ತೋರ್ಪಡಿಸಿಕೊಳ್ಳ ಲಿಲ್ಲ. ನನಗೂ ಅವರ ಪ್ರೀತಿಯನ್ನು ನೋಡಿ ತುಂಬ ಸಂತೋಷ ವಾಯಿತು. ಅನಂತರ ಒಳಗಡೆ ಹೋದೆ. ಮಂಜುಳ ನನ್ನನ್ನು ಕರೆದು ಎಲ್ಲಾ ಕೊಠಡಿಗಳನ್ನೂ ತೋರಿ, ನಮಗೆ ಬಿಟ್ಟುಕೊಟ್ಟಿದ್ದ ಕೊಠಡಿಯಲ್ಲಿ

ನಮ್ಮ ಸೂಟ್‌ಕೇಸ್‌ಗಳನ್ನು ಇಡಿಸಿ ಕೇಳಿದಳು "ಈ ಕೊಠಡಿ ನಿನಗೆ ಸರಿಹೋಗುತ್ತದೆಯೇ ?"

"ಓ ಸಾಕು ! ಇಷ್ಟಿದ್ದರೆ ಬೇಕಡಷ್ಟಾಯಿತು." ಇದಕ್ಕಿಂತ ಇನ್ನೇನು ಬೇಕು ?"

"ಒಳ್ಳೆಯದು. ನೀನು ಮುಖಮಜ್ಜನ ಮಾಡು. ನಾನು ಇಷ್ಟ ರಲ್ಲೇ ಚಹ ತಯಾರಿಸುವೆ."

ಅವಳು ಆ ಕ್ಷಣವೇ ಅಲ್ಲಿಂದ ಕಣ್ಮರೆಯಾದಳು. ಅಹಃ ಎಂತಹ ಚಟುವಟಿಕೆ ?

ನಾವು ಮುಖಮಜ್ಜನ ಮಾಡಿ ಹೊರಬರುವ ವೇಳೆಗೆ ಮೇಜಿನ ಮೇಲೆ ಚಹ ಬಿಸ್ಕತ್ತು ಕೇಕ್ ಮುಂತಾದ ರುಚಿರುಚಿಯ ತಿಂಡಿಗಳಿಂದ ತಟ್ಟೆಗಳಿದ್ದುವು. ತುಂಬಿದ ಚಹ ಮುಗಿದನಂತರ ಭಾಸ್ ತಂದೆಯು ಬಳಿ ಯಿಂದ ಕದಲಲಿಲ್ಲ. ಅವರು ವರಾಂಡದಲ್ಲಿಯೂ ಹೂದೋಟದಲ್ಲಿಯೂ ಮೆಲ್ಲನೆ ಅಡ್ಡಾಡುತ್ತ ಮಗನೊಂದಿಗೆ ಮಾತಾಡುತ್ತಿದ್ದರು. ಬಹಳ ದಿನಗಳ ನಂತರ ಮಗನ ಸಾಮೀಪ್ಯ ಪ್ರಿಯಕರವಾಗಿದ್ದಿರಬಹುದು; ಹಳೆಯದನ್ನೆಲ್ಲ ಮರೆತು ಮಾತಾಡಿದರು. ಮಾತು, ಮಾತು. ಮಾತೇ ಮಾತು.

ನಾನು ಭಾಸ್ವಾನನ ತಮ್ಮನನ್ನು ನೋಡಿದೆ. ಸುಮಾರು ಇಪ್ಪತ್ತೈದು ವರ್ಷಗಳ ಸುಂದರ ತರುಣ ಅವನಿಗೆ ತನ್ನ ಅಣ್ಣ ದೂರದೇಶದಿಂದ ಹಿಂದಿರುಗಿ ಬಂದಿದ್ದಾನೆ ಎಂಬ ಅರಿವು ಮೂಡಿದಂತೆ ಕಾಣಲಿಲ್ಲ. ನನ್ನನ್ನಾಗಲೀ ಮಗುವನ್ನಾಗಲೀ ಕಂಡಾಗ ಯಾವ ವಿಶೇಷಭಾವವನ್ನೂ ಪ್ರಕಟಗೊಳಿಸ ಲಿಲ್ಲ. ಭಾಸ್ ಆಗಲೇ ಅವನ ಭುಜದ ಮೇಲೆ ಕೈಹಾಕಿ "ಭಗವಾನ್! ನಾನು ನಿನ್ನ ಅಣ್ಣ ಭಾಸ್ವಾನ್ ಕಣೋ ! ನಿನಗೆ ಗುರುತು ಹತ್ತಿತೇ ?" ಎಂದಾಗಲೂ ಏನೂ ಪ್ರತಿನುಡಿಯದೆ ಸುಮ್ಮನೆ ಮುಗುಳು ನಗೆ ಹರಿಸಿದ- ತನ್ನ ಅಣ್ಣ ಹೌದೋ ಅಲ್ಲವೊ ಎಂಬುದನ್ನು ಪರಿಗಣಿಸುವ ಗೋಜಿಗೂ ಹೋದಂತೆ ಕಾಣಲಿಲ್ಲ. ಅಥವಾ ತನಗೊಬ್ಬ ಅಣ್ಣನಿದ್ದಾನೆ ಎಂಬುದರ ಅರಿವೂ ಸಹ ಇತ್ತೋ ಇಲ್ಲವೋ ಊಹಿಸುವುದು ಕಷ್ಟ. ಅವನು ಏನೋ

ಒಂದು ರೀತಿಯಲ್ಲಿ ಮಂತ್ರಮುಗ್ಧನಂತೆ ಇರುತಿದ್ದರೂ ಕೆಲವೊಮ್ಮೆ ಉತ್ಸಾಹಿತನಂತೆ ಅದೇನೋ ಮಾತಾಡುತಿದ್ದ. ಆದರೆ ಅವು ಸರಿಯಾದ ಸಂಭಾಷಣೆಗೆ ಪೂರಕವಾಗುತ್ತಿರಲಿಲ್ಲ.

ಅಂದು ರಾತ್ರಿ ನಾವೆಲ್ಲರೂ ಒಟ್ಟಿಗೆ ಕುಳಿತು ಊಟಮಾಡಿದೆವು. ಮಾಧವನಿಗೆ ಹಾಲು ಬ್ರೆಡ್ ಅಲ್ಲಿಯೇ ಕೊಟ್ಟು ಬಂದಿದ್ದಳು, ಮಂಜುಳ. ಅಪ್ಪಟ ಖಾದ್ಯಗಳ ರುಚಿ ನನಗೆ ಬಲು ಇಷ್ಟ. ಊಟ ಸಿಂಪಲ್ ಆಗಿದ್ದರೂ ರುಚಿಯಾಗಿತ್ತು. ಮಂಜುಳ ಅತಿಥೇಯಳಾಗಿ "ನಿನ ಗಿದು ಹಿಡಿಸಿತೇ ಜಾನಕೀ ? ಇದು ಖಾರವೇ ?" ಎಂಬ ಪ್ರಶ್ನೆಗಳನ್ನು ಆಗಾಗ ಹಾಕುತ್ತಲೇ ಇದ್ದಳು. ಆ ಆತ್ಮೀಯತೆ ಆ ಸೌಜನ್ಯತೆ ನನ್ನ ಹೃದಯದಾಳದಲ್ಲಿ ಕೈಯಾಡಿಸಿತು. ಭಗವಾನ್ ಯಾವ ಮಾತುಕತೆಯೂ ಇಲ್ಲದೆ ನಮ್ಮೊಂದಿಗೆ ಊಟ ಮುಗಿಸಿದ. ಮಂಜುಳ ಅವನ ಬಗ್ಗೆ ಹೇಳಿ ದಳು "ನಾನೇ ಅವನ ಎಲ್ಲಾ ಅಗತ್ಯಗಳನ್ನೂ ನೋಡಿಕೊಳ್ಳಬೇಕು. ನಾನೂ ಅಲಕ್ಷಿಸಿದರೆ ಅವನು ಊಟತಿಂಡಿಗಳಿಲ್ಲದೆ ಸುಮ್ಮನಿದ್ದುಬಿಡು ತ್ತಾನೆ. ಸಣ್ಣ ಮಕ್ಕಳನ್ನು ನೋಡಿಕೊಂಡಂತೆ ನೋಡಿಕೊಳ್ಳದಿದ್ದರೆ ದೇವರೇ ಗತಿ ! ಪೂರ್ ಬಾಯ್ !"

ನಾನು ಆ ಕೌಟುಂಬಿಕ ಪದ್ಧತಿಯನ್ನು ಗಮನಿಸಿ ರೋಮಾಂಚಿತ ಳಾದೆ. ನಮ್ಮಲ್ಲಿಯ ಜೀವನ ಪದ್ಧತಿ ಮನಃಪಟಲದ ಮೇಲೆ ಸುಳಿ ಸುಳಿದು ವಿಷಾದದ ಸುಯ್ಲಾಡಿಸಿತು.

ಮಂಜುಳೆಗೆ ಇಬ್ಬರು ಮಕ್ಕಳು. ಶ್ರೀವತ್ಸ ಮತ್ತು ಶಾಂತಲಾ. ಇಬ್ಬರೂ ಬೇಸಿಗೆಯ ರಜೆಗಾಗಿ ಅಜ್ಜಿಯಮನೆಗೆ–ಶಾಂತಿಪ್ರಸಾದರ ತಾಯಿಯ ಬಳಿಗೆ ಹೋಗಿದ್ದರು. ಮಂಜುಳ ಮಕ್ಕಳ ಚಿತ್ರವನ್ನು ತೋರಿಸುತ್ತ ಇಬ್ಬರೂ ಚೆನ್ನಾಗಿ ಓದುತ್ತಾರೆ. ಬಹುಶಃ ಈಸಲ ಇಬ್ಬರೂ ಒಳ್ಳೆಯ ಅಂಕಗಳನ್ನು ಗಳಿಸಬಹುದು" ಎಂದಳು, ಮುಖಬಿಂಬ ಹೂವಿನಂತೆ ಅರ ಳಿತು, ಸವಿನೆನಪಿನಿಂದ.

"ಆಗ ನಾನೆಂದೆ ತುಂಬ ಸಂತೋಷ...ನಿನಗೆ ಈಗಲೇ ಅಭಿನಂದನೆಗಳನ್ನು ಸಲ್ಲಿಸಬಹುದೇ ?"

ಅವಳು ನಗುನಗುತ್ತ "ಈಗಲೇ ಬೇಡ ದೇವರು ದೊಡ್ಡವನು !" ಎಂದಳು.

ಭಾಸ್ ಮಕ್ಕಳ ಚಿತ್ರವನ್ನು ನೋಡಿ ಸಂತಸದಿಂದ "ಇಬ್ಬರೂ ಎಷ್ಟೊಂದು ಬೆಳೆದಿದ್ದಾರೆ !" ಉದ್ಗಾರ ತೆಗೆದ. ಮುಖಬಿಂಬದಲ್ಲಿ ಹಸನಾದ ಹೂನಗೆ ಅರಳಿತು.

ಊಟದನಂತರ ನಾವು ನಾಲ್ವರೂ ಬಹಳ ಹೊತ್ತು ಕುಳಿತು ಮಾತನಾಡಿದೆವು. ಮಗು ಆಗಲೇ ನಿದ್ದೆ ಮಾಡಿದ್ದಳು. ಭಗವಾನ್ ಕೂಡ ದೀಪ ನಂದಿಸಿ ಹಾಸಿಗೆ ಸೇರಿದ್ದ. ಮರುದಿನ ನಾವು ಎಲ್ಲೂ ಹೋಗಲಿಲ್ಲ. ನಾನು ಮತ್ತು ಭಾಸ್ ಹೆಚ್ಚುಹೊತ್ತು ಕಳೆದುದೇ ಮಾವನವರೊಂದಿಗೆ. ಅವರ ಮುಖದಲ್ಲಿ ಸ್ವಲ್ಪ ಬಳಲಿಕೆ ಕಾಣಿಸುತಿದ್ದರೂ ಅನಾರೋಗ್ಯದ ಚಿನ್ಹೆ ಕಾಣಿಸುತ್ತಿರಲಿಲ್ಲ. ಮುಖದ ಬಣ್ಣ ನಸುಗೆಂಪು. ಎತ್ತರವಾದ ದೇಹ. ತೆಳ್ಳನೆಯ ಗಟ್ಟಿಮುಟ್ಟಾದ ಮೈಕಟ್ಟು. ಉಟ್ಟಿದ್ದು ಅಡ್ಡಪಂಚೆ, ಮೇಲೊಂದು ಬನಿಯನ್. ಆಪೇ ಕುರ್ಚಿಯಮೇಲೆ ಮಂಡಿಸಿದ್ದರು. ಕೆಲವೊಮ್ಮೆ ಅಲ್ಲಲ್ಲೇ ಅಡ್ಡಾಡುತ್ತಿದ್ದರು. ಎಲ್ಲರೊಂದಿಗೂ ಮಾತು. ಮಗುವಿನೊಂದಿಗೆ ಸರಸ. ಅವರನ್ನು ನೋಡಿದರೆ ಅಂತಹ ಕಟು ಮನಸ್ಸು ಇದೆಯೇ ಎಂದು ಆಶ್ಚರ್ಯ ಪಡುವಂತಿತ್ತು. ಮಗಳನ್ನು ಕುರಿತು ಎಂದರು ಅವರು "ಇಂದು ಶಾಂತಲಾ ಇದ್ದಿದ್ದರೆ ಈ ಮಗುವನ್ನು ಎಷ್ಟು ಮುದ್ದಿಸುತ್ತಿದ್ದಳೋ. ಪಾಪ, ಅವಳೇ ಇಲ್ಲ. ಶೀ ಮಿಸ್ಡ್ ದಿ ಚಾನ್ಸ್!"

"ಇಲ್ಲದಿದ್ದುದು ಒಳ್ಳೆಯದಾಯಿತು ಬಿಡಿ. ಅವಳಿದ್ದಿದ್ದರೆ ಹಿಸುಕಿ ಹಣ್ಣು ಮಾಡುತ್ತಿದ್ದಳು !"

ನಾನು ನಕ್ಕುಬಿಟ್ಟೆ. ಶಾಂತಿ ಪ್ರಸಾದ್ 'ಹೌದು' ಎಂದ ತಲೆಯಾಡಿಸಿದರು.

ಆ ದಿನವೂ ನಾವು ಹೊರಗಡೆ ಎಲ್ಲೂ ಹೋಗಲಿಲ್ಲ. ಕಾರಣ, ಮಾವನವರು ಹೆಚ್ಚು ಬಳಲಿದಂತೆ ಕಾಣುತಿದ್ದರು. ಅವರು ಸ್ವಲ್ಪ ಹೊತ್ತು ಹೊರಬಂದಿದ್ದರೂ ಅನಂತರ ಹೋಗಿ ಮಲಗಿಕೊಂಡರು. ಮರುದಿನವೂ ಅಷ್ಟೆ. ಎಲ್ಲರೊಂದಿಗೂ ಸಮಾಧಾನಕರವಾಗಿ ಮಾತಾಡುತಿದ್ದರು. ಅವರನ್ನು ಆಗಾಗ್ಗೆ ನೋಡಿಕೊಳ್ಳುತಿದ್ದ ಡಾಕ್ಟರು ಬಂದು ನೋಡಿಕೊಂಡು ಹೋದರು. ಹೆಚ್ಚಿನ ಆತಂಕವೇನೂ ಇರಲಿಲ್ಲವಾದಕಾರಣ ಅವರು ಏನೂ ಹೇಳಲಿಲ್ಲ. ಮಧ್ಯಾಹ್ನ ಲಘು ಆಹಾರ. ರಾತ್ರಿ ಬ್ರೆಡ್ಡು ಹಾಲು. ಬೆಳಿಗ್ಗೆ ಸ್ವಚ್ಛ ಸ್ನಾನ ಮಾಡಿದ್ದರಿಂದಲೋ ಏನೋ ಮುಖದಲ್ಲಿ ಏನೋ ಒಂದು ಬಗೆಯ ಹೊಸ ಕಳೆ ಕೂಡಿಕೊಂಡಿತ್ತು.

ಮಾವನವರದು ಸುಂದರವಾದ ಶರೀರ. ಕೆಂಪುವರ್ಣದ ಮುಖಾರವಿಂದ. ಚೆನ್ನಾಗಿ ಕ್ಷೌರಮಾಡಿದ ನುಣ್ಣನೆಯ ಕದಪುಗಳ ಮೇಲೆ ನಿರಿಗೆಗಳ ಹೆಸರೇ ಇಲ್ಲ. ಉದ್ದುದ್ದನೆಯ ಹುಬ್ಬಿನ ಕೂದಲು, ಎತ್ತರಕ್ಕೆ ಸರಿಯೊದ ಮೈ ಮಾಟ, ಬೊಜ್ಜಿಲ್ಲ, ಕುಗ್ಗಿಲ್ಲ. ಭಾಸ್ವಾನನಂತೆಯೇ ಅವರು ಸಲ್ಲಕ್ಷಣವಾದ ವ್ಯಕ್ತಿ. ಅವರಲ್ಲಿ ಹೆಚ್ಚಿನ ಅನಾರೋಗ್ಯದ ಕುರುಹೇನೂ ಕಾಣಿಸುತ್ತಿರಲಿಲ್ಲ. ನಿಧಾನವಾಗಿ ಮನೆಯೆಲ್ಲಾ ಓಡಾಡುವಷ್ಟು ಶಕ್ತಿವಂತ. ಮಾತುಕತೆಯಲ್ಲಿ ತುಂಬಾ ನಾಜೂಕು. ಅವರ ಮನದಲ್ಲಿ ಕಹಿಯಾಗಲೀ, ಅಸಮಾಧಾನ ವಾಗಲೀ ಕಾಣಲಿಲ್ಲ. ಮಕ್ಕಳೆಲ್ಲ ಅವರಂತೆಯೇ ರೂಪ. ರೂಪ-ಗುಣ-ನಯ-ನಾಜೂಕು ಹೊಂದಿದವರು. ಒಟ್ಟಿನಲ್ಲಿ ಬಲು ಸುಂದರವಾದ ಕುಟುಂಬ ಎಂದುಕೊಂಡೆ. ನನ್ನ ಹೃನ್ಮನಗಳು ಹಾಲ್ಗಡಲಾದುವು. ನನ್ನ ಸೌಭಾಗ್ಯವನ್ನು ನೆನೆನೆನೆದು ಹಿಗ್ಗಿ ಆತ್ಮಾರ್ಪಣೆ ಮಾಡಿಕೊಂಡೆ ಲಾರ್ಡ್ ಕೃಷ್ಣನ ಹೃದಯಕಮಲದಲ್ಲಿ. ಹೊತ್ತು ಸಾನಂದದಿಂದ ಉರುಳಿತು. ಆತ್ಮೀಯತೆಯ ಮಧ್ಯೆ. ಸತ್ಯಾ ಮನೆಯಲ್ಲೆಲ್ಲಾ ಓಡಾಡಿ ಬಾಲಲೀಲೆಯಿಂದ ಎಲ್ಲರ ಮನವನ್ನು ರಂಜಿಸಿದಳು. ನನಗೆ ಆ ಮನೆಯಾಗಲೀ ಆ ಕುಟುಂಬವಾಗಲೀ ಬೇರೆ ಎನಿಸಲೇ ಇಲ್ಲ. ಬಹುಕಾಲದ ಬಾಂಧವ್ಯದಂತೆಯೇ ತೋರಿ ಹರ್ಷದ ಹೊನಲುಕ್ಕಿತು ಮನದಲ್ಲಿ. ನಾನು ಅತ್ಯಂತ ಸಂತುಷ್ಟಳಾದೆ. ಭಾಸ್ ಶಾಂತಿ ಪ್ರಸಾದರೊಂದಿಗೆ ಕುಳಿತು ಮಾವನವರೊಡನೆ ಮಾತಾಡುತಿದ್ದ. ನಾನು

ಮಂಜುಳೆಯೊಡನೆ ಒಳಹೋದೆ. ಒಡತಿಯಾದ ಅವಳಲ್ಲಿ ತಾಯ್ತನ ತುಂಬಿ ತುಳುಕುತಿತ್ತು.

ಮಾವನವರನ್ನು ಸಂದರ್ಶಿಸಲು ಬರುವವರಿಗೆ ಲೆಕ್ಕವೇ ಇಲ್ಲ. ಜನ ಜನವೇ ಜನ.

ಅವರಿಗೆಲ್ಲಾ ಊಟೋಪಚಾರಗಳು ಎಣೆಯಿಲ್ಲದೆ ನಡೆಯುತ್ತಿದ್ದುವು. ನಾನು ಮಂಜುಳೆಯೊಂದಿಗೆ ಭುಜಕ್ಕೆ ಭುಜಕೊಟ್ಟು ಸಹಕರಿಸುತಿದ್ದೆ. ಮಂಜುಳ ನನಗೆ ಎಲ್ಲ ರೀತಿಯಿಂದಲೂ ತಿಳಿವಳಿಕೆ ನೀಡುತಿದ್ದಳು. ಭಾರತೀಯ ಅಡಿಗೆಯನ್ನು ನಾನು ಈ ಮೊದಲೇ ಅರಿತಿದ್ದುದರಿಂದ ನನಗೆ ಪಾಕಶಾಲೆಯ ನಿರ್ವಹಣೆಗೆ ಕಷ್ಟವೆನಿಸಲಿಲ್ಲ. ಎರಡು ಮೂರು ದಿನಗಳೊಳಗಾಗಿ ಎಲ್ಲವನ್ನೂ ಅರಿತುಕೊಂಡೆ. ಔಟ್‌ಹೌಸಿನಲ್ಲಿದ್ದ ಲಿಂಗರಾಜು ಮತ್ತು ಶಾರದಮ್ಮ ಇವರಿಗೆ ರಾಧಾ ಮತ್ತು ಕೃಷ್ಣ ಎಂಬ ಎರಡು ಮಕ್ಕಳು. ಅವರೊಡನೆ ಸತ್ಯಭಾಮೆಯ ಸ್ನೇಹ ಅಪಾರ. ಅವರೊಂದಿಗೆ ಕೂಡಿಕೊಂಡಳೆಂದರೆ ಅವಳಿಗೆ ನಮ್ಮ ನೆನಪೇ ಇರುವುದಿಲ್ಲ. ಊಟ–ತಿಂಡಿಗಳಿಗೆ ಬಲಾತ್ಕಾರದಿಂದಲೇ ಒಳಗೆ ಕರೆತರ ಬೇಕು.

ಮಂಜುಳ ಸ್ನಾನ ಪೂಜೆ ಪೂರೈಸುವುದರೊಳಗಾಗಿ ಅನೇಕ ವೇಳೆ ನಾನು ಅಡಿಗೆಯ ಕೆಲಸ ಮುಗಿಸಿಡುತಿದ್ದೆ. ಸಂದರ್ಶಕರಲ್ಲಿ ಕೆಲವರು ಹಾಗಿಂದಾಗೇ ಹೊರಟುಹೋಗುತ್ತಾರೆ. ಅವರಿಗೆ ಕಾಫಿ ಚಹ ತಿಂಡಿತೀರ್ಥಗಳು ಮಾತ್ರ. ಉಳಿದ ಅನೇಕರು ಬಂಧುಬಳಗದವರು. ಅವರೆಲ್ಲಾ ಒಂದು ಹೊತ್ತಿಗೋ ಒಂದು ದಿನಕ್ಕೋ ಅಥವಾ ಕೆಲವು ದಿನಗಳಿಗೋ ಬಂದು ಹೋಗುತ್ತಾರೆ. ಅವರ ಊಟೋಪಚಾರವೆಲ್ಲಾ ನಮ್ಮದೇ. ಅವರು ನೇರವಾಗಿ ಒಳಬಂದು ನನ್ನ ಕಾರ್ಯನಿರ್ವಹಣೆಯನ್ನು ಕಂಡು ಆನಂದಾಶ್ಚರ್ಯವನ್ನು ಸೂಚಿಸಿ ನನ್ನನ್ನು ಹಾರ್ದಿಕವಾಗಿ ಅಭಿನಂದಿಸುತ್ತಿದ್ದರು. ಅಂತೂ ಯಾರಲ್ಲೂ ಯಾವ ಬಗೆಯ ಅಸಮಾಧಾನದ ಕಿಡಿಯನ್ನೂ ನಾನು ಕಾಣಲಿಲ್ಲ. ಅದೊಂದು ನನಗೆ ಎಲ್ಲಿಲ್ಲದ ಸಂತಸ. ಅನೇಕರು ನನ್ನನ್ನು ಸೌಂದರ್ಯವತಿ ಮತ್ತು ಸೌಮ್ಯವತಿ ಎಂದು ಮುಂತಾಗಿ ಹಾಡಿ ಹೊಗಳಿದರು. ನಾನು ಮುಗುಳ್ನಗು ಹರಿಸಿ ನಿವಾರಿಸಿಬಿಡುವೆ. ಒಮ್ಮೆ ಮಾವನವರ ತಂಗಿಯ ಮಗಳಾದ

ಯೆಶೋದಾ ಎಂಬ ಮಹಿಳೆ ಮೂರು ದಿನವಿದ್ದರು ಮನೆಯಲ್ಲಿ. ಅವರಿಗೆ ಸುಮಾರು ಸಲಪತ್ತರ ಪ್ರಾಯ. ಅವರೊಮ್ಮೆ ನುಡಿದರು—"ನನ್ನ ಸೊಸೆ ಶೀರಾ ಹತ್ತಿರದ ಸಂಬಂಧಿಯೇ. ಮೊದಲಿಂದಲೂ ನಮ್ಮೊಡನೆ ಬೆರೆತ ಹುಡುಗಿ ಆದರೇನು ? ಸೊಸೆಯಾಗಿ ಬಂದಮೇಲೆ ಅವಳ ರೀತಿನೀತಿಗಳೇ ಸಂಪೂರ್ಣ ಬದಲಾಗಿ ಹೋದುವು. ನನಗಿದ್ದ ಒಬ್ಬನೇ ಒಬ್ಬ ಮಗನಿಗೆ ಇಲ್ಲದ ಸಲ್ಲದ ಆರೋಪಗಳನ್ನು ತಲೆಗೆ ತುಂಬಿ ಅವನನ್ನು ಕಟ್ಟಿಕೊಂಡು ಬೇರೆ ಸಂಸಾರವನ್ನು ಹೂಡಿದಳು. ಈಗ ನಮಗೆ ದೇವರೇ ಗತಿ !" ವಿಷಯ ಹೊರ ಹೊಮ್ಮಿದಾಗ ಮುಖಬಿಂಬ ಪರಿಮ್ಲಾನವಾಯಿತು. ಅದನ್ನು ಕೇಳಿ ನನಗೆ ಮರುಕ ಹುಟ್ಟಿತು. ಏನು ಹೇಳಬೇಕೋ ತಿಳಿಯಲಿಲ್ಲ.

ಅವರು ಮುಂದುವರಿದರು "ನೋಡು, ಜಾನಕೀ, ನಿಮ್ಮ ಧರ್ಮವೇ ಬೇರೆ. ನಮ್ಮ ಧರ್ಮವೇ ಬೇರೆ. ಆದರೂ, ನೀನು ಎಷ್ಟು ಸರಾಗವಾಗಿ ಹೊಂದಿಕೊಂಡಿದ್ದಿ? ಇಷ್ಟು ಸ್ನೇಹ ಸಂಬಂಧ ಅವಳಲ್ಲಿ ಇದ್ದಿದ್ದರೆ ಸಾಕಾಗಿತ್ತು; ಅವಳು ಕೆಲಸ ಮಾಡದಿದ್ದರೂ ಚಿಂತೆ ಇರ ಲಿಲ್ಲ. ಎರಡು ಮಕ್ಕಳಿವೆ. ಅವರನ್ನೂ ನಮ್ಮಲ್ಲಿಗೆ ಬರಗೊಡಿಸುದಿಲ್ಲವಲ್ಲಾ, ಅದೇ ಸಂಕಟ. ಅದೇ ಪರಿತಾಪ." ವಾಕ್ಯ ಸರಣಿ ತುಂಡುಗಡಿದಾಗ ಅವರ ಕಣ್ಣಾಲಿಗಳಲ್ಲಿ ತಳಕ್ಕನೆ ನೀರಾಡಿತು. ಮರುಕ್ಷಣದಲ್ಲಿ ಎರಡೂ ಕೆನ್ನೆಗಳ ಮೇಲೆ ಧಾರೆಧಾರೆಯಾಗಿಳಿಯಿತು. ನಾನು ಅವರ ಕೈ ಹಿಡಿದು ಸಂತೈಸುತ್ತಾ ನುಡಿದೆ "ದೇವರು ದೊಡ್ಡವನು. ಅವನ ಮೇಲೆ ಭಾರಹಾಕಿ. ಅವನು ನಿಮಗೆ ಸಹಾಯ ಮಾಡುತ್ತಾನೆ..."

"ನೋಡಮ್ಮಾ ನಾನು ವಿಧವೆ. ಹೆಣ್ಣುಮಕ್ಕಳಿಬ್ಬರೂ ದೂರದೂರ ದಲ್ಲಿದ್ದಾರೆ. ಹತ್ತಿರ ಇದ್ದವ ಇವನೊಬ್ಬನೇ. ಇವನೂ ದೂರವಾದುದು ನನಗೆ ತುಂಬಾ ದುಃಖ ತಂದಿದೆ."

"ಅಂದಮೇಲೆ, ಊರಿಗೆ ಹೋಗಲು ನಿಮಗೆ ಅಷ್ಟು ಆತುರಕಾತರ ಗಳೇಕೆ ? ನಮ್ಮಲ್ಲೇ ಎಷ್ಟು ಕಾಲವಾದರೂ ಇರಬಹುದಲ್ಲಾ. ಮಂಜುಳೆಯೂ ನಿಮ್ಮ ಸಹವಾಸವನ್ನು ಇಷ್ಟಪಡುತ್ತಾಳೆ. ಮತ್ತೇಕೆ ನಿಮಗೆ ಸಂಕೋಚ ?"

ಅದೇ ವೇಳೆಗೆ ಮಂಜುಳೆಯೂ ಅಲ್ಲಿಗೆ ಬಂದಳು. ವಿಷಯಾವಲೋಕನ ಅವಳ ಮನಸ್ಸಿಗೂ ಮುಳ್ಳುಮುರಿಯಿತು. ಅವಳೆಂದಳು "ವಿಮಲಾಗೆ ನಾನು ಎಷ್ಟು ಬಾರಿ ಹೇಳಲಿಲ್ಲ ? ಒಬ್ಬಳೇ ಆಗಿರುವ ತಾಯಿಯನ್ನು ನೋಯಿಸ ಬೇಡ ; ಎಂದು. ಅವಳು ಹಠಮಾರಿ ಹುಡುಗಿ. ಯಾರ ಮಾತೂ ಕೇಳುವ ವಳಲ್ಲ. ಅವಳನ್ನು ಸೋಮು ಅಂಕೆಯಲ್ಲಿಟ್ಟುಕೊಳ್ಳಬೇಕಾಗಿತ್ತು. ಅವನೂ ಕಿವಿಗಳನ್ನು ಜೋಲುಬಿಟ್ಟಿದ್ದು ತಪ್ಪು. ಏನು ಮಾಡೋಣ ? ಕಾಲ ಹಾಗಿದೆ. ಧರ್ಮಕರ್ಮಗಳ ಬಿಗಿಕಟ್ಟು ಕಳಚಿಕೊಳ್ಳುತ್ತಿರುವುದು ಎಲ್ಲೆಲ್ಲೂ ಕಂಡುಬರುತ್ತಿದೆ. ಅದೇ ಬೇಸರ." ಎಂದ ಬಳಿಕ ಮಂಜುಳ ನನ್ನನ್ನು ಕುರಿತು ನುಡಿದಳು "ಕೇಳು, ಜಾನಕೀ, ಅವರಿಗೆ ನೀವು ಇಲ್ಲೇ ಬಂದುಬಿಡಿ ಎನ್ನು ತ್ತಿರುವೆ. ಅವರನ್ನು ನೋಡಿಕೊಳ್ಳುವುದು ನಮಗೇನೂ ಕಷ್ಟವಿಲ್ಲ. ಅಷ್ಟೇ ಅಲ್ಲ, ಅವರು ಇಲ್ಲಿದ್ದರೆ ಅವರೇ ನಮ್ಮನ್ನು ನೋಡಿಕೊಳ್ಳುತ್ತಾರೆ. ಅದರಲ್ಲಿ ಅಭ್ಯಂತರವೇ ಇಲ್ಲ. ಆದರೆ, ಅವರೇ ಮನಸ್ಸು ಮಾಡುತ್ತಿಲ್ಲ."

"ನಾನು ನನ್ನ ಸುಖವನ್ನೇ ನೋಡಿಕೊಂಡರೆ ಹೇಗೆ ? ಹೆಣ್ಣುಮಕ್ಕಳು, ಮೊಮ್ಮಕ್ಕಳು ಆಗಾಗ ಬರುತ್ತಿರುತ್ತಾರೆ. ನಾನು ಇಲ್ಲಿಗೆ ಬಂದಲ್ಲಿ ಅವರಿಗೆ ಕಷ್ಟವಾಗುತ್ತೆ. ಅದೇ ತೊಂದರೆ."

ನಾನು ಅವರ ಮನದಳಲನ್ನು ಅರಿತು ಸುಮ್ಮನಾದೆ. ಏನೂ ಹೇಳಲಿಲ್ಲ. ಅಲ್ಲಿಗೆ ಆ ಪ್ರಸ್ತಾಪ ಮುಗಿಯಿತು. ಯಶೋದಮ್ಮ ಆ ವಾರವೆಲ್ಲಾ ನಮ್ಮ ಲ್ಲಿಯೇ ಉಳಿದರು. ಮಾವನವರು ಒಳಹೊರಗೆ ತಿರುಗಾಡಿ ತನುಮನಗಳಿಗೆ ಉಲ್ಲಾಸವನ್ನು ಪಡೆದುಕೊಳ್ಳುತ್ತಿದ್ದರು. ಅಂಗಳದಲ್ಲಿ ಅಡ್ಡಾಡಿ ಮಕ್ಕಳ ಆಟಪಾಠವನ್ನು ಗಮನಿಸುತ್ತ ಎಳೆಬಿಸಿಲಿನ ಸ್ನಾನ ಮಾಡುವುದುಂಟು. ಅಂತಹ ಸಮಯದಲ್ಲಿ ಭಾಸ್ಕರ್ ಅವರ ಬೆಂಗಾವಲಾಗಿ ಅವರ ಬಳಿಯೇ ಇರುತಿದ್ದು ಮೆಟ್ಟಿಲು ಇಳಿಯುವಾಗ, ಹತ್ತುವಾಗ ಸಹಾಯ ಮಾಡುತಿದ್ದ. ಹಗಲಿರುಳು ಅವರ ಸೇವೆಯನ್ನು ಅವನೇ ನೋಡಿಕೊಳ್ಳುತಿದ್ದುದನ್ನು ನೋಡುತಿದ್ದರೆ ನನಗೆ ನನ್ನ ಒಡಹುಟ್ಟುಗಳ ನೆನಪು ಮೂಡಿ ಹಳಹಳಿಸುತ್ತದೆ ಮನಸ್ಸು. ತಾಯಿಯ ಕರುಣಾಜನಕ ಚಿತ್ರಾರ ಕಣ್ಮುಂದೆ ಕಟ್ಟುತ್ತದೆ. ಒಳಗಿಂದೊಳಗೇ

ಹೃನ್ಮನಗಳು ಮರುಗಿಕೊರಗುತ್ತವೆ. ನಾನೂ ಈಗ ದೂರದೂರವಾದುದರಿಂದ ಅವಳಿಗೆ ಏನೂ ಮಾಡಲಾರೆ. ಇದು ತುಂಬಾ ದುರದೃಷ್ಟಕರ. ಓ ! ಗಾಡ್ ಸೇವ್ ಹರ್. ಕೂಗಿತು ಎದೆಯ ಪಕ್ಷಿ. ನಾನು ಖಿನ್ನ ಮನಸ್ಕಳಾದೆ. ಹೃದಯಕುಂಡ ಭಾರ–ಭಾರವಾಯಿತು.

ನನ್ನ ತಾಯಿಗೊಂದು ಕಾಗದವನ್ನು ಬರೆದು ಹಾಕಿದೆ. ಅದರಲ್ಲಿ ಅವಳ ಕ್ಷೇಮಾಭಿಲಾಷೆಯಲ್ಲಿ ಅಪಾರವಾದ ಆಸ್ಥೆಯನ್ನು ತೋರುವುದನ್ನು ಮರೆಯ ಲಿಲ್ಲ. ನಿಜವಾಗಿಯೂ ನನಗೆ ಅವಳಲ್ಲಿ ಅತೀವ ಕನಿಕರ ಮೂಡಿತು. ಆದರೆ, ಮಾಡುವುದೇನು ? ಎದೆಬಾಳದಿಂದ ಬಿಸಿಯುಸಿರೊಂದು ನನಗರಿಯದಂತೆ ಹರಿದುಬಂತು. ನಾನು ಗಂಭೀರವಾಗಿ ಚಿಂತಿಸಿದೆ.

ಮಾವನವರು ಅಡಿಗೆ ಮನೆಗೆ ಬಂದು ನನ್ನ ಕಾರ್ಯಚಾತುರ್ಯವನ್ನು ಕಂಡು ಪ್ರಸನ್ನಮುಖದಿಂದ ಪದಚಾರಣ ಮಾಡುತ್ತ ನನ್ನವರ ಮತ್ತು ಇಂಗ್ಲೆಂಡಿನ ವೈಶಿಷ್ಟ್ಯವನ್ನು ಕುರಿತು ಮಾತಾಡಿ ತಿಳಿದುಕೊಳ್ಳುತ್ತಾರೆ.ಅಲ್ಲಿಯೇ ಕುರ್ಚಿಯ ಮೇಲೆ ಕುಳಿತು ಹಾಲು ಕುಡಿಯುವುದು ಅನುದಿನದ ವಾಡಿಕೆ. ಮೈಯಲ್ಲಿ ನಿಶ್ಶಕ್ತಿಯಿದ್ದರೂ ಉಲ್ಲಾಸವನ್ನು ಕಳೆದುಕೊಂಡವರಲ್ಲ. ತಮ್ಮ ಮನೆತನ ಮತ್ತು ಸಂಪ್ರದಾಯಗಳು ಭಾರತೀಯ ಧರ್ಮದ ರೇಖೆಯನ್ನು ದಾಟುವುದಿಲ್ಲ...ಎಂದು ಮುಂತಾಗಿ ಪೂರ್ವಾಪರಗಳನ್ನು ಆಗಾಗ ಹೇಳು ತ್ತಾರೆ. ನಾನದನ್ನು ಅತ್ಯಾಸಕ್ತಿಯಿಂದ ಕೇಳಿ ತಿಳಿಯುವೆ. ಭಾಸ್ಕರ್ ದೆಹಲಿ ಮತ್ತು ಲಂಡನ್ನಲ್ಲಿ ಕೆಲವು ದಿನವಿದ್ದು ರಜೆಯನ್ನು ಇನ್ನೊಂದು ತಿಂಗಳ ಪರ್ಯಂತ ತೆಗೆದುಕೊಂಡು ಬರುವುದಾಗಿ ಹೊರಟುಹೋಗಿ ಮೂರು ದಿನಗಳಾದುವು. ಅವನಿಲ್ಲದಿದ್ದರೂ ನನಗೆ ಆ ಮನೆಯಲ್ಲಿ ಬೇಸರವೆನಿಸಲಿಲ್ಲ. ಯಶೋದಮ್ಮ ಊರಿಗೆ ಹೋಗಿ ಮತ್ತೆ ಬರುವುದಾಗಿ ಹೇಳಿಹೋದರು.

ಅವರ ನಿರ್ಗಮನ ಸ್ವಲ್ಪ ಬೇಸರ ತಂದಿತು ಎಂದೇ ಹೇಳಬಹುದು. ಅವರ ಬಾಯಲ್ಲಿ ಸದಾ ಭಾರತೀಯವಾದ ಸತ್‌ಸಂಪ್ರದಾಯವನ್ನು ಪದರ ಪದರವಾಗಿ ಬಿಡಿಸಿ ಹೇಳುತ್ತಿದ್ದರೆ ನನಗೆ ಮೈಯೆಲ್ಲಾ ಮನಸ್ಸಾಗುತಿತ್ತು. ಸ್ವಲ್ಪವೂ ಬೇಸರಪಡದೆ ಕೇಳುತಿದ್ದೆ. ಒಂದುವಾರ ಉರುಳಿತೇನೋ

೧೬೪–ಶ್ರದ್ಧಾಲಯ

ಯಶೋದಮ್ಮ ಬೆಳಗಿನ ಸುಂದರ ಸಮಯದಲ್ಲಿ ಏಕಾಂಗಿಯಾಗಿ ದೊಡ್ಡ ಸೂಟ್ ಕೇಸಿನ ಸಹಿತ ಬಂದು ಇಳಿದರು. ಅವರ ಆಗಮನ ನನಗೆ ಸಂತೋಷವನ್ನೇ ತಂದಿತು. ನಾನು ಎರಡೂ ಕೈಗಳಿಂದ ಸ್ವಾಗತಿಸಿದೆ. ನನ್ನ ಮನಸ್ಸು ಅರಳಿ ಹೂವಾಯಿತು.

ಭಾಸ್ ಹಿಂದಿರುಗಿ ಬಂದಾಗ ಒಂದು ವಾರ ಕಳೆದಿತ್ತು. ಒಂದು ತಿಂಗಳ ರಜೆ ಪಡೆದುಕೊಂಡಿದ್ದ. ಸತ್ಯಭಾಮ ತಂದೆಯನ್ನು ಕಂಡು ಆನಂದವೋದ ದಿಂದ ಅಪ್ಪಿ ಎದೆಯನ್ನೇರಿ ಬಹಳಷ್ಟು ಸಿಹಿ ಮುತ್ತುಗಳನ್ನು ಪಡೆದು ಕೊಂಡಳು. ತಂದೆ ಮಗಳ ಹೃದಯ ಹಾಲ್ಗಡಲಾಯಿತು. ಭಾಸ್ ಮಾವನವರ ಕೊಠಡಿಗೆ ಹೋಗಿ ಅವರ ಕ್ಷೇಮವನ್ನು ವಿಚಾರಿಸಿ ಸ್ವಲ್ಪಹೊತ್ತು ಮಾತಾಡಿದ; ಬಳಿಕ ಸ್ನಾನ ಮತ್ತು ದಿನಚರಿ.

ಬೆಳಗಿನ ಫಲಾಹಾರ ಎಲ್ಲರೊಟ್ಟಿಗೆ ಕಳೆಯಿತು. ನಾನು ಲಂಡನ್ ನಲ್ಲಿರುವಾಗ ಬೆಳಗಿನ ಫಲಾಹಾರದ ಅಭ್ಯಾಸವಿರಲಿಲ್ಲ. ಇಲ್ಲಿಗೆ ಬಂದನಂತರ ಅದು ಅಭ್ಯಾಸವಾಯಿತು. ಭಾರತೀಯವಾದ ಭಕ್ಷ್ಯಭೋಜ್ಯಗಳನ್ನು ಇಷ್ಟ ಪಡುವುದು ಮಾತ್ರವಲ್ಲ; ತಯಾರಿಕೆಯಲ್ಲಿಯೂ ನಿಷ್ಣಾತಳಾದೆ.

ಇಂದು ಮಾವನವರನ್ನು ನೋಡಲು ಬಂದ ವೈದ್ಯರು ಯಾವುದೋ ಒಂದು ಇಂಜಕ್ಷನ್ ಬರೆದುಕೊಟ್ಟು ಕೂಡಲೆ ತನ್ನಿ ಎಂದಾಗ ಭಾಸ್ ಕಾರು ತೆಗೆದುಕೊಂಡು ತಾನೇ ಹೊರಟ. ಹತ್ತಿರದಲ್ಲಿದ್ದ ಎರಡು ಅಂಗಡಿಯಲ್ಲಿ ಅದು ಸಿಕ್ಕದ ಪ್ರಯುಕ್ತ ದೂರದ ಶ್ಯಾಮಲಾ ಫಾರ್ಮಸಿಯಿಂದ ಕೊಂಡುತಂದ. ಅವು ಶಕ್ತಿ ವೃದ್ಧಿಗಾಗಿ ಮಾತ್ರ. ಭಾಸ್ ಹಿಂದಿರುಗುವಷ್ಟರಲ್ಲಿ ಡಾಕ್ಟರು ಸಿರಿಂಜ್ ಹಿಡಿದು ಮಾವನವರ ಬಳಿ ಕುಳಿತು ಮಾತಾಡುತ್ತಿದ್ದರು. ಭಾಸ್ ಎರಡು ಇಂಜಕ್ಷನ್ ಟ್ಯೂಬ್‌ಗಳನ್ನೂ ಮೇಜಿನ ಮೇಲಿಟ್ಟ. ಡಾಕ್ಟರು ಒಂದನ್ನು ಅವರಿಗೆ ಕೊಟ್ಟು "ಇನ್ನೊಂದನ್ನು ಒಂದು ವಾರ ಬಿಟ್ಟುಕೊಡೋಣ" ಎಂದು ಹೇಳಿ ಹೊರಟುಹೋದರು. ಆದರೆ, ಆ ರಾತ್ರಿ ಬಲು ದುರದೃಷ್ಟಕರ ವಾದ ರಾತ್ರಿ !

ಎಲ್ಲರೂ ಒಂದು ದಿನ ಭೌತಿಕ ಶರೀರವನ್ನು ವಿಸರ್ಜಿಸುವುದು ಸತ್ಯವೇ. ಮೃತ್ಯುಛಾಯೆ ಎಲ್ಲರ ಜೀವಿತದ ಮೇಲೂ ಆಗಾಗ ಸುಳಿದು ಹೋಗುವುದೂ ನಿಜವೇ. ಒಮ್ಮೆ ಕಾಲ ಸನ್ನಿಹಿತವಾದಾಗ ಮೃತ್ಯುವಶವಾಗುವುದೂ ಜೀವನದ ಅವ್ಯಕ್ತಲೀಲೆಯೇ. ಅಂದು ಅವರಲ್ಲಿ ಬಾಹ್ಯ ಜೀವಿತಕ್ಕಿಂತ ಅಂತರ್ಮುಖ ಜೀವಿತ ಪ್ರಸ್ಫುಟಗೊಂಡಂತೆ ಅಂತರ್ಮುಖಿಯಾದರು ಎನಿಸುತ್ತೆ ಈಗ ಆಲೋಚಿಸಿದರೆ.

ಸುಖಶಾಂತಿಯಿಂದ ಎಂದಿನಂತೆಯೇ ನಿದ್ದೆಹೋದ ಅವರು ಬೆಳಿಗ್ಗೆ ಏಳಲೇ ಇಲ್ಲ. ಮಂಜುಳ ಎಬ್ಬಿಸಹೋದಾಗ ಮೈ ತಣ್ಣಗಾಗಿದೆ! ಎಲ್ಲರೂ ಆಕ್ಷಣವೇ ಅಲ್ಲಿ ಕೂಡಿದರು. ವೈದ್ಯರ ಅಗತ್ಯವಿಲ್ಲದಿದ್ದರೂ ಕರೆಹೋಯಿತು. ವೈದ್ಯರೂ ಬಂದರು. ಅವರಿಗೆ ಆಶ್ಚರ್ಯ, ಸಾಯಂಕಾಲ ನೋಡಿದಾಗ ಅಂತಹ ಸೂಚನೆಯೇನೂ ಕಂಡಿರಲಿಲ್ಲ. ಆದ್ದರಿಂದ ಕೊಟ್ಟ ಇಂಜಕ್ಷನ್ ಟ್ಯೂಬ್ ಮತ್ತು ಉಳಿದಿದ್ದ ಇನ್ನೊಂದು ಟ್ಯೂಬನ್ನೂ ಎತ್ತಿಕೊಂಡು ಹೋದರು. ಇತ್ತ ಬಂಧುವರ್ಗದವರಿಗೆ ಸುದ್ದಿಕೊಡುವ, ಮುಂದಿನ ಕಾರ್ಯಕ್ಕೆ ಗಮನಕೊಡುವ ದುಃಖಪೂರಿತ ವ್ಯವಹಾರ ನಡೆಯುತಿತ್ತು ಮನೆಯಲ್ಲಿ ಸಮೀಪವರ್ತಿಗಳೂ, ಬಂಧುಜನರೂ ಬಂದು ಕೂಡಿಕೊಂಡರು. ಜನ....ಜನ ಮನೆಯೆಲ್ಲಾ ಜನಮಯವಾಯಿತು. ಭಾಸ್ ಮೊದಮೊದಲು ಅಷ್ಟು ಅಧೈರ್ಯ ಗೊಳ್ಳದಿದ್ದರೂ ಆಮೇಲಾಮೇಲೆ ತುಂಬಾ ಸುಸ್ತಾಗಿಯೇ ಕಾಣಿಸುತಿದ್ದ ಎಲ್ಲರೂ ಅಳುತಿದ್ದರು. ನನಗೂ ದುಃಖವುಮ್ಮಳಿಸಿ ಬರುತಿತ್ತು. ಮಂಜುಳಾ ಅಳುವುದನ್ನು ನೋಡಿದರೆ ನನಗೆ ಮತ್ತೂ ದುಃಖ. ನನ್ನ ಎರಡನೆಯ ನಾದಿನಿ ಅಂಜನಾ ಪ್ಲೇನ್ ಹತ್ತಿ ದೆಹಲಿಯಿಂದ ಓಡಿಬಂದಳು. ಮನೆ ದುಃಖದ ಮಹಾಪೂರದಲ್ಲಿ ಮುಳುಗಿಹೋಯಿತು. ಅದೆಲ್ಲಾ ಭಗವಾನನಿಗೆ ಅರ್ಥ ವಾಗಿತ್ತೋ ಇಲ್ಲವೋ ಹೇಳಲಾರೆ. ಜನರಾಶಿಯಿಂದ ದೂರವಿರಲೋ ಏನೋ ಮನೆಯ ಹಿಂದುಗಡೆಯಿದ್ದ—ಅಡಿಗೆ ಆಳು ಕಮಲಮ್ಮನ ಮನೆಯ ಮೆಟ್ಟಲ ಮೇಲೆ ಕುಳಿತುಕೊಂಡಿದ್ದ. ಮುಖದಲ್ಲಿ ಯಾವ ಬದಲಾವಣೆಯೂ ಕಾಣಿಸು ತ್ತಿರಲಿಲ್ಲ.

ಯಾರೋ ಶವದ ಬಳಿ ಕಾವ್ಯಪಾಚನ ಮಾಡುತ್ತಿದ್ದರು.

ಅಂಜನಾ ಭಾಸ್ವಾನನಿಗಿಂತ ಎರಡು ವರ್ಷ ಚಿಕ್ಕವಳು. ಅವಳ ಗಂಡ ದೆಹಲಿಯ ಸರಕಾರದ ನೌಕರ. ಅವಳಿಗೂ ಎರಡು ಮುದ್ದುಮುದ್ದಾದ ಅವಳಿ-ಜವಳಿ ಹೆಣ್ಣು ಮಕ್ಕಳು. ಹೆಸರು ರಾಗಿಣಿ ತಾರಿಣಿ. ಅವರಿಗೆ ತಾತನ ನಿರ್ಯಾಣ ಅರ್ಥವೇ ಆಗಿರಲಿಲ್ಲ. ಒಳಗೆ ಹೊರಗೆ ಓಡಾಡುತ್ತ ಆಟವಾಡಿ ಕೊಂಡಿದ್ದರು. ಅದೇ ಮಂಜುಳೆಯ ಮಕ್ಕಳು ದೊಡ್ಡವರಾದ್ದರಿಂದ ಕಂಬನಿ ಮಿಡಿಯುತಿದ್ದರು. ಶಾಂತಾ ಹೈಸ್ಕೂಲ್ ಕೊನೆಯ ಹಂತ. ಶ್ರೀವತ್ಸ ಮೆಡಿಕಲ್ ಕಾಲೇಜಿನ ಮೊದಲ ಹಂತ. ಅಂದಮೇಲೆ, ಹುಟ್ಟನಿಂದ ಹದಿ ಹರೆಯದವರೆಗೆ ಒಂದುಗೂಡಿ ಬಾಳಿದವರಿಗೆ ದುಃಖ ಸಹಜವೇ.

ಬೆಳಗಿನಿಂದ ಶವದ ತಲೆದೆಶೆಯಲ್ಲಿ ನೀಲಾಂಜನ-ಊದುಬತ್ತಿ ಉರಿಯು ತಿದ್ದುವು. ಮೈತುಂಬ ಹೂವಿನ ರಾಶಿ, ಕಾಲದೆಶೆಯಲ್ಲಿ ಹಣ್ಣುಕಾಯಿಗಳಿಂದ ಪೂಜಾವಿಶೇಷ. ಬಂದವರೆಲ್ಲಾ ವಿಷಣ್ಣವದನರಾಗಿ ಪೂಜಿಸಿದರು. ಸಾಯಂ ಸಮಯದಲ್ಲಿ ಪಾರ್ಥಿವ ಶರೀರವನ್ನು ಎತ್ತಿದಾಗ 'ಹರೆ ರಾಂ!' ಮಹಾ ಘೋಷ ಮೊಳಗಿತು. ವ್ಯಾನಿನಲ್ಲಿ ಗಂಭೀರ ಮಸಣಯಾತ್ರೆ ಹೊರಟಿತು. ವ್ಯಾನ್ ಮಸಣವನ್ನು ಮುಟ್ಟದಾಗ ಸೂರ್ಯ ಪಡುವಣಂಚಿಗೆ ಇಳಿದಿದ್ದು, ದಿಗ್ದೇಶವೆಲ್ಲಾ ಕೆಮ್ಮನೆ ಕೆಂಪು ತಳೆದಿತ್ತು. ವ್ಯಾನಿನಿಂದಿಳಿದ ಶವ ಚಿತೆಯ ಮೇಲೇರಿತು. ಅಲ್ಲಿ ಕೆಲವು ವಿಧಿಯುಕ್ತ ಆಚಾರಗಳು ನಡೆದ ನಂತರ ಚಿತೆಗೆ ಎಣ್ಣೆತುಪ್ಪಗಳನ್ನೂ ಗಂಧದ ಚಕ್ಕೆಗಳನ್ನೂ ಸುರುವಿ ಪ್ರದಕ್ಷಿಣೆ ನಮಸ್ಕಾರ ಮಾಡಿ ಅಗ್ನಿ ಸಂಸ್ಕಾರ ಮಾಡಿದವನು ಭಾಸ್ವಾನನೇ. ಅವನು ಅಳುತ್ತಳುತ್ತಲೇ ಕಿಚ್ಚಿಡುವುದನ್ನು ನೋಡಿದಾಗ ನನಗೂ ದುಃಖವುಕ್ಕಿಬಂತು. ಎಲ್ಲರೊಂದಿಗೆ ನಾನೂ ಅಶ್ರುತರ್ಪಣ ನೀಡಿದೆ.

ಅಲ್ಲಿಂದ ಹಿಂದಿರುಗಿದ ಮೇಲೆ ಎಲ್ಲರಿಗೂ ಸ್ನಾನ. ತದನಂತರ ಮನೆ ಯನ್ನು ಗುಡಿಸಿ ಸಾರಿಸಿ ಒಲೆ ಹಚ್ಚಿದ್ದು. ಶೇಷಮ್ಮ ದುಃಖದ ಕೋಡಿಯಲ್ಲಿ ಮುಳುಗಿದ್ದುದರಿಂದ ಕಮಲ ಮಂಜುಳಾ ಅಂಜನಾರವರೇ ರಾತ್ರಿಯ ಊಟದ ಸಿದ್ಧತೆ ನಡೆಸಿದರು. ರಾತ್ರಿ ಬಹಳ ಹೊತ್ತಿನ ಮೇಲೆ ಎಲ್ಲರೂ ಊಟದ ಶಾಸ್ತ್ರ ಮಾಡಿದರು. ಅಂದಿಂದಿಗೂ ಆನಂದದಿಂದ ಕಳೆದುದನ್ನು ಈ ದುರ್ದಿನ

ದುಃಖದಪೂರದಲ್ಲಿ ಕೊಚ್ಚಿಕೊಂಡು ಹೋಗುವುದೆಂಬುದನ್ನು ನಾನು ಯೋಚಿಸಿರಲಿಲ್ಲ.

ರಾತ್ರಿ ಹತ್ತು ಗಂಟೆಯ ಸಮಯ. ಬೆಳಿಗ್ಗೆ ಉರಿಸಿದ ನೀಲಾಂಜನ ಇನ್ನೂ ಉರಿಯುತಿತ್ತು. ಅದರ ಕುಡಿಯನ್ನು ಎತ್ತರಿಸಿ ತೈಲವನ್ನೆರೆದಳು ಅಂಜನಾ. ಮನೆಯೆಲ್ಲಾ ದೀಪಗಳು ಬೆಳಗುತಿದ್ದುವು. ಇನ್ನೂ ಯಾರೂ ಮಲಗಿಲ್ಲ. ಮಾತುಕತೆಯೆಲ್ಲಾ ಮಾವನವರನ್ನು ಕುರಿತೇ. ಅದೇ ವೇಳೆಗೆ ವೈದ್ಯರು ಬಂದರು. ಅವರ ಮುಖದಲ್ಲಿ ಕಳೆಯಿರಲಿಲ್ಲ. ಅವರು ಕುಳಿತು ಹೇಳಿದರು,

"ನಿನ್ನೆ ಒಂದು ಅಚಾತುರ್ಯವೂ ನಡೆದಿದೆ. ನಾನು ಬರೆದದ್ದು ನಾನೂರು ಮಿಲಿಗ್ರಾಮಿನ ಶೀಶೆಗೆ ಎಂಟುನೂರು ಮಿಲಿಗ್ರಾಂ ಹೇಗೆ ಬಂತೋ ತಿಳಿಯಲಿಲ್ಲ. ನೀವು ತಂದಿದ್ದೀರಿ. ನಾನು ಕೊಟ್ಟಿರುವೆ. ಶರೀರ ದುರ್ಬಲ ವಾಗಿದ್ದು ಹೆಚ್ಚಿನ ಶಕ್ತಿಯ ಒತ್ತಡವನ್ನು ತಡೆದುಕೊಳ್ಳಲಿಲ್ಲವೇನೋ ಎಂಬ ಯೋಚನೆ ಬರುತ್ತೆ. ಆದರೆ, ಅವಸಾನ ಸಂಭವಿಸುವಾಗ ಯಾವುದೂ ತಡೆ ಯುವುದಿಲ್ಲ; ಬಿಡಿ."

ಆ ಮಾತು ಕೇಳಿದಾಗ ಎಲ್ಲರ ಮುಖವೂ ಪೆಚ್ಚಾಯಿತು. ಅದರಲ್ಲೂ ಭಾಸ್ ಮೂರ್ತಿ ಮತ್ತಾದ. ಅವನು ಗಾಬರಿಯಿಂದ ಕೇಳಿದ "ಅದರಿಂದ ಹಾನಿ ಯಾಗಿರಬಹುದೇ ಡಾಕ್ಟರ್ ?"

"ಹೇಳುವುದು ಕಷ್ಟ."

ಆಗ ಯಾರೂ ಏನೂ ಮಾತಾಡಲಿಲ್ಲ. ಎಲ್ಲರ ಮನಸ್ಸಿನ ಮೇಲೂ ಅದರ ದುಷ್ಪರಿಣಾಮ ಉಂಟಾಗಿತ್ತು. ಡಾಕ್ಟರು ಸ್ವಲ್ಪ ಹೊತ್ತಿದ್ದು "ಅದನ್ನೇ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಎಲ್ಲವೂ ದೈವೇಚ್ಛೆ !" ಎಂದು ಹೇಳಿ ಹೊರಟರು.

ಆದರೆ, ಕಪ್ಪು ಛಾಯೆ ಎಲ್ಲರ ಮನಸ್ಸಿನ ಮೇಲೂ ಅಚ್ಚೊತ್ತಿತು; ಅಂತರ್ಯವನ್ನು ಕೊರೆಯುವ ಭೈರಿಗೆಯಂತೆ.

ಎಲ್ಲರ ಮುಖವೂ ಬಾಡಿಬೆಂಡಾಗಿದ್ದುವು.. ಭಗವಾನ್ ಈ ಎಲ್ಲಾ ದುಃಖದುಗುಡಗಳಿಂದ ಮುಕ್ತ ಎಂದು ಹೇಳಬಹುದು ; ಅವನು ವಿಷಯ ವೇನೆಂದು ಯಾರನ್ನೂ ಕೇಳಲಿಲ್ಲವಾಗಿ ಅರ್ಥಾತ್ ಹೀಗೆ ಎಂದು ಯಾರೂ ತಿಳಿಯ ಹೇಳಲಿಲ್ಲ. ದೂರದೂರಿಂದ ಬಂದವರು ವಿನಾ ಉಳಿದವರೆಲ್ಲಾ ರಾತ್ರಿ ಹೊರಟುಹೋದರು. ಅಂಜನಾ ತನ್ನ ಸಂಸಾರದೊಡನೆ ಇಲ್ಲೇ ಉಳಿದಳು.

ಮಂಜುಳಾ ಭಾಸ್ವಾನನ್ನು ಕುರಿತು "ನೀನು ಐರೋಪ್ಯಸ್ತ್ರೀಯನ್ನು ಮದುವೆಯಾಗುವುದು ಖಾತ್ರಿ ಎಂದು ತಿಳಿದಾಗಲೇ ನಿನ್ನ ಮನೆಯನ್ನು ನನ್ನ ಹೆಸರಿಗೆ ಬರೆದು 'ವಿಲ್' ಮಾಡಿ "ಮಂಜೂ! ಭಾಸ್ವಾನ್ ಇನ್ನು ನಿಮ್ಮನ್ನೆಲ್ಲಾ ಮೊದಲಿನಂತೆಯೇ ಆತ್ಮೀಯತೆಯಿಂದ ಕಾಣುತ್ತಾನೆ ಎಂಬುದು ಕನಸಿನ ಮಾತು. ಇನ್ನು ನೀನೇ ತಮ್ಮ–ತಂಗಿಯರ ಕಷ್ಟಸುಖಗಳನ್ನು ನೋಡಿಕೊಳ್ಳಬೇಕು. ತಮ್ಮನನ್ನು ಕಾಪಾಡಿಕೊಳ್ಳುವ ಭಾರ ನಿನ್ನದು," ಎಂದರು. ನಾನು ಎಷ್ಟೆಷ್ಟು ಹೇಳಿಕೊಂಡರೂ ತಮ್ಮ ಕ್ರಮವನ್ನು ಕೈಬಿಡ ಲಿಲ್ಲ. ಅದೇನೇ ಇರಲಿ, ನೀನು ಯಾವಾಗ ಬಂದು ನೆಲಸುವಿಯೋ ಅಂದೇ ನಿನಗೆ ಈ ಮನೆಯನ್ನು ಬರೆದುಕೊಡುವೆ. ಅದರ ಚಿಂತೆ ಬೇಡ; ಇದು ಎಂದಿದ್ದರೂ ನಿನ್ನದೇ " ಎಂದಳು. ಆಗ ಅವಳ ಮುಖದಲ್ಲಿ ಸಾತ್ವೀಕತೆಯ ಕಳೆ ಮಿಂಚುತಿತ್ತು. ನಾನು ಅವಳ ಮುಖವನ್ನೇ ನೋಡುತಿದ್ದೆ. ಅವಳು ನಿಧಾನವಾಗಿ ಮುಂದುವರಿದಳು "ನೀನು ಮಾತು ಮೀರಿದೆ ಎಂಬುದೊಂದೇ ನಿನ್ನ ಮೇಲಿದ್ದ ಅಸಮಾಧಾನ. ತಮ್ಮ ಏನೂ ಅರಿಯದವ. ಅವನನ್ನು ಸಾಕಿಕೊಳ್ಳುವ ಜವಾಬ್ದಾರಿಯಿದ್ದೂ ಆಂಗ್ಲ ವನಿತೆಯನ್ನು ಮದುವೆ ಯಾದನೇ ? ಎಂಬ ಪರಿತಾಪದಿಂದ ಈ ಕ್ರಮಕೈಕೊಂಡರು. ಆದರೆ, ನನಗೆ ಯಾವ ದುರಾಸೆಯೂ ಇಲ್ಲ. ಈಗಲೇ ನನ್ನ ಭಾಗಕ್ಕೆ ಎರಡು ಮನೆ ಗಳಿವೆ. ಈ ಮೂರನೆಯ ಮನೆಯನ್ನೂ ಕಟ್ಟಿಕೊಂಡು ಏನು ಮಾಡಲಿ?"

ಅವಳ ದನಿಯಲ್ಲಿ ಶಾಂತಿ, ಸೌಹಾರ್ದ–ಪ್ರೀತಿ–ವಿಶ್ವಾಸಗಳು ತುಂಬಿ ತುಳುಕುತಿದ್ದುವು. ಅಂತಹ ನಿಸ್ವಾರ್ಥ ಭಾವವನ್ನು ಬಹುಶಃ ನಾನು ಈವರೆಗೆ ಕಂಡೇ ಇರಲಿಲ್ಲ. ನಾನು ಅವಾಕ್ಕಾಗಿ ಅವಳನ್ನು ನೋಡುತಿದ್ದೆ. ಆಗ ಭಾಸ್

ಭಾವ ಗಾಂಭೀರ್ಯದಿಂದ "ಇರಲಿ, ಈಗೇನು ನನಗೆ ಮನೆಯ ಅವಶ್ಯಕತೆಯಿಲ್ಲ. ಒಂದು ವೇಳೆ ದೆಹಲಿಯಲ್ಲಿ ನನಗೆ ಸಮರ್ಪಕವಾದ ಕೆಲಸ ಸಿಕ್ಕಿದರೆ ನಾನು ದೆಹಲಿಯಲ್ಲಿ ನೆಲಸುವ ಯೋಚನೆ ಮಾಡಿರುವೆ."

ಆಗ ಶಾಂತಿ ಪ್ರಸಾದ್ ನನ್ನನ್ನು ಕುರಿತು ಹೇಳತೊಡಗಿದರು,

"ಜಾನಕೀ ! ನಿನಗೆ ಮಾವನ ವಿಚಾರ ಏನೇನೂ ತಿಳಿಯದು. ನಾನು ಈಗ ಸ್ವಲ್ಪ ತಿಳಿಸಿಕೊಡುವೆ. ಕೇಳು ! ಅವರು ಒಂದು ಹಳ್ಳಿಯ ಬಡ ಕುಟುಂಬದಲ್ಲಿ ಜನಿಸಿ, ಕಷ್ಟಕಾರ್ಪಣ್ಯಗಳಲ್ಲಿ ತೊಳಲಿ ಬಳಲಿ ಇನ್ನೂ ಚಿಕ್ಕ ವಯಸ್ಸಿನಲ್ಲೇ ಈ ಊರಿಗೆ ಬಂದು ಅಲ್ಲಿ ಇಲ್ಲಿ ಕೆಲಸಮಾಡಿ ಅನಂತರ ಒಂದು ಸಣ್ಣ ವ್ಯಾಪಾರ ಆರಂಭಿಸಿದರು. ಕ್ರಮಕ್ರಮೇಣ ಅದನ್ನೇ ಊರ್ಜಿತ ಗೊಳಿಸಿಕೊಂಡು ತಮ್ಮ ಸೋದರಮಾವನ ಮಗಳನ್ನು ಮದುವೆಯಾಗಿ ಸಂಸಾರ ಹೂಡಿ ನಾಲ್ವರು ಮಕ್ಕಳನ್ನು ಪಡೆದುಕೊಂಡರು. ಆದರೆ ದುರ ದೃಷ್ಟವಶಾತ್ ಮಡದಿ ಭಗವಾನ್ ಎರಡುವರ್ಷ ಮಗುವಿರುವಾಗ ತೀರಿ ಕೊಂಡರು. ಆಗ ಕೇವಲ ಅವರಿಗೆ ಮೂವತ್ತೆಂಟು ವರ್ಷ. ಅವರು ಮಕ್ಕಳಿಗಾಗಿ ಮರುಮದುವೆ ಮಾಡಿಕೊಳ್ಳಲಿಲ್ಲ. ಆಗ ಮಂಜುಳೆಗೆ ಕೇವಲ ಹನ್ನೊಂದು ವಯಸ್ಸು. ಇವಳೇ ಒಬ್ಬ ಮುದಿ ಆಳಿನ ಸಹಾಯದಿಂದ ಮಕ್ಕಳನ್ನು ಸಲಹಿ ಮನೆಯನ್ನು ನಡೆಸಿಕೊಂಡು ಬಂದಿದ್ದಾಳೆ. ತಂಗಿ ತಮ್ಮಂದಿರಿಗೆ ತಾಯಿಯ ಕೊರತೆಯನ್ನು ನೀಗಿಸಿದವಳು ಇವಳೇ. ಆದ್ದರಿಂದ ಮಾವನವರಿಗೆ ಮಗಳ ಮೇಲೆ ಅಪಾರವಾದ ಪ್ರೀತಿ-ವಿಶ್ವಾಸ. ತಾಯಿಲ್ಲದ ಮನೆ. ಹಿರಿಯ ಮಗನಾದ ಭಾಸ್ಕರ್ ಕೈಹಿಡಿಯುವ ಹೆಣ್ಣು ಈ ಮನೆಮಕ್ಕಳನ್ನು ತಾಯಿಯಂತೆಯೇ ಸಂಭಾಳಿಸಿಕೊಂಡು ಹೋಗಬೇಕು ಎಂಬ ಆಶಯ ಇತ್ತು ಅವರಿಗೆ. ಆದ್ದರಿಂದಲೇ ನಿಮ್ಮ ಮದುವೆಯನ್ನು ವಿರೋಧಿಸಿದ್ದು. ಪಾಶ್ಚಾತ್ಯ ದೇಶಗಳಲ್ಲಿ ಒಟ್ಟು ಕುಟುಂಬ ನಿರ್ವಹಣೆ ಇರು ವುದಿಲ್ಲವಾದ್ದರಿಂದ ಇಲ್ಲಿಯೂ ನಡೆಸುವುದಿಲ್ಲ ಎಂಬ ಧೋರಣೆಯೇ ವಿನಾ ಜಾತಿ ಭೇದವಿಲ್ಲ.

"ಮಂಜುಳೆ ಆಗ ಸಣ್ಣವಳಾದರೂ ಚಿಕ್ಕವರ ಆರೈಕೆ ಮಾಡಿದುದೂ ಅಲ್ಲದೆ ವಿದ್ಯೆ ಬುದ್ಧಿಗಳನ್ನೂ ಸರಿಯಾಗಿ ಕಲಿಸಿದ್ದಾರೆ. ಸಕಾಲದಲ್ಲಿ ಶಾಲೆಗೆ

ಕಳುಹಿಸಿ, ಹೋಂ ವರ್ಕ್ ಸರಿಯಾಗಿ ಮಾಡಿಸಿ ಮಕ್ಕಳನ್ನು ಮನುಷ್ಯರನ್ನಾಗಿ ಮಾಡುವಲ್ಲಿ ಬಹಳ ಶ್ರಮವಹಿಸಿದ್ದಾಳೆ. ಮಾವನವರು ನಾಲ್ವರು ಮಕ್ಕಳಿಗೆ ನಾಲ್ಕು ಮನೆಗಳನ್ನು ಕಟ್ಟಿದ್ದಾರಲ್ಲದೆ ಅನೇಕ ಸಂಘಸಂಸ್ಥೆಗಳಿಗೆ ಧರ್ಮಕಾರ್ಯಗಳಿಗೆ ಹಣವನ್ನು ದತ್ತಿಯಾಗಿ ನೀಡಿದ್ದಾರೆ. ಆ ಮುದುಕ ಆಳಿಗೆ ಒಂದು ಅಂಗಡಿಯನ್ನು ಹಚ್ಚಿಕೊಟ್ಟಿದ್ದು, ಅದನ್ನು ಈಗ ಅವನ ಮಗ ನಡೆಸುತ್ತಿದ್ದಾನೆ. ಅವರು ಧರ್ಮ–ನೀತಿ–ನ್ಯಾಯಗಳಲ್ಲಿ ಬಹುನಿಷ್ಠರು. ನಿಜಕ್ಕೂ ಹೇಳುವುದಾದರೆ ಭಾಸ್ವಾನನನ್ನು ಕಳುಹಿಸುವ ಇಚ್ಛೆ ಅವರಿಗೆ ಎಳ್ಳಷ್ಟೂ ಇರಲಿಲ್ಲ. ಆದರೆ, ಇವನು ಒಪ್ಪದೆ ಹಠಹಿಡಿದು ಹೋಗಿದ್ದೂ ಅಲ್ಲದೆ ಮದುವೆಯಾದುದು ಅವರಿಗೆ ಅತೀವ ಅಸಮಾಧಾನ ಮೂಡಿಸಿತು....”

ಭಾಸ್ ಒಂದೂ ಮಾತಾಡಲಿಲ್ಲ. ನಿರ್ವಿಣ್ಣತೆಯಿಂದ ಕೇಳುತ್ತಿದ್ದ.

ನನಗೀಗ ಎಲ್ಲವೂ ಅರ್ಥವಾಯಿತು. ಭಾಸ್ ಅನೇಕ ಬಾರಿ ಪ್ರಸಂಗವಶಾತ್ ತನ್ನ ಮನೆಯವರ ವಿಚಾರವನ್ನು ಹೇಳಿದುದುಂಟು. ತನ್ನವರು ಎಂದರೆ ಹೊಗಳಿ ಹಾಡುತ್ತಿದ್ದುದೂ ಉಂಟು. ಆದರೆ, ಇಷ್ಟೊಂದು ವಿವರಾತ್ಮಕವಾಗಿ ತಿಳಿಸಿಕೊಟ್ಟಿರಲಿಲ್ಲ. ಮಂಜುಳೆಯ ಹೃದಯದ ಮಾತೃಭಾವವನ್ನು ಕಂಡುಕೊಂಡೆ. ವಿಷಯ ಎದೆಯಾಳದಲ್ಲಿ ಕೈಯಾಡಿಸಿದಾಗ ಕಣ್ಣುಗಳಲ್ಲಿ ಕಂಬನಿಗಳು ಮೊಳೆತುವು. ನಾನು ಕಂಬನಿಯನ್ನು ಒರೆಸಿಕೊಳ್ಳುತ್ತ ಯೋಚಿಸಿದೆ...ಒಂದು ವೇಳೆ ಅವರು ಬದುಕಿದ್ದಿದ್ದರೆ ಅವರ ಮನೋಗತಿಯಂತೆ ನಡೆದುಕೊಂಡು ಅವರ ವಿಶ್ವಾಸವನ್ನು ಪಡೆದುಕೊಳ್ಳಬಹುದಾಗಿತ್ತು ಎಂದು. ಬಾಯಿಬಿಟ್ಟು ಏನು ಹೇಳಲೂ ತೋರಲಿಲ್ಲ, ನಾನು ಮೌನವ್ರತ ತಾಳಿದೆ...ದಿ ಸ್ಕಾರ್ಸ್ ಆಫ್ ಎಲ್ಡರ್ಸ್ ಕುಡ್ ಟೀಚ್ ಅಸ್ ಕಾಷನ್.

ಹಿಂದೊಮ್ಮೆ ಶಾಂತಿಪ್ರಸಾದರ ಬಗ್ಗೆ ಹೇಳುತ್ತ ಭಾಸ್ ಅಂದಿದ್ದ “ಶಾಂತಿಪ್ರಸಾದ್ ಒಳ್ಳೆ ಪ್ರತಿಭಾನ್ವಿತ ವ್ಯಕ್ತಿ. ಹಿಂದೆಲ್ಲಾ ಕಾಂಗ್ರೆಸ್ಸಿನ ಕಾರ್ಯಕಲಾಪಗಳಲ್ಲಿ ಸಕ್ರಿಯಪಾತ್ರ ವಹಿಸಿದವರು. ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ರಾಜಕೀಯ ಚಟುವಟಿಕೆಗಳಿಂದ ಸ್ವಲ್ಪ ದೂರವಾಗಿ ಉಳಿದರೂ ಸಣ್ಣಪುಟ್ಟ ಕಾರ್ಯಕ್ರಮಗಳಿಂದ ದೂರವಾಗಿಲ್ಲ. ಅವರು ಬಹಳ ನಿಷ್ಠಾವಂತರು.”

ವಿಷಯ ನೆನಪಾಗಿಕೆಯಾದೊಡನೆಯೇ 'ಹೌದು' ಎಂದು ಒಪ್ಪಿಕೊಂಡಿತು ಮನಸ್ಸು. ಅಂಜನಾ ಖಿನ್ನಮನಸ್ಕಳಾಗಿ ಕುಳಿತುದುದನ್ನು ನೋಡಿ 'ಹೌದು ಪ್ರತಿಯೊಬ್ಬರಿಗೂ ತಾಯಿತಂದೆಯ ಅಗತ್ಯವಿದೆ' ಎಂದು ಅಂತರಂಗ ಕೂಗಿ ಹೇಳಿತು. ನಾನು ಮ್ಲಾನಮುಖಿಯಾಗಿ ಮಂಜುಳೆ–ಅಂಜನಾರವರತ್ತ ದೃಷ್ಟಿ ಹರಿಸಿದೆ. ಅವರಾರೂ ಏನೂ ಹೇಳದೆ ಮೌನಭಾರ ವಹಿಸಿದರು. ಅಂಜನಾ ಮಕ್ಕಳು ನಿದ್ರೆ ಮಾಡಿದ್ದಾರೆ. ಮಂಜುಳಾ ಮಕ್ಕಳು ಇಲ್ಲಿಯೇ ಎಲ್ಲರೊಂದಿಗೆ ಕುಳಿತಿದ್ದರು. ನಲ್ಮೆಯ ತಾತನನ್ನು ಕಳೆದುಕೊಂಡ ದುಃಖದ ಕಪ್ಪುಛಾಯೆ ಮುಖಮುದ್ರೆಯ ಮೇಲೆ ಆಚ್ಛಾದಿಸಿತ್ತು. ಗಡಿಯಾರದ ಮುಳ್ಳು ಹನ್ನೊಂದು ವರೆಯ ಅಂಚನ್ನು ಮುಟ್ಟಿದಾಗ ಎಲ್ಲರೂ ಮಲಗಲು ಎದ್ದರು. ಬೆಡ್ ಲೈಟನ್ನು ಉರಿಸಿ ಇತರೆ ದೀಪಗಳನ್ನು ನಂದಿಸಿ ಹಾಸಿಗೆ ಸೇರಿದರೂ ನಿದ್ದೆಬರುವ ಸೂಚನೆ ತೋರಲಿಲ್ಲ. ಭಾಸ್ ಬಹಳ ಖಿನ್ನನಾಗಿದ್ದ. ನಾನು ದೀಪ ನಂದಿಸಿ ಹೇಳಿದೆ "ಇದನ್ನು ಮನಸ್ಸಿಗೆ ಬಹಳ ಹಚ್ಚಿಕೊಳ್ಳಬೇಡ."

ಅವನು ಏನೂ ಹೇಳಲಿಲ್ಲ. ನಾನು ಮೈಮೇಲೆ ಹೊದ್ದಿಕೆಯನ್ನು ಎಳೆದುಕೊಂಡೆ. ಹಾಗೂ ಹೀಗೂ ಹೊರಳಾಡಿ ಬೇಸತ್ತಮೇಲೆ ಬೆಳಗಿನ ಝಾವದ ತಂಗಾಳಿ ಬೀಸತೊಡಗಿದಾಗ ಕಣ್ಣುಗಳಿಗೆ ಜೊಂಪು ಹತ್ತಿತು. ಗಾಢ ನಿದ್ದೆಹತ್ತಿ ಸ್ವಲ್ಪಹೊತ್ತು ಹತ್ತಿತ್ತೇನೋ, ಭಾಸ್ ಹಾಸಿಗೆಯ ಮೇಲೆ ಕುಳಿತಿದ್ದು ನನ್ನ ಗಮನಕ್ಕೆ ಬಂದು ತಟ್ಟನೆ ಕೇಳಿದೆ,

"ಭಾಸ್ ! ಏನಾಯಿತು ?"

"ಏನೂ ಇಲ್ಲ."

"ನೀನು ನಿದ್ದೆ ಮಾಡಲಿಲ್ಲವೇ ?"

"ಇಲ್ಲ....ನನಗೆ ಸ್ವಲ್ಪ ನೀರು ಕೊಡು."

ನಾನು ಎದ್ದು ಹೂಜೆಯಲ್ಲಿದ್ದ ನೀರನ್ನು ಲೋಟಿಗೆ ಸುರಿದುಕೊಟ್ಟೆ. ಅವನು ಲೋಟವನ್ನು ಬರಿದುಮಾಡಿ ಹಿಂದಿರುಗಿಸುತ್ತ ಹೇಳಿದ "ಯಾಕೋ ತುಂಬ ಆಯಾಸ."

"ನೀನು ಮನಸ್ಸಿಗೆ ಬಹಳ ಹಚ್ಚಿಕೊಂಡಿದ್ದಿ. ದಯವಿಟ್ಟು ಚಿಂತೆಯನ್ನು ದೂರಮಾಡು."

ಅವನು ಮಲಗಿದ- ಮಗು ಎದ್ದು ಮುಸುಮುಸು ಎಂದುದರಿಂದ ಅದರ ಹೊದಿಕೆಯನ್ನು ಸರಿಪಡಿಸಿ ತಟ್ಟಿ ಮಲಗಿಸಿದೆ. ಭಾಸ್ ಮಲಗುತ್ತ ಅಂದ "ನಿದ್ದೆ ಸ್ವಲ್ಪವೂ ಬರಲಿಲ್ಲ. ಹಾ! ದುರ್ವಿಧಿ! ಎಲ್ಲಾ ನಿನ್ನ ಲೀಲೆ!"

ಅನಂತರ ನನಗೂ ನಿದ್ದೆ ಬರಲಿಲ್ಲ. ಬ್ರಾಹ್ಮೀ ಮುಹೂರ್ತದ ತಂಗಾಳಿ ತಣ್ಣಗೆ ಬರುತ್ತಿತ್ತು ಕಿಟಕಿಯಲ್ಲಿ. ಅರ್ಧ ಗಂಟೆಯ ಬಳಿಕ ಭಾಸ್ 'ತನಗೆ ಎದೆನೋಯುತ್ತಿದೆ' ಎನ್ನುತ್ತ ಎದ್ದು ಕುಳಿತ.

"ಏಳಬೇಡ...ಒಳಹೋಗಿ ಯಾರನ್ನಾದರೂ ಎಬ್ಬಿಸಲೇ?"

"ತಾಳು ಸ್ವಲ್ಪ ಶೌಚಗೃಹಕ್ಕೆ ಹೋಗಿ ಬರುವೆ..." ಎನ್ನುತ್ತ ಎದ್ದು ಹೋದ. ನಾನು ಬಾಗಿಲಲ್ಲೇ ನಿಂತೆ. ಅವನು ದೇಹಬಾಧೆಯನ್ನು ತೀರಿಸಿದ ನಂತರ ಒಂದು ವಾಂತಿಯನ್ನು ಮಾಡಿದ. ಹಗಲೆಲ್ಲ ಉಪವಾಸವಿದ್ದು ಆಯಾಸಗೊಂಡಿರಬಹುದೆನಿಸಿದರೂ ನನ್ನ ಜಂಘಾಬಲವೇ ಬಿದ್ದುಹೋಯಿತು. ಅವನು ಹಾಸಿಗೆಯ ಮೇಲೆ ಸ್ವಲ್ಪಹೊತ್ತು ಕುಳಿತಿದ್ದು ಅನಂತರ ಮಲಗಿಕೊಳ್ಳುತ್ತ ಹೇಳಿದ "ಒಳಹೋಗಿ ಮಂಜುಳೆಯನ್ನು ಕರೆ."

ನಾನು ಅವಳ ರೂಮಿನ ಬಾಗಿಲ ಬಳಿ ನಿಂತು ಬಾಗಿಲನ್ನು ತಟ್ಟಿದೆ.

ಕಟ, ಕಟ, ಕಟ, ಕಟ.

ಆ ಕೂಡಲೇ ದೀಪ ಹಚ್ಚಿದ ಮಂಜುಳೆ "ಯಾರು ಎನ್ನುತ್ತ ಹೊರ ಬಂದಳು.

ನಾನು ತಕ್ಷಣ ವಿಷಯವನ್ನು ತಿಳಿಸಿ "ಬಂದು ನೋಡು!" ಎಂದೆ.

ಆ ಮಾತನ್ನು ಕೇಳಿಸಿಕೊಂಡ ಶಾಂತಿಪ್ರಸಾದ್ ಎದ್ದು ಹಿಂದೆಯೇ ಬಂದರು. ನಾವು ಹಾಸಿಗೆಯ ಬಳಿಗೆ ಹೋದಾಗ ಅವನು ಬೆವರಿ ನೀರಾಗಿದ್ದ. ನೋಡಿದರೆ ಒಮ್ಮೆಲೇ ಎದೆ 'ಧಸಕ್' ಎನ್ನುವಂತಹ ಸನ್ನಿವೇಶ.

ಅವರಿಬ್ಬರೂ ಒಂದೇ ಬಾರಿಗೆ "ಏನು ? ಏನಾಗಿದೆ ? ಗಾಬರಿಯಾಗ ಬೇಡ. ಈಗಲೇ ಡಾಕ್ಟರನ್ನು ಕರೆತರೋಣ," ಎನ್ನುತ್ತ ಮುಖವನ್ನು ಟವಲ್ಲಿಂದ ಒರಸಿ, ಸ್ವಲ್ಪ ನೀರನ್ನು ಕುಡಿಸಲು ಪ್ರಯತ್ನಿಸಿದರು. ಆದರೆ ಭಾಸ್ ತಲೆಯಾಡಿಸಿ 'ಬೇಡ' ಎಂದು ಸೂಚಿಸಿದ. ಒಡನೆ ಶಾಂತಿಪ್ರಸಾದ್ ತಮ್ಮ ಮನೆಯ ಪಕ್ಕದಲ್ಲಿದ್ದ ಡಾಕ್ಟರನ್ನು ಕರೆತರಲು ಧಾವಿಸಿದರು. ಅವರು ಹೊರ ಹೆಜ್ಜೆಯಿಟ್ಟೊಡನೆ,

"ಹೇಗಿದ್ದಿ ಭಾಸ್ ? ಈಗ ನೋವು ಕಡಿಮೆಯಾಯಿತೇ ?"

ಎಂದು ನಾನು ಮಂಜುಳೆ ಒಟ್ಟೊಟ್ಟಿಗೆ ಕೇಳಿದಾಗ ಅವನು ತಲೆಯಾಡಿಸಿ 'ಇಲ್ಲ' ಎಂದು ಮಾತ್ರ ಸೂಚಿಸಿದ. ಅಷ್ಟರಲ್ಲಿ ಅಂಜನಾ ಮತ್ತು ಆಕೆಯ ಪತಿ ರಾಘವರವರೂ ಎದ್ದು ಗಾಬರಿಯಿಂದ ಬಂದರು. ಅನಂತರ ಅಲ್ಲಿ ಉಳಿದಿದ್ದ ಎಲ್ಲರೂ ದೀಪ ಉರಿಯುತಿದ್ದ ಕಾರಣ ಎದ್ದು ಬರತೊಡಗಿದರು. ಅಂಜನಾ ಎಲ್ಲರಿಗೂ ಬಾಗಿಲಲ್ಲೆ ತಡೆ ಹಾಕಿ "ಪರವಾಯಿಲ್ಲ. ಗಾಬರಿಬೇಡ" ಎನ್ನುತಿದ್ದಳು.

ಹತ್ತುಹದಿನೈದು ನಿಮಿಷಗಳೊಳಗಾಗಿ ಶಾಂತಿಪ್ರಸಾದ್ ಡಾಕ್ಟರೊಂದಿಗೆ ಒಳಬಂದರು. ಅವರು ದೇಹಸ್ಥಿತಿಯನ್ನು ಪರೀಕ್ಷಿಸಿ "ಈ ಕ್ಷಣವೇ ಆಸ್ಪತ್ರೆಗೆ ಸೇರಿಸಿ" ಎಂದು ಸಲಹೆ ಮಾಡಿ, ಹತ್ತಿರದ "ರಾಮಕೃಷ್ಣ ನರ್ಸಿಂಗ್ ಹೋಂ"ಗೆ. ಫೋನ್ ಮಾಡಿ ಒಂದು ಬೆಡ್ ರಡಿ ಇಡಿ. ಈಗಲೇ ಒಂದು ಪೇಷಂಟ್ ಕರೆ ತರುತ್ತೇನೆ' ಎಂದರು. ಅನಂತರ ಕಾರನ್ನು ಪೋರ್ಟಿಕೋಕ್ಕೆ ತಕ್ಷಣ ತಂದಾಗ ಡಾಕ್ಟರೂ ಸೇರಿದಂತೆ ಎಲ್ಲರೂ ಭಾಸ್ವಾನನನ್ನು ಅಲುಗದಂತೆ ಎತ್ತಿ ಕೊಂಡು ಹೋಗಿ ಕಾರಿನಲ್ಲಿ ಮಲಗಿಸಿದರು. ಅಂಜನಾ-ಮಂಜುಳಾ ರಾಘವ ರವರೂ ನಮ್ಮೊಡನೆ ಹೊರಟರು. ಅಂಜನಾ ಫ್ಲಾಸ್ಕ್‌ನಲ್ಲಿ ಹಾಲು ನೀರು ತೆಗೆದುಕೊಂಡಿದ್ದಳು. ಮಗು ಮಲಗಿತ್ತು. ಶಾಂತಲಾ ಮಗುವನ್ನು ನೋಡಿಕೊಳ್ಳುವುದಾಗಿ ಹೇಳಿದುದರಿಂದ ಮನೆಯಲ್ಲೇ ಬಿಟ್ಟು ಹೊರಟೆ. ನನ್ನ ಎದೆ ಭಯದಿಂದ ಡವಡವನೆ ಹೊಡೆದುಕೊಳ್ಳುತಿತ್ತು. ಕಳವಳ ಆತಂಕ ಗಳಿಂದ ಮನಸ್ಸು ಝರ್ಜರಿತವಾಗಿತ್ತು. ಉಕ್ಕಿ ಬರುತಿದ್ದ ಕಣ್ಣೀರಿಗೆ ತಡೆ

ಹಿಡಿಯುತ್ತಿದ್ದೆನಾದರೂ ಅವು ಕಟ್ಟೆಯೊಡೆದ ಕೋಡಿಯಂತೆ ನುಗ್ಗಿ ಬರ ತೊಡಗಿದವು.

ಆಗ ನನ್ನನ್ನು ಸಮಾಧಾನಪಡಿಸುತ್ತ ಮಂಜುಳ "ಭಯಪಟ್ಟುಕೊಳ್ಳಬೇಡ. ಇಂತಹ ಸಂದರ್ಭದಲ್ಲಿ ಧೈರ್ಯವೇ ನಮ್ಮನ್ನು ಕಾಪಾಡಬೇಕಾದರೆ. ಅವನ ಮುಂದೆ ಸ್ವಲ್ಪವೂ ಭಯ–ದುಃಖಗಳನ್ನು ತೋರಿಸದೆ ಧೈರ್ಯವಾಗಿ ನಗು ನಗುತ್ತಿರು. ನೀನು ನಗುತ್ತಿದ್ದರೆ ಅವನಿಗೆ ಅದೇ ಅಮೃತ" ಎಂದಳು.

ಅಂಜನಾ ಸಹ ಹಾಗೇ ಹೇಳಿ ನನ್ನ ಬೆನ್ನನ್ನು ನೇವರಿಸುತ್ತ "ಪರದೇಶ–ಪರಜನ ಎಂದು ಹೆದರಿಕೊಳ್ಳಬೇಡ. ನಿಮ್ಮವರು ಎಷ್ಟು ನೆರವು ನೀಡುತ್ತಾರೋ ಅಷ್ಟೇ ನಾವೂ ನೀಡುತ್ತೇವೆ. ಇಲ್ಲಿಯೂ ಒಳ್ಳೆಯ ವೈದ್ಯರಿದ್ದಾರೆ. ದೇವರ ದಯೆಯಿಂದ ಅಂತಹ ತೊಂದರೆಯೇನೂ ಆಗಲಾರದು. ಅವನು ಕಾಪಾಡುತ್ತಾನೆ. ಅವನನ್ನು ಪ್ರಾರ್ಥಿಸು," ಎಂದಳು.

ಭಾಸ್‌ನನ್ನು ಎಮರ್ಜನ್ಸಿ ವಾರ್ಡಿನಲ್ಲಿಟ್ಟುಕೊಂಡು ತುರ್ತು ಚಿಕಿತ್ಸೆ ನಡೆಸಿದರು. ಒಮ್ಮೆ ಸ್ವಲ್ಪಹೊತ್ತು ಪ್ರಜ್ಞಾಹೀನನಾಗಿ ಪುನಃ ಸ್ವಲ್ಪ ಹೊತ್ತಿನಲ್ಲಿ ಚೇತರಿಸಿಕೊಂಡ. ಹೃದಯ ತಜ್ಞರ ತಂಡ ಕೂಡಿ ಮಾತಾಡಿ ಚಿಕಿತ್ಸೆ ಕೈಕೊಂಡರು. 'ಇನ್ನೂ ನಲವತ್ತೆಂಟು ಗಂಟೆಗಳ ಕಾಲ ಏನೂ ಹೇಳುವಂತಿಲ್ಲ' ಎಂದಿತು ವೈದ್ಯ ವರದಿ, ಎದೆಗೆ ಚೂರಿ ಇರಿಯುವಂತೆ. ಓ ! ಮೈ ಗಾಡ್...

○ ○ ○ ○

ಉರುಳುವ ಒಂದೊಂದು ಕ್ಷಣವೂ ಖಡ್ಗದಲುಗಿನ ಮೇಲೆ ಹೊರಳುವುದು ಸತ್ಯವೇ, ತದನಂತರ ಆ ಒಂದೊಂದು ಕ್ಷಣವೂ ಹಿಡಿದಿದ್ದ ಉಸಿರನ್ನು ಹಗುರಾಗಿ ಹರಿಸುವುದೂ ನಿಜವೇ. ಸಧ್ಯ, ಕಳೆದ ಕ್ಷಣದೊಂದಿಗೆ ಯಮಗಂಡವೊಂದು ನಿವಾರಣೆಯಾಯಿತು ಎಂಬ ಸಮಾಧಾನವೂ ಸರಿಯೆ. ಆದರೆ ಎದೆಯೊಳಲನ್ನು ಹೇಗೆ, ಯಾವ ರೀತಿಯಲ್ಲಿ ಹುದುಗಿಡುವುದೋ ತಿಳಿಯದು. ಎಷ್ಟೆಷ್ಟು ಪ್ರಯತ್ನಿಸಿದರೂ ಬಿಸಿಲಟ್ಟದ ಮಂಜುಗಡ್ಡೆ

ಯಂತೆ ಕರಗಿ, ಕಂಬನಿಯೊಡೆದು ಹನಿಹನಿಯಾಗಿ ನಸರುವ ಕಂಬನಿಗಳನ್ನು ಶೀರ ನಿಸ್ಸಾಯಕತೆಯಿಂದ ಅವಜ್ಞಳಂತೆ ಕರವಸ್ತ್ರವೊತ್ತಿ ನಿವಾರಿಸಿಕೊಳ್ಳುವ ದುರ್ಬರ ಸನ್ನಿವೇಶ. ಅಂದರೆ, ಒಮ್ಮೆ ಎಚ್ಚರ, ಇನ್ನೊಮ್ಮೆ ಮಂಪರು, ಮತ್ತೊಮ್ಮೆ ಅತೀವ ಬಳಲಿಕೆ, ಹುಬ್ಬೆತ್ತಿ ನೋಡಲಾರ ಹೀಗಿತ್ತು ಭಾಸ್ ಪರಿಸ್ಥಿತಿ. ಯಾವ ಗಳಿಗೆಯಲ್ಲಿ ಅವಗಡ ಒದಗುವುದೋ ಹೇಳುವಂತಿರಲಿಲ್ಲ. ವೈದ್ಯರು ವೈದ್ಯಧರ್ಮದ ಭರವಸೆಯನ್ನು ನೀಡುತ್ತಿದ್ದರೂ ಇನ್ನೂ ಕೆಲವು ದಿನ, ಇನ್ನೊಂದು ವಾರ ಎಂಬ ಗಡುವೂ ಹೆಚ್ಚುತ್ತಲೇ ಇದ್ದುದನ್ನು ನೋಡಿ ದರೆ ನನಗೆ ಭರವಸೆಯೇ ಉಳಿಯದು. ಎದೆಯ ಸುಯ್ಲು ಒಳಗಿಂದೊಳಗೇ ನರಳುತ್ತದೆ; ನರನರಗಳೂ ಹುಯ್ಯಲಿಡುತ್ತವೆ. ಏತನ್ಮಧ್ಯೆ ಮನೆಯಲ್ಲಿ ತಿಥಿ ವೈಕುಂಠಸಮಾರಾಧನೆಗಳು ನಡೆದುವು. ಆದಾದ ಮರುದಿನ ರಾಘವ ದೆಹಲಿಗೆ ಹೊರಟರು. ಮಂಜುಳಾ ಅಣ್ಣನ ಸಲುವಾಗಿ ಇಲ್ಲೇ ಉಳಿದರೂ ಮಕ್ಕಳಿಗೆ ರಜೆಯಿಲ್ಲವಾದುದರಿಂದ ಇರುವುದೂ ಕಷ್ಟ, ಹೊರಡುವುದೂ ಕಷ್ಟ.

ತಿಂಗಳ ಗಾಲಿ ಉರುಳಿತು. ಔಷಧಿ ಇಂಜಕ್ಷನ್‌ಗಳೇ ಹೊಟ್ಟೆ ತುಂಬು ವಷ್ಟು ಅಧಿಕ. ಹಾಸಿಗೆಯಿಂದ ಒಮ್ಮೆಯೂ ಅಲುಗಿಸಲಿಲ್ಲ. 'ಮಲಗೀ ಮಲಗೀ ಬೇಸರ' ಎಂದರೂ ಡಾಕ್ಟರು ಮಣಿಯಲಿಲ್ಲ. ನನ್ನನ್ನು 'ಸದಾ ಕಾಲವೂ ಇರಬೇಡ ಇಲ್ಲಿ. ನಿನ್ನ ಮೇಲಿನ ಚಿಂತೆಯಿಂದ ಅವನು ಚೇತರಿಸಿ ಕೊಳ್ಳುತ್ತಿಲ್ಲ' ಎನ್ನುತಿದ್ದರು ವೈದ್ಯರು. ನಾನು ಅದಕ್ಕಾಗಿ ಎಷ್ಟೋ ಸಮಯ ವರಾಂಡದಲ್ಲಿ ಕುಳಿತು ಸಮಯ ಕಳೆಯುತಿದ್ದೆ. ಭಾಸ್‌ನ ಬಳಿ ಒಬ್ಬ ವೈದ್ಯರು ವಾರ್ಡ್‌ಬಾಯ್ ಅಥವಾ ನರ್ಸ್ ಸದಾ ಕಾದಿರುತಿದ್ದರು. ಹೃದಯಸ್ಥಿತಿ ಸ್ವಲ್ಪ ಏರುಪೇರಾದರೂ ಮೈಗೆ ಹಚ್ಚಿದ್ದ ಯಂತ್ರ ಪರಿಕರಣಗಳು ತಟ್ಟನೆ ಸೂಚನೆ ಕೊಡುತಿದ್ದುವು. ವೈದ್ಯರು ಜಾಗೃತರಾಗುತ್ತಿದ್ದರು. ಮನೆಯವರು ಶ್ರದ್ಧೆವಹಿಸುತಿದ್ದುದೊಂದು ಸುದೈವ. ಭಾಸ್ ಅನೇಕವೇಳೆ ತಮ್ಮವರನ್ನು ಬಾಯಿತುಂಬ ಬಣ್ಣಿಸಿದ್ದುದುಂಟು. ಆಗ ನಾನು 'ಉತ್ಪ್ರೇಕ್ಷೆ' ಎಂದು ಕೊಳ್ಳುತಿದ್ದೆ. ಈಗ ಎಲ್ಲವನ್ನೂ ಸ್ವತಃ ಮನದಟ್ಟು ಮಾಡಿಕೊಂಡಮೇಲೆ 'ಹೌದು' ಎಂದುಒಪ್ಪಿಕೊಂಡಿತು ಅಂತರಾತ್ಮ.

ಅಂಜನಾ ಇಂದು ದೆಹಲಿಗೆ ಹೊರಡಲಿದ್ದಳು. ವಿಮಾನಯಾನ

ಒಂಭತ್ತೂವರೆಗೆ. ಅವಳು ನನ್ನ ಕೈಗಳನ್ನು ಅದುಮಿ ಹಿಡಿದುಕೊಂಡು "ಹೆದರಿಕೊಳ್ಳಬೇಡ ದೇವರು ದಯಾಮಯ. ನಾನಿಲ್ಲಿಗೆ ಆಗಾಗ ಟೆಲಿಫೋನ್ ಸಂಪರ್ಕ ಪಡೆದು ತಿಳಿದುಕೊಳ್ಳುವೆ. ಸದ್ಯದಲ್ಲಿಯೇ ಭಾಸ್ ಸುಧಾರಿಸಿಕೊಳ್ಳು ತ್ತಾನೆಂದು ವೈದ್ಯರು ಹೇಳುತ್ತಿದ್ದಾರೆ. ನೀನು ದೇವರನ್ನು ಬೇಡಿಕೊ. ನೀನು ದೆಹಲಿಗೆ ಬಂದಾಗ ನಿನ್ನನ್ನು ನೋಡುವೆ."

ಅಂಜನಾ ಕಂಬನಿ ಮಿಡಿದಾಗ ನನ್ನ ಕಣ್ಣುಗಳಲ್ಲೂ ಪ್ರತಿಹನಿಗಳು ಮೊಳೆತುವು. ಅವಳು ನನ್ನನ್ನು ಸಮಾಧಾನಪಡಿಸುತ್ತ "ಧೈರ್ಯ ತೆಗೆದುಕೋ ಜಾನಕೀ ! ದೇವರ ಮೇಲೆ ಭಾರಹಾಕು. ಅವನು ದಯಾಮಯ !"

ಕಾರು ಪೋರ್ಟಿಕೋದಲ್ಲಿ ಅಣಿಯಾಗಿತ್ತು. ವಿಮಾನ ನಿಲ್ದಾಣಕ್ಕೆ ಹೋಗುವ ದಾರಿಯಲ್ಲೇ ಆಸ್ಪತ್ರೆ. ಅಲ್ಲಿ ನನ್ನನ್ನು ಇಳಿಸಿ ಅವಳೊಮ್ಮೆ ಅಣ್ಣ ನನ್ನು ನೋಡಿ ಕೈಹಿಡಿದುಕೊಂಡು ಆತ್ಮೀಯತೆಯಿಂದ "ದೇವರು ನಿನ್ನನ್ನು ಬೇಗನೆ ಗುಣಪಡಿಸಲಿ !" ಎಂದಳು.

ರಾಗಿಣಿ–ತಾರಿಣಿಯರು ಹಾಸಿಗೆಯ ಬಳಿಗೆ ಭಾವಿಸಿ 'ಬೈಬೈ' ಹೇಳಿದಾಗ ಭಾಸ್ ಮುಖಬಿಂಬ ಕೆಂಪಾಯಿತು. ಸಣ್ಣ ನಿಟ್ಟುಸಿರನ್ನು ಬಿಟ್ಟ. ಆಗ ಅಂಜನಾ "ನೀನು ಧೈರ್ಯವಾಗಿದ್ದರೇನೇ ಜಾನಕಿಗೆ ಧೈರ್ಯ" ಎಂದಳು ಸಂದರ್ಭೋಚಿತವಾಗಿ.

ಭಾಸ್ ಮುಗುಳು ನಕ್ಕು "ಏನಾಗಬೇಕೋ ಅದು ಆಗಿಯೇ ತೀರುತ್ತೆ. ನನಗೇನೂ ಭಯವಿಲ್ಲ," ಎಂದ.

ಅನಂತರ ಅವರು ಹೊರಟರು. ಬಿಟ್ಟುಹೋಗಲಾರದೇ ಹೋಗುವ ಅವಳ ರೀತಿಯನ್ನು ನೋಡಿದರೆ ನನಗೂ ಸಂಕಟ. ಕಾರು ಹೊರಟನಂತರ ನಾನು ಒಳಬಂದು ಕುರ್ಚಿಯ ಮೇಲೆ ಕುಳಿತುಕೊಂಡೆ. ಭಾಸ್ ಮಗ್ಗುಲಾಗಿ ಮಲಗುತ್ತ "ನನ್ನ ಮನದಲ್ಲಿ ಇನ್ನೂ ಕೊರೆಯುತ್ತಿದೆ ಅಂದಿನ ಇಂಜಕ್ಷನ್ ಅವಾಂತರ. ದುರ್ವಿಧಿ ನನ್ನಿಂದ ಎಂತಹ ಕೆಲಸ ಮಾಡಿಸಿತು ?"

"ಅದನ್ನೇ ಇನ್ನೂ ಏಕೆ ಮನದಲ್ಲಿಟ್ಟಿದ್ದಿ ?" ಎಂದ ನಾನು ಒಂದೆರಡು ಕ್ಷಣ ತಡೆದು "ಬಹುಶಃ ಅದೇ ಚಿಂತೆ ನಿನ್ನ ಮನಸ್ಸಿನ ಮೇಲೆ ಒತ್ತಡ ಹೇರಿರ ಬಹುದು."

"ಹಾಗೇನಿಲ್ಲ....ಆದರೂ ಅದೊಂದು ದುಃಖ, ಅಥವಾ ಯೋಚನೆ, ಅಥವಾ ಚಿಂತನೆ ಮನಸ್ಸಿನ ಮೇಲೆ ಆಗಾಗ ತನ್ನ ಕಪ್ಪು ಛಾಯೆಯನ್ನು ಚಾಚುತ್ತದೆ. ಅದರಿಂದ ತುಂಬಾ ಬೇಸರವಂತೂ ಹೌದು."

"ಬೇನೆ ಬಿದ್ದಾಗ ಯೋಚನೆಯಿಂದ ಮನಸ್ಸು ದಿಕ್ಕೆಡುವುದು ಸಹಜ. ನೀನು ತೀವ್ರ ಪರಿಣಾಮಕಾರಿಯಾಗಿ ಯೋಚಿಸುತ್ತಿರುವುದರಿಂದಲೇ ಇನ್ನೂ ಸುಧಾರಿಸಿಕೊಳ್ಳಲಿಲ್ಲ."

"ಬೇರಾವುದರ ಯೋಚನೆ ನನಗಿಲ್ಲ. ಹೇಗಾದರೂ ಜೀವನ ಕಳೆಯು ತ್ತದೆ...ತಂದೆಯವರ ಮರಣಕ್ಕೆ ಎಲ್ಲಾ ರೀತಿಯಿಂದ ನಾನೇ ಕಾರಣನೇ ? ಎಂಬುದೊಂದು ಸದಾ ಮನವನ್ನು ಕೊರೆಯುತ್ತದೆ. ಓ ಮೈ ಲಾರ್ಡ್ ! ಏನಾಗಿ ಹೋಯಿತು."

"ಛೀ ! ಛೀ ! ಎಲ್ಲಾದರುಂಟೇ ? ಅದೇ ಅಲ್ಲವೇ ನಿನ್ನನ್ನು ಇನ್ನೂ ಮಲಗಿಸಿರುವುದು ?"

ಅವನು ದೀರ್ಘವಾದ ನಿಟ್ಟುಸಿರುಬಿಟ್ಟ. ನಾನು ಒತ್ತಾಯಿಸಿದೆ "ಖಂಡಿತಾ ಆ ವಿಚಾರ ಮರೆತುಬಿಡು."

"ನಾಲಿಗೆ ಒಣಗಿದೆ ಸ್ವಲ್ಪ ನೀರುಕೊಡು."

ನಾನು ನೀರನ್ನು ಸ್ವಲ್ಪಸ್ವಲ್ಪವಾಗಿ ಕುಡಿಸಿದೆ. ಅವನು ತುಟಿಗಳನ್ನು ನಾಲಿಗೆಯಿಂದ ಒರಿಸಿಕೊಳ್ಳುತ್ತ ಅಂದ "ನನ್ನಿಂದ ಅಕ್ಕಭಾವಂದಿರಿಗೆ ತೊಂದರೆ. ಪಾಪ, ಅಕ್ಕನಿಗೆ ದುಃಖಕಾಲದಲ್ಲಿ ಇದೊಂದು ಹೊರೆ."

"ಇರಲಿ, ನೀನೀಗ ಅದನ್ನೆಲ್ಲಾ ಯೋಚಿಸಬಾರದು. "ಭಾಸ್ ಐ ಬೆಗ್ ಆಫ್ ಯೂ...."

"ಹಾ, ದೈವವೇ !" ಎನ್ನುತ್ತ ಮೈಮೇಲಿನ ಹೊದ್ದಿಕೆಯನ್ನು ಆತ್ತ ತಳ್ಳಿ "ಮೈಯೆಲ್ಲಾ ಉರಿ. ಆ ಕಿಟಕಿ ಬಾಗಿಲುಗಳನ್ನು ತೆರೆ." ಎಂದ.

ನಾನು ಎದು ಕಿಟಕಿಗಳನ್ನು ತೆರೆದೆ. ಆಗಲೇ ಶಾಂತಿಪ್ರಸಾದ್ ಶ್ರೀವತ್ಸ ನೊಡನೆ ಒಳಹೆಜ್ಜೆಯಿಟ್ಟರು. ಅವರ ಕೈಯನ್ನು ಅದುಮಿ ಹಿಡಿದುಕೊಂಡು, "ನನ್ನಿಂದ ಎಲ್ಲರಿಗೂ ತೊಂದರೆ. ದಯವಿಟ್ಟು ಕ್ಷಮಿಸಿ." ಎಂದ ಭಾಸ್.

"ಛೀಃ ! ಛೀಃ ! ಆ ವಿಚಾರ ಯೋಚಿಸಲೇ ಬೇಡ. ನೀನು ಉತ್ತಮ ಗೊಳ್ಳುತಿರುವುದೇ ಸಂತೋಷ !"

ಅನಂತರ ಶಾಂತಿಪ್ರಸಾದ್ ಭಾಸ್ ಬಳಿ ಕುಳಿತುಕೊಂಡರು. ನಾನು ಶ್ರೀವತ್ಸನೊಡನೆ ಹೊರಬಂದೆ.

ಈ ಕೊನೆಯಿಂದ ಆ ಕೊನೆಯವರೆಗೂ ಹರಿದ ವರಾಂಡ. ಸಾಲಾಗಿ ಕಲ್ಲಿನ ಸೋಫಾಗಳು. ಅಲ್ಲಲ್ಲಿ ರೋಗಿಗಳ ಕಡೆಯವರು ಕುಳಿತು ಮಾತುಕತೆ ಯಲ್ಲಿ ತೊಡಗಿದ್ದರು. ಮುಂದಣ ಅಂಗಣ ಹೆಚ್ಚು ವಿಸ್ತಾರವಿಲ್ಲದಿದ್ದರೂ ಹೂಗಿಡಗಳನ್ನು ಹೊಂದಿಸಿದ ರೀತಿ ಸಮಂಜಸವಾಗಿತ್ತು. ಬಣ್ಣಬಣ್ಣದ ರಂಗುರಂಗಿನ ಗಿಡಗಳ ಉದ್ಯಾನ ; ಪುಷ್ಪಗಳು ತೀರ ವಿರಳವಾದರೂ ರಂಗು ರಂಗಿನ ಎಲೆಗಳೇ ಆಮೋದಕ, ರಸದೃಷ್ಟಿಯುಳ್ಳ ಕಣ್ಣುಗಳಿಗೆ.

ಶ್ರೀವತ್ಸ ಅಂದ "ಇನ್ನು ಪರವಾಯಿಲ್ಲ ಆಂಟೀ ! ಒಂದು ವಾರದಲ್ಲಿ ಚೇತರಿಸಿಕೊಳ್ಳುತ್ತಾರೆ ಮಾವ." ಅವನ ಮುಖದಲ್ಲಿ ಆನಂದದ ಕಳೆ ಬೆಳಗಿತು.

"ಅಷ್ಟಾದರೆ ಸಾಕಲ್ಲ ?" ನಸುನಗೆ ಸೂಸಿ "ಅವನು ಬಹಳ ಚಿಂತಿತ ನಾಗಿದ್ದಾನೆ," ಎಂದೆ.

"ಸರಿ; ಬಳಲಿದ್ದಾರೆ. ಕ್ರಮಕ್ರಮೇಣ ಮೈಯಲ್ಲಿ ಶಕ್ತಿ ಕೂಡಿಕೊಳ್ಳ ಬೇಕು. ಹೃದಯಮಿಡಿತ ಹದಗೊಂಡರೆ ಎಲ್ಲವೂ ತನ್ನಂತೆಯೇ ಸರಿ ಹೋಗುತ್ತದೆ."

"ದೇವರು ದಯಾಮಯ. ಅವನು ಕರುಣಿಸಿದರೆ ಸಾಕು."

ನಾನು ಹಾಗೇ ಅಡ್ಡಾಡುತ್ತ ವಾರ್ಡಿನ ಬಾಗಿಲಿಗೆ ಬಂದಾಗ ಶಾಂತಿ ಪ್ರಸಾದ್ "ಭಾಸ್ ! ನೀನು ಮನಸ್ಸಿಗೆ ಹಚ್ಚಿಕೊಳ್ಳುವುದೇ ಹೆಚ್ಚು. ಅಂತಲೇ ನಿನಗೆ ಬೇಗನೆ ಗುಣವಾಗಲಿಲ್ಲ."

"ಇಲ್ಲವಲ್ಲಾ ?"

"ಡಾಕ್ಟರ್ ಹೇಳುವುದೇ ಹಾಗೆ."

"ಜಾನಕೀ ! ಅವರು ಮಾಡುವಷ್ಟು ಮಾಡುತಿದ್ದಾರೆ. ಕೈಗೂಡಿಸಿ ಕೊಳ್ಳುವುದಕ್ಕೆ ನಮಗೂ ಅದೃಷ್ಟವಿರಬೇಕಲ್ಲ ? ಸ್ವಲ್ಪ ನಿಧಾನವಾಗಬಹುದು ಆಗಲಿ ಬಿಡು; ಒಮ್ಮೆ ಪೂರ್ಣಗುಣವಾದರೆ ಸಾಕು."

ಅವರ ಆಶಯ ನನ್ನ ಮನದಾಳಕ್ಕೆ ಇಳಿಯಿತು. ಒಂದೆರಡು ಗಳಿಗೆ ಭಾವುಕತೆಯಲ್ಲಿ ಮೈಮರೆತೆನೇನೋ. ಅನಂತರ ಮನದಲ್ಲೇ ಅವರನ್ನು ವಂದಿಸಿದೆ. ಈ ದಿನಗಳಲ್ಲೆಲ್ಲಾ ಮಗುವನ್ನು ಶುಸೆಯಲ್ಲಿಯೇ ಬಿಡುತಿದ್ದು ದರಿಂದ ಮಂಜುಳೆಯೇ ಅದರ ಅಗತ್ಯವನ್ನು ಪೂರೈಸುತ್ತಾಳೆ. ಶಾಂತಿಪ್ರಸಾದ್ ತಮ್ಮ ಎಸ್ಟೇಟಿಗೆ ಹೋಗಿ ಬರುವಾಗಲೆಲ್ಲ ಬಂದುಹೋಗುತ್ತಾರೆ. ಮಧ್ಯೆ ಮಧ್ಯೆ ಮಂಜುಳಾ, ಶಾಂತಲಾ, ಕಮಲ ಯಾರು ಬಂದರೂ ಸರಿಯೆ; ಅವ ರೊಂದಿಗೆ ಊಟ ತಿಂಡಿಗಳು ಬರುತ್ತವೆ. ನಾನು ಪತಿಯ ಬಳಿಯಲ್ಲಿ ಕುಳಿ ತಿರುವುದಷ್ಟೆ. ಹೀಗೆಯೇ ಇನ್ನೊಂದು ವಾರ ಉರುಳಿತು. ಎದುರಿಗೆ ನಾನು ಸಂತಸದ ಸೋಗು ಹಾಕಿದರೂ ಒಳಗಿಂದೊಳಗೇ ಕೊರಗಿ ಕರಗುತಿದ್ದೆ. ಕಣ್ಣೀರಿನ ಕೋಡಿ ಹರಿಯುತಿತ್ತು. ನಾವು ಇಂಗ್ಲೆಂಡಿನಿಂದ ಬರದಿದ್ದರೇ ಚೆನ್ನಾಗಿತ್ತು. ವಿಧಿ ನಮ್ಮನ್ನು ಅನ್ಯಥಾ ಇಲ್ಲಿಗೆ ಎಳೆತಂದಿತು ...ಎಂದೆಲ್ಲಾ ಯೋಚಿಸುತಿತ್ತು ಮನಸ್ಸು.

ತಿಂಗಳೆರಡು ದುಃಖ–ದುಗುಡ–ಆತಂಕಗಳಿಂದ ತುಂಬಿ ಕಳವಳಕರವಾಗಿ ಉರುಳಿಹೋದುವು. ಈದಿನ ನೋಡಿದ ವೈದ್ಯರು "ಇನ್ನು ಪರವಾಗಿಲ್ಲ ಸ್ವಲ್ಪ ಎದ್ದು ಕೂಡಬಹುದು" ಎಂದರು.

ಆ ಮುಹೂರ್ತದಲ್ಲಿ ಸ್ವರ್ಗವೇ ಕೈಗೆಟುಕಿದಂತಾಯಿತು. ಭಾಸ್ ಮುಖದಲ್ಲಿ ಆನಂದದ ಕಳೆ ಬೆಳಗಿದ. ಅವನು ಹಾಸಿಗೆಯ ಮೇಲೆ ಕುಳಿತ್ತು

ಒಂದು ಗಂಟೆ ಕಳೆದರೂ ಹೃದಯದ ಮಿಡಿತ ಏರುಪೇರು ಆಗಲಿಲ್ಲ. ಹಾಗೇ ಕ್ರಮಕ್ರಮೇಣ ಹೆಚ್ಚು ಹೆಚ್ಚು ಸಮಯ ಕೂಡುತ್ತ ಬಂದು, ನಂತರ ತಿರು ಗಾಡಿ ಮಾತಾಡಿ ಹೃದಯದ ಚಲನವಲನವನ್ನು ಗಮನಿಸಿದ ಮೇಲೆ ವೈದ್ಯರು ಸಮಾಧಾನದ ಉಸಿರನ್ನು ಬಿಟ್ಟರು.

ಆನಂತರ ಆಸ್ಪತ್ರೆಯಲ್ಲಿದ್ದುದು ಒಂದು ವಾರ ; ಮನೆಯಲ್ಲಿ ಒಂದು ವಾರ. ಆನಂತರ ನಮಗೆ ಇಂಗ್ಲೆಂಡಿಗೆ ಹಿಂದಿರುಗಲು ಅನುಮತಿ ದೊರೆ ಯಿತು. ಭಾಸ್ ಮನೆಯಲ್ಲೇ ಒಳಗೆ ಹೊರಗೆ ತಿರುಗಾಡಿ ಕೈಕಾಲುಗಳಿಗೆ ಬಲಗೂಡಿಸಿಕೊಳ್ಳುತಿದ್ದ. ಮೊದಲು ದೆಹಲಿಗೆ ಹೋಗಿ ಅಲ್ಲಿ ಕೆಲದಿನಗಳಿದ್ದು ನಂತರ ಇಂಗ್ಲೆಂಡಿಗೆ ಹಿಂತಿರುಗುವ ಯೋಚನೆ. ಬಟ್ ಗಾಡ್ ಓನ್ಲೀ ಲೀಡ್ಸ್ ಅಜ್...!

ಭಾಸ್ ಮತ್ತು ಶಾಂತಿಪ್ರಸಾದ್ ಊಟದ ಮೇಜಿನ ಮುಂದೆ ಕುಳಿ ತಿದ್ದಾರೆ. ಇಬ್ಬರಿಗೂ ರಾತ್ರಿ ಅಲ್ಪಾಹಾರ. ಬ್ರೆಡ್ಡು, ಹಣ್ಣು, ಹಾಲು ಇಷ್ಟೇ. ಶಾಂತಿಪ್ರಸಾದ್ ಮೊದಲಿಂದಲೂ ಹಾಗೆಯೇ.

"ದೆಹಲಿಯಲ್ಲಿ ಕೆಲಸಕ್ಕಾಗಿ ಪ್ರಯತ್ನಿಸುವೆ. ಸಿಕ್ಕಿದರೆ ನಾನು ಅಲ್ಲೇ ನೆಲಸುವೆ."

"ಅದು ಒಳ್ಳೆಯದು" ಎಂದ ಶಾಂತಿಪ್ರಸಾದ್ ನನ್ನನ್ನು ಕೇಳಿದರು, "ನೀನು ಏನು ಹೇಳುತ್ತೀ ?"

"ಭಾಸ್ ಹೇಗೆಂದರೆ ಹಾಗೆ...ನನ್ನ ಸ್ವಂತಿಕೆ ಏನೇನೂ ಇಲ್ಲ. ಎಲ್ಲಾ ಅವನದೇ..."

ನನ್ನ ಉತ್ತರದಿಂದ ಸಂತುಷ್ಟರಾದ ಆವರು "ನಿನ್ನನ್ನು ನೋಡಿದರೆ ಪಾಶ್ಚಾತ್ಯಳಂತೆ ತೋರುವುದೇ ಇಲ್ಲ. ಎಲ್ಲರೊಂದಿಗೂ ಸರಿಯಾಗಿ ಹೊಂದಿ ಕೊಳ್ಳುತ್ತೀ. ನಮ್ಮ ಮಾವನವರು ಬದುಕಿದ್ದರೆ ನಿಜಕ್ಕೂ ನಿನ್ನ ಸ್ವಭಾವ ದಿಂದ ಸಂತೋಷಪಡುತಿದ್ದರೇನೋ. ದುರದೃಷ್ಟವಶಾತ್ ಉಳಿಯಲಿಲ್ಲ."

ಆ ಮಾತು ಕೇಳಿದಾಗ ನನ್ನ ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ಮೂಡಿತು ಕಣ್ಣೀರು. ಅದನ್ನು ತೋರಗೊಡದಿರಲು ಅತ್ತ ತಿರುಗಿ ಒರಿಸಿ ಕೊಂಡುದುದು ಅವರ ಕಣ್ಣಿಗೆ ಬೀಳದಿರಲಿಲ್ಲ. ಒಳಗಿಂದ ಬಂದ ಮಂಜುಳಾ "ಇದೇನಮ್ಮಾ? ಈಗ ಸಂತೋಷಪಡುವ ಕಾಲ...." ಎಂದಳು.

"ನಿನ್ನ ಮಾವ ಈವರೆಗೆ ಬದುಕಿದ್ದರೆ ನಿನ್ನನ್ನು ನೋಡಿ ಸಂತೋಷಪಡು ತಿದ್ದರು ಎಂದೆ, ಅದಕ್ಕಾಗಿ."

ಪತಿಯಿಂದ ವಿಷಯವನ್ನು ತಿಳಿದ ಮಂಜುಳಾ "ನಮಗೆ ಅದೃಷ್ಟವಿಲ್ಲ ಬಿಡು. ಅವರು ಇಷ್ಟು ದಿನ ನಮ್ಮೊಂದಿಗಿದ್ದಿದ್ದರೆ ನಿಜ ನಿಜವಾಗಿಯೂ ಸಂತೋಷಪಡುತಿದ್ದರು. ನಮಗೆ ಎಷ್ಟು ಭಾಗ್ಯವೊ ಅಷ್ಟೇ ಲಭ್ಯ."

ಅವಳ ಉತ್ತರ ಸಮಾಧಾನಕರವಾದರೂ ಮುಖಬಿಂಬ ಖಿನ್ನವಾಯಿತು.

ಶಾಂತಿಪ್ರಸಾದರೊಂದಿಗೆ ಭಾಸ್ ದಿನವೂ ಹೊರಹೋಗಿ ಬರುತ್ತಿದ್ದ. ತನ್ನ ಸ್ನೇಹಿತರು ನೆಂಟರಿಷ್ಟರುಗಳ ಮನೆಗೆ ನಮ್ಮೆಲ್ಲರೊಂದಿಗೆ ಸುತ್ತಾಡಿ ಬಂದ. ದೇವರದಯದಿಂದ ಹೃದಯಸ್ಥಿತಿ ಕೆಡಲಿಲ್ಲ. ಅನಂತರ ದೆಹಲಿಗೆ ಏರ್ ಟಿಕೆಟ್ ತಂದ. ನಾಡಿದ್ದು ಮಧ್ಯಾಹ್ನ ಇಲ್ಲಿಂದ ಪಯಣ. ಸುದ್ದಿಯನ್ನು ತಂಗಿ ಅಂಜನಾಗೂ ತಿಳಿಸಿದ. ಅಂದು ನಾನೂ ಮಂಜುಳಾ ಸಂತೋಷ ದಿಂದ ಕಾಲಹರಣ ಮಾಡಿದೆವು. ಮಗುವನ್ನು ಎತ್ತಿ ಮುದ್ದಾಡುತ್ತ "ಅಂದಿಂದಿಗೂ ನನ್ನೊಂದಿಗೆ ಹೊಂದಿಕೊಂಡಿದ್ದಾಳೆ. ಈಗ ಇವಳನ್ನು ಕಳು ಹಿಸುವುದೆಂದರೆ ತುಂಬಾ ಕಷ್ಟ. ಎರಡು ಮೂರು ದಿನಗಳಂತೂ ಬಲು ಬೇಸರ ವಾಗಬಹುದು. ನಾನು ಮನೆಯಲ್ಲಿ ಇರುವುದೇ ಇಲ್ಲ ಬಿಡು. ಯಜಮಾನರೊಂದಿಗೆ ಎಸ್ಟೇಟಿಗೆ ಹೋಗಿ ಕಾಲಹರಣ ಮಾಡುವೆ" ಎಂದಳು.

"ಸತ್ಯಭಾಮಳಿಲ್ಲದೆ ಇರುವುದು ನನಗೂ ಕಷ್ಟವೇ. ನಮಗೆ ತುಂಬಾ ಹೊಂದಿಕೊಂಡಿದ್ದಾಳೆ" ಎಂದಳು ಶಾಂತಲಾ, ಮುಖದಲ್ಲಿ ಬೇಸರವನ್ನು ಸೂಸಿ.

ಆ ಮಾತನ್ನು ಕೇಳಿ ನಾನೆಂದೆ "ನೀನೂ ನಮ್ಮ ಜೊತೆಗೆ ಬಂದುಬಿಡು. ನಿನ್ನ ಓದನ್ನು ನಾನು ನೋಡಿಕೊಳ್ಳುವೆ. ನಮ್ಮ ಮಗುವಿನೊಂದಿಗೆ ಆನಂದ ದಿಂದ ಕಾಲಹರಣ ಮಾಡಬಹುದು."

ಅವಳು ನಕ್ಕು ನುಡಿದಳು "ಅದು ಸರಿ ಹೋಗುವುದಿಲ್ಲ. ನಾನು ಇಲ್ಲಿ ಓದಿರುವುದು ಬೇರೆ. ಅಲ್ಲಿ ಓದುವುದು ಬೇರೆ. ಅದೆಲ್ಲಾ ಏಕೆ ತೊಂದರೆ? ನೀವು ಮಗುವನ್ನೇ ಇಲ್ಲಿ ಬಿಟ್ಟುಬಿಡಿ. ಅಮ್ಮ ನೋಡಿ ಕೊಳ್ಳುತ್ತಾರೆ. ನಾನೂ ನೋಡಿಕೊಳ್ಳುವೆ !"

"ಇದೀಗ ಸರಿ !" ಎಂದಳು ಮಂಜುಳಾ.

ಎಲ್ಲರ ಮುಖದಲ್ಲೂ ಎಳೆನಗುವಿನ ಲಹರಿ ಮಿನುಗಿತು.

ಭಾಸ್ ಯೋಚಿಸುತ್ತ ನುಡಿದ "ಆದಿನ ಏನಾಯಿತೆಂಬುದನ್ನು ನಾನು ನಿಮಗಾರಿಗೂ ಹೇಳಲಿಲ್ಲ... ನಾವು ಹಾಸಿಗೆ ಸೇರಿ ಸ್ವಲ್ಪಹೊತ್ತಿನವರೆಗೆ ನಿದ್ದೆ ಬರಲಿಲ್ಲ. ಅನಂತರ ಸ್ವಲ್ಪ ನಿದ್ದೆಯ ಜೊಂಪು ಹತ್ತಿತು. ಆಗ ಕನಸಿನಲ್ಲಿ ನಾನು ಅಪ್ಪನೊಂದಿಗೆ ಎಸ್ಟೇಟಿನೆಡೆಗೆ ನಡೆಯುತಿದ್ದೆ. ನಾವಿನ್ನೂ ಅದರ ಗೇಟಿನೆಡೆಗೆ ಹೋಗುವುದರೊಳಗೇ ಅವರು "ತಾಳು, ತಾಳು ! ಅವಸರಬೇಡ. ನಿನ್ನಷ್ಟು ಬಿರುಸಾಗಿ ನಾನು ಹೆಜ್ಜೆ ಹಾಕಲಾರೆ ?" ಎಂದರು. ಆದರೆ ನಾನು ಅವರ ಮಾತಿಗೆ ಲಕ್ಷ್ಯವಿಡದೆ ಮುಂದುವರಿಯುತ್ತಲೇ ಇದ್ದೆ ! ಅವರು ಮತ್ತೆ ಕೂಗಿದರು "ಭಾಸ್ ! ಭಾಸ್ !" ಎಂದು. ಆ ಧ್ವನಿ ಎಷ್ಟು ಸ್ಪಷ್ಟ ವಾಗಿ ಕೇಳಿಸಿತೆಂದರೆ ನನ್ನ ಕಿವಿಗಳನ್ನು ನಾನು ನಂಬಲಾರದೇ ಹೋದೆ. ಎದ್ದುಕುಳಿತು ಸುತ್ತಮುತ್ತಲೂ ನೋಡಿದೆ. ಬೆಡ್‌ಲೈಟಿನ ಸಣ್ಣ ಬೆಳಕಿನ ಧಾರೆಯಲ್ಲಿ ಮನುಷ್ಯರ ನೆರಳೊಂದು ಗೋಡೆಯಮೇಲೆ ತೇಲಿಹೋದಂತೆ ಕಂಡೆ. ಅದೆಲ್ಲಾ ನನ್ನ ಮನದ ಭ್ರಾಂತಿಯೇ ಇರಬಹುದು ಎನಿಸುತ್ತೆ ಈಗ. ಅಂದು ಅದೇ ಸಂಕಟದಲ್ಲಿ ಮನಸ್ಸು ತಳಮಳಿಸಿದಾಗಲೇ ನನಗೆ ಹೃದಯಾಘಾತ ವಾದುದು."

ಭಾಸ್ ಮುಖದಲ್ಲಿ ಮೂಡಿದ ಬೆವರಿನ ತುಂತುರುಗಳನ್ನು ಕರವಸ್ತ್ರದಿಂದ ಒರಿಸಿಕೊಳ್ಳುತ್ತ "ಕನಸು ನನ್ನ ಧೂರ್ತತನವನ್ನು ತೋರಿಸಿಕೊಟ್ಟಿತ್ತು ನನಗೆ. ಒಂದೊಂದು ಸಲ ಎಷ್ಟು ಪರಿಣಾಮಕಾರಿಯಾಗಿ ಕನಸುಗಳು ಬೀಳುತ್ತವೆ ? ಅದೇ ಆಶ್ಚರ್ಯ !"

"ನೀನು ಆ ಯೋಚನೆ ಮಾಡಿದ್ದಿರಬಹುದು ಆ ದಿನ" ಎಂದರು ಶಾಂತಿಪ್ರಸಾದ್.

"ನನ್ನ ಕನಸಿನಲ್ಲಿ ಎರಡು ದಿನ ಬಂದಿದ್ದರು ತಾತ ! ಎರಡು ದಿನವೂ ಇಲ್ಲೇ ಕುಳಿತು ಎಷ್ಟು ಮಾತಾಡಿದರು !" ಎಂದು ನೆನಸಿಕೊಂಡಳು ಶಾಂತಲಾ. ಮುಖ ಬಿಂಬದಲ್ಲಿ ದುಃಖದ ರಂಗೊರೆಯಿತು.

ಆ ಕೂಡಲೇ ಉಕ್ಕಿಬಂದ ಕಂಬನಿಯನ್ನು ಕರವಸ್ತ್ರದಿಂದ ತೀಡಿಕೊಂಡಳು ಶಾಂತಲಾ. ಅದುವರೆಗೂ ಅಲ್ಲಿಯೇ ಕುಳಿತುಕೊಂಡಿದ್ದ ಭಗವಾನ್ ಎಲ್ಲರ ಮಾತುಕತೆಯ ಭಾವಾರ್ಥವನ್ನು ಗಮನಿಸಿದರೂ ಸುಮ್ಮನೆ ಮ್ಯಾಗಜೈನಿನ ಚಿತ್ರಗಳಲ್ಲಿ ಕಣ್ಣಾಡಿಸುತಿದ್ದ. ಶಾಂತಿಪ್ರಸಾದ್ ಮಗಳಿಗೆಂದರು "ನಾವು ಹಗಲೆಲ್ಲ ಯೋಚಿಸುತ್ತಿರುವುದೇ ಕನಸಿಗೆ ಕಾರಣ. ಏನು ಮಾಡೋಣ ? ಯಾರೂ ಇಲ್ಲಿ ಶಾಶ್ವತವಲ್ಲ. ನಮಗೆ ದೇವರು ಎಷ್ಟು ಆಯುಸ್ಸು ಕೊಟ್ಟಿರುತ್ತಾನೋ ಅಷ್ಟೆ; ಅಷ್ಟರೊಳಗಾಗಿ ನಾವು ಏನೇನು ಮಾಡಬೇಕೋ ಅಷ್ಟನ್ನೂ ಮಾಡಿ ಮುಗಿಸಿದ್ದರೆ ಮಾತ್ರ ಧನ್ಯರು ! ಮುಖ್ಯವಾಗಿ ನಾವು ಅದನ್ನು ತಿಳಿದುಕೊಳ್ಳಬೇಕು."

ಆಗ ಯಾರೂ ಮಾತಾಡಲಿಲ್ಲವಾದರೂ 'ಹೌದು' ಎಂಬ ಭಾವ ಎಲ್ಲರ ಮುಖದಮೇಲೂ ತಾಂಡವವಾಡಿತು.

ಅದೇ ತಾನೇ ಸ್ನಾನಮುಗಿಸಿಕೊಂಡು ಬಂದ ಶ್ರೀವತ್ಸ ಮಗುವನ್ನು ಎದೆಗೊತ್ತಿಕೊಂಡು ನಲಿಯುತ್ತ, ನಕ್ಕು ನಗಿಸುತ್ತ, ನುಡಿದ "ನೀವು ಈ ಮಗುವನ್ನು ನಮಗೆ ಬಿಟ್ಟು ಹೋದರೆ ತುಂಬ ಉಪಕಾರ !"

ಅದಕ್ಕೆ ಭಾಸ್ "ಅವಳು ಸ್ವಲ್ಪ ದೊಡ್ಡವಳಾಗಲಿ, ಅನಂತರ ನಿನಗೇ ಕೊಟ್ಟು ಮದುವೆ ಮಾಡುವೆ !"

"ಓಹೋಹೋ ! ಅಮ್ಮನವರು ಪಟ್ಟಕ್ಕೆ ಬರುವಾಗ ಅಯ್ಯನವರು ಚಟ್ಟಕ್ಕೆ ! ಎಂಬ ಗಾದೆಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು ಬಿಡಿ !"

ಎಲ್ಲರೂ ನಕ್ಕುಬಿಟ್ಟರು. ಅವನೂ ತನ್ನ ದನಿಯನ್ನು ಹರಿಯಬಿಟ್ಟ. ಎಲ್ಲರ ನಗುವನ್ನು ಗಮನಿಸಿದ ಮಗು ಕಿಲಕಿಲನೆ ನಗತೊಡಗಿತು.

"ಈ ಕಾಲದಲ್ಲೇ ತಂದೆ ತಾಯಿಯರ ಮಾತು ನಡೆಯುವುದಿಲ್ಲ. ಇನ್ನು ಅವಳ ಕಾಲಕ್ಕೆ ಏನಾಗಬೇಡ ?"

ಶಾಂತಿಪ್ರಸಾದರ ಮಾತಿಗೆ ಮಂಜುಳ ನಗುತ್ತ "ಮುಂದೆ ನಾವು ಪುರಾಣಕಾಲಗಳಿಗೆ ಸರಿಯಬಹುದೇನೋ. ಯಾರಿಗೆ ಗೊತ್ತು ? ಹೇಗೂ ಕಾಲಚಕ್ರ ತಿರುಗುತ್ತಲೇ ಇರುತ್ತದೆ."

ಅಲ್ಲಿಗೆ ಆ ಪ್ರಸಂಗ ಮುಗಿಯಿತು.

ನಾನು ಶೇಷಮ್ಮ ಮತ್ತು ಕಮಲೆಗೆ ನನ್ನ ಸೀರೆಗಳನ್ನು ಕೊಟ್ಟಿದ್ದೆ. ಈದಿನ ಮಕ್ಕಳು ಮಂಜುಳಾ ನಾನು ಮತ್ತು ಭಾಸ್ ಶಾಪಿಂಗ್ ಸಲುವಾಗಿ ಅಂಗಡಿಯ ಸಾಲಿಗೆ ಹೋಗಿದ್ದು ಅವರೆಲ್ಲರಿಗೂ ಬೇಕುಬೇಕಾದ ಬಟ್ಟೆಬರೆಗಳನ್ನು ಕೊಂಡುಕೊಂಡೆ. ಯಾರೆಷ್ಟು ಬೇಡವೆಂದರೂ ಕೇಳಲಿಲ್ಲ. ಅಂಜನಾ ಮತ್ತು ಮಕ್ಕಳಿಗೆ ಬೇಕಾದ ಸೀರೆ ಬಟ್ಟೆಗಳನ್ನೂ ಕಮಲ ಮತ್ತು ಶೇಷಮ್ಮನಿಗೆ ಬೇಕಾದ ಸೀರೆಗಳನ್ನೂ ಮಂಜುಳೆಯೇ ಆರಿಸಿದಳು. ಎಲ್ಲಾ ಮುಗಿಸಿ ಮನೆಗೆ ಬಂದಾಗ ಮುಸ್ಸಂಜೆ ಕವಿಯುತಿತ್ತು.

ಮರುದಿನ ಮಧ್ಯಾಹ್ನ ನಮ್ಮ ಪಯಣ. ಬಟ್ಟೆ ಜೋಡಿಸಿ ಪೆಟ್ಟಿಗೆಗೆ ತುಂಬುವಾಗ ಶಾಂತಲಾ ನೆರವು ನೀಡಿದಳು. ಎಲ್ಲಾ ಜೋಡಿಸಿದ ಮೇಲೆ ನಾನು ಅವಳ ಕೈಯನ್ನು ಅದುಮಿಡಿದುಕೊಂಡು ಹೇಳಿದೆ "ಒಂದುವೇಳೆ ನಾವು ದೆಹಲಿಯಲ್ಲಿ ನೆಲಸಿದರೆ ನಿಮಗೆ ಹತ್ತಿರವೇ, ಹಾಗಿಲ್ಲವೇ ನಾವು ಲಂಡನ್ನಿ

ನೆಲ್ಲಿ ನೆಲಸಿದರೆ ನೀವೆಲ್ಲಾ ತಪ್ಪದೆ ಬಂದು ನಮ್ಮಲ್ಲಿ ಒಂದು ತಿಂಗಳಾದರೂ ಇದ್ದು ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕು."

"ಇಂಗ್ಲೆಂಡಿಗೆ ಬರುವುದೇನು ಸಾಮಾನ್ಯವೇ? ಅಷ್ಟು ಹಣವನ್ನು ಎಲ್ಲಿಂದ ತರುವುದು?"

"ಒಂದುವೇಳೆ ನಾವು ಏರ್ ಟಕೆಟ್ ಕಳುಹಿಸಿದರೆ?"

"ಅಷ್ಟು ಹಣವನ್ನು ನೀವಾದರೂ ಏಕೆ ವ್ಯರ್ಥಗೊಳಿಸಬೇಕು?"

"ಇದು ವ್ಯರ್ಥವೇ ಶಾಂತಲೇ?"

"ಅಲ್ಲದೆ ಮತ್ತೇನು? ಈಗ ಏಕೆ? ಯಾವಾಗಲಾದರೂ ಸಮಯಾನುಸಾರವಾಗಿ ಉಪಯೋಗಿಸೋಣ."

ಅವಳ ಸಮಯೋಚಿತ ಪರಿಜ್ಞಾನಕ್ಕೆ ತಲೆದೂಗಿದೆ. ಒಡನೆ ನನ್ನ ಚಿತ್ತ ಇಂಗ್ಲೆಂಡಿನ ಜನಜೀವನದಲ್ಲಿ ಸುಳಿದು ಸುತ್ತಿ ಅಲ್ಲಿಯ ಆಚಾರ-ವ್ಯವಹಾರಗಳನ್ನು ನೆನೆದು ಜುಗುಪ್ಸೆಗೊಂಡಿತು.

ಅವಳು ಹೇಳಿದಳು "ಇಂಗ್ಲೆಂಡಿಗೆ ಹೋದರೆ ನಮ್ಮನ್ನು ಮರೆತುಬಿಡುತ್ತೀರೋ ಏನೋ..."

ಆಗ ಅವಳ ಕೆನ್ನೆಯನ್ನು ಮುದ್ದಿಸಿ "ಅಯ್ಯೋ ಎಂದಾದರೂ ಉಂಟೇ? ನಿಮ್ಮ ನೆನಪು ಎಂದರೆ ರತ್ನ ದೀಪಗಳು ನನಗೆ!" ಎಂದು ಉದ್ಧರಿಸಿ ಪುನಃ ನುಡಿದೆ "ಮೈ ಚೈಲ್ಡ್! ನನ್ನನ್ನು ತಪ್ಪಾಗಿ ತಿಳಿದುಕೊಳ್ಳಬೇಡ. ನಿಮ್ಮ ಉಪಕಾರ ಸ್ಮರಣೆಯನ್ನು ದಿನವೂ ಮಾಡುವೆ. ನಿಮ್ಮಿಂದ ದೂರ ಹೋಗುತ್ತಿದ್ದೇನೆ ಎಂಬುದೇ ನನಗೆ ಬೇಸರ..."

ಮಾತು ಮುಗಿಯುವುದರೊಳಗಾಗಿ ಗಂಟಲು ಗದ್ಗದವಾಯಿತು.

ಆ ವೇಳೆಗೆ ಭಾಸ್ ಒಳಹೆಜ್ಜೆಯಿಟ್ಟ. ಎದೆಯಮೇಲೆ ಎತ್ತಿಕೊಂಡಿದ್ದ ಮಗು ಶಾಂತಲೆಯ ಕಡೆಗೆ ಕೈಚಾಚಿತು. ಅವಳು ಅದನ್ನು ಎತ್ತಿಕೊಂಡು ಲಲ್ಲೆಗೈಯ ಹತ್ತಿದಳು. ಅದಕ್ಕೆ ಕಣ್ಣುಗಳಿಗೆ ನಿದ್ದೆಯ ಜೊಂಪು ಹತ್ತಿದ್ದರೂ ಅವಳ ಲಲ್ಲೆಯಿಂದ ನಕ್ಕುನಲಿಯುತಿತ್ತು.

ಅಂದು ರಾತ್ರಿ ಎಲ್ಲರೂ ಮಲಗಿದ್ದು ಬಹಳ ಹೊತ್ತಿನ ಮೇಲೆ. ಮಾತುಕತೆಯಲ್ಲಿ ಹೊತ್ತು ಸರಾಗವಾಗಿ ಉರುಳಿಹೋಯಿತು. ಮರುದಿನ ಮೂಡಣದಲ್ಲಿ ಮುಂಬೆಳಗು ಮೂಡಿದಾಗ ಮನಃಪ್ರಾಣಗಳು ಉಲ್ಲಾಸಪೂರ್ಣವಾಗಿದ್ದುವು. ಅರ್ಧದಿನ ಎಂಬುದು ಕೈಗೆಟುಕದೆಲೇ ಉರುಳಿಹೋಯಿತು. ನಾವು ಊಟದನಂತರ ವಿಮಾನ ನಿಲ್ದಾಣಕ್ಕೆ ಹೊರಟುದುದು ಒಂದೂವರೆ ಗಂಟೆಗೆ ಸರಿಯಾಗಿ. ಬೆಳಿಗ್ಗೆ ಶ್ರೀವತ್ಸ ಮತ್ತು ಶಾಂತಲಾ ಶಾಲೆಗೆ ಹೊರಟಾಗಲೇ ಅವರಿಗೆ ನಾವು 'ಬೈಬೈ' ಹೇಳಿದ್ದಾಗಿತ್ತು. ಶಾಂತಿಪ್ರಸಾದ್ ಮತ್ತು ಮಂಜುಳೆಯರು ನಿಲ್ದಾಣಕ್ಕೆ ಬಂದಿದ್ದರು. ಪ್ಲೇನ್ ಹತ್ತುವ ಸಮಯದಲ್ಲಿ ನಮಗೆ ನಿಜವಾಗಿಯೂ ಗಂಟಲು ಗದ್ಗದವಾಯಿತು. ಮಂಜುಳಾ ಮಗುವನ್ನು ಮುದ್ದಿಸಿ ನನ್ನ ಕೈಗೆ ನೀಡಿದಳು. ನಾನು ಆತ್ಮೀಯ ಆಲಿಂಗನ ನೀಡಿದೆ. ಭಾಸ್ ಶಾಂತಿಪ್ರಸಾದರಿಗೂ ಮಂಜುಳೆಗೂ ಅಲಿಂಗನ ನೀಡಿದ. ಪ್ರಯಾಣಿಕರಿಗೆ ಹೊರಡಲು ಸೂಚನೆ ಕೊಟ್ಟಿತು ಲೌಡ್‌ಸ್ಪೀಕರ್. ನಾವು ಹೊರಟೆವು ಇತರ ಪ್ರಯಾಣಿಕರೊಂದುಗೂಡಿ.

ವಿಮಾನಯಾನ ಕೊನೆಗೊಂಡಾಗ ಸಾಯಂಸೊಂಪು ಹರಡಿತ್ತು ಇಳೆಯ ಮೇಲೆ.

o o o o

ಭಾರತದೇಶದ ಸುಂದರ ರಾಜಧಾನಿ, ದೆಹಲಿನಗರ.

ಹಸುರಿನ ಕಂಪುಗುವ ತಾಣದಲ್ಲಿ ತಳವೂರಿದ ಗೆಸ್ಟ್‌ಹೌಸ್, ಉದ್ದಗಲಕ್ಕೂ ಹರೆಗೈಚಾಚಿದ ಮಹಾಭವನ.

ಅಲ್ಲಿ ಬಿಡಾರಹೂಡಿದೊಡನೆಯೇ ಭಾಸ್ ಅಂಜನಾಗೆ ರಿಂಗ್ ಮಾಡಿದ. ಅವಳು ಆ ಕಡೆಯಿಂದ ಕೇಳಿದಳು,

"ಹೇಗಿದ್ದೀ ಈಗ ?"

"ಏನೂ ತೊಂದರೆಯಿಲ್ಲ. ಇನ್ನು ಅರ್ಧಗಂಟೆಯೊಳಗಾಗಿ ಅಲ್ಲಿಗೆ ಬರುವೆ.

"ಆಗಲಿ."

ಭಾಸ್ ಗೆಸ್ಟ್‌ಹೌಸಿನ ಕಾರನ್ನು ತರಿಸಿದ. ನಾವು ಅವಳ ಮನೆಯನ್ನು ಮುಟ್ಟಿದಾಗ ದಂಪತಿಗಳು ವರಾಂಡದಲ್ಲಿ ಕುಳಿತಿದ್ದರು. ಮಕ್ಕಳು ವರಾಂಡ ದಲ್ಲಿ ಆಡುತಿದ್ದರು. ಅವರಿಗೆ ಮಗುವಿನ ಮೇಲೆ ಎಲ್ಲಿಲ್ಲದ ಆಕರ. ಕಾರು ಬರುವುದನ್ನೇ ಕಾಯುತಿದ್ದು ನಾವು ಕಾರಿಂದ ಇಳಿದೊಡನೆಯೇ ಮಗುವಿಗೆ ಕೈಚಾಚಿದರು.

"ನಿಮ್ಮ ಕೈಯಲ್ಲಿ ಎತ್ತುವುದಕ್ಕೆ ಆಗುವುದಿಲ್ಲ; ಬೇಡ" ಎಂದು ಅಂಜನಾ ಹೇಳಿದರೂ ಕೇಳಲಿಲ್ಲ ಆ ಮಕ್ಕಳು. ಅಂಜನಾ ತಾನೇ ಎತ್ತಿಕೊಳ್ಳುತ್ತ "ಒಳಗೆ ಬನ್ನಿ. ಸೋಫಾದ ಮೇಲೆ ಮಲಗಿಸುವೆ. ಅಲ್ಲೇ ಆಡಬಹುದು. ಇಷ್ಟೇಕೆ ಅವಸರ ?" ಎಂದು ಮಗುವನ್ನು ಒಳಗೆ ಕರೆದೊಯ್ದು ಸೋಫಾದ ಮೇಲೆ ಮಲಗಿಸಿದಳು. ಮಕ್ಕಳಿಬ್ಬರೂ ಅದರ ಬಳಿಯಲ್ಲಿ ಕುಳಿತು ಲಲ್ಲೆ ಗೈಯುತಿದ್ದರೆ ಅಂಜನಾಗೆ ಅವರ ಮೇಲೆಯೇ ಕಣ್ಣು, ಎಲ್ಲಿ ಮಗುವಿಗೆ ತೊಂದರೆ ಮಾಡುತ್ತಾರೋ ಎಂದು.

"ನಿನಗೆ ಗೆಸ್ಟ್‌ಹೌಸ್ ಊಟ ಆರೋಗ್ಯಕ್ಕೆ ತೊಂದರೆಕೊಡಬಹುದು. ಇಲ್ಲೇ ಊಟ ಮಾಡಿದರೆ ಒಳ್ಳೆಯದು. ಏನು ಹೇಳುತ್ತಿ ?" ಎಂದರು ರಾಘವ.

"ಆಗಲಿ, ಅದಕ್ಕೇನಂತೆ ?"

ಭಾಸ್ ಉತ್ತರದಿಂದ ಸಂತುಷ್ಟಳಾದಳು ಅಂಜನಾ. ಅವಳು ನನ್ನ ಕಡೆ ನೋಡುತ್ತ "ನನ್ನ ಮನೆ ಚಿಕ್ಕದು. ನಿನಗೆ ಸಂಕೋಚವೆನಿಸದಿದ್ದರೆ ಗೆಸ್ಟ್‌ಹೌಸ್ ಖಾಲಿ ಮಾಡಿ ಇಲ್ಲಿಗೇ ಬಂದುಬಿಡಿ. ಮೊನ್ನೆ ತಾನೇ ಖಾಯಿಲೆ ಯಿಂದ ಎದ್ದ ಜೀವಕ್ಕೆ ಮನೆಯೂಟ ಒಳ್ಳೆಯದು."

ನನಗೆ ಅಷ್ಟೆಂದುದೇ ಸಾಕಾಗಿತ್ತು. ಆಕ್ಷಣವೇ ನಾನು ನುಡಿದೆ "ಮನೆ ಚಿಕ್ಕದಾದರೆ ತೊಂದರೆಯಿಲ್ಲ. ನೀವಿರುವಾಗ ನಮಗಾಗದೇ ?"

"ಇದೋ ಈ ಕೊಠಡಿ ನೋಡು ; ಈ ಕಿಷ್ಕಿಂದೆ ಹಿಡಿಸುವುದಾದರೆ ಸರಿಯೆ."

ನಾನು ಅವಳೊಂದಿಗೆ ಹೋದೆ. ಕೊಠಡಿಯಲ್ಲಿ ಎರಡೂ ಬದಿಗೆ ಎರಡು ಮಂಚ. ಮಧ್ಯೆ ಓಡಾಡುವಷ್ಟು ಮಾತ್ರ ಸ್ಥಳ. ಗೋಡೆಯ ಮಗ್ಗುಲಿಗೆ ಒಂದು ಡ್ರೆಸ್ಸಿಂಗ್ ಟೇಬಲ್. ಎರಡೂ ಕೊಠಡಿಗಳಿಗೆ ಸೇರಿದ ಒಂದು ಬಾತ್ ರೂಂ. ಭಾಸ್ ಹಿಂದೆಯೇ ಎದ್ದು ಬಂದು ನೋಡಿ "ಓ ಸಾಕು ! ಮಂಜುಳ ಹತ್ತು ಬಾರಿ ಹೇಳಿದ್ದಾಳೆ, ಗೆಸ್ಟ್‌ಹೌಸ್ ಊಟ ತುಂಬ ಎಣ್ಣೆತುಪ್ಪಗಳಿಂದ ಕೂಡಿರುತ್ತೆ. ಅಂಜನಾ ಮನೆಯಲ್ಲಿ ಊಟ ಮಾಡು ಎಂದು," ಸ್ವಲ್ಪ ಯೋಚಿಸಿ ಪುನಃ ಅಂದ "ಈರಾತ್ರಿ ಒಂದಿನ ಅಲ್ಲಿ ತಂಗಿದ್ದು ನಾಳೆ ಇಲ್ಲಿಗೆ ಬರುವೆ. ಹೇಗೂ ಕೊಠಡಿ ಹಿಡಿದಾಗಿದೆ. ಈಗಲೇ ಬಿಡುವುದು ಚೆನ್ನಲ್ಲ. ಏನಾದರೂ ಲಘು ಊಟ ಕೊಡು. ಹೋಗಿ ಅಲ್ಲಿ ಚೆನ್ನಾಗಿ ನಿದ್ದೆ ಮಾಡುವೆ."

ಅನಂತರ ಅಲ್ಲಿ ಲಘು ಊಟ ಮುಗಿಸಿ ಸ್ವಲ್ಪಹೊತ್ತಿದ್ದು ಗೆಸ್ಟ್‌ಹೌಸಿಗೆ ಹಿಂದಿರುಗಿದಾಗ ಗೆಸ್ಟ್‌ಹೌಸ್ ತುಂಬ ಉಜ್ವಲವಾದ ದೀಪಗಳು ಜಗಜಗಿಸು ತಿದ್ದುವು. ಮಗು ಕೈಯಲ್ಲೇ ನಿದ್ದೆ ಮಾಡಿದ್ದಳು ಅವಳನ್ನು ಮಲಗಿಸಿ ವರಾಂಡದಲ್ಲಿ ರಾತ್ರಿಯಗಾಳಿಗೆ ಮೈಯೊಡ್ಡಿ ಕುಳಿತುಕೊಂಡಾಗ ಭಾಸ್ ಅಂದ "ಮೂರು ವಾರ ರಜೆ ತೆಗೆದುಕೊಂಡದ್ದು ಮೂರು ತಿಂಗಳು ಉಳಿಯುವಂತಾ ಯಿತು. ದೈವೇಚ್ಛೆ !"

"ದೇವರು ಇಷ್ಟಾದರೂ ದಯೆತೋರಿದನಲ್ಲ ಅದೇ ನಮ್ಮ ಭಾಗ್ಯ. ಅದಕ್ಕಾಗಿ ನಾವು ಎಷ್ಟು ಋಣಿಗಳಾಗಿದ್ದರೂ ಸಾಲದು."

"ಹೌದು, ದೇವರು ದೊಡ್ಡವನು."

ಮರುದಿನ ಭಾಸ್ ನನ್ನನ್ನು ಅಂಜನಾ ಮನೆಯಲ್ಲಿ ಬಿಟ್ಟು ತಾನು ವಿಜ್ಞಾನ ಕ್ಷೇತ್ರದ ಡೈರೆಕ್ಟರ್ ಮಲ್ಹೋತ್ರರವರನ್ನು ನೋಡಲು ಹೋದ. ಅಲ್ಲಿಯ ಹುದ್ದೆ ಇನ್ನೂ ಖಾಲಿಯಾಗಿದ್ದುದು ಸುದೈವ. ಅವನು ಅವರ ಭೇಟಿಯನ್ನು ಮುಗಿಸಿ ಬಂದಾಗ ಎರಡುಗಂಟೆ. ಪುನಃ ನಾಲ್ಕು ಗಂಟೆಯ

ಬಳಿಕ ಹೋಗಿ ಅಲ್ಲಿನ ಒಪ್ಪಂದಕ್ಕೆ ಸಹಿಹಾಕಿ ಕೆಲಸವನ್ನು ಒಪ್ಪಿಕೊಂಡು ಬರುವ ಹೊತ್ತಿಗೆ ಸೂರ್ಯ ಪಡುವಣಂಚಿಗೆ ಇಳಿಯುತಿದ್ದ. ಇನ್ನು ನಮಗೆ ವಾಸಕ್ಕೆ ನೆಲೆಯನ್ನು ನೋಡುವುದೊಂದು ಬಾಕಿ. ಉನ್ನತ ಅಧಿಕಾರಿಗಳಿಗಾಗಿ ವಿಾಸಲಾದ ಗೃಹಗಳ ಸಾಲಿನಲ್ಲಿ ಕಟ್ಟುತ್ತಿರುವ ಮನೆಯೊಂದು ಸಧ್ಯ ಮುಗಿಯುವ ಹಂತದಲ್ಲಿದೆಯಾಗಿ ತಿಳಿಯಿತು. ಅದನ್ನು ನೋಡಿ ಬರುವ ಉದ್ದೇಶದಿಂದ ಭಾಸ್ ನನ್ನನ್ನೂ ಅಂಜನಾಳನ್ನೂ ಅಲ್ಲಿಗೆ ಕರೆದೊಯ್ದ. ಮೈಲಿಯಷ್ಟು ಉದ್ದದ ನೇರ ರಸ್ತೆ. ಎರಡೂ ಕಡೆಗಳಲ್ಲಿ ಕಟ್ಟಿದ ಹೊಸ ಮನೆಗಳು. ಎಲ್ಲಾ ಮನೆಗಳಲ್ಲೂ ಆಗಲೇ ಆಫೀಸರುಗಳು ವಾಸವಾಗಿದ್ದಾರೆ. ಕಾಲೋನಿ ಸುಂದರವಾಗಿ ಕಂಗೊಳಿಸುತ್ತಿದೆ. ನನಗದನ್ನು ನೋಡಿದಾಗ ಅಲ್ಲಿ ವಾಸಮಾಡುವವರು ಧನ್ಯರು ಎನಿಸಿತು. ಕಟ್ಟುತ್ತಿರುವ ಮನೆ ಮುಗಿಯಬೇಕಾದರೆ ಇನ್ನೂ ಒಂದೆರಡು ತಿಂಗಳೇ ಬೇಕಾಗಬಹುದು. ಅದರ ಮಾಟವೂ ಅಚ್ಚುಕಟ್ಟಾಗಿತ್ತು. ಭಾಸ್ ಅದು ಆಗಬಹುದು ಎಂದು ಒಪ್ಪಿಕೊಂಡು ಆದಷ್ಟು ಜಾಗ್ರತೆ ಮುಗಿಸಿಕೊಡಬೇಕೆಂದು ಅಲ್ಲಿಯ ಕಂಟ್ರಾಕ್ಟರಿಗೆ ಹೇಳಿದ. ಮುಂಭಾಗದಲ್ಲಿ ಸಣ್ಣ ಉದ್ಯಾನ ಬೆಳಸುವಷ್ಟು ಸ್ಥಳವಿತ್ತು. ಅಂಜನಾ ಮನೆಯನ್ನು ಒಂದು ಸುತ್ತು ಹಾಕಿ ಸಂಪ್ರೀತಳಾಗಿ ಅಂದಳು,

"ಇದು ಮೇಲಧಿಕಾರಿಗಳಿಗೇ ವಿಾಸಲು. ನಮ್ಮಂತಹವರಿಗೆ ಸಿಕ್ಕುವ ನೆಲೆಯಲ್ಲ ಬಿಡು; ಈ ಕಾಲೋನಿಯಲ್ಲಿರುವವರೆಲ್ಲಾ ಪ್ರಾಧಿಕಾರಿಗಳೇ. ನಿನಗೆ ಸ್ನೇಹಕೂಟಕ್ಕೆ ಅನುಕೂಲ."

ಭಾಸ್ ಮನೆಯಿಂದ ಹೊರಬರುತ್ತ "ಎಲ್ಲಾ ದೃಷ್ಟಿಯಿಂದಲೂ ಅನುಕೂಲ. ಇದು ಸಿಕ್ಕಿದ್ದು ಪುಣ್ಯ."

ಮರುದಿನವೇ ಇಂಗ್ಲೆಂಡಿಗೆ ನಮ್ಮ ಪಯಣ. ನಿಲ್ದಾಣಕ್ಕೆ ನೀವು ಬರಬೇಕಾಗಿಲ್ಲವೆಂದು ಎಷ್ಟೆಷ್ಟು ಹೇಳಿಕೊಂಡರೂ ಅಂಜನಾ ಮತ್ತು ರಾಘವರೂ ಹೊರಟರು. ನನ್ನ ಮನದಲ್ಲಿ ಸಂತೋಷ-ಸಂಕೋಚಗಳೆರಡೂ ಏಕಕಾಲದಲ್ಲಿ ಮೂಡಿದುವು. ಹೇಗೆ ಕೃತಜ್ಞತೆಯನ್ನು ಸಲ್ಲಿಸಬೇಕೋ ತಿಳಿಯಲಿಲ್ಲ. ಮೌನಶಾಂತಿ–ಸಂತೋಷಗಳಿಂದ ನೆಟ್ಟಕಣ್ಣಾಗಿ ದಂಪತಿಗಳನ್ನು ನೋಡಿದ.

ಬೆಳಿಗ್ಗೆ ಮಕ್ಕಳು ಸ್ಕೂಲಿಗೆ ಹೋಗುವಾಗ ಅವರ ಮುಖ ಖಿನ್ನವಾಗಿತ್ತು. ತಾವು ಹಿಂದಿರುಗಿ ಬರುವಾಗ ಮನೆಯಲ್ಲಿ ಮಗುವಿರುವುದಿಲ್ಲ ಎಂದು. ನಾನವರನ್ನು ಮುದ್ದಿಟ್ಟು ಸಂತೈಸಿ ಆಗಲೇ ಟಾಟಾ ! ಹೇಳಿದ್ದೆ.

ಇನ್ನೇನು ವಿಮಾನ ಹೊರಡುವ ಸಮಯ.

ನಾವು ಅವರಿಬ್ಬರಿಗೂ ಆತ್ಮೀಯ ಆಲಿಂಗನ ನೀಡಿ ಹೊರಟಾಗ ಹಾದಿಯು ತುಂಬೆಲ್ಲಾ ಜನಮಯವಾಗಿತ್ತು. ವಿಮಾನ ಹೊರಡುವವರೆಗೂ ಕಾದುನಿಂತು ನೋಡುತಿದ್ದ ಅಂಜನಾ–ರಾಘವಾರವರ ಕಡೆ ಕೈಯಾಡಿಸುತ್ತಿರುವಾಗಲೇ ವಿಮಾನ ಗಗನವನ್ನೇರಿ ಮಾರ್ಗಮುಖಿಯಾದಾಗ ಭಾಸ್ ಅಂದ "ನಮ್ಮ ನಾಡು ಎಷ್ಟು ಪುರಾತನವಾದುದೋ ಅಷ್ಟೇ ಪುರಾತತ್ವಗಳನ್ನು ಹೊಂದಿದೆ. ಅದನ್ನು ಕೂಲಂಕುಶವಾಗಿ ಪರಿಶೀಲಿಸಿದ ಹೊರತು ತಿಳಿಯುವುದಿಲ್ಲ."

ನಾನು ಮಾತಾಡದೆ ಸಮ್ಮತಿ ಸೂಚಿಸುವಂತೆ ತಲೆಯಾಡಿಸಿದೆ.

ಅವನು ಮುಂದುವರಿದ 'ನೋಡು, ಭಾರತ ವರ್ಷ ಅತ್ಯಂತ ವಿಶಾಲವಾದ ದೇಶ. ವೇದ ಕಾಲದಿಂದ ಪ್ರಸಿದ್ಧಿಯಾದುದು. ಅಂದಿಂದಿಗೂ ಈ ಪುಣ್ಯಭೂಮಿಯಲ್ಲಿ ಎಷ್ಟೆಷ್ಟು ಮಹಾಪುರುಷರು ಆಗಿ ಹೋಗಿದ್ದಾರೆ ? ಅವರು ನಮಗೆ ಬಿಟ್ಟು ಹೋಗಿರುವ ಮಹಾ ವಿಪುಲ ಸಂಪತ್ತು ತತ್ವಮೀಮಾಂಸೆಯಿಂದ ಕೂಡಿದ ಮಹದ್ಗ್ರಂಥಗಳ ರಾಶಿ ರಾಶಿ ! ನಮಗೆ ಏನು ಹೇಳಿದ್ದಾರೆ, ಏನು ಬಿಟ್ಟಿದ್ದಾರೆ ಎಂಬುದನ್ನು ಮನನ ಮಾಡಿಯೇ ತಿಳಿಯಬೇಕು. ಒಂದೊಂದೂ ಅಮೂಲ್ಯವಾದ ಗ್ರಂಥ ! ನಮ್ಮ ಜನಕ್ಕೆ ಅದನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವೇ ಇಲ್ಲ ಜಾನಕೀ ! ಅಂತಲೇ ನಮ್ಮ ಜನ ಇನ್ನೂ ಕುಂಟುತಿದ್ದಾರೆ. ಅದಕ್ಕೇ ಅನ್ನುವುದು "ನಮಗೆ ಎಷ್ಟು ಭಾಗ್ಯವೋ ಅಷ್ಟೇ ಲಭ್ಯ !" ಎಂದು.

ನಾನು ವಿಚಾರ ಪರವಶಳಾಗಿದ್ದೆ; ಏನೂ ಹೇಳಲಿಲ್ಲ.

o o o o

ಬೆಳಿಗ್ಗೆ ಒಂಭತ್ತು ಗಂಟೆಗೆ ಆಫೀಸಿಗೆ ಹೋದಾಗ ಭಾಸ್ ತನ್ನ ಗೆಳೆಯರನ್ನು ಭೇಟಿ ಮಾಡಲು ಮಹಡಿ ಹತ್ತಿದ. ನಾನು ನನ್ನ ಗೆಳತಿಯರ ಬಳಿಗೆ ಹೋದೆ. ಮೇರಿ ಸೋಫಿ ಒಟ್ಟಿಗೇ ಕುಳಿತಿದ್ದರು. ಪರಸ್ಪರ ದರ್ಶನವಾಗುತ್ತಲೂ ಮುಖಬಿಂಬಗಳು ಅರಳಿ ಹೂವಾದುವು. ಸೋಫಿ ಆಸಕ್ತಿಯಿಂದ ಕೇಳಿದಳು,

"ಏನಮ್ಮಾ, ತುಂಬ ತೊಂದರೆಯಾಯಿತಂತೆ ?"

"ಹೌದು. ಮೂರು ತಿಂಗಳು ಎಂಬುದು ಖಡ್ಗದಲುಗಿನಮೇಲೆ ನಡೆದಂತೆಯೇ ಕಳೆಯಿತು. " ಎಂದು ನಡೆದುದೆಲ್ಲವನ್ನೂ ವಿವರಿಸಿದನಂತರ ಪುನಃ ಮುಂದುವರಿದೆ "ಭಾಸ್‌ಗೆ ದೆಹಲಿಯಲ್ಲಿ ಉನ್ನತ ಹುದ್ದೆ ದೊರಕಿದೆ. ನನಗೂ ಆ ಕೆಲಸ ತುಂಬಾ ಹಿಡಿಸಿದೆ."

ಆಗ ಅವರಿಬ್ಬರೂ ನನ್ನ ಕೈಕುಲುಕಿ ಆತ್ಮೀಯವಾಗಿ ಅಭಿನಂದಿಸಿದನಂತರ ಮೇರಿ ಹೇಳಿದಳು,

"ನಿನ್ನ ತಾಯಿ ತುಂಬ ಅಸ್ವಸ್ಥಳಾಗಿ ಕೆಲವು ದಿನ ಆಸ್ಪತ್ರೆಯಲ್ಲಿದ್ದು ಇದೀಗಷ್ಟೆ ಮನೆಗೆ ಹಿಂದಿರುಗಿದ್ದಾಳಂತೆ. ಇನ್ನೂ ಬಹಳ ನಿಶ್ಯಕ್ತಿ. ಓಡಾಡಲು ತ್ರಾಣವಿಲ್ಲ ಎಂದಳು ಬೆಮೆಲ್."

"ಓ, ಹಾಗೋ ? ಬೆಮೆಲ್ ಎಲ್ಲಿ ಸಿಕ್ಕಿದ್ದಳು ? ಇದು ಯಾವಾಗಿನ ವಾರ್ತೆ ?"

"ಬೆಮೆಲ್ ಸಿಕ್ಕಿ ಐದಾರು ದಿನಗಳಾದುವು. ಅನಂತರ ಹೇಗಿದ್ದಾಳೋ ತಿಳಿಯದು."

"ಹಾಗಾದರೆ, ಇಂದೇ ಅವಳನ್ನು ನೋಡುವೆ. "

ಅನಂತರ ನಮ್ಮ ಅಂದಿಂದಿನ ಕಷ್ಟಸುಖಗಳೆಷ್ಟೋ ಅಲ್ಲಿ ಕರಗಿದುವು. ಭಾಸ್ ಮೇಲಿಂದ ಕೆಳಗೆ ಇಳಿದು ಬರಬೇಕಾದರೆ ಒಂದುಗಂಟೆಯನ್ನೇ ತೆಗೆದುಕೊಂಡನೇನೋ. ನಾವು ಅಲ್ಲಿ ಬರೀ ಔಪಚಾರಿಕವಾಗಿ ಮಾತಾಡಿದೆವೇ ಹೊರತು ರಾಜೀನಾಮೆ ಕೊಡುವುದಾಗಲೀ ಅಥವಾ ನಮಗೆ ಬರಬೇಕಾದ

ಹಣವನ್ನಾಗಲೀ ಕುರಿತು ಮಾತಾಡಲಿಲ್ಲ. ಅದಕ್ಕೇ ಇನ್ನೊಮ್ಮೆ ಬರುವುದಾಗಿ ಹೇಳಿ ಹೊರಟನಂತರ ಕಾರು ಸ್ಟಾರ್ಟ್ ಮಾಡುವ ಮುನ್ನ ನಾನು ಭಾಸ್‌ನನ್ನು ಕುರಿತು ಹೇಳಿದೆ.

"ಮಮ್ಮಿ ತೀವ್ರ ಅಸ್ವಸ್ಥತೆಯಿಂದ ಕೆಲವು ದಿನ ಆಸ್ಪತ್ರೆಯಲ್ಲಿದ್ದು ಈಚೆಗೆ ಮನೆಗೆ ಬಂದಿದ್ದಾಳಂತೆ. ಒಮ್ಮೆ ಹೋಗಿ ನೋಡಿ ಬರ ಬೇಕಾಗಿತ್ತು."

"ಹಾಗೇನು...?" ಭಾಸ್ ಆತಂಕದಿಂದ ಕೇಳಿದ.

"ಹೌದಂತೆ, ಈಗಷ್ಟೆ ಮೇರಿ ಹೇಳಿದಳು."

"ಯಾರಿದ್ದಾರೆ, ಅಲ್ಲಿ ಅವಳನ್ನು ನೋಡಿಕೊಳ್ಳುವುದಕ್ಕೆ ?"

"ಗೊತ್ತಿಲ್ಲ...ಹೋಗಿ ನೋಡಬೇಕು."

"ಈ ದೇಶದಲ್ಲಿ ತಾಯಿತಂದೆಯರಿಗೆ ಮರುಗುವ ಮಕ್ಕಳಿದ್ದಾರೆಯೇ ?" ದಯಾಪೂರ್ಣವಾದ ದನಿಯಲ್ಲಿ ಹರಿದುಬಂತು ಪ್ರಶ್ನೆ; ನನ್ನ ಮನಸ್ಸು ಕರಗುವಂತೆ.

"ವಾಸ್ತವ್ಯ....ಬೆಮೆಲ್ ಹತ್ತಿರದಲ್ಲಿದ್ದಾಳಂತೆ. ಅವಳೇನಾದರೂ ನೋಡಿ ಕೊಂಡಿದ್ದಾಳೇನೋ. ಎಲ್ಲರಿಗೂ ಅವರವರದ್ದೇ ಭಾರ ! ಎಲ್ಲೆಲ್ಲೋ ಕೆಲಸ ಮಾಡುತ್ತಿರುತ್ತಾರೆ. ನಿತ್ಯವೂ ಹೋಗುವುದೆಂದರೆ ಕಷ್ಟವೇ." ಭಾರವಾದ ದನಿಯಲ್ಲಿ ನುಡಿಯಲಾರದೆ ನುಡಿದೆ.

"ಕಾರನ್ನು ಅತ್ತ ನಡೆಸಲೇ ? ಅಥವಾ...."

"ಮೊದಲು ಮಗುವನ್ನು ಕರೆದುಕೊಳ್ಳುವೆ. ಅಲ್ಲಿಂದ ಕ್ರಿಸ್ಟೋಫರ್ ಸರ್ಕಲ್ ಬಳಿಗೆ ಹೋದರೆ ಹತ್ತಿರ. ದಾರಿಯಲ್ಲಿ ಮಗುವಿಗೆ ಹಾಲು ಬ್ರೆಡ್ಡು ತೆಗೆದುಕೊಳ್ಳಬೇಕು. ಹಾಗೇ ನಾವು ಚಹಾವನ್ನೂ ಮುಗಿಸಿದರಾಯಿತು. ಹೊತ್ತು ಮೀರುತ್ತಿದೆ. ಇನ್ನು ಮನೆಗೆ ಹೋಗಿಬರುವುದು ಸಾಧ್ಯವಿಲ್ಲ."

ಆ ಮಾತಿಗೆ ಭಾಸ್ ಒಪ್ಪಿದ. ಕಾರು ಸಾಕುತಾಯಿಯ ಮನೆಯ ಕಡೆ ತಿರುಗಿತು. ನಾನು ಒಳಹೋಗಿ ಮಗುವನ್ನು ಕರೆತಂದೆ. ಅದಕ್ಕೆ ನಮ್ಮನ್ನು ನೋಡಿ ಏನು ಆನಂದವೋ. ಬಾಯಿತುಂಬ ಕಿಲಕಿಲನೆ ನಗಹತ್ತಿತು. ನಾವು ಒಂದು ರೆಸ್ಟೋರೆಂಟಿನಲ್ಲಿ ಚಹಾಪಾನ ಮಾಡಿದ ನಂತರ ಅಲ್ಲಿಂದ ನನ್ನ ತಾಯಿಯ ಮನೆಗೆ ಕಾರನ್ನು ನಡೆಸಿದ ಭಾಸ್. ಮನೆಯ ಮುಂಬಾಗಿಲು ಮುಚ್ಚಿತ್ತು. ಕಾರಿಗೆ ಬ್ರೇಕ್ ಹಾಕಿದ ಕೂಡಲೇ ನನಗೆ ಅವನನ್ನು ಒಳಗೆ ಕರೆಯಬೇಕೋ ಬೇಡವೋ ಎಂಬ ಸಮಸ್ಯೆಗಿಟ್ಟುಕೊಂಡಿತು. ಒಳಗೆ ಕರೆದು ತಾಯಿ ತಿರಸ್ಕರಿಸಿದರೇನು ಗತಿ ? ಎಂಬ ಚಿಂತೆ ತಲೆಯಲ್ಲಿ ವ್ಯಾಪಕವಾಗಿ ಹರಡಿತ್ತು. ಒಂದು ಗಳಿಗೆ ಇಳಿಯದೆ ಕುಳಿತೆ. ಭಾಸ್‌ಗೆ ನನ್ನ ಮನಸ್ಸಿನ ಆಂದೋಳನ ಅರ್ಥವಾಗಲಿಲ್ಲ. ಅವನು ಆತಂಕದಿಂದ ಏಕೆ ಸುಮ್ಮನೆ ಕುಳಿತೆ? ತಲೆ ನೋವೇ ?"

"ಇಲ್ಲ..."

"ಮತ್ತೇನು ಶುಭೆ ?"

"ತಲೆ ನೋಯುತ್ತಿಲ್ಲ. ತಲೆ ಭಾರ ಅಷ್ಟೆ."

"ಅಂದರೆ....?"

"ನೀನು ಒಳಬಂದು ತಾಯಿಯನ್ನು ನೋಡಬಹುದಾಗಿತ್ತು. ಆದರೆ...."

"ಏಕೆ ಅಷ್ಟಕ್ಕೆ ಸುಮ್ಮನಾದೆ ? ಏನು ಸಮಾಚಾರ...?"

"ತಾಯಿಗೆ ನಿನ್ನ ಬಗ್ಗೆ 'ಇಂಡಿಯನ್' ಎಂದು ಸಮಾಧಾನವಿಲ್ಲದುದು ನಿನಗೆ ತಿಳಿದಿದೆಯಷ್ಟೆ ? ಅದನ್ನೇನಾದರೂ ಮನಸ್ಸಿನಲ್ಲಿ ಇಟ್ಟುಕೊಂಡಿದ್ದು ತಿರಸ್ಕರಿಸಿದರೆ...? ಎಂಬ ಯೋಚನೆ ಅಷ್ಟೆ."

"ಅಷ್ಟು ಮಾತ್ರವೇ ? ತೊಂದರೆಯಿಲ್ಲ ನಡೆ."

ಭಾಸ್ ಒಡನೆ ಕಾರಿನಿಂದ ಇಳಿದ. ನಾನೂ ಅವನ ಮುಖವನ್ನು ನೋಡಿದೆ, ಕಿಂಚಿತ್ತೂ ಕಳವಳ ಕಾಣಿಸಲಿಲ್ಲ. ಅವನು ನನ್ನ ಹಿಂದೆಯೇ

ಬಂದು ಬಾಗಿಲ ಬಳಿ ನಿಂತ. ನಾನು ಕರೆಗಂಟೆಯನ್ನು ಒತ್ತುವ ಗೋಜಿಗೆ ಹೋಗದೆ ಹೇಳಿದೆ "ಹಿಂಬಾಗಿಲು ತೆರೆದಿದೆಯೋ ನೋಡುವೆ, ಅದುವರೆಗೆ ಬೆಲ್ ಮಾಡಬೇಡ."

"ಆಗಲಿ, ಹೋಗಿ ನೋಡಿಕೊಂಡು ಬಾ."

ನಾನು ಹಿಂಬಾಗಿಲಿಗೆ ಹೋಗಿ ನೋಡಿದಾಗ ಬಾಗಿಲು ತೆರೆದಿತ್ತು. ನೇರವಾಗಿ ಒಳಹೋದೆ. ತಾಯಿ ಕರುಣಾಜನಕಸ್ಥಿತಿಯಲ್ಲಿ ಹಾಸಿಗೆಯಮೇಲೆ ಮೈಮುದುಡಿ ಮಲಗಿದ್ದಳು. ಅವಳ ಬಳಿಗೆ ಹೋಗಿ ಹಣೆಯ ಮೇಲೆ ಕೈಯಿಟ್ಟು "ಅಮ್ಮಾ ಹೇಗಿದ್ದಿ ?" ಎಂದಾಗ ಕಣ್ಣು ಬಿಟ್ಟು ಪಿಳಿಪಿಳಿ ನೋಡಿದಳು, ತಾಯಿ.

"ಯಾರು... ?" ಕ್ಷೀಣಿತ ದನಿ ಬಾವಿಯ ಆಳದಿಂದ ಹೊರಬಂದಂತೆ ಹೊರಬಿತ್ತು.

"ನಾನು ಜನೀ,"

"ಯಾವಾಗ ಬಂದೆ ಮಗಳೇ ?"

"ನಿನ್ನೆ ಬಂದೆ....ನನ್ನ ಪತಿ ಭಾಸ್ವಾನ್ ಬಂದಿದ್ದಾನೆ. ಅವನನ್ನು ಕರೆತರಲೇ ? ನೀನು ನೋಡುವೆಯಾ ?"

"ಆಗಬಹುದು ಕರೆ.... " ಕಿಂಚಿತ್ತೂ ಬೇಸರವಿಲ್ಲದೆ ದನಿ ಸರಾಗವಾಗಿ ಹೊರಬಿದ್ದಾಗ ನನಗೆ ಅತ್ಯಾನಂದವಾಯಿತು. ಸರಸರನೆ ಹೋಗಿ ಮುಂಬಾಗಿಲನ್ನು ತೆರೆದೆ. ಭಾಸ್ ಒಳಬಂದ. ಮನೆ ಜೀರ್ಣವಿಧೀರ್ಣವಾಗಿ ಜಾಡನ ಪರೆಗಳಿಂದ ತುಂಬಿದ್ದು ತನ್ನನ್ನು ಗಮನಿಸುವವರಿಲ್ಲವೆಂಬುದನ್ನು ಸಾರಿಹೇಳುತಿತ್ತು. ಒಳಗಿನ ಎಲ್ಲಾ ಪರಿಕರಗಳಮೇಲೂ ಧೂಳು ಕವಿದು ಮೃಣ್ಮಯವಾಗಿತ್ತು. ಭಾಸ್ ಎಲ್ಲವನ್ನೂ ನೋಡುತ್ತ ಒಳಬಂದ. ನಾನು ಒಳಹೋಗಿ ಹೇಳಿದೆ "ಭಾಸ್ ಬಂದಿದ್ದಾನೆ"

"ಎಲ್ಲಿ ಮಗಳೇ.... ? ನನ್ನ ಕನ್ನಡಕ ಇಲ್ಲೆಲ್ಲೋ ಇಟ್ಟೆ.... ಸ್ವಲ್ಪ ನೋಡು !"

ಅಲ್ಲೆಲ್ಲಾ ನೋಡಿ ಕನ್ನಡಕವನ್ನು ತೆಗೆದು ಅವಳ ಕಣ್ಣಿಗಿಟ್ಟೆ. ಅವಳು ಭಾಸ್‌ನನ್ನು ಒಮ್ಮೆ ಕಣ್ತುಂಬ ನೋಡಿ ಕೈನೀಡಿದಳು; ಅವನು ಹಸ್ತಲಾಘವ ನೀಡಿದ. ಅವಳು ಕೆಲವು ಕ್ಷಣ ಅವನನ್ನೇ ನಿಟ್ಟಿಸಿ ನೋಡಿದಳು. ಅವನ ಮುಖಲಕ್ಷಣ, ಮೈಕಟ್ಟು ಒಂದೊಂದೂ ಅತ್ಯಂತ ಹಿತವಾಗಿ ಕಂಡಿರಬೇಕು ಅವಳಿಗೆ. ಅವಳೊಮ್ಮೆ ನಿಟ್ಟುಸಿರಿಟ್ಟು ಶಾಂತಿಯಿಂದ ಹೇಳಿದಳು "ಗಾಡ್ ಬ್ಲೆಸ್ ಯೂ ! ನನ್ನ ಮೈ–ಮನಸ್ಸುಗಳು ಜೀರ್ಣವಾಗಿವೆ; ನನ್ನ ಮನೆಯೂ ಜೀರ್ಣವಾಗಿದೆ. ಇಂಥಕಾಲ ಎಲ್ಲರಿಗೂ ಬರುತ್ತೆಯಾದ್ದರಿಂದ ನೀನಿದನ್ನು ಅಸಹ್ಯಿಸಿಕೊಳ್ಳುವುದಿಲ್ಲ ಎಂದು ಭಾವಿಸುವೆ...." ಪ್ರಕಂಪಿತ ದನಿ ವೇದನಾ ಮಯವಾಗಿ ಹರಿದುಬಂತು ಅವಳ ಎದೆಯಾಳದಿಂದ.

"ಛೀ ! ಎಲ್ಲಿಯಾದರುಂಟೇ ? ಈಗ ನಿನ್ನನ್ನು ಯಾರು ನೋಡಿಕೊಳ್ಳು ತಿದ್ದಾರೆ ?"

ಭಾಸ್‌ನ ಪ್ರಶ್ನೆಗೆ ಅವಳು ಮೇಲೆ ಕೈತೋರಿಸಿ ಉತ್ತರಿಸಿದಳು "ದೇವರು !"

ನಾನು ಕೇಳಿದೆ "ಇಂದು ಊಟ ಮಾಡಿದೆಯಾ ?"

"ಸ್ವಲ್ಪ ಬ್ರೆಡ್ಡು ಹಾಲು. ಅದೂ ಸೇರುವುದಿಲ್ಲ. ನಾಲಿಗೆ ಕೆಟ್ಟಿದೆ."

ಭಾಸ್ ಒಮ್ಮೆ ಒಳಗೆಲ್ಲಾ ದೃಷ್ಟಿ ಹೊರಳಿಸಿದ. ದುರವಸ್ಥೆ ಮನವನ್ನು ಹಿಂಡಿತೇನೋ, ಮುಖಬಿಂಬ ವಿವರ್ಣವಾಯಿತು. ನನ್ನ ಮುಖವನ್ನು ನೋಡುತ್ತ "ಪಾಪ, ಬಹಳ ಕಷ್ಟ ಪ್ರಸಂಗ" ಎಂದ. ತಾಯಿ ಸ್ವಲ್ಪವೂ ವಿಚಲಿತಳಾಗದೆ ನುಡಿದಳು,

"ನೋಡು, ಬೆಳಗ್ಗೆ ಎದ್ದಾಗ ಮಧ್ಯಾಹ್ನದವರೆಗೆ ಏನೇನು ಬೇಕೋ ಮಾಡಿಟ್ಟುಕೊಳ್ಳುವೆ. ಅನಂತರ ಮಧ್ಯಾಹ್ನದವರೆಗೆ ವಿಶ್ರಾಂತಿ. ಎಲ್ಲಾ ಈ ಮೇಜಿನಮೇಲೆ ಇಟ್ಟುಕೊಳ್ಳುವುದರಿಂದ ಪುನಃ ಏಳುವ ಪ್ರಸಂಗ ಬರು ವುದಿಲ್ಲ. ಮಧ್ಯಾಹ್ನ ಎದ್ದು ಪುನಃ ಅಣಿಗೊಳಿಸಿಕೊಂಡರೆ ರಾತ್ರಿಯವರೆಗೆ ಏಳುವ ತೊಂದರೆ ಬರುವುದಿಲ್ಲ. ಹೀಗೇ ಕಾಲಹರಣ.... "

ನಾನು ಹಾಗೇ ಕಣ್ಣಾಡಿಸಿದೆ; ಅವಳಿಗೆ ಬೇಕು ಬೇಕಾದ ಸಾಮಗ್ರಿಗಳೆಲ್ಲಾ ಸುತ್ತುಮುತ್ತು ಅಳವಡಿಸಿದ್ದ ಮೇಜು ಸ್ಟೂಲುಗಳ ಮೇಲಿದ್ದುವು. ಒಣಬ್ರೆಡ್, ಹಿಂದಿನದಿನ ಬೇಯಿಸಿದ ಆಲೂಗಡ್ಡೆ, ಆರಿತಣ್ಣಗಾದ ಟೀ ಮತ್ತು ಖಾದ್ಯ, ಪುಸ್ತಕ-ಪತ್ರಿಕೆಗಳು ಹೀಗೆ ಎಲ್ಲಾ ಬಗೆಯ ಪ್ರಪಂಚವೂ ಇದೆ. ಅಲ್ಲಿ ಏನುಂಟು, ಏನಿಲ್ಲ ? ಯಾವಯಾವ ಕಾಲದ್ದೋ ಮ್ಯಾಗಜೈನ್‌ಗಳಂತೂ ಲೆಕ್ಕವೇ ಇಲ್ಲ ! ಆ ಕರುಣಾಜನಕವಾದ ದೃಶ್ಯವನ್ನು ನೋಡಿ ಭಾಸ್‌ನ ಹೃದಯ ಕರಗಿ ನೀರಾಯಿತೇನೋ, ಅವನು ನಯವಂತಿಕೆಯಿಂದ ಕೇಳಿದ,

"ಈಗ ಏನಾದರೂ ಬೇಕಿದ್ದರೆ ಹೇಳು, ಜನಿ ಬಿಸಿಬಿಸಿಯಾಗಿ ತಯಾರಿಸಿ ಕೊಡುತ್ತಾಳೆ."

"ನೀನೀಗ ಅವಳನ್ನು ಕರೆದೊಯ್ಯುತ್ತೀಯೇನೋ... " ನಿರಾಸೆಯ ದನಿಯಲ್ಲಿ ಕೇಳಿದಳು ತಾಯಿ. ಅವಳ ಮುಖಭಾವವನ್ನು ಗಮನಿಸುತ್ತ ನಾನೆಂದೆ "ಈಗಲೇ ಹೋಗುವ ಅಗತ್ಯವಿಲ್ಲ ಸ್ವಲ್ಪಹೊತ್ತಿದ್ದು ನಿನಗೆ ಸಹಾಯ ಮಾಡುವೆ."

ಅವಳ ಶರೀರ ಒಣಗಿದ ಬಿದಿರಿನ ದೆಬ್ಬೆಯಂತೆ ಬಾಡಿ ಬೆಂಡಾಗಿತ್ತು. ಮುಖದಮೇಲೆ ಅಸಂಖ್ಯಾತ ರೇಖೆಗಳು, ಕೆದರಿದ ಕೂದಲು, ಬಚ್ಚುಬಾಯಿ, ಗುಳಿಬಿದ್ದ ಕಣ್ಣುಗಳು, ಒಣಗಿ ಶುಷ್ಕವಾದ ತುಟಿಗಳು ದೈಹಿಕ ಸ್ಥಿತಿಗತಿಯನ್ನು ಸಾರಿ ಹೇಳುತ್ತಿವೆ. ಒಂದುಕಾಲದಲ್ಲಿ ಒಳ್ಳೆ ಕಟ್ಟುಮಸ್ತಾದ ಮೈ ಅವಳದು. ಈಗ ನೋಡಿದರೆ ಸಂಕಟವೇ ಮೈಯೆತ್ತಿ ಬಂದಂತೆ ಕಾಣಿಸುತ್ತಾಳೆ. ನನ್ನ ಹೃದಯ ಒಳಗಿಂದೊಳಗೇ ತಳಮಳಿಸಿತು. ಆದರೂ, ತೋರಗೊಡದಿರುವ ಸಲುವಾಗಿ ಹರಡಿಬಿದ್ದಿದ್ದ ಅವಳ ಬಟ್ಟೆಬರೆಗಳನ್ನು ಮಡಿಸತೊಡಗಿದೆ. ಭಾಸ್ ಕೇಳಿದ "ನಿನಗೆ ಡಾಕ್ಟರ ಬಳಿ ಹೋಗಬೇಕೆಂದಿದೆಯೇ ? ಅಥವಾ ಏನಾದರೂ ಔಷಧಿ ಬೇಕೆ ? ಯಾವುದಿದ್ದರೂ ಹೇಳು. ಸ್ವಲ್ಪವೂ ಸಂಕೋಚಿಸಬೇಡ. ನಾನು ತಂದುಕೊಡುವೆ."

ಆ ಮಾತುಗಳನ್ನು ಕೇಳಿ ಆಕೆ ಸುಖದುಃಖಗಳಲ್ಲಿ ಮುಳುಗಿ ಕಣ್ಣುಗಳಲ್ಲಿ ನೀರಾಡಿಸಿದಳು. ಗಂಟಲು ಗದ್ಗದವಾಯಿತೇನೋ, ಒಂದು ಮಾತೂ ಅವಳ ಬಾಯಿಂದ ಹೊರಡಲಿಲ್ಲ.

"ಡಾಕ್ಟರ ಬಳಿ ಹೋಗುವುದಿದ್ದರೆ ಹೇಳಮ್ಮಾ!" ನಾನು ಒತ್ತಾಯಿಸಿದೆ.

"ಈಗೇನೂ ಬೇಡ. ಡಾಕ್ಟರೇ ಯಾವಾಗಾದರೊಮ್ಮೆ ಬಂದು ಹೋಗುತ್ತಾನೆ. ಔಷಧಿಯೂ ಇದೆ. ನೀವು ಇಷ್ಟು ಕರುಣೆದೋರಿದ್ದೇ ಸಾಕಲ್ಲ ?"

"ಹಾಗೆಂದರೆ ಹೇಗೆ ? ಮನೆಗೆ ಏನಾದರೂ ಸಾಮಗ್ರಿ ಬೇಕೇ ಅದನ್ನಾದರೂ ಹೇಳು ?"

"ಬೇಕಿತ್ತು... ಬೆಮೆಲ್‌ಗೆ ಹಣ ಕೊಟ್ಟರೆ ಅದೆಲ್ಲ ಅವಳ ಪಾಲಿಗೇ."

"ನೀನೇನೂ ಹಣ ಕೊಡಬೇಡ. ಏನೇನು ಬೇಕೋ ಅದನ್ನು ಹೇಳು ನಾನೇ ತಂದುಕೊಡುವೆ."

ಅವಳು ತಲೆದಿಂಬಿನಡಿಯಲ್ಲಿ ಗುರುತು ಹಾಕಿಟ್ಟುಕೊಂಡಿದ್ದ ಒಂದು ಚೀಟಿಯನ್ನು ಹೊರತೆಗೆದಳು. ಅದನ್ನು ತೆಗೆಯಬೇಕಾದರೂ ಅವಳಿಗೆ ಪ್ರಯಾಸವಾಯಿತೇನೋ ಎಂಬಷ್ಟು ನಿತ್ರಾಣದಲ್ಲಿ ತಡೆತಡೆದು ಉಸಿರಾಡುತ್ತ "ನಿನಗಿದು ತೊಂದರೆಯಲ್ಲವೇ ಮಗೂ !" ಎಂದಳು ಸಂಕೋಚಿಸುತ್ತ.

"ಏನಿಲ್ಲ ಕೊಡು. ಸ್ವಲ್ಪ ಹೊತ್ತಿನಲ್ಲೇ ತರುವೆ."

ಭಾಸ್ ಆ ಚೀಟಿಯನ್ನು ತೆಗೆದುಕೊಂಡು ನೋಡಿ ನನಗೆಂದ "ನಾನಿದನ್ನು ತರುವೆ. ನೀನು ಅವಳಿಗೇನು ಬೇಕೋ ಅದನ್ನು ತಯಾರಿಸಿಕೊಡು."

ಅವನು ಅಷ್ಟು ಹೇಳುವುದರೊಳಗಾಗಿ ಹೆಜ್ಜೆ ಹೊರಗಿಟ್ಟಾಗಿತ್ತು. ನಾನು ಮಗುವನ್ನು ಕೆಳಗೆ ಆಡಲು ಬಿಟ್ಟು, ಆರಿ ತಣ್ಣಗಾಗಿದ್ದ ಹಾಲು ಬ್ರೆಡ್ಡುಗಳನ್ನು ಬಿಸಿ ಮಾಡಿ ತಂದುಕೊಟ್ಟು "ನಿನಗೆ ಸಾಕಷ್ಟು ಪುಷ್ಟಿಕರವಾದ ಆಹಾರವಿಲ್ಲದೆ ನಿತ್ರಾಣವಾಗಿದ್ದಿ. . ಹೊಟ್ಟೆತುಂಬ ಊಟ ಮಾಡು."

ಅಷ್ಟರೊಳಗಾಗಿ ಭಾಸ್ ಹಿಂದಿರುಗಿ ಬಂದು ಚೀಟಿಯಲ್ಲಿ ಇದ್ದುದಕ್ಕಿಂತ ಅಧಿಕ ಸಾಮಗ್ರಿಗಳನ್ನು ತಂದು ಮೇಜಿನ ಮೇಲಿಟ್ಟ. ಪುಷ್ಟಿಕರವಾದ ಪಾನದ್ರವ್ಯಗಳೂ ಬೆಣ್ಣೆ ಹಣ್ಣು ಬಿಸ್ಕತ್ತುಗಳೂ ಇದ್ದುವು. ಅವನು

ಒಂದೊಂದಾಗಿ ಬೇರ್ಪಡಿಸುತ್ತ ನನಗೆಂದ "ಜಾನಕೀ ! ತಾಯಿಯನ್ನು ಏಳಿಸಿ ಬೆಡ್‌ಷೀಟ್ ಬದಲಿಸುವುದು ಒಳ್ಳೆಯದು. ಬೇರೆ ಬೆಡ್‌ಶೀಟ್ ಇದೆಯೋ ನೋಡು."

ನಾನು ಬೀರುವಿನಲ್ಲಿದ್ದ ಬೆಡ್‌ಶೀಟ್‌ಗಳನ್ನು ನೋಡಿದೆ. ಎಲ್ಲವೂ ಕೊಳಕೇ. ಎಲ್ಲವನ್ನೂ ಅಡಿಮೇಲು ಮಾಡಿದ್ದರಲ್ಲಿ ಒಂದು ಮಾತ್ರ ಮಡಿಯಾಗಿದ್ದುದು ಕಂಡುಬಂತು. ಭಾಸ್ ಅವಳಿಗೆ ಎದ್ದೇಳಲು ಕೈಯ್ಯಾಸರೆ ನೀಡಿ ಒಂದು ಕುರ್ಚಿಯ ಮೇಲೆ ಕುಳ್ಳಿರಿಸಿದ. ಅನಂತರ ಹಾಸಿಗೆಯನ್ನು ಹಾಸಿ, ಹೊದ್ದಿಕೆಯನ್ನು ಕ್ರಮವಾಗಿ ಅಳವಡಿಸಿ, ಮೇಜಿನ ಮೇಲಿದ್ದ ವಸ್ತುವಸ್ತುವನ್ನೂ ತೆಗೆದು ಧೂಳು ಜಾಡಿಸಿ ಪುನಃ ಎಲ್ಲವನ್ನೂ ಸರಿಯಾಗಿ ಜೋಡಿಸುವುದರಲ್ಲಿ ಭಾಸ್ಕರನ್ ಸಾಕಷ್ಟು ಸಹಾಯ ಮಾಡಿದ. ತಾಯಿ ಕುಳಿತಲ್ಲೇ ಕುಳಿತು ಎಲ್ಲವನ್ನೂ ನೋಡು ನೋಡುತ್ತಿದ್ದಂತೆ ಬತ್ತಿದ ಕಣ್ಣುಗಳಲ್ಲೂ ನೀರಾಡಿದುದನ್ನು ಕಂಡೆ. ಅವಳಿಗೆ ಎದ್ದು ಪಲ್ಲಂಕದ ಮೇಲೆ ಮಲಗಿಕೊಳ್ಳಲು ಸಹಾಯ ಮಾಡಿದ ಭಾಸ್. ಆ ಬಳಿಕ ನಾವಿಬ್ಬರೂ ಕೂಡಿ ಇಡೀ ಮನೆಯನ್ನು ಕೊಡವಿ ಧೂಳು ಝಾಡಿಸಿ ಓರಣವಾಗಿಡಲು ಸರ್ವಸಹಸಾ ಹೆಣಗಿದೆವು. ಅದೆಲ್ಲಾ ಮಾಡಿ ಮುಗಿದ ನಂತರ ಭಾಸ್ ಮನೆಗೆ ಹೊರಡುತ್ತ "ನೀನಿಂದು ಇಲ್ಲೇ ಇರುವುದಾದರೆ ತೊಂದರೆಯಿಲ್ಲ. ನಾನು ಮಗುವನ್ನು ನೋಡಿಕೊಳ್ಳುವೆ."

ನನಗೆ ಏನು ಹೇಳಬೇಕೋ ತಿಳಿಯಲಿಲ್ಲ. ಎರಡು ಮೂರು ತಿಂಗಳ ಕಾಲ ಮುಚ್ಚಿದ ಮನೆ, ನನಗೂ ಬೇಕು ಬೇಕಾದ ಸಾಮಗ್ರಿಗಳನ್ನು ಹೊಂದಿಸಿಕೊಳ್ಳುವ ಅಗತ್ಯವುಂಟು. ಹೋಗಲೋ ಬೇಡವೋ ಎಂಬ ಸಮಸ್ಯೆಯಿಂದ ಒಂದೆರಡು ಕ್ಷಣ ಯೋಚಿಸಿ ಹೇಳಿದೆ "ನನಗೂ ಮನೆಯಲ್ಲಿ ಸ್ವಲ್ಪ ಕೆಲಸವಿದೆ. ಏನು ಮಾಡಲಿ ?"

"ಪರವಾಯಿಲ್ಲ; ಹೇಗಾದರೂ ಕಳೆಯುತ್ತೆ."

"ಆಗಲಿ, ನೀನು ಹೋಗಬಹುದು."

ಭಾಸ್ ಹೊರಟುಹೋದ ನೇಲೆ ಮುಂಬಾಗಿಲನ್ನು ಮುಚ್ಚಿಕೊಂಡು ಒಳಬಂದೆ.

"ಜನೀ ! ನಿನ್ನವ ಬಹಳ ಒಳ್ಳೆಯವನು. ನೀನು ಬಹಳ ಅದೃಷ್ಟವಂತೆ. ದೇವರು ನಿಮ್ಮನ್ನು ಚೆನ್ನಾಗಿಟ್ಟಿರಲಿ !" ಎಂದಳು ತಾಯಿ. ಆ ಮಾತು ಹೊಮ್ಮಿದಾಗ ಸುಕ್ಕುಗಟ್ಟಿದ ಕೆನ್ನೆಗಳು ನಸುಗೆಂಪು ತಳೆದುವು. ನಾನು ಮುಗುಳ್ನಗೆ ಬೀರಿ ಸುಮ್ಮನಾದೆ.

ಮಧ್ಯಾಹ್ನ ಅವಳ ಕೊಳಕು ಬಟ್ಟೆಗಳನ್ನೆಲ್ಲಾ ಲಾಂಡ್ರಿಗೆ ಕೊಟ್ಟು ಬಂದಾಗ ಅಲ್ಲಿನ ಬಹಳಷ್ಟು ಕೆಲಸ ಮುಗಿಸಿದೆ ಎನಿಸಿತು ನನಗೆ. ಅಡಿಗೆಯ ಪಾತ್ರೆಯನ್ನು ತೊಳೆಯುವುದಿತ್ತು, ಅವನ್ನು ತೊಳೆದು ಒರೆಸಿ ಓರಣವಾಗಿ ಜೋಡಿಸಿ ಅಡಿಗೆ ಮನೆಯನ್ನು ಚೊಕ್ಕಟಗೊಳಿಸಿ ತಾಯಿಯ ಬಳಿಗೆ ಬಂದಾಗ ಅವಳು "ಒಂದು ಕಾಲದಲ್ಲಿ ನಾನೂ ನಿನ್ನಂತೆಯೇ ಇದ್ದೆ. ಈ ಕೆಲಸಕಾರ್ಯಗಳೆಲ್ಲಾ ನನಗೆ ಲೆಕ್ಕವೇ ಇರಲಿಲ್ಲ. ಆರೇಳು ಮಕ್ಕಳನ್ನು ಹೆತ್ತು ನಿರಾಯಾಸವಾಗಿ ಸಾಕಿದೆ. ಈಗ ಇಷ್ಟೊಂದು ದೇಹಸ್ಥಿತಿ ಕುಸಿದಮೇಲೆ ಖಂಡಿತ ಬದುಕಬಾರದು ಎನಿಸುತ್ತೆ; ದೇವರು ದಯಾಮಯನಾದರೆ ಸಾಕು" ಎಂದಳು, ಧ್ವನಿ ಕ್ಷೀಣಿತವಾದರೂ ನಿರಾಳವಾಗಿ ಹರಿದು ಬಂತು.

"ಅಷ್ಟೊಂದು ಮುಂದೆ ಹೋಗುವುದೇಕೆ ? ಇನ್ನು ಕೆಲವು ದಿನಗಳಲ್ಲಿ ನಿನ್ನ ಆರೋಗ್ಯ ಕುದುರುತ್ತದೆ. ಇಳಿ ವಯಸ್ಸಾದುದರಿಂದ ನಿಧಾನವಾಗಬಹುದು ಅಷ್ಟೆ."

ಮಾತು ಮುಗಿಯುವುದರೊಳಗಾಗಿ ಜೆಮೆಲ್ ಹಿಂಬಾಗಿಲಿನಿಂದ ಒಳಬಂದಳು. ಓರಣವನ್ನು ಕಂಡು ಅವಳಿಗೆ ಎಲ್ಲಿಲ್ಲದ ಆಶ್ಚರ್ಯ. ಒಮ್ಮೆ ಮನೆಯನ್ನೆಲ್ಲಾ ಕಣ್ಣು ಹೊರಳಿಸಿ ನೋಡಿ "ಓಹ್ ! ಎಂತಹ ಮಾರ್ಪಾಡು! ಇದೆಲ್ಲಾ ಯಾರು ಮಾಡಿದ್ದು ? ಎನ್ನುತ್ತ ಒಳಬಂದವಳೇ ನನ್ನನ್ನು ನೋಡಿ ಓ ಜನೀ ! ಯಾವಾಗ ಬಂದೆ ?" ಎಂದಳು ಆಶ್ಚರ್ಯವಿಸ್ಮೃತನಯನಳಿಂದ ನೋಡುತ್ತ.

"ಆಗಲೇ ಇಲ್ಲಿಗೆ ಬಂದೆ."

ಅವಳು ತಾಯಿಯನ್ನು ಕುರಿತು ಕೇಳಿದಳು "ಹೇಗಿದ್ದಿ ಅಮ್ಮಾ ?"

"ಈದಿನ ಜನೀಯಿಂದ ಹೊಟ್ಟೆತುಂಬ ಊಟ ಮಾಡಿದೆ."

"ಜನೀ, ನಿನಗೊತ್ತಿಲ್ಲ, ಇದೆಂನೋ ಸರಿ. ಅನಂತರ....? ಅವಳು ತಾನಾಗಿಯೇ ಓಡಾಡಿಕೊಂಡಿರುವುದರಲ್ಲಿ ಅನುಕೂಲವಿದೆ; ನೀನು ಮಾಡ ಬಾರದಿತ್ತು."

"ಪಾಪ ಬಲು ಸುಸ್ತಾಗಿದ್ದಾಳೆ. ಯಾರಾದರೂ ನೋಡಿಕೊಳ್ಳದಿದ್ದರೆ ಕಷ್ಟವೇ"

ಬೆಮೆಲ್ ಏನೂ ಹೇಳದೆ ಮೇಜಿನ ಮೇಲಿದ್ದ ಪುಸ್ತಿಕೆಯಲ್ಲಿ ಕಣ್ಣಾಡಿಸಿ ದಳು. ಅವಳ ಮನಸ್ಸು ಕಿಂಚಿತ್ತೂ ಕಸಿವಿಸಿಗೊಂಡಂತೆ ಕಾಣಲಿಲ್ಲ. ಅವಳು ಹೇಗೆ ಬಂದಳೋ ಹಾಗೆಯೇ ಹಠಾತ್ತನೆ ಹೊರಟುಹೋದಳು.

ಸಾಯಂಕಾಲ ಭಾಸ್ ಮನೆಗೆ ಬಂದ.

ಹವಾಮಾನ ಕ್ಷಣೇಕ್ಷಣೇ ತಂಪುತಳೆಯುತಿತ್ತು. ಪಕ್ಷಿಗಳ ಇವಿ ಗೊರಳ ಸಂಧ್ಯಾರಾಗ ಕರ್ಣಾನಂದಕರವಾಗಿ ಹೊಮ್ಮುತಿತ್ತು.

ಭಾಸ್ ಒಳಬಂದವನೇ ಅಂದ "ಮಿಸೆಸ್ ಜಾರ್ಜ್, ನಾವು ಇಲ್ಲಿ ಇಪ್ಪತ್ತು ದಿನ ಇರುವ ಸಂಭವ ಉಂಟು. ನೀವು ಅಷ್ಟುಕಾಲ ನಮ್ಮಲ್ಲಿದ್ದರೆ ನಿಮ್ಮ ದೇಹಸ್ಥಿತಿ ಖಂಡಿತ ಸುಧಾರಿಸುತ್ತದೆ. ನೀವು ಈಗಲೇ ನಮ್ಮೊಂದಿಗೆ ಹೊರಡಿ. ಇಲ್ಲಿ ನೋಡಿಕೊಳ್ಳುವವರಿಲ್ಲ. ಸ್ವಲ್ಪ ದಿನ ನಮ್ಮಲ್ಲಿ ಸುಖ ವಾಗಿರಿ;" ಭಾಸ್ ಅವಳ ಮುಖಭಾವವನ್ನು ಗಮನಿಸುತ್ತ ಪುನಃ "ಸಂಕೋಚ ಬೇಡವೇ ಬೇಡ, ಎಂದ."

ಅವಳು ನನ್ನ ಕಡೆ ಹುಬ್ಬೆತ್ತಿ ನೋಡಿ "ನಿಮಗೇಕೆ ತೊಂದರೆ..."

"ಇದು ತೊಂದರೆ ಅಲ್ಲವೇ ಅಲ್ಲ. ನೀನು ಸ್ವಲ್ಪವೂ ಸಂಕೋಚಪಡ ಬೇಡ."

"ಇದೆಲ್ಲಾ ಚೆನ್ನಲ್ಲ ಮಗಳೆ !

ನಾವು ಮತ್ತೆ ಮತ್ತೆ ಒತ್ತಾಯಿಸಿದಾಗ ಅವಳು ಒಪ್ಪಿದಳು.

— ೦ —

# ಅಧ್ಯಾಯ

## ೭

ದಿನದಿನಗಳು ಉರುಳಿ ವಾರಗಳು ಸತಿಸಿದುವು.

ಆ ಸ್ವಲ್ಪ ಕಾಲದಲ್ಲೇ ಮಾನವ ಜೀವಿತ ಏನು ಎಂಬುದನ್ನು ತುಂಬಾ ಅರ್ಥಮಾಡಿಕೊಂಡಂತೆ ಹರ್ಷಿತಳಾಗಿದ್ದಳು ತಾಯಿ. ನಾವು ಎಷ್ಟೆಷ್ಟು ಬಗೆಯಲ್ಲಿ ಅವಳ ಶುಶ್ರೂಷೆ ಮಾಡಿದರೂ ಅವಳ ದೇಹಸ್ಥಿತಿ ಇದ್ದಕ್ಕಿದ್ದಂತೆಯೇ ಕುಸಿಯುತ್ತಿದ್ದುದು ದುರದೃಷ್ಟ. ಅದು ಭಾಸ್‌ಗೆ ತುಂಬಾ ಚಿಂತೆಗಿಟ್ಟು ಕೊಂಡಿತು. ಈ ಸ್ಥಿತಿಯಲ್ಲಿ ಅವಳನ್ನು ಅನಾಥಳನ್ನಾಗಿ ಬಿಟ್ಟು ಹೋಗುವುದಕ್ಕೆ ಅವನು ಸಿದ್ಧನಿರಲಿಲ್ಲ. ನಾವು ದೆಹಲಿಗೆ ಕಳುಹಿಸಬೇಕಾದ ಸಾಮಾನುಗಳನ್ನೆಲ್ಲಾ ಪೆಟ್ಟಿಗೆಗೆ ತುಂಬಿ 'ಷಿಪ್' ಮಾಡಿಯಾಯಿತು. ಅವನು ಒಂದನೇ ತಾರೀಖು ದೆಹಲಿಯಲ್ಲಿ ತನ್ನ ಹುದ್ದೆಯನ್ನು ಕೈಕೊಳ್ಳದೆ ವಿಧಿಯಿರಲಿಲ್ಲ. ಅವನು ಸ್ವಲ್ಪ ಯೋಚಿಸಿ ನನಗೆಂದ,

"ನೀನು ನಿನ್ನ ತಾಯಿಯನ್ನು ನೋಡಿಕೊಂಡು ಸ್ವಲ್ಪ ದಿನ ಇಲ್ಲಿಯೇ ಇರು. ನಾನು ಹೋಗಿ ಕೆಲಸ ಕೈಕೊಳ್ಳುವೆ, ಆಗಬಹುದೇ ?"

ಆ ಮಾತು ಕೇಳಿ ನನಗೆ ತಲೆಯೇ ಭಾರವಾಯಿತು. ಒಬ್ಬಳೇ ಹೇಗಿರಲಿ ಎಂಬ ಪ್ರಶ್ನೆ ನನ್ನ ಪ್ರಾಣವನ್ನು ಹಿಂಡತೊಡಗಿತು. ನಾನು ಮಾತಾಡಲಿಲ್ಲ. ಚಿಂತಾಕ್ರಾಂತಳಾದ ನನ್ನನ್ನು ನೋಡಿ ಅವನು ಪುನಃ ಅಂದ "ನೀನು ಇಷ್ಟೊಂದು ನಿರಾಶಳಾದರೆ ಹೇಗೆ ? ತಾಯಿ ಎಂಬುದು ದೊಡ್ಡ ವಸ್ತು. ಅದನ್ನು ಎಂದೂ ನಿರ್ಲಕ್ಷಿಸಬಾರದು. ನಿಮ್ಮ ಮನೆಗೆ ಕರೆದೊಯ್ದು ಬಿಡುವೆ. ಅಲ್ಲೇ ಕೆಲವು ದಿನವಿದ್ದು ನೋಡಿಕೋ. ನಾನು ಅಲ್ಲಿಯ ಸ್ಥಿತಿಗತಿಯನ್ನು ಅರಿತುಕೊಂಡು ಬಂದು ಹೋಗುವೆ."

ನಾನು ನಿಟ್ಟುಸಿರು ಬಿಟ್ಟೆ. ಕಣ್ಣುಗಳಲ್ಲಿ ಸಣ್ಣಗೆ ನೀರಾಡಿತು.

ಅವನು ತಾನೇತಾನಾಗಿ ಮುಂದುವರಿದ "ಛೀಃ ! ಇದಕ್ಕೆಲ್ಲಾ ಚಿಂತಿಸಿದ ರುಂಟೇ ?"

"ನೀನೂ ಈಚೆಗೆ ಚೇತರಿಸಿಕೊಂಡಿದ್ದಿ. ನಾನು ಇಲ್ಲಿ ಉಳಿದರೆ ನಿನಗೆ ಊಟ ಉಪಚಾರಗಳಿಗೆ ತೊಂದರೆಯಾಗಬಹುದು. ಅಲ್ಲದೆ ಎಷ್ಟು ದಿನ ನಾನು ಇಲ್ಲಿರಲಾಗುತ್ತೆ ? ಇದೇನು ಒಂದೆರಡು ದಿನಗಳ ಸಮಾಚಾರವೇ ? ಅಷ್ಟುಕಾಲ ನಿನ್ನನ್ನು ಬಿಟ್ಟು ಹೇಗಿರಲಿ ? ಇದಂತೂ ಸಾಧ್ಯವಾಗದ ಮಾತು."

ಆದರೆ ಎಷ್ಟು ಹೇಳಿಕೊಂಡರೂ ಅವನು ಒಪ್ಪಲಿಲ್ಲ. ಮೃದು ಮಾತು ಗಳಿಂದ ಸಂತೈಸಿ ಹೇಳಿದ "ನನ್ನ ಬಗ್ಗೆ ಯೋಚಿಸಬೇಡ. ನಾನು ಅಂಜನಾ ಮನೆಯಲ್ಲಿರುವೆ. ಅಂತ್ಯಕಾಲದಲ್ಲಿ ಅವಳ ಶುಶ್ರೂಷೆ ಮಾಡುವುದು ನಿನ್ನ ಕರ್ತವ್ಯ. ಯೋಚಿಸಿ ನೋಡು."

ಅವನು ಬಹಳಷ್ಟು ಹೇಳಿದ ಮೇಲೆ ನನಗೆ 'ಇಲ್ಲ' ಎನ್ನಲಾಗಲಿಲ್ಲ. ಅದೇ ಪ್ರಕಾರವಾಗಿ ತಾಯಿಗೂ ಹೇಳಿ ನಮ್ಮಿಬ್ಬರನ್ನೂ ತಾಯಿಯ ಮನೆಗೆ ಕರೆತಂದು ಬಿಟ್ಟು, ಬೇಕು ಬೇಕಾದ ಸಾಮಗ್ರಿಗಳನ್ನು ತಂದಿಟ್ಟು ಅವಳ ಡಾಕ್ಟರನ್ನೂ ಕರೆತಂದು ಮಾತಾಡಿ ಎಲ್ಲಾ ಅನುಕೂಲಗಳನ್ನೂ ಕಲ್ಪಿಸಿದ. ತಾಯಿ ಎಲ್ಲವನ್ನೂ ಅತ್ಯಂತ ಪ್ರೀತ್ಯಾದರಗಳಿಂದ, ದುಃಖದುಗುಡಗಳಿಂದ ಗಮನಿಸಿ ಹೇಳಿದಳು "ಚಿನ್ನದಂತಹ ಹುಡುಗ !"

"ನಾನೊಬ್ಬಳೇ ಆದ್ದರಿಂದ ನರ್ಸಿಂಗ್ ಕಷ್ಟ. ಆಸ್ಪತ್ರೆಗೆ ಸೇರಿಸಿದರೆ ಹೇಗೆ ?"

ತಾಯಿ ಆದಕ್ಕೊಪ್ಪದೆ "ನಾನಿನ್ನೆಷ್ಟು ಕಾಲ ಬದುಕಿಯೇನು ? ಮತ್ತೇಕೆ ಪೇಚಾಟ ?" ಎಂದಳು, ಅತ್ಯಂತ ನಿರುತ್ಸಾಹಿತ ದನಿಯಲ್ಲಿ.

ಭಾಸ್ ಹೊರಹೊರಟಾಗ ಅಕಸ್ಮಿಕವಾಗಿ ಹಾನಿಯಲ್ಲಿ ಸಿಕ್ಕಿದ ಬೆಮೆಲ್ ಮತ್ತು ಆಕೆಯ ಪತಿ ಹಾಲ್ಡೇನ್‌ನನ್ನು ಕರೆತಂದು "ನೀವಿಬ್ಬರೂ ಸ್ವಲ್ಪದಿನ ಇಲ್ಲಿರುವುದು ಒಳ್ಳೆಯದು. ಜನೀ ಸಹ ಇರುತ್ತಾಳೆ" ಎಂದ.

ಒಮ್ಮೆಲೇ ನನ್ನ ಎದೆ ಧಸಕ್ ಎಂದಿತು. ನಾನು ಬೆನೆಲ್ ವಿಚಾರ ಪಾಗಿ ಏನೂ ಹೇಳಿರಲಿಲ್ಲವಾದ್ದರಿಂದ ಅವನು ಸಹಜವಾಗಿ ಭಾವಿಸಿದ. ಅವರ ಮುಂದೆ ಏನು ಹೇಳಲೂ ನನಗೆ ಗಂಟಲು ಕಟ್ಟಿತು. ನಾನು ಭಾಸ್‌ನನ್ನು ಮರ್ಮಾಂತಿಕವಾಗಿ ನೋಡಿದೆ. ಅವನು ನಸುನಕ್ಕು ಹೋರಹೋದ.

ಬೆನೆಲ್ ವಿಚಾರ ಹೇಳುವುದಾದರೆ ಕೆಲವುದಿನ ಕಾಸು ಖರ್ಚಿಲ್ಲದೆ ಜೀವನ ಕಳೆಯುತ್ತದೆ. ತಾಯಿ ಸತ್ತನಂತರ ಮನೆಯ ಸರ್ವಸ್ವಾಮ್ಯವನ್ನು ಪಡೆಯ ಬಹುದು. ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಗೊತ್ತುಪಡಿಸಿದ ಬಾಡಿಗೆ. ಮನೆಗೆ ಈ ದಿನಗಳಲ್ಲಿ ಇದರ ನಾಲ್ಕರಷ್ಟು ಹೆಚ್ಚಿದೆ. ಅದಲ್ಲದೆ ಅವಳು ತನ್ನ ಮನೆಗೆ ಹೆಚ್ಚಿನ ಬಾಡಿಗೆ ಸಲ್ಲಿಸುತಿದ್ದಾಳೆ. ಈ ಎಲ್ಲಾ ಅನು ಕೂಲವನ್ನು ಬಯಸಿದ ದಂಪತಿಗಳು ಸಮ್ಮತಿ ಸೂಸಿ ಇಲ್ಲೇ ತಳ ಊರಿದ್ದಲ್ಲದೆ ಅಂದೇ ಸಾಮಾನೆಲ್ಲವನ್ನೂ ತಂದುಹಾಕಿ ತಮ್ಮ ಮನೆಯನ್ನು ಖಾಲಿ ಮಾಡಿದರು !

ಭಾಸ್ ಭಾರತಕ್ಕೆ ಹೊರಡುವ ದಿನ ಅವನಿದ್ದ ಹೋಟೆಲಿಗೆ ಹೋದೆ. ಅವನು ಮಗುವನ್ನು ಮುದ್ದಿಸುತ್ತ "ನಿನಗೆ ಅಲ್ಲಿ ಮಗುವನ್ನು ನೋಡಿ ಕೊಳ್ಳುವುದು ಕಷ್ಟವಾದರೆ ಕಳುಹಿಸಿಕೊಡು. ಅಂಜನಾ ನೋಡಿಕೊಳ್ಳು ತ್ತಾಳೆ."

"ತಾಯಿಯೊಂದಿಗೆ ಮಗುವನ್ನು ನೋಡಿಕೊಳ್ಳುವುದು ಕಷ್ಟವೇ. ಆದರೆ ನಿನ್ನನ್ನೂ ಬಿಟ್ಟು, ಮಗುವನ್ನೂ ಬಿಟ್ಟು ನಾನು ಹೇಗೆ ಕಾಲಹರಣ ಮಾಡಲಿ ?"

ಅವನು ನಕ್ಕುಬಿಟ್ಟ.

"ಕಷ್ಟವಾದರೂ ಚಿಂತೆ ಇಲ್ಲ. ನಾನೇ ನೋಡಿಕೊಳ್ಳುವೆ."

ಭಾಸ್ ಆನಂದ್ ಮತ್ತು ವಸಂತ್‌ರವರಿಗೆ ನನ್ನ ವಿಳಾಸವನ್ನು ಕೊಟ್ಟು ಆಗಾಗ ಬಂದು ನೋಡಿಕೊಂಡು ಸಮಯೋಚಿತವಾದ ಸಹಾಯ ಮಾಡ ಬೇಕೆಂದು ಸೂಚನೆ ಕೊಟ್ಟಿದ್ದ. ಆದರಂತೆಯೇ ಅವರು ಒಪ್ಪಿಕೊಂಡರು.

ಭಾಸ್ ಹೋಟೆಲ್ ಬಿಟ್ಟು ವಿಮಾನ ನಿಲ್ದಾಣಕ್ಕೆ ಹೋಗುವ ಮುನ್ನ ತಾಯಿಯನ್ನು ನೋಡಿ ಕೈಹಿಡಿದುಕೊಂಡು ನಲ್ಮೆಯಿಂದ ಹೇಳಿದ "ನಿಮ್ಮ ಆರೋಗ್ಯ ಸುಧಾರಿಸಲಿಲ್ಲವಾದ್ದರಿಂದ ಜನಿಯನ್ನು ಇಲ್ಲಿಯೇ ಸ್ವಲ್ಪಕಾಲ ಬಿಟ್ಟು ಹೋಗುತ್ತಿದ್ದೇನೆ. ದೇವರು ದಯಾಮಯ! ನಿಮ್ಮನ್ನು ಕಾಪಾಡು ತ್ತಾನೆ."

ಆಗ ಅವಳ ಕಣ್ಣಿನಲ್ಲಿ ಬಳಬಳ ನೀರು ಸುರಿಯಿತು. ಅವಳು ಸಂಕಟ ದಿಂದ "ಹೋಗಿ ಬಾ ಮಗನೇ ! ದೇವರು ನಿನ್ನನ್ನು ಕಾಪಾಡಲಿ !" ಎಂದಳು.

ನನ್ನ ಕಣ್ಣುಗಳಲ್ಲೂ ಪ್ರತಿಹನಿಗಳು ಮೂಡಿದುವು.

ಭಾಸ್ ಸ್ವಲ್ಪಹೊತ್ತು ಅಲ್ಲಿ ಕುಳಿತಿದ್ದು ಅವಳನ್ನು ಸಮಾಧಾನ ಪಡಿ ಸಿದನಂತರ ಹೊರಡಲು ಎದ್ದ.

ಅವಳು ಕೇಳಿದಳು "ಯಾವಾಗ ಬರುತ್ತಿ ?"

"ಮುಂದಿನ ತಿಂಗಳ ಮೊದಲವಾರ."

"ಖಂಡಿತಾ ಬರುತ್ತೀಯಷ್ಟೆ ?"

"ಹೌದು ಖಂಡಿತಾ ಬರುವೆ. ಜನಿಯನ್ನು ಕರೆದುಕೊಂಡು ಹೋಗ ಬೇಕಲ್ಲ ?"

"ಆಗಲಿ" ಎಂದಳು ನಿಡುಸುಯ್ಯುತ್ತ. ಮುಖಬಿಂಬ ಮ್ಲಾನವಾಯಿತು.

ನಾವು ವಿಮಾನ ನಿಲ್ದಾಣವನ್ನು ಮುಟ್ಟಿದ ಸಮಯದಲ್ಲೇ ಭಾಸ್‌ನ ಗೆಳೆಯರೂ ಪ್ರಾಧಿಕಾರಿಗಳೂ ನಿಲ್ದಾಣಕ್ಕೆ ಆಗಮಿಸಿದರು. ಅತ್ಯಂತ ಶೀತ ಲೋಜಸ್ವಿತೆಯಿಂದ ತೀಡುವ ತಂಗಾಳಿಯಿಂದ-ಮೈಕೈ ಉಣ್ಣೆಯ ಬಟ್ಟೆಗಳಿಂದ ಮುಚ್ಚಿದ್ದರೂ-ಜಿಲ್ಲನೆ ನಡುಗಿಸುವಂತಹ ಚಳಿ. ಆನಂದ್-ಇಳಾ, ವಸಂತ್ ನಾಗಿನಿಯರು ನನ್ನ ಬಳಿಗೆ ಬಂದು "ಏನೂ ಯೋಚಿಸಬೇಡ. ಯಾವ ಗಳಿಗೆ ಯಲ್ಲಿ ಸಹಾಯ ಬೇಕಾದರೂ ಸರಿಯೆ. ಸಂಕೋಚಪಟ್ಟುಕೊಳ್ಳಬೇಡ. ನಾವು ಬರುತ್ತೇವೆ ಸಹಾಯಕ್ಕೆ" ಎಂದು ಹೃತ್ಪೂರ್ವಕವಾದ ಆಶ್ವಾಸನೆ ನೀಡಿದರು.

ವಿಮಾನ ಅಣಿಯಾದ ಸೂಚನೆ ಬಂದಿತು.

ಭಾಸ್ ಎಲ್ಲರಿಗೂ 'ಗುಡ್‌ಬೈ' ಹೇಳಿ ಹೊರಟ. ನನ್ನ ಖಿನ್ನ ಮುಖದಲ್ಲಿ ಸೂಸಿದ ಕಂಬನಿಯನ್ನು ತೊಡೆದು ಬೆನ್ನನ್ನು ನೇವರಿಸಿ, ಮಗುವಿಗೆ ಸಿಹಿಮುತ್ತನ್ನು ನೀಡಿ ಜನಗಳ ಗುಂಪಿನಲ್ಲಿ ನುಸುಳಿ ವಿಮಾನವನ್ನೇರಿದ. ನನ್ನ ಹೃದಯ ಮೂರ್ತಿಯನ್ನು ಬೀಳ್ಕೊಟ್ಟು ವಿಮಾನ ಗಗನಗಾಮಿಯಾಗುವವರೆಗೂ ಮ್ಲಾನಮುಖಿಯಾಗಿ ನಿಂತೆ. ಅದು ಕಣ್ಮರೆಯಾದನಂತರ ಭಾಸ್ ಗೆಳೆಯವೃಂದಕ್ಕೆ ವಂದನೆಯನ್ನರ್ಪಿಸಿ ನಿಲ್ದಾಣವನ್ನು ಬಿಟ್ಟು ಕಾರನ್ನು ಹತ್ತಿದೆ. ನಮ್ಮ ಆತ್ಮೀಯ ಗೆಳೆಯರು ಕಾರನ್ನು ಸುತ್ತುವರಿದು ನನ್ನನ್ನು ಬೀಳ್ಕೊಟ್ಟಾಗ ಹೃದಯ ತಂತುಗಳಲ್ಲಿ ತುಂಬಿದ್ದ ಬಿಸಿಯುಸಿರು ಗಂಟಲನ್ನು ಒತ್ತಿತು. ಒಡನೆ ಕಂಬನಿಗಳು ಫಳಕ್ಕನೆ ತುಳುಕಿದವು. ಮೂಕಮೌನಗತಿಯಲ್ಲಿ ವಂದನೆಯನ್ನರ್ಪಿಸಿದೆ.

ನನ್ನ ದೇಹ ಪಂಜರ ಇಲ್ಲಿದ್ದರೂ ಮನಃಪ್ರಾಣಗಳು ಭಾಸ್ವಾನನ ಸುತ್ತಮುತ್ತ ಸುಳಿಯುತ್ತಿರುತ್ತವೆ. ಒಂದೊಂದು ಗಳಿಗೆಯನ್ನು ಕಳೆಯುವುದೂ ಕಷ್ಟವೇ ಎಂಬಷ್ಟು ಬೇಸರ ಮನಸ್ಸಿಗೆ. ಎಲ್ಲಿ ನಿಂತರೂ ಬೇಸರ, ಎಲ್ಲಿ ಕುಳಿತರೂ ಬೇಸರ. ಹೊತ್ತು ಕಳೆಯುವುದೇ ಪರಮ ಹಿಂಸೆ. ದೆಹಲಿ.... ಕ್ವಾಟರ್ಸ್.... ಭಾಸ್‌ನ ಕುಟುಂಬಿಗರು.... ಅಲ್ಲಿನ ಸುಂದರ ಉದ್ಯಾನಗಳು... ಪುಷ್ಪಭರಿತ ಕ್ಯಾಶಿಯಾ ಮರಗಳು.... ಸ್ವರ್ಗೀಯ ಮಾವ.... ರಾಮಕೃಷ್ಣ ನರ್ಸಿಂಗ್ ಹೋಂ.... ಅದರಲ್ಲಿದ್ದ ಭಾಸ್ವಾನನ ದಾರುಣ ದಿನಗಳು ... ನನ್ನ ಗೋಳು...ಅವನ ಆತಂಕ.... ವೈದ್ಯರ ಸಹಕಾರ... ಮಾವನಿಗೆ ತಂದ ಇಂಜಕ್ಷನ್... ಅದೇ ವಿಚಾರವನ್ನೇ ಮನಸ್ಸಿಗೆ ಹಚ್ಚಿಕೊಂಡು ಕೊರಗುತಿದ್ದ ದಿನಗಳು... ಮನೆಯವರೆಲ್ಲರ ಸಂಕಟ... ಪುನಃ ಪುನಃ ಸ್ಮರಣೆಯ ಹಾದಿಯಲ್ಲಿ ಸಾಗಿಹೋಗುತಿತ್ತು. ನಾನು ಅದೇ ವಿಚಾರದಲ್ಲಿ ಮುಳುಗಿ ಹೋಗುತಿದ್ದೆ. ಮನಃಪ್ರಾಣಗಳು ವಿಲಿವಿಲಿಗೊಳ್ಳುತಿದ್ದುವು.

ತಾಯಿಯ ಸ್ಥಿತಿಗತಿ ದಿನದಿನಕ್ಕೂ ಕುಸಿಯುತಿತ್ತು. ನನಗೆ ನರ್ಸಿಂಗ್ ತುಂಬ ಕಷ್ಟವಾದುದರಿಂದ ಡಾಕ್ಟರು ಒಳ್ಳೆಯ ನರ್ಸ್ ಒಬ್ಬಳನ್ನು ಗೊತ್ತು

ಮಾಡಿಕೊಟ್ಟು ಉಪಕರಿಸಿದರು. ಬಿಮೆಲ್ ಯಥಾಪ್ರಕಾರವೇ. ಸಂಸಾರಕ್ಕೆ ಕಾಸನ್ನು ಬಿಚ್ಚದೆ ನನಗೇ ತಲೆಹೊರೆಯಾದುದೂ ಅಲ್ಲದೆ ದಿನಚರಿಯಲ್ಲಿ ಇಲ್ಲದ ಕಿರುಕುಳ. ಕಟುಮಾತುಗಳ ಪ್ರಯೋಗ. ಊಟತಿಂಡಿಯಲ್ಲಿ ಸಿಂಹಪಾಲು ಇಂತಿಂತಹ ವ್ಯವಹಾರಗಳಿಂದ ವಿಜೃಂಭಿಸಿದಳು. ಅವನೂ ಅವಳಿಗೆ ಸರಿಯಾದವನೇ. ಅವನ ಹೇಳಿಕೆಯಂತೆ ಇವಳು. ಇವಳ ಹೇಳಿಕೆಯಂತೆ ಅವನು. ಅವರಿಬ್ಬರೂ ಮನೆಯಿಂದ ಎಷ್ಟೊತ್ತಿಗೆ ಹೊರಹೋಗುತ್ತಾರೋ ಎನಿಸುತಿತ್ತು ಮನಸ್ಸಿಗೆ. ಅವಳು ತಾಯಿಯನ್ನು ದಿನವೂ ಬಂದು ನೋಡುತ್ತಿರಲಿಲ್ಲವಾದ್ದರಿಂದ ಅವಳಿಗೆ ಸ್ಥಿತಿಗತಿಯ ಅರಿವು ಮೂಡಲಿಲ್ಲ. ಯಥಾಪ್ರಕಾರವಾಗಿ ಉದಾಸೀನವೇ.

"ಜನೀ... ಜನೀ !"

ತಾಯಿಯ ಕರೆ ಕಿವಿಗೆ ಬೀಳುತ್ತಲೂ ನಾನು ಮಾಡುತಿದ್ದ ಕೆಲಸವನ್ನು ಅಷ್ಟಕ್ಕೆ ಬಿಟ್ಟುಹೋದೆ. ಅಷ್ಟರೊಳಗಾಗಿ ಅವಳ ದನಿ ಮತ್ತೊಮ್ಮೆ ಮೊಳಗಿತು. "ಜನೀ.... !"

"ಏನಮ್ಮಾ.... !"

"ಭಾಸ್ ಬರುವುದು ಯಾವಾಗ ಮಗಳೇ !"

"ಸಧ್ಯ ಬರಬಹುದು."

"ಒಂದಿಷ್ಟು ಉಪಕಾರ ಮಾಡು ಮಗಳೇ ! ಮುಂದಿನವಾರ ಬಂದು ಹೋಗುವಂತೆ ಬರೆದು ಹಾಕು."

"ಏಕೆ ಅಮ್ಮಾ ?"

"ನನಗೆ ಅವನನ್ನು ನೋಡಬೇಕು ಅನಿಸುತ್ತೆ."

"ಬಂದೇ ಬರುತ್ತಾನೆ. ಚಿಂತೆ ಬೇಡ."

"ಆದರೂ, ಬರೆದು ಹಾಕು."

"ಆಗಲಿ" ಎಂದೆ. ಮನಸ್ಸು ಸೂಕ್ಷ್ಮವಾಗಿ ಅವಳನ್ನು ಗಮನಿಸಿತು. ಕೊನೆಗಾಲಕ್ಕೆ ಮುಹೂರ್ತವನ್ನು ಸಿದ್ಧಪಡಿಸುತಿದ್ದಾಳೆಯೋ ಎಂದು.

ಅಸ್ತವ್ಯಸ್ತವಾದ ಅವಳ ಹೊದಿಕೆಯನ್ನು ಸರಿಪಡಿಸಿದೆ. ಅದೇ ತಾನೆ ಒಳ ಹೆಜ್ಜೆಯಿಟ್ಟ ನರ್ಸ್ ನಾಡಿಹಿಡಿದು ನೋಡಿ, ದೈಹಿಕ ಉಷ್ಣವನ್ನು ಅಳೆದು, ಚಾರ್ಟಿನಲ್ಲಿ ನಮೂದಿಸಿ ನುಡಿದಳು "ದೈಹಿಕ ಸ್ಥಿತಿ ಒಂದೇ ತೆರನಾಗಿದೆ..."

"ನನಗೂ ಹಾಗೇ ಅನಿಸುತ್ತೆ. ಆದರೆ, ಅವಳೇ ಏನೋ ಭಾವಿಸಿದಂತಿದೆ. ಆಂತರಿಕ ಆವೇಶ ಏನಿದೆಯೋ ದೇವರಿಗೇ ಗೊತ್ತು."

ಅಂದೇ ಅಲ್ಲ; ಭಾಸ್‌ನನ್ನು ಪದೇ ಪದೇ ಕೇಳತೊಡಗಿದಳು. 'ಕಾಗದ ಬಂತೇ' ಎಂದು ಕೇಳುವ ಪ್ರಶ್ನೆಗಳಿಗೆ 'ಬಂದಿದೆ' ಎಂದೇ ಹೇಳುತಿದ್ದೆ. ನಿಜಕ್ಕೂ ಹೇಳುವುದಾದರೆ ಅವನ ಕಾಗದಗಳು ಬರುವುದು ಅಪರೂಪವೇ. ಪ್ರತಿಕಾಗದದಲ್ಲೂ 'ಬಿಡುವೇ ಆಗುವುದಿಲ್ಲ. ನನ್ನ ಡಿಪಾರ್ಟ್‌ಮೆಂಟನ್ನು ಸುವ್ಯವಸ್ಥಿತಗೊಳಿಸುವವರೆಗೆ ಕಷ್ಟ. ಅನಂತರ ಪರವಾಯಿಲ್ಲ;' ಎಂದು ಬರೆಯುತಿದ್ದ. ನಾನು ಒಂದಾದನೇಲೆ ಒಂದು ಬರೆಯುತಿದ್ದರೆ ಅವನು ಉತ್ತರಿಸುತ್ತಿದ್ದುದು ಮೂರುನಾಲ್ಕಕ್ಕೆ ಒಂದರಂತೆ. ಓ ಪಾಟ್ ಎ ಸಯಿಂಟಿಸ್ಟ್ ಹಿ ಈಜ್ ?

ಇಂದು ಇಳಾ ನಾಗಿನಿಯರು ಒಟ್ಟಾಗಿಯೇ ಬಂದಿಳಿದರು. ಅವರನ್ನು ನೋಡಿ ನನಗೆ ಅತ್ಯಾನಂದವಾಯಿತು. ತುಂಬುಹೃದಯದಿಂದ ಸ್ವಾಗತ ನೀಡಿ ಒಳಬರಮಾಡಿಕೊಂಡೆ. ಇಬ್ಬರೂ ನನ್ನ ತಾಯಿಯ ಕೊಠಡಿಗೆ ಹೋಗಿ, ಕ್ಷೇಮಸಮಾಚಾರವನ್ನು ವಿಚಾರಿಸಿದನಂತರ ಹೊರಬಂದು ಸೋಫಾದ ಮೇಲೆ ಕುಳಿತುಕೊಂಡರು.

ಇಳಾ ಕೇಳಿದಳು "ಬಿಮೆಲ್ ಎಲ್ಲಿ ?"

"ಹೊರಗಡೆ ಹೋಗಿದ್ದಾಳೆ."

ನಾಗಿನಿ ಹಾಸ್ಯಪ್ರಧಾನವಾಗಿ ಕೇಳಿದಳು "ಭಾಸ್‌ನಿಂದ ದೂರವಾಗಿ ಏನೆನಿಸುತ್ತೆ ನಿನಗೆ ?"

ನಾನು ಮುಗುಳುನಕ್ಕು ನುಡಿದೆ "ಅವನು ಒತ್ತಾಯಿಸದಿದ್ದರೆ ನಾನು ಇಲ್ಲಿರುತ್ತಿರಲೇ ಇಲ್ಲ !"

"ಅದೇ ನಮಗೂ ನಿಮಗೂ ಇರುವ ವ್ಯತ್ಯಾಸ. ನಾವು ವೃದ್ಧಾಪ್ಯದಲ್ಲಿ ಅವರ ಭಾರವನ್ನು ಹೊರುತ್ತೇವೆ. ಅವರು ನಮ್ಮನ್ನು ಹೊತ್ತು ಹೆತ್ತು ವಿದ್ಯೆ ಬುದ್ಧಿ ಕಲಿಸಿ ಮನುಷ್ಯರನ್ನಾಗಿ ಮಾಡಿದುದನ್ನು ಮರೆಯಲಾದೀತೆ? ಅವರಿಂದಲೇ ನಾವೀಪ್ರಪಂಚದ ಬೆಳಕನ್ನು ಕಂಡಿದ್ದೇವೆ ತಾನೆ?"

"ಅದು ಸರಿಯೇ."

ಅವರಿಬ್ಬರೂ ಭಾರತೀಯವಾದ ಸಿಹಿ ಪದಾರ್ಥಗಳನ್ನು ಮನೆಯಲ್ಲಿ ತಯಾರಿಸಿ ತಂದಿದ್ದರು. ಅದನ್ನು ಮೇಜಿನ ಮೇಲಿಡುತ್ತ ನಾಗಿನಿ ಹೇಳಿದಳು, "ನಿನ್ನ ತಾಯಿಗೆ ಇಂಥ ಸಿಹಿ ಪದಾರ್ಥಗಳು ಇಷ್ಟವಾಗಬಹುದು. ತೆಗೆದು ಕೊಂಡುಹೋಗಿ ಕೊಡಲೇ?"

"ಕೊಟ್ಟರೆ ಏನಾಗುತ್ತೋ?" ನಾನು ಸ್ವಲ್ಪ ಅನುಮಾನಿಸಿದೆ.

"ಈ ದಿನಗಳಲ್ಲಿ ಅಡೆತಡೆಯೇಕೆ? ಏನೇನು ಆಸೆಯಿದೆಯೋ ಅದನ್ನು ಪೂರೈಸಿಕೊಳ್ಳಲಿ."

ಅದು ಸರಿಯೆನಿಸಿತು ನನಗೆ. ಸ್ವಲ್ಪ ತಟ್ಟೆಯಲ್ಲಿಟ್ಟುಕೊಂಡು ಒಳ ಹೋದೆ. ಅವರಿಬ್ಬರೂ ನನ್ನೊಂದಿಗೆ ಬಂದರು. ತಾಯಿ ಸ್ವಲ್ಪ ತಿಂದು ನೋಡಿ 'ಚೆನ್ನಾಗಿದೆ' ಎಂದಳು. ಅನಂತರ ಇನ್ನಿಷ್ಟುಕೊಟ್ಟೆ.

ಅವಳು ಕ್ಷೀಣಿತ ಸ್ವರದಲ್ಲಿ "ನಾಲಿಗೆ ತೀರಕೆಟ್ಟಿದೆ. ಆದರೂ ರುಚಿ ಕಾಣಿಸುತ್ತಿದೆ. ಇದು ಯಾರು ಮಾಡಿದ್ದು? ದಿಸ್ ಈಸ್ ವೆರಿ ಟೇಸ್ಟಿ."

"ಇಳಾ ಮುಂದೆ ಬಂದು ಇದು ನಾನು ಮಾಡಿದ್ದು. ಅದು ನಾಗಿನಿ ಮಾಡಿದ್ದು."

"ಎರಡೂ ಚೆನ್ನಾಗಿದೆ."

ಪ್ರಸನ್ನ ಮುಖದಲ್ಲಿ ನುಡಿದಳು ತಾಯಿ ಬಚ್ಚುಬಾಯಿ ನೊಣೆಯುತ್ತ ಬತ್ತಿಬೆಂಡಾದ ಮುಖಬಿಂಬದಲ್ಲಿನ ಅಸಂಖ್ಯಾತ ರೇಖೆಗಳ ಮಧ್ಯೆ ಮೂಡಿದ ಕಿರುನಗು ಇಳಾ ನಾಗಿನಿಯರಿಗೆ ಸಂತಸ ತರಿಸಿತು.

"ಪಾಪ, ತಾಯಿ!"

"ಇದನ್ನೇ ಇನ್ನಿಷ್ಟು ಮಧ್ಯಾಹ್ನ ಕೊಡು ಜಾನಕೀ" ಎಂದಳು ನಾಗಿನಿ ಸಂತಸಪೂರ್ವಕವಾದ ವದನದಿಂದ.

"ಹೌದು, ಹಾಗೇ ಮಾಡು" ಎಂದಳು ಇಳಾ.

ಅವರಿಬ್ಬರೂ ಇನ್ನಷ್ಟು ಹೊತ್ತಿದ್ದು ನನ್ನ ಮನಸ್ಸಿಗಷ್ಟು ಸಂತಸ ವನ್ನೂಡಿ ಮನೆಗೆ ಹೊರಟಾಗ ತಾಯಿ,

"ನೀವು ಹೀಗೇ ಆಗಾಗ ಬರುತ್ತಿದ್ದರೆ ಜನೀಗೆ ಸಂತೋಷವಾದೀತು" ಎಂದಳು. ಮಂದಹಾಸವನ್ನು ಬೀರಿ.

ಒಂದು ಕಾಲದಲ್ಲಿ ಅವಳಲ್ಲಿದ್ದ ಪೌರುಷೇಯ ಗುಣ ಎಲ್ಲಿ ಅಡಗಿತೋ ಎಂಬಷ್ಟು ಕರುಣಾಜನಕವಾಗಿತ್ತು ಅವಳ ಆತ್ಮೀಯ ಆಹ್ವಾನ. ನಾನು ಸದ್ದಿಲ್ಲದೆ ನಿಟ್ಟುಸಿರುಬಿಟ್ಟೆ.

"ಆಗಬಹುದು."

ಅವರಿಬ್ಬರೂ ತಾಯಿಯ ಕೈಯನ್ನು ಅದುಮಿ ಹಿಡಿದು ಸಂಪೂರ್ಣ ಭರವಸೆ ನೀಡಿ ಕೊಠಡಿಯನ್ನು ಬಿಟ್ಟು ಹೊರಬಂದರು. ಅವರನ್ನು ಬೀಳ್ಕೊಟ್ಟ ನಂತರ ನಾನು ನರ್ಸಳೊಂದಿಗೆ ತಾಯಿಗೆ 'ಸ್ಪಂಜ್ ಬಾತ್' ಕೊಟ್ಟಮೇಲೆ ಅವಳು ಸುಖನಿದ್ದೆ ಮಾಡಿದಳು. ನಾನು ಒಂದು ಗ್ರಂಥವನ್ನು ಹಿಡಿದು ಕೊಂಡು ಕುಳಿತೆ. ಸ್ವಲ್ಪಹೊತ್ತು ಓದಿರಬಹುದೇನೋ ಅಷ್ಟರಲ್ಲಿ ನರ್ಸ್ ಬಂದು ಹೇಳಿದಳು "ತಾಯಿ ನಿನ್ನನ್ನು ಕರೆಯುತಿದ್ದಾಳೆ."

ನಾನು ಗ್ರಂಥವನ್ನು ಮುಚ್ಚಿಟ್ಟು ಒಳಹೋದೆ. ನನ್ನ ಪಾದ ಸಪ್ಪಳ ವನ್ನು ಕೇಳಿಸಿಕೊಳ್ಳುತ್ತ ಅವಳು ನನ್ನ ನಿರೀಕ್ಷಣೆಯಲ್ಲಿಯೇ ಇದ್ದಳು. ಅವಳು ಗಣ್ಣ ನೋಟ ಬಾಗಿಲಲ್ಲೇ ನೆಟ್ಟಿತ್ತು. ನಾನು ಬಳಿಗೆ ಹೋಗಿ,

"ಏನಮ್ಮಾ?"

"ಬಾಸ್ ಎಲ್ಲಿ?"

"ಅವನಿನ್ನೂ ಬಂದಿಲ್ಲವಲ್ಲ?"

"ಛೀ! ಛೀ! ಎಂಥ ಮಾತು! ಈಗಷ್ಟೇ ನನ್ನೊಡನೆ ಮಾತಾಡಿ ಹೋದನಲ್ಲ....? ಮುಂದಿನ ವರಾಂಡದಲ್ಲಿದ್ದಾನೋ ನೋಡು!"

"ಸ್ವಪ್ನ ಕಂಡೆಯಾ"

ಅವಳ ತಲೆಯನ್ನು ನೇವರಿಸುತ್ತಾ ಹೇಳಿದೆ "ನೀನು ಚೆನ್ನಾಗಿ ನಿದ್ದೆ ಮಾಡಿದ್ದೆಯಾದ್ದರಿಂದ ಸ್ವಪ್ನವನ್ನು ಕಂಡಿರಬಹುದು."

"ನಿದ್ದೆಯಲ್ಲಮ್ಮಾ, ಇದೀಗಷ್ಟೆ ಬಾಯಿತುಂಬಾ ಮಾತಾಡಿಹೋದನಲ್ಲ; ಅಷ್ಟರೊಳಗಾಗಿ ಎಲ್ಲಿಗೆ ಹೋಗಿದ್ದಾನು ? ನೀನೊಮ್ಮೆ ಸರಿಯಾಗಿ ನೋಡ ಬಾರದೇ ?"

"ಇರಲಿ. ಅಷ್ಟೇಕೆ ಕಾತರ ? ಸದ್ಯ, ನಿಜವಾಗಿಯೂ ಬರಲಿದ್ದಾನೆ. ಅನಂತರ ನೋಡುವೆ."

"ಈಗಷ್ಟೆ ಬಂದಿದ್ದ....ನಾನು ಪೂರ್ತಿ ಹೇಳುವುದರೊಳಗಾಗಿ ಆಚೆಗೆ ಹೋಗಿಬಿಟ್ಟ. ನಾನು ಹೇಳಬೇಕಾದುದು ಇನ್ನೂ ಬಹಳ ಉಂಟು...."

ಬಿಕ್ಕಿದಳು ತಾಯಿ. ದುಃಖದ ಒತ್ತಡದಿಂದ ಮುಖಬಿಂಬ ಕೆಂಪು ತಳೆಯಿತು. ಅವಳನ್ನು ಸಂತೈಸುತ್ತಾ ನಾನು ಹೇಳಿದೆ "ಅಳಬೇಡ ಅಮ್ಮಾ. ಅವನು ಖಂಡಿತಾ ಬರುತ್ತಾನೆ."

ಆದರೆ ಅವಳಿಗೆ ನನ್ನ ಮಾತಿನಲ್ಲಿ ಖಂಡಿತಾ ನಂಬಿಕೆಯೇ ಮೂಡಲಿಲ್ಲ. ಈಗಷ್ಟೇ ನೋಡಿರುವೆ. ಇವಳೇ ಸರಿಯಾದ ಸುಳಿವು ಕೊಡುತ್ತಿಲ್ಲ ಎಂಬ ಯೋಚನೆ. ನಾನು ಎಷ್ಟೆಷ್ಟು ಹೇಳಿದರೂ ಅಪನಂಬಿಕೆಯೇ. ಅವಳ ಕಣ್ಣುಗಳು ಬಾಗಿಲ ಕಡೆಗೇ ನಿಟ್ಟಿಸುತ್ತಿದ್ದುವು. ನೋಡಿ ನೋಡಿ ಸೋತು ಹೋದನಂತರ ಅವಳೇ ಕೇಳಿದಳು "ಜನೀ! ನನಗವನನ್ನು ನೋಡಬೇಕೆಂದು ತುಂಬ ಆಸೆಯಾಗುತ್ತಿದೆ. ಅವನನ್ನು ಬರಮಾಡು."

"ಆಗಲಿ, ಇಂದೇ ತಂತಿ ಕಳುಹಿಸುವೆ."

ಅವಳಿಗೆ ಜ್ಞಾಪಕಶಕ್ತಿ ತೀವ್ರ ಕುಂದುತಿದ್ದುದರಿಂದ ಇಂದು–ನಾಳೆ ಗಳ ಅರಿವು ಕೂಡ ಮೂಡುತ್ತಿರಲಿಲ್ಲ. ಬಂದನೇ ? ಬಂದನೇ ? ಎಂಬ ಪ್ರಶ್ನೆಯೇ ಅಧಿಕವಾಗಿ ಹೋಯಿತು. ಊಟತಿಂಡಿಗಳಲ್ಲಿ ಕ್ರಮತಪ್ಪಿತು. ಔಷಧ–ಪಥ್ಯಪಾನಾದಿಗಳಲ್ಲೂ ನಿರಾಸಕ್ತಳಾದಳು. ನಿಶ್ಶಕ್ತಿ ದಿನೇದಿನೇ

ಹೆಚ್ಚುತಿತ್ತು. ನರಗಳು ಶೀವ್ರಗತಿಯಲ್ಲಿ ದುರ್ಬಲಗೊಳ್ಳುತ್ತಿದ್ದುವು. ನನಗಂತೂ ಈಚಿಗೆ ಬಂದರೆ ಏನಾಗಿಬಿಡುತ್ತದೋ ಎಂಬ ಆಶಂಕೆ ಪ್ರತಿಕ್ಷಣ ಕ್ಷಣವೂ ಕಾಡತೊಡಗಿತು.

ಸಾಯಂಕಾಲದಲ್ಲಿ ಆನಂದ್ ಮತ್ತು ವಸಂತ್ ಆಫೀಸಿನಿಂದ ಹೀಗೇ ಬಂದರು. ಅವಳು ಒಳ ಬರುತ್ತಲೂ ನಾನು "ತಾಯಿಯ ಸ್ಥಿತಿ ದಿನೇ ದಿನೇ ಕೆಡುತ್ತಲಿದೆ. ಇನ್ನು ಯಾವ ಗಳಿಗೆಯಲ್ಲಿ ಜೀವ ಹಾರುತ್ತದೋ ಎನಿಸುತ್ತಿದೆ ನನಗೆ." ಎಂದೆ. ಆಗ ಅವರಿಬ್ಬರೂ ಒಳಕೋಣೆಗೆ ಹೋಗಿ ಹಾಸಿಗೆಯ ಬಳಿಯಲ್ಲಿ ನಿಂತರು. ಅವಳು ಅರೆಮುಚ್ಚಿದ ಕಣ್ಣುಗಳನ್ನು ತೆರೆದು ಬಿರುಬಿರನೆ ನೋಡುತ್ತ "ಯಾರು ಭಾಸ್ ? ಬಂದೆಯಾ, ಬಾಪ್ಪ ! ಇಲ್ಲಿ ಕೂಡು !" ಎಂದಳು ಅತೀವ ಜೀವ ಕಾತರತೆಯಿಂದ.

ನಾನು ಸಮಾಧಾನಿಸುವ ದನಿಯಲ್ಲಿ "ಇವರು ಆನಂದ್, ಅವರು ವಸಂತ್. ಭಾಸ್ ಇನ್ನೂ ಬಂದಿಲ್ಲ. ಇಂದು ನಾಳೆಯೊಳಗಾಗಿ ಬರಬಹುದು" ಎಂದೆ. ಹೃದಯಧಾತ್ರಿ ಬಿಸಿಲಟ್ಟಿದ ಮಂಜಿನಂತೆ ಕರಗಿ ಸಹಸ್ರ ಸ್ರೋತಗಳಾಗಿ ಹರಿಯುತ್ತಿರುವಂತೆ ಭಾಸವಾಯಿತು. ಅವಳ ಮುಖ ಮೈಗಳಲ್ಲಿ ತುಂತುರು ತುಂತುರಾಗಿ ಮೂಡಿದ ಬೆವರಿನ ಹನಿಗಳನ್ನು ಒರಿಸಲೆಂದು ಟವಲ್ಲಿಗೆ ಕೈಹಚ್ಚಿದಾಗ ಅವಳು ನನ್ನ ಕೈಗಳನ್ನು ಹಿಡಿದುಕೊಂಡು ಆತಂಕದಿಂದ ಕೇಳಿದಳು "ನಿಜವಾಗಿಯೂ ಹೇಳು ಇವನು ಭಾಸ್ ಅಲ್ಲವೇ ?"

ನಾನು ಹೇಳಲಾರದೇ ಹೇಳಿದೆ "ಅಲ್ಲಮ್ಮಾ ಸರಿಯಾಗಿ ನೋಡು ! ಕನ್ನಡಕ ಬೇಕೆ ?"

"ನನಗೆ ಏನೂ ಕಾಣಿಸುತ್ತಿಲ್ಲ ನೀನೇ ಹೇಳು."

"ಅಲ್ಲಮ್ಮಾ ಇವರು ಬೇರೆ."

"ನಿಜವಾಗಿ...?"

"ಬೇಸರಿಸಬೇಡ. ಭಾಸ್ ಸದ್ಯದಲ್ಲಿ ಬರುತ್ತಾನೆ."

ಆಗ ಆನಂದ್ ಮುಂದೆ ಬಂದು ಹೇಳಿದ "ನಿಮಗೆ ಏನಾದರೂ ಅಗತ್ಯವಿದ್ದರೆ ಹೇಳಿ ಭಾಸ್ ಪರವಾಗಿ ನಾನೇ ಮಾಡುವೆ. ನನ್ನನ್ನು ಭಾಸ್ ಎಂದೇ ತಿಳಿದುಕೊಳ್ಳಿ ಸಂಕೋಚಪಡಬೇಡಿ."

ಅವಳು ಕ್ಷೀಣದೀರ್ಣವಾದ ದನಿಯಲ್ಲಿ ಹೇಳಿದಳು "ಏನು ಹೇಳಲಿ ಹೇಳು ? ಭಾಸ್‌ನನ್ನು ನೋಡದಿದ್ದರೆ ಸಾಯುವಾಗಲೂ ಸುಖವಿಲ್ಲ."

"ಏನಾದರೂ ಮಾಡುವ ಅಗತ್ಯವಿದೆಯೇ ?"

"ಏನು ಹೇಳಬೇಕೋ ನನಗೆ ತಿಳಿಯುವುದಿಲ್ಲ. ಈಗೀಗ ಮನಸ್ಸಿನ ಆರೋಗ್ಯವೂ ಹಾಳಾಗುತ್ತಿದೆ. ಯೋಚಿಸಿದರೂ ಅರ್ಥವಾಗುವುದಿಲ್ಲ."

"ವಯಸ್ಸಾದ ಮೇಲೆ ಎಲ್ಲರೂ ಹಾಗೆಯೇ. ಒಮ್ಮೆ ಮರೆವು. ಇನ್ನೊಮ್ಮೆ ತಿಳಿವು. ಇದೇನೂ ವಿಶೇಷವಲ್ಲ ಬಿಡಿ." ಎಂದ ಆನಂದ್; ಕಾರುಣ್ಯ ಭಾವವನ್ನು ತನ್ನಲ್ಲೇ ಹುಗಿದಿಟ್ಟು.

ನನ್ನ ಮನಸ್ಸು ಮಂಜಿನಂತೆ ಕರಗಿತು. ಅವಳು ಭಾಸ್ ಬರುವ ವರೆಗೆ ಜೀವ ಹಿಡಿದರೆ ಸಾಕು ಎಂದು ಮನದಲ್ಲೇ ಪ್ರಾರ್ಥಿಸಿಕೊಂಡೆ. ಮನಸ್ಸಿನ ಅಮೂರ್ತ ಭಾವನೆಗಳು ಚಿತ್ತಭಿತ್ತಿಯ ಮೇಲೆ ಮೂಡಿದ ವಿಶಿಷ್ಟ ಅನುಭವ ಯೋಚಿಸಿದರೂ ಅರ್ಥವಾಗದ ಸ್ಥಿತಿಯಲ್ಲಿ ಮನಸ್ಸಿನ ಅಲೆಗಳನ್ನು ಕಟ್ಟಿಹಾಕಿತು. ಬದುಕು–ಸಾವುಗಳ ನಡುವೆ ಸಂಭವಿಸುವ ತೀವ್ರ ಹೋರಾಟ ಅಥವಾ ಆ ಎರಡು ಪದಗಳ ಅರ್ಥವ್ಯಾಪ್ತಿ ಒಂದ ಕ್ಕೊಂದು ಸಮನ್ವಯಿಸುವಷ್ಟು ಬೆಸೆದುಕೊಂಡ ವಿಶೇಷ ನನ್ನ ಅಂತ ರಂಗವನ್ನು ಸಮೂಲವಾಗಿ ಅಲುಗಾಡಿಸಿತು. ಕಣ್ಣುಗಳು ಅನಿರೀಕ್ಷಿತ ವಾಗಿ ತುಂಬಿ ಬಂದುವು.

ವಸಂತ್ ಕೇಳಿದ "ಭಾಸ್ ಇಂದು ನಾಳೆಯೊಳಗಾಗಿ ಬರಬಹುದು ಅಲ್ಲವೇ ?"

"ಬರಬಹುದು."

ಕೊನೆಗೆ ಅವರು ಹೊರಡುವ ಸಮಯದಲ್ಲಿ "ನಿಮಗೆ ಆರ್ಥಿಕ– ವೈಯಕ್ತಿಕ ಯಾವುದೇ ಸಹಾಯಬೇಕಾದರೂ ನಿಸ್ಸಂಕೋಚವಾಗಿ ತಿಳಿಸಿ.

ಹಗಲಾದರೂ ಸರಿ. ರಾತ್ರಿಯಾದರೂ ಸರಿ. ನಾವು ನಿಮಗೆ ನೆರವಾಗುತ್ತೇವೆ."

"ತುಂಬ ವಂದನೆಗಳು!" ನಾನು ಅತ್ಯಂತ ವಿನಯಪೂರ್ವಕವಾಗಿ ಅಂದೆ.

ಅವರು ಹೊರಟರು. ನಾನು ಅವರನ್ನು ಬೀಳ್ಕೊಟ್ಟು ಒಳಹೋಗಿ ಪರ್ಸ್ ತೆಗೆದು ನೋಡಿದರೆ ಹಣವಿರಲಿಲ್ಲ. ಆ ಬೀರುವಿನ ಬೀಗ ಸರಿಯಿರಲಿಲ್ಲ; ಒಂದು ಕಡ್ಡಿಯಿಂದ ತಿರುಗಿಸಿದರೂ ಬರುತ್ತದೆ. ಅದರಿಂದಾಗಿ ಮನೆಗೆ ಹೆಚ್ಚು ಹಣ ತರುತ್ತಿರಲಿಲ್ಲ. ಬ್ಯಾಂಕ್ ಸ್ವಲ್ಪ ದೂರವೇ. ದಿನವೂ ಹೋಗುವುದೆಂಥರೆ ಸಮಯ ಹಾಳು. ಆದರೂ ತಾಯಿ ಕ್ಷೀಣಿಸುತ್ತಿದ್ದಾಳೆ ಎಂದು ಹಿಂದಿನ ದಿನ ಸಾವಿರ ಪೌಂಡ್ ತಂದಿದ್ದೆ. ಖಾಲಿ ಪರ್ಸನ್ನು ನೋಡುತ್ತಲೂ ಎದೆ 'ದಸಕ್' ಎಂದಿತು. ಈವರೆಗೆ ಮಾಯವಾಗುತ್ತಿದ್ದ ಹತ್ತಿಪ್ಪತ್ತು ಪೌಂಡುಗಳ ವಿಚಾರ ನನಗೆ ಅನುಮಾನಾಸ್ಪದವೇ. ದಿನವಹಿ ಲೆಕ್ಕ ಬರೆಯುತ್ತಿಲ್ಲವಾದ್ದರಿಂದ ನಾನೇ ಖರ್ಚು ಮಾಡಿ ಮರೆತಿರುವೆನೋ ಎಂಬ ಆಶಂಕೆಯಿಂದ ಸುಮ್ಮನಾಗುತಿದ್ದೆ. ಇದು ಬೆನ್ನೊಲ್ಲಳ ಕೆಲಸ ಎಂಬುದು ಇಂದು ದೃಢವಾಯಿತು ಮನಸ್ಸಿಗೆ. ಹಿಂದೆಲ್ಲಾ ಕಳುವಾದುದೂ ಅವಳಿಂದಲೇ. ಇದುವರೆಗೆ ಅವಳನ್ನು ಕೇಳಲಿಲ್ಲ. ಈಗ ಕೇಳದೆ ವಿಧಿಯಿರಲಿಲ್ಲ. ನರ್ಸ್ ತಾಯಿಯ ಕೊಠಡಿಯನ್ನು ಬಿಟ್ಟು ಒಳಕೋಣೆಗೆ ಬಂದವಳೇ ಅಲ್ಲ. ಆ ಕೊಠಡಿ ಹೊರಗಣ ವರಾಂಡಕ್ಕೆ ಹೊಂದಿಕೊಂಡಿದ್ದುದರಿಂದ ಅವಳು ಒಳಬರುವುದಕ್ಕೆ ಕಾರಣವೂ ಇರಲಿಲ್ಲ. ಮೇಲಾಗಿ ಅವಳು ಅಂತಹವಳೂ ಅಲ್ಲ. ಹಾಗೇ ನಾನು ಎಷ್ಟೋ ಸಲಿ ತಾಯಿಯ ಕೊಠಡಿಯಲ್ಲೇ ಪರ್ಸನ್ನು ಬಿಟ್ಟು ಮರೆತಾಗ ಅವಳೇ ಅದನ್ನು ಎತಿಟ್ಟಿರುತಿದ್ದಳು. ಒಂದು ಚಿಕ್ಕಾಸೂ ಹೋಗುತ್ತಿರಲಿಲ್ಲ. ಸದ್ಯ ತಾಯಿ ಕಣ್ಣು ಮುಚ್ಚಿದರೆ ಹಣಕ್ಕೇನು ಮಾಡಲಿ ಎಂದು ಮನಸ್ಸು ತಳಮಳಿಸಿತು. ಈಗ ಮತ್ತೆ ಹೋಗಿ ಹಣತಾರದೇ ವಿಧಿಇರಲಿಲ್ಲ. ತಂದು ಇಡುವುದಾದರೂ ಎಲ್ಲಿ? ತಾಯಿಯ ಕೊಠಡಿಯಲ್ಲಿ ಬೀರು

ಇಲ್ಲವೇ ಇಲ್ಲ. ಏನು ಮಾಡಲಿ? ಎಲ್ಲಿ ಇಡಲಿ? ಎಂಬ ಚಿಂತೆ ಮನೆ ವನ್ನು ಕಾಡತೊಡಗಿತು.

ನೋಟವನ್ನು ಗಡಿಯಾರದ ಮೇಲೆ ಹೊರಳಿಸಿದೆ. ಆಗಲೇ ಗಂಟೆ ಹನ್ನೆರಡಾಗುತ್ತಿದೆ. ಹಣವನ್ನು ಒಂದು ಗಂಟೆಯ ಒಳಗೆ ಡ್ರಾ ಮಾಡಿ ಕೊಳ್ಳದಿದ್ದರೆ ಇನ್ನು ನಾಳೆಯವರೆಗೆ ಹಣ ತೆಗೆಯುವಂತಿಲ್ಲ...ಆಲೋಚನೆ ಬಂದೊಡನೆಯೇ ತಾಯಿಯ ಕೋಣೆಗೆ ಹೋದೆ. ನರ್ಸ್ ನನ್ನ ಮುಖ ಭಾವವನ್ನು ನೋಡಿ ಆಶ್ಚರ್ಯದಿಂದ ಕೇಳಿದಳು "ಏಕೆ ಮುಖ ಪೆಚ್ಚಾ ಗಿದೆ? ಏನು ಸಮಾಚಾರ?"

ನಾನು ಇದ್ದ ವಿಷಯವನ್ನು ಹೇಳಿದಾಗ ಆಕೆ ಬೆಪ್ಪಾಗಿ ನಿಂತಳು.

"ಸಿಸ್ಟರ್, ಈಗ ಯೋಚಿಸಲಾಗಲೀ ಹುಡುಕಲಾಗಲೀ ಸಮಯ ವಿಲ್ಲ. ಸಧ್ಯ ಹೋಗಿ ಇನ್ನಷ್ಟು ಹಣ ತಾರದಿದ್ದರೆ ನಾಳೆಯವರೆಗೆ ಹಣ ಸಿಕ್ಕುವುದಿಲ್ಲ. ತಾಯಿಯ ಅವಶ್ಯಕತೆಗಾಗಿಯಾದರೂ ಮನೆಯಲ್ಲಿ ಹಣವಿರಲೇ ಬೇಕು. ಬ್ಯಾಂಕಿಗೆ ಹೋಗಿ ಹಣ ತರುವೆ. ಅನಂತರ ಮುಂದಿನ ವಿಚಾರ."

ಅಷ್ಟೆಂದು ಅಲ್ಲಿಂದ ಹೊರಟೇಬಿಟ್ಟೆ. ಉರಿಬಿಸಿಲು ತಲೆಯನ್ನು ಸುಡು ತಿತ್ತು. ನಾನು ಅವಸರವಸರವಾಗಿ ನಡೆದು ಬ್ಯಾಂಕ್ ಮೆಟ್ಟಿಲನ್ನು ಹತ್ತಿದೆ. ಮೊದಲಿಂದಲೂ ನಮ್ಮ ಮನೆಯವರೆಲ್ಲಾ ಅದೇ ಬ್ಯಾಂಕಿನಲ್ಲಿ ವ್ಯವಹಾರ. ಅಲ್ಲಿನ ಎಲ್ಲರಿಗೂ ನಮ್ಮ ಪರಿಚಯವಿದೆ. ನಾನು ಒಳಹೋಗಿ ಐನೂರು ಪೌಂಡಿಗೆ ಚೆಕ್ ಬರೆದುಕೊಟ್ಟೆ.

ಆದರೆ, ಅಲ್ಲಿದ್ದುದು ಇನ್ನೂರ ಮೂವತ್ತು ಪೌಂಡ್ ಮಾತ್ರ! ನನಗೆ ಭಯಾಶ್ಚರ್ಯಗಳು ಏಕಕಾಲದಲ್ಲೇ ಮೂಡಿದುವು. ನಾನು ನಿನ್ನೆ ಸಾವಿರ ಪೌಂಡ್ ಡ್ರಾ ಮಾಡಿದಾಗ ಅಲ್ಲಿ ಇನ್ನೂ ಐದು ಸಾವಿರದ ಇನ್ನೂರು ಮೂವತ್ತು ಪೌಂಡ್ ಇದ್ದುದು ನನ್ನ ಪಾಸ್‌ಬುಕ್ಕಿನಲ್ಲಿ ನಮೂದಾ ದಾಗಿದೆ. ಇದೆಂತಹ ಆಶ್ಚರ್ಯ? ನಾನು ಪಾಸ್‌ಬುಕ್ಕನ್ನು ಮುಂದಿಟ್ಟೆ.

"ಈ ಬೆಳಿಗ್ಗೆಯಷ್ಟೆ. ನಿನ್ನ ಅಕ್ಕ ನಿನ್ನ ಸಹಿ ಇದ್ದ ಚೆಕ್‌ಕೊಟ್ಟು ಐದು ಸಾವಿರ ಪೌಂಡ್‌ಗಳನ್ನು ತೆಗೆದುಕೊಂಡಿದ್ದಾಳೆ."

"ನಾನು ಸಹಿ ಮಾಡಲಿಲ್ಲವಲ್ಲ ?"

ಒಡನೆಯೇ ಗೊಂದಲಕ್ಕಿಟ್ಟುಕೊಂಡಿತು. ಆ ಚೆಕ್ ಲೀಫ್ ತೆಗೆದು ನೋಡಿದರೆ ನನ್ನ ಸಹಿಯನ್ನು ಅವಳು 'ಫೋರ್ಜರಿ' ಮಾಡಿದ್ದಾಳೆ ! ಅಲ್ಲಿ ಸಂಕಷ್ಟವನ್ನು ಯಾರೊಂದಿಗೆ ಹೇಳಿಕೊಳ್ಳಲಿ ? ಅತೀವ ಅವಮಾನ ಸಂಕಷ್ಟಗಳಿಂದ ದಿಗ್ಮೂಢಳಾದೆ. ಸ್ವಲ್ಪ ಹೊತ್ತು ಏನು ಮಾಡಲೂ ತೋರಲಿಲ್ಲ. ಆಗ ಮ್ಯಾನೇಜರ್ "ಏನು ಮಾಡುತ್ತಿ ? ಕಂಪ್ಲೈನ್ಟ್ ಕೊಡುತ್ತೀಯೇನು ?" ಎಂದರು.

ನಾನು ಸ್ವಲ್ಪ ಹೊತ್ತು ಯೋಚಿಸಿ "ನಾನು ಈಗಲೇ ಏನೂ ಹೇಳಲಾರೆ. ಮೂರು ದಿನ ಕಾಲಾವಕಾಶ ಕೊಡಿ" ಎಂದೆ. ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ನಡೆಯುತಿತ್ತು; ಮನಸ್ಸು ದಿಗ್ಭ್ರಮೆಗೊಂಡಿತ್ತು.

"ಆಗಲಿ, ಚಿಂತಿತಳಾಗಬೇಡ. ಈ ಹಣ ದಕ್ಕಿಸಿಕೊಳ್ಳುವುದೇನೂ ಕಷ್ಟವಿಲ್ಲ."

ನಾನು ಉಳಿದಷ್ಟು ಹಣವನ್ನು ಡ್ರಾ ಮಾಡಿಕೊಂಡು ಅಲ್ಲಿಂದ ಹೊರಟೆ. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿತ್ತು. ಭಾರಭಾರವಾದ ತಲೆಯನ್ನು ಹೊರಲಾರದಷ್ಟು ದೇಹ ಸೋತಿತು. ಹೇಗೋ, ಅಂತೂ ಇಂತೂ ಹಾದಿಯನ್ನು ಸವೆಸಿ ಮನೆಯನ್ನು ಮುಟ್ಟಿದೆ. ನರ್ಸ್ ತಾಯಿಯ ಬಳಿ ಕುಳಿತಿದ್ದಳು. ಅವಳ ಮುಂದೆ ಈ ವಿಚಾರವನ್ನು ಇಡುವುದೇ ಬಿಡುವುದೇ ಎಂಬಷ್ಟು ಸಂಕೋಚ ನನಗೆ. ಸಿಟ್ಟು–ದುಃಖಗಳೆರಡೂ ಏಕಕಾಲದಲ್ಲಿ ಮೂಡಿದುವು. ಆದರೆ, ಬಿಂಕ.

ನನ್ನ ಮನಃಪರಿಸ್ಥಿತಿಯನ್ನು ಅರಿತುಕೊಂಡು ನರ್ಸ್ ಕೇಳಿದಳು "ಅಲ್ಲೂ ಏನಾದರೂ ಕೈವಾಡ ನಡೆದಿದೆಯೋ ?"

ಈಗ ಹೇಳದಿರಲಾಗಲಿಲ್ಲ. ಅಲ್ಲದೆ ನರ್ಸ್ ದಿನವೂ ನೋಡುತಿದ್ದಾಳೆ ಬೆನ್ನೆಲ್ಲಳ ಅಸಡ್ಡೆ–ಅಕ್ರಮ–ಅವಜ್ಞೆಗಳನ್ನು. ಅಂದಮೇಲೆ ಮುಚ್ಚಿಡುವುದೇನು ? ನಾನು ಸಂಕಟಪೂರ್ಣ ದನಿಯಲ್ಲಿ ವಿಷಯವನ್ನು ಮುಂದಿಟ್ಟೆ.

"ನೀನೇಕೆ ಅಂಜಿಕೊಳ್ಳಬೇಕು ? ಪೋಲೀಸ್‌ಗೆ ಕಂಪ್ಲೈಂಟ್ ಕೊಡುವುದಾಗಿ ಹೇಳು. ಅವಳೇ ಹಣವನ್ನು ಹಿಂದಿರುಗಿಸುತ್ತಾಳೆ. ಅವಳನ್ನು ಕೇಳದಿರಬೇಡ" ಎಂದಳು ಅತ್ಯಂತ ವಿಷಾದಪೂರ್ವಕವಾಗಿ. ಮುಖಬಿಂಬ ವಿವರ್ಣವಾಯಿತು. ಪುನಃ "ಇಂತಹ ನಾಚಿಕೆಗೆಟ್ಟವರನ್ನು ನಾವೆಲ್ಲೂ ಕಾಣಲಿಲ್ಲ. ಬಹಳ ನೀಚಬುದ್ಧಿ !"

ನಾವು ತಾಯಿಗೆ ಈ ವಿಷಯವನ್ನು ತಿಳಿಸಲಿಲ್ಲ. ಈ ಸಲಿ ಹಣವನ್ನು ತಾಯಿಯ ಹಾಸಿಗೆಯಡಿಯಲ್ಲಿ ಮುಚ್ಚಿಡಲು ನರ್ಸ್ ಸಲಹೆ ಮಾಡಿದಳು. ನಾನು ಅದರಂತೆಯೇ ಮಾಡಿದೆ. ಆದರೆ ಮನಸ್ಸಿಗೆ ಸಮಾಧಾನವೇ ಇಲ್ಲ. ಏನು ಮಾಡಲಿ ? ಹೇಗೆ ಕೇಳಲಿ ? ಎಂಬ ಪ್ರಶ್ನೆ ತಲೆಯನ್ನು ಹಿರಿದು ತಿನ್ನುತಿತ್ತು. ನಾನು ತಾಯಿಗೆ ಪಥ್ಯ ಪಾನಾದಿಗಳನ್ನು ಕೊಟ್ಟು ನನ್ನ ಊಟವನ್ನು ಮುಗಿಸಿ....ಇಂದು ನಾಳೆಯೊಳಗಾಗಿ ಭಾಸ್ ಬಂದಿದ್ದರೆ ಒಳ್ಳೆಯದಿತ್ತು. ಏನು ಗತಿಯೋ, ದೇವರೇ ಕಾಪಾಡು! ಎಂದು ಬಾರಿಬಾರಿಗೂ ಪ್ರಾರ್ಥಿಸಿಕೊಂಡೆ.

ಇಂದು ಬೆಮೆಲ್ ಊಟಕ್ಕೆ ಬರಲಿಲ್ಲ. ದಿನವೂ ಬರುತಿದ್ದ ಅವಳು ಇಂದು ಬಾರದಿರಲು ಕಾರಣವಿಲ್ಲದಿರಲಿಲ್ಲ. ರಾತ್ರಿಗೆ ಬಂದುದು ನಾವು ದೀಪ ನಂದಿಸಿದ ಮೇಲೆ. ನಾನು ಬಾಗಿಲು ತೆಗೆಯಲು ಎದ್ದಾಗ ಎದೆ ಡವಡವ ಬಡಿದುಕೊಳ್ಳಹತ್ತಿತು. ಈಗ ತಾಯಿ ಮಲಗಿದ್ದಾಳೆ. ಗದ್ದಲವಾಗುವುದು ಬೇಡ; ಬೆಳಿಗ್ಗೆ ಕೇಳಿದರಾಯಿತು ಎಂದುಕೊಂಡೆ. ರಾತ್ರಿ ಏನು ಮಾಡಿದರೂ ನಿದ್ದೆ ಬರಲಿಲ್ಲ. ಇವಳು ಇಷ್ಟು ಹೀನಾಯವಾಗಿ ವರ್ತಿಸುತ್ತಾಳೆಂದು ಕನಸಿನಲ್ಲೂ ಭಾವಿಸಿರದ ನನಗೆ ಹುಚ್ಚು ಹಿಡಿದಂತಾಯಿತು. ಚಿಂತಾಕ್ರಾಂತಳಾದೆ.

ಬೆಳಗ್ಗೆ ಎದ್ದು ಮುಖಮಜ್ಜನ ಮಾಡಿ ಹೊರಬಂದ ಮೇಲೆ ಅವಳ ಪ್ರತೀಕ್ಷೆಯಲ್ಲಿ ವರ್ತಮಾನ ಪತ್ರಿಕೆಯೊಂದರಲ್ಲಿ ಕಣ್ಣಾಡಿಸುತ್ತ ಕುಳಿತು ಕೊಂಡೆ. ಮನಸ್ಸು ಭಯ–ಆತಂಕ–ಬೇಸರಗಳಿಂದ ತುಂಬಿ ಹುಚ್ಚೆದ್ದಿತ್ತು. ಒಂದೊಂದು ಕ್ಷಣವೂ ಆತಂಕಪೂರ್ಣವಾಗಿ ಉರುಳುತ್ತಿರುವಾಗಲೇ ಅವಳ ಕೊಠಡಿಯ ಬಾಗಿಲು ತೆರೆಯಿತು. ಹಾಲ್ಡೇನ್ ಮೊದಲು ಶೌಚದ ಕೊಠಡಿಗೆ ಹೋದ. ಅನಂತರ ಬೆಮೆಲ್ ಎದ್ದುಬಂದಳು. ನಾನು ಅವಳನ್ನು ಕೇಳಿದೆ,

“ಬೆಮೆಲ್ ! ನನ್ನ ಪರ್ಸಿನಿಂದ ಹಣ ತೆಗೆದವರಾರು ?”

“ನಾನೇ !... ಐ ಓನ್ಲೀ ಡಿಡ್ ಇಟ್ !”

“ಬ್ಯಾಂಕಿನಿಂದ ?”

“ನಾನೇ !”

“ಇದೆಂತಹ ಹುಚ್ಚು ಕೆಲಸ ? ನನ್ನ ಹಣವನ್ನು ನೀನೇಕೆ ಮುಟ್ಟಿದೆ ?”

“ನನಗದರ ಅಗತ್ಯವಿತ್ತು !”

“ಹಾಗೆಂದರೆ ಹೇಗೆ ? ನಾನು ಈ ಮನೆ ಹೇಗೆ ನಡೆಸಲಿ ? ಮನೆ ಬಾಡಿಗೆ, ತಾಯಿ ವೆಚ್ಚ, ನರ್ಸಿನ ಸಂಬಳ, ಡಾಕ್ಟರ ಬಿಲ್ಲು, ನನ್ನ ಖರ್ಚು ಇದಕ್ಕೆಲ್ಲಾ ಏನು ಮಾಡಲಿ ? ದಯವಿಟ್ಟು ನನ್ನ ಹಣವೆಲ್ಲಾ ಕೊಟ್ಟುಬಿಡು. ಇದು ತಮಾಷೆಯಲ್ಲ !”

“ನನ್ನ ಬಳಿ ಕಾಸಿಲ್ಲ. ನಾನು ಸಾಲಕ್ಕೆ ಕಟ್ಟಬೇಕಾಗಿತ್ತು. ಕಟ್ಟಿ ರುವೆ; ನಿನ್ನ ಹಣವನ್ನು ಎಂದಾದರೂ ತೀರಿಸೋಣ. ಈಗ ಮಾತ್ರ ಕೇಳಲೇಬೇಡ.”

“ನನಗೆ ದಿನಗಳೆಯುವುದು ಕಷ್ಟ. ಮೂರು ಸಾವಿರ ಪೌಂಡಾದರೂ ಕೊಡು.”

ಅವಳು ಸಿಟ್ಟಿಗೆದ್ದು ಉಚ್ಚಧ್ವನಿಯಲ್ಲಿ ಅರಚಿದಳು "ನಾನು ಇಷ್ಟು ದಿನ ಭಿಕ್ಷೆ ಬೇಡಿ ತಿನ್ನಲಿಲ್ಲವೇ ಹಾಗೆಯೇ! ನೀನೂ ಕೆಲವು ಕಾಲ ಭಿಕ್ಷೆ ಬೇಡು! ಅದೇನೂ ಕೇಡಲ್ಲ!"

"ಬೆಮೆಲ್! ತಾಯಿಯ ಸ್ಥಿತಿಗತಿಯನ್ನು ಯೋಚಿಸಿ ಮಾತಾಡು! ನಾವು ಇರುವುದು ಸಾವು–ಬದುಕಿನ ಹೋರಾಟದಲ್ಲಿ."

"ನಿನಗೆಷ್ಟು ಕಷ್ಟವಿದೆಯೋ ನನಗೂ ಅಷ್ಟೇ ಕಷ್ಟವಿದೆ!"

"ನೋಡು! ನೀನು ಹೀಗೆಲ್ಲಾ ಧೂರ್ತತನದಿಂದ ವರ್ತಿಸುವುದಾದರೆ ನಾನು ಪೋಲೀಸಿಗೆ ಕಂಪ್ಲೈಂಟ್ ಕೊಡಬೇಕಾಗುತ್ತದೆ. ನಿನ್ನ ವರ್ತನೆ ಶುದ್ಧ ತಪ್ಪು! ಖಂಡಿತ...."

ಮಾತು ಮುಗಿಯುವುದರೊಳಗಾಗಿ ಅವಳು "ಕೊಡು ನೋಡೋಣ! ನಿನ್ನನ್ನು ನುಚ್ಚುನುರಿ ಮಾಡಿ ಥೇಮ್ಸ್‌ನದಿಯಲ್ಲಿ ಮುಳುಗಿಸದಿದ್ದರೆ ಕೇಳು! ಓಹೋ ನಿನ್ನ ಜೋರು ಕೇಳುವವರಾರು?" ಎಂದು ಚೀರಿದಳು. ಮುಖಬಿಂಬದಲ್ಲಿ ಕೋಪದ ಜ್ವಾಲಾವಹ್ನಿ ಜ್ವಲಿಸುತಿತ್ತು.

ಅದೇ ವೇಳೆಗೆ ಹಾಲ್ಡೇನ್ ಹೊರಬಂದ. ಬೆಮೆಲ್ ನನ್ನ ಮಾತನ್ನು ಅವನಿಗೆ ವರದಿ ಮಾಡಿ ಪುನಃ ಚೀರಿದಳು "ನೀನೇನಾದರೂ ಧೂರ್ತತನಕ್ಕಿಳಿದರೆ ನಿನ್ನ ಕತೆ ಮುಗಿದಂತೆಯೇ!"

ನಾನು ಅವಾಕ್ಕಾದೆ. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿತ್ತು. ಯೋಚನೆಯಲೆಗಳು ಸ್ತಬ್ಧವಾದವು. ಅವನು ನನ್ನ ಎದುರಾಗಿ ನಿಂತು "ಹೇಳು! ಏನು ಮಾಡುತ್ತಿ?" ಎಂದು ಅರಚಿದ. ನಿಜವಾಗಿಯೂ ನಾನು ನಡುಗಿಹೋದೆ. ಕೈಕಾಲುಗಳ ಶಕ್ತಿ ಕುಂದಿತು. ಒಡನೆ ಅವನು ನನ್ನ ಕೂದಲು ಹಿಡಿದು ನಾಲ್ಕಾರು ಬಾರಿ ಕೆನ್ನೆಯ ಮೇಲೆ ಚಟೀರನೆ ಬಿಗಿದ.

ಇದೆಲ್ಲವನ್ನು ಬಾಗಿಲಲ್ಲಿ ನಿಂತ ನರ್ಸ್ ನೋಡಿ ನನ್ನ ಸಹಾಯಕ್ಕೆ ಬರುವುದರೊಳಗಾಗಿ ನಾನೇ ಅವಳ ಕಡೆಗೆ ಧಾವಿಸಿದ್ದೆ. ಅವಳು ನನ್ನನ್ನು ಆಲಿಂಗಿಸಿಕೊಂಡು "ಮಗೂ! ಎದೆಗುಂದಬೇಡ."

ನಾನು ಅಳುತ್ತಳುತ್ತ "ಮಗು ತೊಟ್ಟಿಲಲ್ಲಿದೆ ಸಿಸ್ಟರ್ !" ಎಂದೆ.

ಅವಳು ಒಳಹೋಗಿ ಮಗುವನ್ನು ಎತ್ತಿಕೊಂಡು ಬಂದಳು. ಇನ್ನೂ ನಿದ್ದೆಯಾರದ ಕಣ್ಣುಗಳನ್ನು ಮುಚ್ಚಿಕೊಂಡು ಮಗು ಮುಸುಮುಸು ಎನ್ನುತಿತ್ತು. ಹಾಗೇ ಮಂಚದ ಮೇಲೆ ಮಲಗಿಸಿದೆ. ಆಗಿನಿಂದಲೂ ಮಗುವನ್ನು ಕಂಡರೆ ಆಗುತ್ತಿರಲಿಲ್ಲ, ಬೆಮ್ಮಲ್ಲಳಿಗೆ. ಅವಳು ಒಂದಿನವೂ ಅದನ್ನು ಮುಟ್ಟಲ್ಲ, ಮಾತಾಡಿಸಿಲ್ಲ. ಅವಳ ಕಡೆಗೆ ಹೋದರೆ ಗದರಿಸಿ ಓಡಿಸುತ್ತಾಳೆ. ಅಂತಹ ಕ್ರೂರಿ ಸಿಟ್ಟಿನಿಂದ ಏನಾದರೂ ಮಾಡಿಯಾಳೇನೋ ಎಂಬ ಚಿಂತೆ ಭಯ. ಮನವನ್ನು ಕಾಡಹತ್ತಿತು.

ತಾಯಿಗೆ ನನ್ನ ಸ್ಥಿತಿ ಅರ್ಥವಾಗಲಿಲ್ಲ. ಅವಳು ಮಿಕಿಮಿಕಿ ಕಣ್ಣುಬಿಟ್ಟು ನೋಡಿದಳು. ಸಾವಿನಂಚಿನಲ್ಲಿ ಹೊರಳುತ್ತಿರುವ ಅವಳಿಗೆ ಇದನ್ನೆಲಾ ಹೇಳುವುದು ಸರಿಯಲ್ಲ ಎನಿಸಿ ಗುಟ್ಟು ಬಿಡಲಿಲ್ಲ. ಅವರಿಬ್ಬರೂ ಹೊರ ಹೋಗುವವರೆಗೆ ಹೊರಬರುವುದಕ್ಕೂ ಭಯವಾಯಿತು. ನಾನು ಸಿಸ್ಟರ್‌ಗೆಂದೆ "ತಾಯಿಗೆ ಹಾಲು ಬಿಸಿ ಮಾಡಿ ತರಬೇಕಿತ್ತು. ನನಗೆ ಆಚೆ ಹೋಗಲೂ ಭಯ."

"ನಾನೇ ತರುವೆ, ನೀನು ಕದ ಮುಚ್ಚಿಕೋ."

ನಾನು ಅವರಿಬ್ಬರೂ ಹೊರಹೋಗುವವರೆಗೂ ಕದ ತೆರೆಯಲಿಲ್ಲ. ಅನಂತರ ನನಗೆ ಬೇಕುಬೇಕಾದ ಅಡಿಗೆಯನ್ನು ಮಾಡಿಕೊಂಡೆ. ನನ್ನ ಸಂಕಷ್ಟ ಪರಿಸ್ಥಿತಿಯನ್ನು ಹೇಳಲೋ ಬೇಡವೋ ಎಂಬ ಭಾವವಿಭಾವಗಳಿಂದ ಮನದಲೆಗಳು ಅಲ್ಲೋಲಕಲ್ಲೋಲವಾಗಿದ್ದುವು. ಕೊನೆಗೆ ಆನಂದ್ ಮತ್ತು ವಸಂತರಿಗೆ ಪರಿಸ್ಥಿತಿಯನ್ನು ತಿಳಿಸಿ "ಏನು ಮಾಡಲಿ ?" ಎಂದು ಕೇಳಿದೆ.

ಇಬ್ಬರ ಉತ್ತರವೂ ಒಂದೇ "ನೀವು ಪೋಲೀಸಿಗೆ ತಿಳಿಸಿಬಿಡಿ."

ಅದೇ ವೇಳೆಗೆ ಭಾಸ್ ಮನೆಗೆ ಬಂದ; ನನ್ನ ಭಾಗದ ದೇವರೇ ಬಂದಂತಾಯಿತು ನನಗೆ. ತಕ್ಷಣ ಅವನನ್ನು ಗಾಢಾಲಿಂಗನೆ ಮಾಡಿ ಕೊಂಡು ಮುಸಿಮುಸಿ ಅತ್ತೆ. ಎರಡೂ ಕಣ್ಣುಗಳಲ್ಲಿ ಕಂಬನಿಯ ಕಾಲುವೆ ಹರಿದು ಹೋಯಿತು. ಅವನೆಂದ "ಛಿಃ ! ಅಳುವುದೇಕೆ ಧೈರ್ಯವಾಗಿರು."

ನಾನು ಏನೂ ಹೇಳಲಿಲ್ಲ.

ಭಾಸ್ ಒಳಬಂದು ತಾಯಿಯ ಕೈಯ್ಯನ್ನು ಹಿಡಿದುಕೊಂಡು ಕೇಳಿದ,

"ಹೇಗಿದ್ದೀರಿ ?"

"ಮೊದಲಿನಂತೆಯೇ !" ಎಂದ ಅವಳು ಅವನನ್ನು ಬಿರುಬಿರನೆ ನೋಡಿದಳು. ಹೌದೋ ಅಲ್ಲವೋ ಎಂಬ ಅನುಮಾನವೂ ಅವಳಲ್ಲಿತ್ತು. ಭಾಸ್ ಅವಳು ಗುರುತಿಸಬಹುದೋ ನೋಡೋಣ ಎಂದು ತನ್ನ ಪರಿ ಚಯವನ್ನು ಹೇಳಿಕೊಳ್ಳಲಿಲ್ಲ.

"ನೀನು ಭಾಸ್ ಅಲ್ಲವೇ ?"

"ಹೌದು."

"ಬಾಪ್ಪಾ ! ಬಾ ಮಗನೇ ! ನಿನಗಾಗಿ ದಿನವೂ ಕಾಯುತಿದ್ದೆ !"

"ಏಕೆ ?"

"ನೀನು...ನೀನು...." ಮುಂದೆ ಮಾತು ಹೊರಡಲಿಲ್ಲ.

"ಈಗ ಬಂದಿರುವೆ....ಏನು ಹೇಳುತ್ತೀರಿ ?"

ಅವಳು ಕೈಯನ್ನು ಹಿಡಿದು ಎದೆಗೊತ್ತಿಕೊಂಡು ಸುಮ್ಮನಾದಳು. ಕಣ್ಣುಗಳಲ್ಲಿ ಬಳಬಳ ನೀರು ಸುರಿದುದೂ ಸಹ ಗಮನಕ್ಕೆ ಬರಲಿಲ್ಲವೇನೋ ಎಂಬಷ್ಟು ಭಾವುಕತೆಯೋ ಮಂಪರವೋ ಮನಃಬುದ್ಧಿಗಳನ್ನು ಆವರಿಸಿ ದಂತಿತ್ತು. ಭಾಸ್ ಮಾತಾಡಿಸಿದರೂ ಅವಳು ಮಾತಾಡಲಿಲ್ಲ. ಮುಚ್ಚಿದ ಕಣ್ಣು ತೆರೆಯಲಿಲ್ಲ. ಆಗ ನಾನು ಎಚ್ಚರಿಸಲೆಂದು ಮುಂದಾದಾಗ ಭಾಸ್ ನನ್ನನ್ನು ತಡೆದು "ತಾಳು ಸ್ವಲ್ಪ ಸುಧಾರಿಸಿಕೊಳ್ಳಲಿ" ಎಂದ. ನಾನು

ಹಿಂಜರಿದು ಹಾಗೇ ನೋಡುತ್ತ ನಿಂತೆ. ಆಕ್ಷಣದಲ್ಲಿ ನನ್ನ ಮನಃ ಪ್ರಾಣಗಳು ತಲ್ಲಣಿಸಿ ಮೈಯಲ್ಲಿ ಸಣ್ಣ ಚಳಿ ಮೂಡಿತು. ಕುರ್ಚಿಯ ಮೇಲೆ ಕುಸಿದು ಕುಳಿತೆ. ಭಾಸ್ ಎಡಗೈಯನ್ನು ತಲೆಯ ಮೇಲಿಟ್ಟು "ಚಿಂತಿಸಬೇಡ" ಎಂದ.

ನನಗೆ ಏನೆಂಬುದೇ ಅರ್ಥವಾಗಲಿಲ್ಲ. ಮಂತ್ರಮುಗ್ಧಳಂತೆ ನೋಡುತ್ತಲೇ ಇದ್ದೆ. ಸ್ವಲ್ಪ ಹೊತ್ತಿನ ನಂತರ ಕೈಯನ್ನು ಹಿಂತೆಗೆದುಕೊಂಡು ಹೇಳಿದ "ತಾಯಿ ಎಷ್ಟು ಶಾಂತಿಯಿಂದ ಜೀವನ್ಮುಕ್ತೆಯಾದಳು. ನಿಜವಾಗಿಯೂ ಇಚ್ಛಾಮರಣಿ ! ಈಗಷ್ಟೇ ಹೇಳಿದಳಲ್ಲ ನಿನಗಾಗಿ ಕಾಯುತಿದ್ದೆ ಎಂದು !"

ನನಗಾಗ ದು:ಖವುಮ್ಮಳಿಸಿ ಬಂತು. ಭಾಸ್ ನನ್ನನ್ನು ತೋಳ ತೆಕ್ಕೆಯಲ್ಲಿಟ್ಟುಕೊಂಡು ಸಂತೈಸಿದ. ಆದರೂ ಹತ್ತು ಹದಿನೈದು ನಿಮಿಷಗಳು ದುಃಖಾರ್ತನೆಯಲ್ಲಿ ಉರಳಿದುವೇನೋ. ಅನಂತರ ನಮ್ಮ ಕರ್ತವ್ಯ ಪ್ರಜ್ಞೆ ನಮ್ಮನ್ನು ಹೊಡೆದೆಬ್ಬಿಸಿತು. ನನ್ನ ಎಲ್ಲಾ ಒಡಹುಟ್ಟುಗಳಿಗೂ ತಂತಿಕೊಡಿಸಿದ ನಂತರ ಭಾಸ್ ತನ್ನ ಗೆಳೆಯರಿಗೆ ಸುದ್ದಿಕೊಟ್ಟ. ತಾಯಿಯ ಒಡಹುಟ್ಟುಗಳಿಬ್ಬರು ಲಂಡನ್ ನಗರದ ಪಶ್ಚಿಮ ಭಾಗಗಳಲ್ಲಿದ್ದುದು ಗೊತ್ತು; ಅಲ್ಲದೆ ಅವಳ ಸ್ನೇಹವರ್ಗಕ್ಕೂ ಸುದ್ದಿಕೊಡುವುದಿತ್ತು. ಆದರೆ ಯಾರ್‍ಯಾರು ಎಲ್ಲಿದ್ದಾರೋ ದೇವರಿಗೇ ಗೊತ್ತು. ಟೆಲಿಫೋನಿನ ಸಂಪರ್ಕವಿರುವವರಿಗೆಲ್ಲಾ ಸುದ್ದಿಕೊಡುವುದು ಸುಲಭ. ಬೆಮೆಲ್-ಹಾಲ್ಡೇನ್ ಮನೆಯಲ್ಲಿರಲಿಲ್ಲ. ಅವಳು ತನ್ನ ಅವ್ಯವಹಾರದಿಂದಾಗಿ ತಾಯಿಯ ಕೊಠಡಿಯತ್ತ ಈಚೆಗೆ ಮುಖ ಹಾಕಿರಲಿಲ್ಲ."

ಆನಂದ್-ಇಳಾ ವಸಂತ್-ನಾಗಿನಿಯರು ಬಂದರು. ಅವರು ನನಗೆ ಸಂತಾಪ ಸೂಚಿಸಿದನಂತರ "ಪಾಪ ! ಬೆಮೆಲ್-ಹಾಲ್ಡೇನರಿಂದ ನೀನು ಬಹಳ ತೊಂದರೆಪಟ್ಟೆ. ಅಷ್ಟರೊಳಗೆ ಭಾಸ್ ಬಂದುದು ನಿನ್ನ ಪುಣ್ಯ."

"ಏನದು ? ಏನು ಸಮಾಚಾರ ?" ಎಂದ ಭಾಸ್, ಆಶ್ಚರ್ಯ ಚಕಿತನಾದಂತೆ.

ಆಗ ನಾನು ನಡೆದ ವಿಷಯವನ್ನೆಲ್ಲಾ ಹೇಳಲಾರದೆ ಹೇಳಿದೆ, ಸಂಕೋಚದ ಮುದ್ದೆಯಾಗಿ.

ಆನಂದ್ "ನೀನು ಕಂಪ್ಲೈನ್ಟ್ ಕೊಡಬೇಕಾಗಿತ್ತು." ಎಂದ.

"ಹೋಗಲಿ ಬಿಟ್ಟುಬಿಡು. ಐದಾರು ಸಾವಿರವಷ್ಟೆ?" ಎಂದ ಭಾಸ್.

"ಇಷ್ಟೊಂದು ಅವಮಾನ ಸಹಿಸಿಕೊಂಡು ಸುಮ್ಮನಿರುವುದೇ?" ವಸಂತನ ಪ್ರಶ್ನೆ.

"ಅದು ನನ್ನದೇ ತಪ್ಪು. ಇವಳು ಅವರ ವಿಚಾರ ಹೀಗೆ ಎಂದು ಹೇಳಿರಲೇ ಇಲ್ಲ. ಆದಿನ ಆಕಸ್ಮಿಕವಾಗಿ ಸಿಕ್ಕಿದಾಗ ಜಾನಕಿ ಒಬ್ಬಳೇ ಇದಾಳೆ, ಜೊತೆಗಿರಲಿ ಎಂದು ಕರೆತಂದೆ. ಹೀಗಾಗುತ್ತೆ ಎಂದು ಯಾರಿಗೆ ಗೊತ್ತಿತ್ತು? ಹೋಗಲಿ, ಆದುದು ಆಗಿಹೋಯಿತು. ಅದನ್ನು ಮರೆತು ಬಿಡುವುದು ಲೇಸು. ಈಗ ಪೋಲೀಸ್ ಕೇಸು ಎಂದರೆ ಅದು ಮುಗಿಯ್ಯುವವರೆಗೆ ನಾವು ಇಲ್ಲೇ ಇರಬೇಕಾಗುತ್ತೆ. ಇದೆಲ್ಲಾ ಸಾಧ್ಯವೇ?" ಎಂದ ಭಾಸ್ವಾನ್.

"ನಿಜ..." ತಲೆದೂಗಿದಳು ಇಳಾ.

"ಅನ್ಯಥಾ ತೊಂದರೆಪಟ್ಟೆದ್ದಾಯ್ತು" ಎಂದಳು ನಾಗಿನಿ.

ನಾನು ಮುಖ ಒರೆಸಿಕೊಂಡು ಬೀರುವಿನಲ್ಲಿದ್ದ ತಾಯಿಯ ಡೈರಿಯನ್ನು ತೆಗೆದು ನೋಡಿದೆ. ಅದರಲ್ಲಿ ಕೆಲವು ವಿಳಾಸಗಳು ಸಿಕ್ಕಿದುವು. ಅವುಗಳಿಗೆಲ್ಲಾ ತಂತಿ ವರ್ತಮಾನ ಕಳುಹಿಸಿದನಂತರ ಭಾಸ್ ನನ್ನನ್ನು ಕೇಳಿದ "ಜಾನಕೀ! ತಾಯಿ ಆಸ್ತಿಯ ಬಗ್ಗೆ ಏನಾದರೂ 'ವಿಲ್' ಬರೆದಿಟ್ಟಿದ್ದಾಳೆಯೇ? ಅದಕ್ಕಾಗಿ ನಾವು ಮಾಡಬೇಕಾದುದು ಏನಿದೆ?"

"ವಿಲ್ ಮಾಡಿದ್ದಾಳೆ. ತನ್ನೆಲ್ಲಾ ಸೊತ್ತು ಮತ್ತು ಬ್ಯಾಂಕಿನಲ್ಲಿರುವ ಹಣ ವೃದ್ಧಾಶ್ರಮಕ್ಕೆ ಸೇರಬೇಕು ಎಂದು ಬರೆದು ರಿಜಿಸ್ಟರ್ ಮಾಡಿದ್ದಾಳೆ"

"ಅದೊಂದನ್ನು ಮಾಡಿಬಿಟ್ಟರೆ ನಮ್ಮ ಕರ್ತವ್ಯ ಮುಗಿಯಿತು."

"ಅಷ್ಟೆ."

ಅದೇ ಸಮಯಕ್ಕೆ ಮನೆಯೊಡತಿ ಬಂದು ತಾಯಿಯ ಅಂತ್ಯ ದರ್ಶನ ಮಾಡಿದನಂತರ ನನ್ನನ್ನು ಕುರಿತು ಹೇಳಿದಳು "ಮನೆ ಖಾಲಿ ಮಾಡಿಸಿದನಂತರ ಮನೆಗೆ ಬೀಗಮುದ್ರೆ ಹಾಕಿ ನನಗೆ ಕೀಲಿಕೈಯನ್ನು ತಂದುಕೊಟ್ಟು ಹೋಗು ಡಾರ್ಲಿಂಗ್ ?"

"ಆಗಲಿ ಆಂಟಿ !"

ಆ ವೃದ್ಧೆ ಹೊರಟನಂತರ ನಾನು ಲೆಖ್ಖಪತ್ರಗಳುಳ್ಳ ಬೀರುವನ್ನು ತೆರೆದು ನೋಡಿದೆ. ಅದರಲ್ಲಿ ರಿಜಿಸ್ಟ್ರೇಷನ್ ಕಾಪಿಯೂ ಇತ್ತು. ಅದೆಲ್ಲ ವನ್ನೂ ನೋಡಿ ಭಾಸ್ ಹಾಗೇ ಜೋಡಿಸಿಟ್ಟೆ. ಟೆಲಿಫೋನಿನ ಕರೆ ಮುಟ್ಟಿದವರು ಬೇಗನೆ ಬಂದು ತಾಯಿಯ ಶವವನ್ನು ಅಪ್ಪಿ ಚುಂಬಿಸಿ ಅಂತಿಮ ಪ್ರೇಮವನ್ನೂ ದುಃಖವನ್ನೂ ಸೂಚಿಸಿದರು. ನಾವು ಪ್ರಥಮ ದರ್ಜೆಯ ಶವದಾನಿಗೆ ಆರ್ಡರ್ ಕೊಟ್ಟು ಅಂತ್ಯಸಂಸ್ಕಾರಕ್ಕೆ ಏರ್ಪಾಡು ಮಾಡಿದನಂತರ ಬೆಮೆಲ್ ಮನೆಗೆ ಬಂದಳು.

"ಇಷ್ಟು ಬೇಗ ಅಂತ್ಯ ಸಂಭವಿಸಬಹುದೆಂದು ನಾನು ಭಾವಿಸಿರಲಿಲ್ಲ. ಅವಳೊಂದಿಗೆ ಮಾತಾಡುವುದಿತ್ತು, ನನಗೆ ಬಿಡುವೇ ಆಗಲಿಲ್ಲ. ಇಂದು–ನಾಳೆ ಎನ್ನುವುದರೊಳಗಾಗಿ ದಿನ ಕಳೆದುಹೋದುವು" ಎಂದು ಎಲಿಜ ಳೊಂದಿಗೆ ಹೇಳುತಿದ್ದುದು ನನ್ನ ಕಿವಿಗೂ ಬಿತ್ತು.

ನಾನು ಅವಳ ಧೂರ್ತತನವನ್ನೂ ಹಾಲ್ಡೇನನ ದೌರ್ಜನ್ಯವನ್ನೂ ಯಾರಿಗೂ ಹೇಳಲಿಲ್ಲ. ಈ ಅಧ್ಯಾಯವನ್ನು ಆದಷ್ಟು ಬೇಗನೆ ಮುಗಿಸಿ ಇಲ್ಲಿಂದ ಹೊರಹೋದರೆ ಸಾಕು ಎನಿಸಿತ್ತು ನನಗೆ. ಎಲ್ಲರೂ ಕೂಡಿ ಶವಕ್ಕೆ ಶುಭ್ರವಸ್ತ್ರವನ್ನು ತೊಡಿಸಿ, ಸುಗಂಧ ದ್ರವ್ಯಗಳನ್ನು ಪೂಸಿ ಶವದಾನಿ ಯಲ್ಲಿ ಮಲಗಿಸಿ ಮೇಲೆ ಶುಭ್ರವಸ್ತ್ರ ಹೊದಿಸಿದಾಗ ಸತ್ಯಭಾಮೆಗೆ ಏನೋ ಒಂದು ರೀತಿಯ ಕಾತರ; ಅಥವಾ ಕಿರಿಕಿರಿ. ಸುಮ್ಮನೆ ಅತ್ತಿತು ಮಗು. ಮರುದಿನ ಬೆಳಿಗ್ಗೆ ಹತ್ತು ಹನ್ನೊಂದು ಗಂಟೆಯ ವೇಳೆಗೆ ಎಲ್ಲರೂ ಕೂಡಿ

ಅಂತ್ಯ ಯಾತ್ರೆಗೆ ಸಜ್ಜಾದರು. ಆಯಾಸ ಅನುತಾಪಗಳ ಒಕ್ಕೂಟದಿಂದ ನನ್ನ ಹೃದಯ ಕುಸಿಯುವಷ್ಟು ಭಾರಾತಿಭಾರ. ಮನವನ್ನು ದುಃಖ ದುಗುಡಗಳೂ ಕಾಡುತ್ತವೆ; ಕೋಪತಾಪಗಳೂ ಕಾಡುತ್ತವೆ. ಒಮ್ಮೆ ಕರ್ತವ್ಯ ಭಾರವನ್ನು ಇಳಿಸಿಕೊಂಡರೆ ಸಾಕು ಎನ್ನುತ್ತದೆ ಅಂತರ್ವಾಣಿ.

ಅಂದಿಂದಿಗೂ ಅವಳೊಂದಿಗಿದ್ದೆನೆಂದು ಎಲ್ಲರೂ ತಮ್ಮ ಅನುತಾಪ ವನ್ನು ನನಗೆ ಸೂಚಿಸಿದರು. ಕೊನೆಯದಾಗಿ ನಾನು ಹೃತ್ಪೂರ್ವಕವಾದ ಅಶ್ರುತರ್ಪಣವನ್ನು ಬಿಟ್ಟೆ. ಭಾಸ್ ಮೊದಲ್ಗೊಂಡು ಎಲ್ಲರೂ ಶವದಾನಿ ಯನ್ನು ಎತ್ತಿಕೊಂಡೊಯ್ದು ಗಾಡಿಯಲ್ಲಿಟ್ಟರು. ಅನಂತರ ಚರ್ಚಿನಲ್ಲಿ ಮಾಸ್; ತದನಂತರ ಮಸಣಯಾತ್ರೆ. ಅಂತೂ ತಾಯಿಯ ಜೀವನ ಮಾರ್ಗಯೋಗ ಅಂದಿಗೆ ಕೊನೆಮುಟ್ಟಿತು. ಶವದಾನಿಯನ್ನು ಭೂಮಿ ಯೊಳಗೆ ಇಳಿಸಿದಾಗ ಆ ಮುಂದಿನ–ಯೋಚಿಸಿದರೂ ಅರ್ಥವಾಗದ ಪಾರ ಲೌಕಿಕ ಪಾತ್ರ ಚಿತ್ತಭಿತ್ತಿಯ ಮೇಲೆ ನಲಿಯತೊಡಗಿತು. ಗಗನ ನೀಲಿ ಯೊಡನೆ ನಲಿಯುತ್ತಿದ್ದ ಭಾವನೆ ಕೆಲಕಾಲ ಅಲ್ಲೇ ವಿಶ್ರಮಿಸಿ ವಿಶ್ವ ಜಗತ್ತಿನಲ್ಲಿ ಲೀನವಾಯಿತು.

ಮಸಣಕ್ಕೆ ಬಂದವರೆಲ್ಲಾ ಹಾಗೇ ಹೊರಟುಹೋದರು. ಅವಳ ವಿಲ್ ಪ್ರಕಾರ ಸಕಲ ಸಂಪತ್ತನ್ನೂ ವೃದ್ಧಾಶ್ರಮಕ್ಕೆ ವಹಿಸಿಕೊಡುವ ಕೆಲಸವೊಂದು ಬಾಕಿ. ಬೆಮೆಲ್ ತಾನೆಲ್ಲವನ್ನೂ ಬಾಚಿಕೊಳ್ಳುವ ಉದ್ದೇಶ ದಿಂದ ತಾನೇ ವಹಿಸಿಕೊಡುವುದಾಗಿ ಪಟ್ಟುಹಿಡಿದುದರಿಂದ ಸ್ವಲ್ಪ ಗೊಂದಲ ಕ್ಕಿಟ್ಟುಕೊಂಡಿತು.

"ತಾಯಿ ಈ ಕೆಲಸವನ್ನು ನನಗೆ ವಹಿಸಿದ್ದಾಳೆ. ನಾನದನ್ನು ಇನ್ನೊಬ್ಬರ ಕೈಗೆ ಒಪ್ಪಿಸಲಾರೆ."

ಆಗ ಭಾಸ್ "ಹೌದು, ಜನೀ ಈ ವರೆಗೆ ನೋಡಿಕೊಂಡಿದ್ದಾಳೆ. ತಾಯಿಯ ಆಶಯವನ್ನು ಅವಳು ತಾನೇ ಪೂರೈಸಬೇಕು ?"

ಬೆಮೆಲ್ ಕಿಡಿಕಿಡಿಯಾದಳು. ಮುಖಬಿಂಬ ಕೆಂಪುಕೆಂಪು ತಳೆಯಿತು. ರೋಷದಿಂದ ಹಲ್ಲು ಕಡಿಯುತ್ತ "ನಿನಗೆ ಹೇಗೆ ಬಂತು ಈ ಅಧಿಕಾರ?

ಬುದ್ಧಿಸ್ವಾಸ್ಥ್ಯವಿಲ್ಲದ ಮುದುಕಿ ಏನಾದರೂ ಹೇಳಿರಬಹುದು. ಅದರಂತೆಯೇ ನಡೆಯಬೇಕೆಂದಾಗಲೀ, ಅದರಲ್ಲೂ ನೀನೇ ನಡೆಸಬೇಕೆಂಬುದಾಗಲೀ ಅರ್ಥವಿಲ್ಲದ ವ್ಯವಹಾರ. ಇದಕ್ಕೆ ನಾನು ಎಳ್ಳಷ್ಟೂ ಬೆಲೆ ಕೊಡುವುದಿಲ್ಲ !"

ಆ ಮಾತು ಕೇಳಿ ನನ್ನ ಮನನೊಂದು ನೀರಾಯಿತು. ಈಗಲೂ ಮೊನ್ನೆಯಂತೆ ದುರ್ಘಟನೆ ನಡೆದೀತೆಂಬ ಭಯದಿಂದ ನಾನು ಅವಳಿಗೆಂದೆ "ಈಗ ಮದರ್ ಸುಪೀರಿಯರ್ ಬರಲಿದ್ದಾರೆ ವೃದ್ಧಾಶ್ರಮದಿಂದ. ನೀನೇ ಅವರೊಂದಿಗೆ ನಿನ್ನ ವ್ಯವಹಾರವನ್ನು ನಡೆಸಿಕೋ, ನನಗೂ ನಿನಗೂ ಯಾವ ಘರ್ಷಣೆಯೂ ಬೇಡ."

ನನ್ನ ಮಾತು ಕಿವಿಗೆ ಬಿದ್ದೊಡನೆಯೇ ಅವಳು ಕೋಪೋದ್ದೀಪ್ತಳಾಗಿ ಮೇಜಿನ ಮೇಲಿದ್ದ ಬಸಿಬಟ್ಟಲುಗಳನ್ನು ತೆಗೆದು ನೆಲಕ್ಕೆ ಅಪ್ಪಳಿಸಿ ಕುರ್ಚಿಮೇಜುಗಳನ್ನೊದ್ದು ನನ್ನನ್ನು ಗೋಡೆಗೆ ದಡ್ಡನೆ ತಳ್ಳಿ ಕಿಚ್ಚಿನ ಕಿಡಿಗಳನ್ನು ಕಾರುತ್ತ ದಡದಡ ಹೊರಟುಹೋದಳು ! ಅದೆಲ್ಲಾ ಕೆಲವೇ ಕ್ಷಣಗಳೊಳಗಾಗಿ ನಡೆದುಹೋಯಿತು. 'ಅರೆ !' ಎನ್ನುತ್ತ ಭಾಸ್ ಎರಡು ಹೆಜ್ಜೆ ಮುಂದುವರಿಯುವುದೊಳಗಾಗಿ ಅವಳು ಬೀದಿಯಲ್ಲಿದ್ದಳು !

ಅವಳು ಧೂರ್ತತನದಿಂದ ನನ್ನನ್ನು ತಳ್ಳಿದಾಗ ಗೋಡೆಗೆ ಅಪ್ಪಳಿಸಿದ ತಲೆಗೆ ಉಂಟಾದ ನೋವು ಅಷ್ಟಿಷ್ಟಲ್ಲ. ಒಮ್ಮೆಲೇ ತಲೆ ಗಿರ್ರನೆ ತಿರುಗಿತು. ಭಾಸ್ ನನ್ನನ್ನು ಕುರ್ಚಿಯ ಮೇಲೆ ಕುಳ್ಳಿರಿಸಿ ತಲೆಯನ್ನು ಸ್ವಲ್ಪಹೊತ್ತು ಅದುಮಿ ಹಿಡಿದುಕೊಂಡು ಕೇಳಿದ "ಜಾನಕೀ ! ಬಹಳ ಪೆಟ್ಟಾಯಿತೇ ? ತಲೆಗೆ ನೀರುತಟ್ಟಲೇ ?" ಒಂದು ಗಳಿಗೆ ತಡೆದು "ಎಂತಹ ಧೂರ್ತ ಸ್ತ್ರೀ ! ಅವಳು ಈ ರೀತಿ ವರ್ತಿಸುತ್ತಾಳೆಂದು ನಾನು ಭಾವಿಸಲಿಲ್ಲ. ನಾನಿದ್ದೂ ನಿನಗೆ ಹೀಗಾಯಿತಲ್ಲ. ಹೋಗಲಿ ಬಿಡು. ಇದು ಅನಿರೀಕ್ಷಿತವಾದುದರಿಂದ ನಾನು ಮುಂದರಿಯುವುದೊಳಗೇ ನಡೆದು ಹೋಯಿತು ಚಿಂತೆ ಮಾಡಬೇಡ.

"ಹಾ!...." ಎಂದೆ. ಗಂಟಲು ಗದ್ಗದವಾಯಿತು. ಮುಂದೆ ಮಾತು ಹೊರಡಲಿಲ್ಲ.

ಭಾಸ್ ಒಂದು ಲೋಟ ನೀರನ್ನು ಕೊಟ್ಟು 'ಕುಡಿ' ಎಂದ. ಅದರಲ್ಲೇ ಸ್ವಲ್ಪ ನೀರನ್ನು ತಲೆಗೂ ತಟ್ಟಿದ. ನಾನು ನೀರನ್ನು ಕುಡಿದು ಸ್ವಲ್ಪ ಹೊತ್ತಿನೊಳಗಾಗಿ ಸುಧಾರಿಸಿಕೊಂಡೆ. ಆದರೆ ಮನಸ್ಸಿಗೆ ಅಗಾಧವಾದ ನೋವುಂಟಾಗಿತ್ತು. ಭಾಸ್ ಒಂದು ಟ್ರೇಯಲ್ಲಿ ಒಡೆದ ಬಸಿ ಬಟ್ಟಲುಗಳನ್ನು ತುಂಬಿ ಹೊರಹೋಗಿ ಕಸದ ಬಕೆಟ್ಟಿಗೆ ಸುರಿದುಬಂದ; ನಾವು ನಮ್ಮ ಸೂಟ್‌ಕೇಸ್ ತುಂಬುವುದರೊಳಗಾಗಿ ವೃದ್ಧಾಶ್ರಮದ ಮದರ್ ಸುಪೀರಿಯರ್ ಬಂದರು. ಅವರ ಕಡೆಯವರು ಒಂದೆರಡು ಗಂಟೆಯೊಳಗಾಗಿ ಮನೆಯ ಎಲ್ಲಾ ಸಾಮಾನನ್ನು ವ್ಯಾನಿಗೆ ತುಂಬಿ ಮನೆಯನ್ನು ಬರಿದು ಮಾಡಿದರು. ಇನ್ನು ಮನೆಯ ಕೀಲಿಕೈಯನ್ನು ಮನೆಯ ಯಜಮಾನಿಗೆ ಕೊಡುವುದೊಂದೇ ಬಾಕಿ ಉಳಿಯಿತು. ಮನೆಯ ಯಜಮಾನಿ ಇದೇ ರಸ್ತೆಯಲ್ಲಿ ಹದಿನಾರನೆಯ ನಂಬರಿನ ಮನೆಯಲ್ಲಿ ವಾಸಿಸುತ್ತಾಳೆ. ಹೋಗುವಾಗ ಹಾಗೇ ಕೊಟ್ಟರಾಯಿತು ಎಂಬ ಯೋಜನೆ ಇದ್ದರೂ "ಜೆಮೆಲ್ ಸಾಮಾನನ್ನು ತೆಗೆದುಕೊಂಡಿಲ್ಲವಲ್ಲಾ ?" ಎಂದೆ ಭಾಸ್‌ನನ್ನು ಕುರಿತು.

"ಅಷ್ಟರೊಳಗಾಗಿ ಬರದಿದ್ದರೆ ನಾವು ಬೀಗ ಹಾಕಿ ಯಜಮಾನಿಗೆ ಕೊಡೋಣ. ಇವಳು ಅಲ್ಲಿಯೇ ಹೋಗಿ ಬೀಗ ತೆಗೆಗುಕೊಳ್ಳಲಿ" ಎನ್ನುತ್ತ ಟ್ಯಾಕ್ಸಿ ತರಲು ಹೋದ ಭಾಸ್. ನಾನು ಮಗುವಿಗೆ ಹಾಲು ಕುಡಿಸಿ ಕೈಬಾಯಿ ಒರೆಸಿ ಬೇರೆ ಬಟ್ಟೆ ಹಾಕಿದೆ. ಹಿಂದೆ ಮುಂದೆ ಎರಡೂ ಬಾಗಿಲನ್ನು ಆಗಲೇ ಮುಚ್ಚಿದ್ದೆ. ಭಾಸ್ ಬಂದನೇ ಎಂದು ಕಿಟಕಿಯ ಬಳಿಗೆ ಹೋದಾಗ ಜೆಮೆಲ್ ಹಾಲ್ಡೇನ್ ಬರುತಿದ್ದುದು ಕಣ್ಣಿಗೆ ಬಿದ್ದು, ಹಿಂಜರಿದು ನಿಂತೆ. ತಲೆಬಾಗಿಲ ಕರೆಗಂಟೆ ಒಂದೇ ಸಮನೆ ಅರಚಿತು.

ಮನೆಯಲ್ಲಿ ಇನ್ನಾರೂ ಇಲ್ಲದ ಸಮಯದಲ್ಲಿ ಕದವನ್ನು ತೆರೆದರೆ ಅವಳು ನನ್ನನ್ನು ಹೊಡೆದು ಬಡಿದು ಚಿತ್ರಹಿಂಸೆಗೊಳಿಸಲು ಹಿಂಜರಿಯಲಾರಳು ಎಂಬ ಯೋಚನೆ ಬಂದು ನಾನು ಗಡಗಡ ನಡುಗಿಹೋದೆ. ಕರೆಕೇಳಿದರೂ ಬಾಗಿಲನ್ನು ತೆರೆಯದೆ ಭಾಸ್ ಬರುವುದನ್ನು ಕಾಯುತ್ತ

ಕಿಟಕಿ ಬಾಗಿಲ ಸಂದಿಯಲ್ಲಿ ಕಣ್ಣಿಟ್ಟುನೋಡಿದೆ. ಬೆಮೆಲ್‌ಗೆ ಸಿಟ್ಟು ನೆತ್ತಿಗೇರಿ ಮಹಾಮಾರಿಯ ಅವತಾರ ತಾಳಿದ್ದಳು ! ಇನ್ನು ತಡಮಾಡಿದರೆ ತೊಂದರೆಯಾದೀತೆಂದು ಪೋಲೀಸ್ ಸ್ಟೇಷನ್ನಿಗೆ ಫೋನ್ ಮಾಡಿ ಅವರ ಸಹಾಯ ಕೋರಿದೆ. ಬಾಗಿಲಲ್ಲಿ ಇಬ್ಬರೂ ಮನಸ್ವೀ ಅರಚುತ್ತ ಬಾಗಿಲನ್ನು ಒದ್ದು ಪುಡಿಮಾಡುವ ಸಾಹಸಕ್ಕೆ ಇಳಿದರು. ಆಕ್ಷಣ ಮನೆಯೊಡತಿಗೂ ಫೋನ್ ಮಾಡಿ ತಕ್ಷಣವೇ ಬರಲು ಕೇಳಿಕೊಂಡೆ. ಭಾಸ್ ಟ್ಯಾಕ್ಸಿಯನ್ನು ತಂದ ಕ್ಷಣದಲ್ಲೇ ಬಾಬಿಗಳು (ಪೋಲೀಸ್) ವ್ಯಾನಿನಲ್ಲಿ ಬಂದಿಳಿದರು. ಮರುಗಳಿಗೆಯಲ್ಲೇ ಮನೆಯೊಡತಿಯೂ ಆಗಮಿಸಿದಳು. ಆಗ ನಾನು ಬಾಗಿಲನ್ನು ತೆರೆದೆ. ಬಾಬಿಗಳನ್ನು ನೋಡಿದ ಬೆಮೆಲ್ ಮತ್ತು ಹಾಲ್ಡೇನರ ಕೋಪತಾಪಗಳು ಬಿಸಿಲಟ್ಟಿದ ಮಂಜಿನಂತಾದರೂ ಮನೆ ಖಾಲಿಯಾದುದನ್ನು ನೋಡಿ ಒಮ್ಮೆಗೇ ದಿಗ್ಭ್ರಾಂತರಾಗಿ ಹಲ್ಲು ಕಡಿಯುತ್ತ ನಿಂತುಬಿಟ್ಟರು ! ರೋಷಭೀಷಣತೆಯಿಂದ ಮೈರೋಮಾಂಚನವಾಗಿ ಕಣ್ಣುಗಳಲ್ಲಿ ಕಿಡಿಗಳು ಒಡೆದು ಮೂಡಿದುವು. ತಮ್ಮ ತಮ್ಮ ವಸ್ತುಗಳನ್ನು ತೆಗೆದುಕೊಳ್ಳಲು ನಿರಾಕರಿಸಿ ಮನೆಯಾದರೂ ತಮಗೇ ಬೇಕೆಂದು ವಾದಿಸತೊಡಗಿದಾಗ ಮನೆಯೊಡತಿ ಬಾಬಿಗಳ ಸಹಾಯದಿಂದ ಮನೆಯನ್ನು ಖಾಲಿ ಮಾಡಿಸಿ ಬೀಗಹಾಕಿಕೊಳ್ಳುತ್ತ ಬೆಮೆಲ್ಲಳನ್ನು ಕುರಿತು ಹೇಳಿದಳು,

"ನೀನು ಹೀಗೆ ಹಠ ಹಿಡಿಯುವುದರಲ್ಲಿ ಅರ್ಥವಿಲ್ಲ. ಇನ್ನು ಮನೆಯನ್ನು ಯಾರಿಗೂ ಕೊಡುವುದಿಲ್ಲ. ಇದನ್ನು ರಿಪೇರಿ ಮಾಡಿಸಿದನಂತರ ನಾನೇ ಇಲ್ಲಿಗೆ ಬರುವ ಯೋಚನೆ ಮಾಡಿರುವೆ. ಆ ಮನೆಯಲ್ಲಿ ನನ್ನ ಕಿರಿಯ ಮಗಳು ನೆಲಸುತ್ತಾಳೆ."

ಅತ್ಯಂತ ವ್ಯಗ್ರಭಾವದಲ್ಲಿದ್ದ ಬೆಮೆಲ್ ಅವಳಿಗೆ ಉತ್ತರಿಸಿದೆ ನನ್ನ ಕಡೆ ನೇರದೃಷ್ಟಿಯನ್ನು ಬೀರಿ ಕೆಟ್ಟ ಮಾತಿನಿಂದ ಬೈಯುತ್ತ ಹಲ್ಲು ಕಡಿದಳು. ಹಾಲ್ಡೇನ್ ಮುಷ್ಟಾಮುಷ್ಟಿಗೆ ಸಿದ್ಧನಾದಂತೆ ಮುಷ್ಟಿಯೆತ್ತಿ ಹಿಡಿದು ಏರುದನಿಯಲ್ಲಿ ಹೇಳಿದ "ಬಾಬಿಗಳಿಲ್ಲದಿದ್ದರೆ ನಿಮ್ಮಿಬ್ಬರನ್ನೂ ಒಂದೊಂದೇ ಮುಷ್ಟಿಯಲ್ಲಿ ಅಪ್ಪಳಿಸಿ ಆ ಮುದುಕಿಯ ಹಿಂದೆಯೇ ಪರ

ಲೋಕಕ್ಕೆ ಕಳುಹಿಸುತ್ತಿದ್ದೆ. ನೀವಿಬ್ಬರೂ ಕೂಡಿ ನಮ್ಮ ಜೀವನಕ್ಕೆ ಕಲ್ಲುಹಾಕಿದ್ದೀರಿ ! ಇನ್ನೆಂದಾದರೂ ಈ ರೊಚ್ಚನ್ನು ತೀರಿಸಿಕೊಳ್ಳದೆ ಬಿಡುವುದಿಲ್ಲ. ಇದು ಹುಸಿಯಲ್ಲ ! ಎಚ್ಚರಿಕೆ !!"

ಬಾಬಿಗಳು ಅವನನ್ನು ದಬ್ಬಿ ವ್ಯಾನಿನಲ್ಲಿ ಹಾಕಿಕೊಂಡರು.

ನಾನು ಮನೆಯೊಡತಿಗೆ 'ಗುಡ್‌ಬೈ' ಹೇಳಿ, ಬಾಬಿಗಳಿಗೆ ವಂದನೆಗಳನ್ನರ್ಪಿಸಿ ಭಾಸ್‌ನೊಂದಿಗೆ ಟ್ಯಾಕ್ಸಿ ಹತ್ತಿದೆ. ಮಗು ಅದುವರೆಗೂ ಮಿಕಿಮಿಕಿ ನೋಡುತಿದ್ದುದು ಈಗ ನಗತೊಡಗಿತು. ಭಾಸ್ ಅವಳನ್ನು ಮುದ್ದಿಟ್ಟು "ಮಗುವಿಗೂ ಅರ್ಥವಾಗಿದೆ ನೋಡು !" ಎಂದ.

"ಕೂಗಾಟ ಅರ್ಥವಾಗುವುದಿಲ್ಲವೇ ?...ಬಾಬಿಗಳು ಸಮಯಕ್ಕೆ ಬಾರದಿದ್ದರೆ ತುಂಬ ಕಷ್ಟವಿತ್ತು."

ವಿಷಯ ಇಷ್ಟು ವಿಷಮಪರಿಸ್ಥಿತಿಗೆ ಬರುವುದೆಂದು ನಾನು ಎಂದೂ ಬಗೆದಿರಲಿಲ್ಲ. ದುರಾಸೆ ಏನುಬೇಕಾದರೂ ಮಾಡಿಸುತ್ತೆ ! ಅಷ್ಟು ಹಣ ದೋಚಿದ್ದಲ್ಲದೆ ಇದರ ಮೇಲೂ ಕಣ್ಣು ! ಬಹಳ ಧೂರ್ತ ಜನ ! ಎಂದ ಭಾಸ್ ಸ್ವಲ್ಪ ತಡೆದು "ಒಂದು ವೇಳೆ ಈ ಪ್ರಸ್ತಾಪ ನಿನ್ನ ತಾಯಿ ಬದುಕಿರುವಂದು ಎತ್ತಿದ್ದು ನೀನು ತಾಯಿಯ ಪರ ವಾದಿಸಿದ್ದರೆ ಏನೇನು ಆಗುತಿತ್ತೋ ? ಹೀಗೆ ನಿನ್ನ ಮೇಲೆ ಕೈಮಾಡಿದ್ದರೆ ನೀನೆಲ್ಲಿರುತ್ತಿದ್ದಿ ? ಆಗ ಪ್ರಸ್ತಾಪ ಎತ್ತದುದು ಎಷ್ಟು ಒಳ್ಳೆಯದಾಯಿತು...?"

"ನಿಜ....ನರಳುವ ತಾಯಿಯ ಮುಂದೆ ಇನ್ನೇನು ಆಗಲಿತ್ತೋ...? ಅವಳು ನನ್ನ ಪರ್ಸಿಂದ ಆಗಾಗ ಹಣ ಕಳವು ಮಾಡುತ್ತ ತನ್ನ ಐಭೋಗದಲ್ಲಿಯೇ ಗಮನವಿಟ್ಟಿದ್ದರಿಂದ ಮನೆಯಲ್ಲಿ ಇರುತ್ತಲೇ ಇರಲಿಲ್ಲ. ಇಂದು–ನಾಳೆ ಎನ್ನುತ್ತ ದಿನಗಳನ್ನು ದಬ್ಬಿದುದಲ್ಲದೆ ತಾಯಿ ಇಷ್ಟು ಬೇಗ ಪರಾಧೀನಳಾಗುತ್ತಾಳೆ ಎಂದು ಭಾವಿಸಲಿಲ್ಲ ಕೂಡ."

"ದೇವರು ದೊಡ್ಡವನು !"

ಭಾಸ್ ನಗುನಗುತ್ತ ಮುಂದುವರಿದ ತನ್ಮ "ವಿಲಾಸ ಜೀವನ ಕ್ಲೋಸ್ಕರ ವೃದ್ಧಬಾಂಧವರ ತುತ್ತನ್ನು ಕಸಿಯಲು ಪ್ರಯತ್ನಿಸಿದ್ದು ಎಷ್ಟು ಹೀನಾಯವಾದುದು ? ತಾಯಿಯ ಆಶಯಕ್ಕನುಸಾರವಾಗಿ ತಲೆ ಬಾಗುವುದು ಎಷ್ಟು ಔಚಿತ್ಯವೋ ಅದನ್ನು ಕಂಡುಕೊಳ್ಳದೇ ಹೋದರೆ ಆಗುವುದೇ ಹೀಗೆ. ಈಗೀಗ ವಿಲಾಸ ವಸ್ತುಗಳೇ ತುಂಬಾ ಆವಶ್ಯಕ ಎಂಬ 'ಕುವಿದ್ಯೆಯನ್ನು ಕಲಿಸುವುದರ ಮೂಲಕ ಕಾಲಮಾನವೂ ಸಹ ತಪ್ಪು ಮಾಡುತ್ತದೆ. ಅಕರ್ಮಿಗಳು ಅಂಗಹೀನರು ಸುಜನರು ಯಾರೇ ಆಗಲೀ ವಯೋಧರ್ಮದಿಂದ ದುರ್ಬಲರಾಗಿ ತೊಳಲಿ ಬಳಲುತ್ತಿರುವ ಮಾತ್ರಕ್ಕೇ ಜೀವಿತದಿಂದ ವಂಚಿತನಾಗುವುದು ಸರಿಯಲ್ಲ. ಯಾವತ್ತೂ ಅವರಿಗೆ ಜೀವಿಸುವ ಹಕ್ಕು ಇದೆ ಎಂಬುದನ್ನು ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಎಲ್ಲರಿಗೂ ಅನ್ನಪಾನಾದಿಗಳನ್ನು ಪಡೆಯುವ ಹಕ್ಕಿದೆ. ಬದುಕುವ ಆಸೆಯೂ ಇರುತ್ತದೆ. ಆಯಸ್ಸು ತೀರುವ ತನಕ ಬದುಕುವುದು ನ್ಯಾಯವೂ ಹೌದು. ಅದಕ್ಕೆ ವ್ಯತಿರಿಕ್ತವಾಗಿ ನಡೆಯುವ ಅನ್ಯಾಯ ಯಾವ ಕಾನೂನಿನ ಬಲದಿಂದಲೂ 'ಸರಿ' ಎಂದು ಅಂಗೀಕರಿಸಲಾಗುವುದಿಲ್ಲ. ವೃದ್ಧಾಶ್ರಮವನ್ನು ನಡೆಸುತ್ತಿರುವ ಆಡಳಿತವರ್ಗ ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ 'ಅನುಕಂಪ' ಎಂಬ ಅಮೋಘವಾದ ದ್ರವ್ಯವನ್ನು ಹೃದಯದ ತುಂಬ ತುಂಬಿಕೊಂಡಿದೆ. ಅದನ್ನು ನೀನೂ ನಾನೂ ಮತ್ತು ಎಲ್ಲರೂ ಅರ್ಥಮಾಡಿಕೊಳ್ಳಬೇಕು."

ನಾನು 'ಹೌದು' ಎಂಬಂತೆ ತಲೆದೂಗಿದೆ.

ಮರುದಿನ ಭಾಸ್‌ನೊಂದಿಗೆ ಆಫೀಸಿಗೆ ಹೋದೆ. ಕೊನೆಯ ಬಾರಿ ಎಲ್ಲರ ಭೇಟಿಯನ್ನೂ ತೆಗೆದುಕೊಂಡು ಅತ್ಯಂತ ಆತ್ಮೀಯವಾಗಿ ಬೀಳ್ಕೊಂಡಾಗ ನಿಜವಾಗಿಯೂ ನನ್ನ ಕಣ್ಣುಗಳು ತುಂಬಿಬಂದುವು. ಅಲ್ಲಿ ಹೊತ್ತು ಉರುಳಿದುದೇ ತಿಳಿಯಲಿಲ್ಲ. ಗಡಿಯಾರದ ಮೇಲೆ ದೃಷ್ಟಿ ಹೊರಳಿಸಿದಾಗ ಸತ್ಯಭಾಮೆಯನ್ನು ಕರೆದುಕೊಂಡು ಹೋಗುವುದರ ನೆನಪಾಗಿ ಕಾರು ಹತ್ತಬೇಕಾಯಿತು.

ಅನಂತರ ಒಮ್ಮೆ ಆನಂದ್–ಇಳಾರವರ ಮನೆಗೂ ಇನ್ನೊಮ್ಮೆ ವಸಂತ್–ನಾಗಿನಿಯರ ಮನೆಗೂ ಹೋಗಿ ಕೊನೆಯ ಭೇಟಿ ತೆಗೆದುಕೊಂಡೆ. ಮರುದಿನ ಭಾರತಕ್ಕೆ ಹೊರಡುವ ಮುನ್ನ ತಾಯಿಯ ಸಮಾಧಿಗೆ ಪುಷ್ಪಾರ್ಪಣೆ ಮಾಡಲು ಮರೆಯಲಿಲ್ಲ. ಅಲ್ಲಿ ಕೊನೆಯದಾಗಿ ನಾಲ್ಕು ಹನಿ ಕಣ್ಣೀರನ್ನು ಚೆಲ್ಲಿದಾಗ ಬೆಮೆಲ್ ಮತ್ತು ಹಾಲ್ಡೇನರು ಮನದಲ್ಲಿ ಸುಳಿಯದಿರಲಿಲ್ಲ. ಹಾಗೇ ಯೋಚಿಸಿದೆ, ಮಂಜುಳಾ ಮತ್ತು ಅಂಜನಾ ರವರ ಆತ್ಮೀಯತೆ ಯಾವ ದೇವರ ವರವೋ ಎನಿಸಿತು ನನಗೆ.

ಅನಂತರ ಅಲ್ಲಿಂದ ಹೊರಡುವ ಮುನ್ನ ಭಾಸ್–ನ ಅನೇಕ ಭಾರತೀಯ ಮಿತ್ರರು ಒಂದು ಬೀಳ್ಕೊಡಿಗೆಯ ಸಮಾರಂಭವನ್ನು ಹೋಟೆಲ್ ಒಲಂಪಿಯಾದಲ್ಲಿ ಏರ್ಪಡಿಸಿದ್ದರು. ನಾವು ಒಳ ಹೋದೊಡನೆ ಮೊದಲು ನನ್ನ ದೃಷ್ಟಿ ಹರಿದುದು ನಾವು ಪ್ರಪ್ರಥಮವಾಗಿ ಸ್ನೇಹ–ಪ್ರೀತಿ–ಅನುರಾಗ ಅನುಬಂಧಗಳಿಂದ ಅನ್ಯೋನ್ಯ ಸಂಭಾಷಣೆ ನಡೆಸಿದ ಕೊಠಡಿಯ ಕಡೆಗೆ. ಚಿತ್ತಭಿತ್ತಿಯಲ್ಲಿ ಅಂದಿನ ಚಿತ್ತಾರ ಸುಳಿಸುಳಿದಂತಾಯಿತು. ಮೈಮನಗಳು ಆನಂದ ಪುಳಕಿತವಾದುವು. ಬಹಳ ಮಂದಿ ಭಾರತೀಯರೂ ನಮ್ಮ ಕಂಪನಿಯ ಆಡಳಿತ ವರ್ಗದವರೂ ಮತ್ತು ಬ್ರಿಟಿಷ್ ಮಿತ್ರರೂ ಕೂಡಿದಂತೆ ಐವತ್ತು ಅರವತ್ತು ಮಂದಿಯ ಮೇಲೆಯೇ ಸೇರಿದ್ದರು.

ಭಾಸ್ ಎಲ್ಲರಿಗೂ ಹಸ್ತಲಾಘವ ನೀಡಿ ಕುಶಲ ಸಂಭಾಷಣೆ ನಡೆಸಿದ. ನಾನೂ ಅವನ ಹಿಂದೆಯೇ ಚಲಿಸಿ ಎಲ್ಲರೊಂದಿಗೂ ಸರಸ ಸಂಭಾಷಣೆ ನಡೆಸಿದೆ. ಸತ್ಯಭಾಮ ಕೈಯಿಂದ ಕೈಗೆ, ಜಿಗಿಯುತ್ತ ಎಲ್ಲರ ಸಂತಸದಲ್ಲಿ ತಾನೂ ಸಮಭಾಗಿಯಾದಳು.

ಎಲ್ಲರೂ ನಮಗೆ ಶುಭಕೋರಿದಾಗ ನಾನು ಭಾವುಕತೆಯಿಂದ ಪ್ರತಿನಮಿಸಿದೆ.

೦ ೦ ೦ ೦

ಕಣ್ಣನೋಟ ಹರಿಯುವವರೆಗೂ ಹಸುರುಕ್ಕುವ ಹೆಮ್ಮರಗಳ ಶ್ರೇಣಿ.

ನಾನು ಮೆಟ್ಟಲಿನ ಮೇಲೆ ನಿಂತು ಸುತ್ತಮುತ್ತ ದೃಷ್ಟಿಯನ್ನು ಚೆಲ್ಲಿಕೊಟ್ಟೆ. ಎಲ್ಲಿಂದ ಎಲ್ಲಿಯುವರೆಗೂ ರಂಗುರಂಗಿನ ವಿವಿಧ ಪುಷ್ಪ ಸಮುಚ್ಚಯವೇ. 'ನಗರ ಪ್ರಾಂತ್ಯದಲ್ಲಿ ಎಷ್ಟೊಂದು ಹೆಮ್ಮರಗಳು?' ನನ್ನಷ್ಟಕ್ಕೆ ನಾನೇ ಉದ್ಗರಿಸಿದೆ. ಮನೋದಧಿ ಆನಂದದ ಹೆದ್ದೆರೆಗಳಿಂದ ತುಂಬಿ ತುಯ್ಯಲಾಡಿತು. ನಗುಮುಖದ ಸತ್ಯಾ ಒಳಗೂ ಹೊರಗೂ ಚಿಗರಿಯಂತೆ ಓಡಾಡುತ್ತಿದ್ದಾಳೆ. ವಿಶಾಲವಾದ ಅಂಗಣ; ಸುಂದರವಾದ ಬಂಗಲೆ ಅವ ಳಿಗೆ ಸ್ವರ್ಗಸೌಖ್ಯವನ್ನೇ ತಂದಿದೆ. ಭಾಸ್ ಫರ್ನಿಚರನ್ನು ಎಲ್ಲೆಲ್ಲಿ ಇಡ ಬೇಕು, ಹೇಗಿದ್ದರೆ ಸರಿ ಎಂಬುದನ್ನು ಆಳುಗಳಿಗೆ ಹೇಳಿ ಇಡಿಸುತ್ತಿದ್ದ. ನಾನು ನನ್ನ ಸಲಹೆಯನ್ನು ಆಗಲೇ ನೀಡಿದ್ದೆ. ನನಗೆ ಹಿಂದಿ ಬರುತ್ತಿರ ಲಿಲ್ಲವಾದ್ದರಿಂದ ಆಳುಗಳೊಂದಿಗೆ ವ್ಯವಹಾರ ಸಾಧ್ಯವಿರಲಿಲ್ಲ. 'ಸಿಟೌಟ್' ನಲ್ಲಿ ಮಧ್ಯೆ ಟೀಪಾಯ್ ಸುತ್ತಲೂ ನಾಲ್ಕು ಕುರ್ಚಿಗಳು ಟೀಪಾಯ್ ಮೇಲೆ ಕೆಲವಾರು ಮಾಸಿಕ ಸಾಪ್ತಾಹಿಕಗಳು ಇದ್ದುವು. ಕೆಲವು ಹಿಂದಿ ಭಾಷೆಯಲ್ಲಿ, ಕೆಲವು ಇಂಗ್ಲೀಷಿನಲ್ಲಿ. ನಾನು ಇಂಗ್ಲೀಷ್ ಪತ್ರಿಕೆಗಳನ್ನು ತಿರುವಿ ಹಾಕುತ್ತ ಒಳಹೊರಗೆ ಅಡ್ಡಾಡಿದೆ. ಮನಸ್ಸು ಮತ್ತೆ ಮತ್ತೆ ಹರಿಯುತಿದ್ದುದು ಗಿಡಮರಗಳ ವಿಸ್ತಾರದಲ್ಲಿ ಮತ್ತು ರಾಜಧಾನಿಯ ಉದ್ಯಾನ ವಿನ್ಯಾಸದಲ್ಲಿ.

ಬೆಳಿಗ್ಗೆ ಅಂಜೂ ಟೆಲಿಫೋನ್ ಮಾಡಿ 'ಒಂಭತ್ತೂವರೆ ಹೊತ್ತಿಗೆ ಬರುವೆ' ಎಂದಿದ್ದಳು. ಅದರ ನೆನವರಿಕೆಯಿಂದ ನೋಟವನ್ನು ಗಡಿ ಯಾರದ ಮೇಲೆ ಹೊರಳಿಸಿದೆ. ಮುಳ್ಳು ಒಂಭತ್ತು–ನಲ್ವತ್ತರ ಬಳಿ ಸಾಗಿತ್ತು. ನೋಟ ಹಿಮ್ಮರಳುವುದರೊಳಗಾಗಿ ಅಂಜನಾ ಕಾರು ಸರ್ರನೆ ಪೋರ್ಟಿಕೋದಲ್ಲಿ ಬಂದು ನಿಂತಿತು. ಅವಳು ಉಟ್ಟಿದ್ದು ತೆಳುವಾದ ತಿಳಿ ನೀಲಿಯ ಸೀರೆ. ಮುಂಗಾಲಿಂದ ನಿರಿಯನ್ನು ಚಿಮ್ಮುತ್ತ ನಡೆದು ಬಂದ ರೀತಿ ನನಗೆ ಬಲು ಸೊಗಸೆನಿಸಿತು. ಅವಳು ಅಲ್ಲಿಂದಲೇ "ಸತ್ಯಾ ಎಲ್ಲಿ?"

"ಒಳಗಿದ್ದಾಳೆ..."

ಅವಳನ್ನು ನಗುಮುಖದಿಂದ ಸ್ವಾಗತಿಸಿ "ಇಲ್ಲಿನ ಗಿಡಮರಗಳನ್ನು ನೋಡಿದರೆ ಎಷ್ಟು ಆನಂದ !"

"ನಿನಗೂ ಬೇಕಾದಷ್ಟು ಸ್ಥಳವಿದೆ. ಗಿಡಮರಗಳನ್ನು ಬೆಳೆಸಿಕೋ."

"ದೂರದಲ್ಲಿ ಹಸುರುಕ್ಕುವ ಮರಗಳ ತೋಪನ್ನು ನೋಡಿದರೆ ಅಲ್ಲಿ-ಇಲ್ಲಿ ಇವೆ ಅನಿಸುವುದೇ ಇಲ್ಲ. ಎಲ್ಲಾ ಒಂದೇ ಕಡೆ ಕೇಂದ್ರೀಕೃತವಾದಂತೆ ತೋರುತ್ತಿವೆ ಅಲ್ಲವೇ ?"

"ಅವು ದೂರದಿಂದ ಕಾಣುವುದೇ ಹಾಗೆ. ಹತ್ತಿರ ಹೋಗಿ ನೋಡಿದರೆ ತಿಳಿಯುತ್ತೆ."

ಅಂಜನಾ ಒಳಹೊಕ್ಕಳು. ಅನಂತರ ಅವಳ ಕೈಕಾಲಿಗೆ ಲವಲೇಶವೂ ವಿರಾಮವಿಲ್ಲದಷ್ಟು ಕೆಲಸ. ಪ್ರತಿಯೊಂದು ಕೊಠಡಿಯನ್ನೂ ಕ್ರಮವತ್ತಾಗಿ ಜೋಡಿಸುವುದರಲ್ಲಿ ಅವಳು ನೆರವು ನೀಡಿದಳು. ಅವಳೊಂದಿಗೆ ನಾನು ಕೂಡಿಕೊಂಡರೂ ಅವಳಷ್ಟು ಚಟುವಟಿಕೆಯಾಗಲೀ ಜಾಣ್ಮೆಯಾಗಲೀ ನನಗಿಲ್ಲ ಎಂದು ಹೇಳಿಕೊಳ್ಳುವುದರಲ್ಲಿ ನನಗೆ ಸಂಕೋಚವಿಲ್ಲ.

ಅಂಜನಾ ಮೊದಲು ದೇವರ ಮನೆಯನ್ನು ಸ್ವಚ್ಛಗೊಳಿಸಿ ಶ್ರೀ ಕೃಷ್ಣನ ವಿಗ್ರಹವನ್ನಿಟ್ಟು ಪೂಜಾಸಾಮಗ್ರಿಗಳನ್ನು ಜೋಡಿಸಿ ಹೂವುಗಳಿಂದ ಅಲಂಕರಿಸಿ ದೀಪಧೂಪಗಳನ್ನು ಉರಿಸಿ ಎಲ್ಲರಿಗೂ ಹೂವುಹಣ್ಣುಗಳ ಪ್ರಸಾದ ವಿನಿಯೋಗ ಮಾಡಿದಳು. ಅನಂತರ ಅಡಿಗೆ ಮನೆಯ ಜೋಡಣೆ. ಕೊರತೆ ಬಿದ್ದ ಕೆಲವು ಸಾಮಾನುಗಳನ್ನು ಕೊಂಡುತರುವ ಯೋಜನೆಯಲ್ಲಿ ಯಾವುಯಾವುದು ಬೇಕು ಎಂಬುದರ ನಿರ್ಣಯ ಅವಳದೇ.

ಎಲ್ಲವೂ ಮುಗಿದಮೇಲೆ ತಂಗಿಯನ್ನು ಅಭಿನಂದಿಸಿ ಭಾಸ್ ಅಂದ "ತುಂಬ ಥ್ಯಾಂಕ್ಸ್ ಅಂಜೂ !"

ನಾನೂ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸಿದೆ. ಅವಳು ಪ್ರತಿ ವಂದನೆಗಳನ್ನರ್ಪಿಸಿ ಪ್ರಸನ್ನಮುಖಿಯಾಗಿ ಹೊರಟಳು. ನನ್ನ ನೋಟ

ಅವಳು ಗೇಟು ದಾಟುವವರೆಗೂ ಹಿಂಬಾಲಿಸಿದಾಗ ಮನಸ್ಸು ಯೋಚನೆ ಯಾಳಕ್ಕಿಳಿಯಿತು. ...ವಿಶ್ವಪ್ರಪಂಚದ ಮಾನವರೆಲ್ಲರೂ ಸಾಮಾನ್ಯವಾಗಿ ಒಂದೇ ವರ್ಗಕ್ಕೆ ಸೇರಿದ್ದರೂ ಕೂಡ ಆಯಾ ರಾಷ್ಟ್ರದ ಪ್ರತ್ಯೇಕತೆ ಆಯಾ ಮಾನವತೆಗಿರುವುದು ಸಹಜ. ಪ್ರತಿದೇಶದಲ್ಲಿಯ ಮಾನವಜನಾಂಗದ ಜೀವನ ವಿಧಾನಗಳಲ್ಲಿ ನಾನಾ ಬಗೆಯ ತಾರತಮ್ಯವಿರುವುದೂ ಸಹಜ. ಆದರೂ ಮಾನವ ಪ್ರಧಾನವಾದ ಬಹುತೇಕ ಗುಣಗಳು ಒಂದಾಗಿಯೇ ಇರುತ್ತವೆ. ಆದ್ದರಿಂದ ಸಮಷ್ಟಿಯಲ್ಲಿ ವ್ಯಷ್ಟಿ ಇರುತ್ತದೆ; ವ್ಯಷ್ಟಿಯಲ್ಲಿ ಸಮಷ್ಟಿ ಇರುತ್ತದೆ ಎಂಬುದು ನಿಜವೇ. ಅಂತಲೇ ನಮ್ಮ ನಮ್ಮ ಮನಸ್ಸು ಸುಲಭವಾಗಿ ಹೊಂದಿಕೊಳ್ಳುತ್ತವೆ, ರಾಷ್ಟ್ರೀಯತೆ ಬೇರೆ ಬೇರೆ ಯಾಗಿದ್ದರೂ. ಅದೇ ಮನಃಪ್ರಾಣಗಳಿಗೆ ಎಲ್ಲಿಲ್ಲದ ಸಂತೃಪ್ತಿ...

ನಾವು ಇಂಗ್ಲೆಂಡ್ ಬಿಟ್ಟು ದೆಹಲಿಗೆ ಬಂದು ತಿಂಗಳ ಮೇಲಾ ಯಿತು. ಮನೆಯಲ್ಲಿ ಇನ್ನೂ ಸಾಕಷ್ಟು ಕಟ್ಟುವಿಕೆಯಿದ್ದು ಮನೆ ಅಸ್ತವ್ಯಸ್ತ ವಾಗಿದ್ದುದರಿಂದ ಈವರೆಗೆ ಹಿಂದಿನ ವರಾಂಡದಲ್ಲಿ ವಿಠ್ಠಲರಾವ್ ಅಡಿಗೆ ಮಾಡಿ ಬೆಡ್ ರೂಮಿಗೆ ತಂದುಕೊಡುತಿದ್ದ. ಇಂದು ಇಡೀ ಮನೆ ತೆರ ವಾದುದರಿಂದ ಮನಸ್ಸಿಗೆ ಬಲುಹಿತ. ಕಟ್ಟುವಿಕೆಯ ವ್ಯಾಪ್ತಿಯಲ್ಲಿ ಧೂಳು–ಸುಣ್ಣ-ಬಣ್ಣಗಳ ವಾಸನೆಯಿಂದ ಕಸಿವಿಸಿಗೊಂಡಿದ್ದ ಮಾನಸ ವೃತ್ತಕ್ಕೆ ಇಷ್ಟೊಂದು ಸುರಮ್ಯತೆ ಹೊಂದಿ ಬರುವುದೆಂಬ ಕಲ್ಪನೆ ಕೂಡ ಇರಲಿಲ್ಲ. ಅಂಗಳದ ಸ್ವಚ್ಛತೆಯ ಕಾರ್ಯ ಮುಗಿದನಂತರ ಉದ್ಯಾನವನವನ್ನು ಬೆಳೆಸಿ ಕೊಂಡರೆ ಕೊನೆಯ ಹಂತವನ್ನು ಮುಟ್ಟಿದಂತೆಯೇ.

ಂ ಂ ಂ ಂ

ಅದೊಂದು ಸುಂದರ ಸುರಮ್ಯ ಪ್ರಾತಃಕಾಲ.

ಪಕ್ಷಿಗೊರಳಿನ ಇನಿಗಾನದ ಇಂಪು ತನುಮನಗಳನ್ನು ಪುಳಕಗೊಳಿಸು ವಷ್ಟು ಮೋಹಕ. ಸುತ್ತಮುತ್ತಿನ ಪರಿಸರದಲ್ಲಿ ಸದ್ದುಗದ್ದಲಗಳ ಸೊಲ್ಲಾಗಲೀ ಮಾತುಕತೆಗಳ ಮರ್ಮರವಾಗಲೀ ಇಲ್ಲವೇ ಇಲ್ಲ. ಸತ್‌ಶಾಂತಿಯ ಅಪ ರಾವತಾರ ಎಲ್ಲೆಲ್ಲೂ.

ರವಿವಾರವಾದ್ದರಿಂದ ಆತುರಕಾತುರಗಳ ಸೋಂಕು ಲವಲೇಶವೂ ಇರಲಿಲ್ಲ. ಭಾಸ್ವಾನ್ ಬನಿಯನ್ ಮತ್ತು ಬಿಳಿಯ ಪಾಯಿಜಾಮ ತೊಟ್ಟು ತಂಗಾಳಿಗೆ ಮೈಯೊಡ್ಡಿ ಅಂಗಣದಲ್ಲಿ ಅಡ್ಡಾಡುತ್ತಿದ್ದ. ಇತ್ತೀಚೆಗೆ ರೂಪಿಸಿದ್ದ ಪುಷ್ಪೋದ್ಯಾನದಲ್ಲಿ ಗಿಡಗಳು ಈಗೀಗಷ್ಟೆ ಚಿಗುರುತ್ತಿದ್ದು ಪಾತಿಗಳೆಲ್ಲಾ ಇನ್ನೂ ಬರಿದಾಗಿಯೇ ಇವೆ. ಪೂರ್ವದಿಶೆಯಲ್ಲಿ ಅರುಣಾರುಣ ಮೆಲ್ಲಮೆಲ್ಲನೆ ಬಾನೇರಿ ಉಜ್ವಲ ಕಿರಣಗಳು ಕೋಲುಕೋಲಾಗಿ ಹೊಮ್ಮಿದುವು. ತೆಂಕಣ ದಿಶೆಯಿಂದ ತೀಡುವ ತಂಗಾಳಿ ಸುಯ್ಯನೆ ಸುಯ್ಯುತ್ತ ಕೇದಿಗೆ ಬನದ ನರುಗಂಪನ್ನು ತಂದು ಸಿಂಪಡಿಸಿ ಮನಃಪ್ರಾಣಗಳಿಗೆ ಆಹ್ಲಾದವನ್ನೂಡಿಸಿತು. ಪ್ರಾತಃಸೂರ್ಯ-ಕಾಂತಿಯ ಲೇಪನದಿಂದ ಭಾಸ್‌ನ ವರ್ಚಸ್ಸು ಇನ್ನಷ್ಟು ಉಜ್ವಲಿಸಿತ್ತು. ನಾನು ಮೆಟ್ಟಲಿನ ಮೇಲೆ ಮೂರ್ತಿವತ್ತಾಗಿ ನಿಂತು ಅವನನ್ನೇ ನಿಟ್ಟಿಸಿದೆ. ಬಹುಶಃ ನನ್ನ ಪ್ರೇಮದ ಕಣ್ಣು ಕುರುಡಾಗಿಯೋ ಅಥವಾ ನಿಜವಾಗಿಯೂ ಅವನಲ್ಲಿ ಮಹತ್ ರಸಾನುಭೂತಿಯು ಸ್ಫುರಣವಾಗಿದೆಯೋ ಊಹಿಸಿ ಹೇಳಲಾರೆ. ಅಂತೂ ಅವನ ಹೃದಯ ಕುಂಡ ರಸಮಯ. ಅವನ ಪ್ರಾಣ ಚೇತನಮಯ. ಅವನ ಅನುಭೂತಿ ಆನಂದಮಯ. ಅವನ ವಿಜ್ಞಾನ ಜ್ಯೋತಿರ್ಮಯ. ಅವನ ಪ್ರೀತಿ ಅಮೃತಮಯ. ಅವನೊಂದು ಅದ್ಭುತ ನಿಘಂಟು. ನನ್ನ ಯಾವತ್ತೂ ಸಮಸ್ಯೆಗಳನ್ನು ಬಿಡಿಸುವವನು ಅವನೇ. ಅವನ ಮನಸ್ಸು ಪವಿತ್ರ. ಹೃದಯವೂ ಪವಿತ್ರ. ಪ್ರೇಮವೂ ಪವಿತ್ರ. ಅಂತಲೇ ಅವನ ಸಾಮೀಪ್ಯಕ್ಕಾಗಿ ಹೃದಯ ಕಾತರಿಸುತ್ತದೆ. ನಾನು ಅವನ ಬಳಿಗೆ ಹೋದಾಗ ಅವನೆಂದ "ಶುಭೆ! ಏನು ವಿಶೇಷ ಸಮೀಕ್ಷೆ ?"

ನಾನು ನಕ್ಕುಬಿಟ್ಟೆ.

ಹತ್ತು ಗಂಟೆಯ ಸಮಯದಲ್ಲಿ ಸುಡುಬಿಸಿಲಿನ ಮುದ್ರೆಯಿಂದ ಮುಖಬಿಂಬ ಕೆಂಪಗೆ ಕೆಂಪುತಳೆದ ಯುವಕನೊಬ್ಬ ವರಾಂಡಕ್ಕೆ ಬಂದು "ಇದು ಭಾಸ್ವಾನ್ ಮನೆಯಷ್ಟೆ ?" ಎಂದು ಕೇಳಿದುದು ನನ್ನ ಕಿವಿಗೂ ಬಿತ್ತು. ನಾನು ಎದ್ದು ಹೊರಹೋದೆ. ಆದರೆ ನನ್ನ ಕಣ್ಣುಗಳನ್ನೇ

ನಂಬದಿರುವಂತಹ ದೃಶ್ಯ ! ನಾನು ಅವನನ್ನು ನೋಡುತ್ತಲೂ ಸ್ತಂಭೀಭೂತಳಾದೆ. ಅವನು ನನ್ನನ್ನು ಬಿಗಿದಪ್ಪಿ ಆತ್ಮೀಯ ಆಲಿಂಗನ ನೀಡಿ "ಎಷ್ಟು ದಿನಗಳ ಮೇಲೆ ನಿನ್ನ ಭೇಟಿ ?" ಎಂದ. ಇದನ್ನೆಲ್ಲಾ ಒಳಗಡೆಯಿಂದ ನೋಡುತ್ತಿದ್ದ ಭಾಸ್ ಎದ್ದು ಹೊರಬಂದ. ಆಗ ನಾನು ಅವನನ್ನು ಕುರಿತು "ಇವನು ನನ್ನ ಬಾಲ್ಯದ ಗೆಳೆಯ. ನಾವಿಬ್ಬರೂ ನೆರೆಹೊರೆಯ ಮಕ್ಕಳು. ಒಂದೇ ಶಾಲೆಯಲ್ಲಿ ಓದಿ ಒಂದೇ ಕಡೆ ಆಡಿ ಕೂಡಿ ಬೆಳೆದವರು. ಹೆಸರು ಡೇವಿಡ್" ಅನಂತರ ಅದೇ ನೇರಕ್ಕೆ ನನ್ನ ಪತಿಯನ್ನೂ ಅವನಿಗೆ ಪರಿಚಯ ಮಾಡಿಕೊಟ್ಟೆ.

"ನೀನು ಭಾರತೀಯ ಉಡುಗೆಯಲ್ಲಿ ಬಲೂ ರೂಪಸಿಯಾಗಿ ಕಾಣಿಸುತ್ತಿ. ತಿಲಕಯುಕ್ತ ಹಣೆ ಬೈತಲೆಯಲ್ಲಿ ಸಿಂಧೂರ ನಿನಗೆ ಚೆನ್ನಾಗಿ ಒಪ್ಪುತ್ತೆ !" ಎಂದ ಡೇವಿಡ್ ಹಸನಾದ ನಗೆಬೀರಿ.

ಅನಂತರ ಅವನನ್ನು ಒಳಗಡೆ ಬರಮಾಡಿಕೊಂಡೆ. ಭಾಸ್ ಕೇಳಿದ "ಇಲ್ಲಿ ಏನು ಮಾಡುತ್ತಿದ್ದಿ ?" "ನಾನು ಬ್ರಿಟಿಷ್ ಎಂಬೆಸಿಯಲ್ಲಿ ಕೆಲಸ ಮಾಡುತ್ತಿರುವೆ."

"ಇಲ್ಲಿಗೆ ಬಂದು ಎಷ್ಟು ದಿವಸಗಳಾದುವು ?"

"ಏಳೆಂಟು ತಿಂಗಳಾದುವು. ಈವರೆಗೆ ಜನೀ ಇಲ್ಲಿರುವುದು ತಿಳಿದಿರಲಿಲ್ಲ. ನಿನ್ನೆ ಪ್ರಸಂಗವಶಾತ್ ನನ್ನ ಗೆಳೆಯ ಜಾರ್ಜ್ ಮೈಕೇಲ್ ತಿಳಿಸಿದ. ಆದರಿಂದ ನೋಡಿ ಹೋಗೋಣವೆಂದು ಬಂದೆ. ನಿನಗೊಂದು ಮಗುವಿದೆಯಂತೇ ?"

"ಹೌದು. ನನ್ನ ನಾದಿನಿಯ ಮನೆಗೆ ಹೋಗಿದ್ದಾಳೆ ? ನಿನಗೂ ಮದುವೆಯಾಗಿರಬೇಕಲ್ಲ ?"

"ಓ ಅದೊಂದು ದೊಡ್ಡ ಕತೆ. ಮದುವೆಯಾದೆ. ಒಂದು ಹೆಣ್ಣು ಮಗುವೂ ಆಯಿತು. ಆದರೂ ಆಕೆ ಹೊಂದುವವಳೇ ಅಲ್ಲ. ಅವಳಲ್ಲೋ ನಾನೆಲ್ಲೋ"

"ಡೈವೋರ್ಸ್ ಮಾಡಿದೆಯಾ ?"

"ಇಲ್ಲ...ಅದೊಂದು ಬಾಕಿ."

ಹೀಗೆ ಸಾಗಿತು ನಮ್ಮ ನಮ್ಮ ಮಾತುಕತೆ. ಭಾಸ್ ಮಾತು ಕತೆಯಲ್ಲಿ ಅಷ್ಟೇನೂ ಉತ್ಸಾಹ ತೋರಲಿಲ್ಲ. ಅವನೊಂದು ಮ್ಯಾಗ್‌ಜೈನ್‌ನಲ್ಲಿ ಮನವನ್ನು ತೊಡಗಿಸಿದ್ದ. ಮಧ್ಯೆ ಮಧ್ಯೆ ಒಮ್ಮೊಮ್ಮೆ 'ಹೂಂ ಹಾಂ' ಎನ್ನುತಿದ್ದುದುಂಟು.

ಅವನು ಬಹಳ ಹೊತ್ತಿದ್ದು ಎಂಜೆಸಿಯಲ್ಲಿ ಏಳೆಂಟು ವರ್ಷಗಳು ಕೆಲಸ ಮಾಡಿದ ಅನುಭವವನ್ನು ಹೇಳಿ ನಗೆಮಾತುಗಳಲ್ಲಿ ನಗುವಿನ ಗುಳ್ಳೆಬ್ಬಿಸುತ್ತಿದ್ದ. ನ್ಯೂಯಾರ್ಕಿನಲ್ಲಿ ಮೂರು ನಾಲ್ಕು ವರ್ಷ, ಆಸ್ಟ್ರೇಲಿಯಾದಲ್ಲಿ ಮೂರು ವರ್ಷ ಕೆಲಸ ಮಾಡಿರುವುದಾಗಿಯೂ ಹೇಳಿದ. ಅವನು ಬಲೂ ವಾಚಾಳಿ, ಅವನ ಮಾತಿನ ಧಾಟಿ ಬಲು ಆಕರ್ಷಣೀಯ. ಅವನು ಮಾತಾಡುತ್ತಿದ್ದರೆ ಕೇಳುಹವರು ಮಂತ್ರಮುಗ್ಧರಾಗಿಬಿಡುತ್ತಾರೆ. ಡೇವಿಡ್ ಎದ್ದು ಹೊರಟಾಗ ಹನ್ನೊಂದು ಗಂಟೆ.

ಇಲ್ಲಿನ ಆಳುಕಾಳುಗಳೆಲ್ಲಾ ಹಿಂದೀವಾಲಾಗಳೇ. ಆದುದರಿಂದ ಅವರೊಂದಿಗೆ ವ್ಯವಹಾರ ಕಠಿಣ. ಭಾಸ್ ಮನೆಯಲ್ಲಿದ್ದಾಗ ನಮ್ಮಗಳ ನಡುವೆ ಅವನೇ ತರ್ಜುಮೆಗಾರ. ಅವನಿಲ್ಲದಾಗ ಕೈಸನ್ನೆ ಬಾಯಿಸನ್ನೆ. ತುಂಡು ತುಂಡು ಹಿಂದಿ. ಆದರೂ ಸಹ, ನಾನೊಂದು ಹೇಳಿದರೆ ಅವರು ಮಾಡುವುದು ಇನ್ನೊಂದು.

ನಾನು ಲಂಡನ್ ನಗರದಲ್ಲಿ ಎಷ್ಟೆಷ್ಟು ಚಟುವಟಿಕೆಯ ಬೀಡಾಗಿದ್ದೆನೋ ಅಷ್ಟೇ ಸೋಮಾರಿತನದ ಬಾಳು ಇಲ್ಲಿ ರೂಪಿತವಾಯಿತು. ಪ್ರತಿಯೊಂದಕ್ಕೂ ಆಳುಕಾಳು ಇರುತಿದ್ದುದರಿಂದ ಮಾಡುತ್ತೇನೆಂದರೂ ಕೆಲಸವಿಲ್ಲ. ಅಲ್ಲಿಯಂತೆಯೇ ಇಲ್ಲಿಯೂ ಟೈಪಿಸ್ಟ್ ಆಗಿ ಕೆಲಸಮಾಡಬಾರದೇಕೆ ? ಎಂಬ ಪ್ರಶ್ನೆ ಆಗಾಗ ಮನದಲ್ಲಿ ಏಳುತ್ತದೆ. ಆದರೆ, ನೆರೆಹೊರೆಯ ಕ್ವಾರ್ಟರ್ಸ್‌ಗಳಲ್ಲಿ ವಾಸಿಸುವ ಅನೇಕ ಗೃಹಿಣಿಯರ ಪರಿಚಯ

ಪಾದಮೇಲೆ ಇಲ್ಲಿಯ ನೀತಿ ನಿಯಮದ ಪ್ರಕಾರ ಗೌರವಯುತ ಗೃಹಿಣಿಯರು ಸಣ್ಣಪುಟ್ಟ ಕೆಲಸಗಳಿಗೆ ಹೋಗುವುದು ವಿಹಿತವಲ್ಲವೆಂಬುದು ಮನವರಿಕೆಯಾಗಿ ಆ ವಿಚಾರವನ್ನು ಕೈಬಿಟ್ಟಿದ್ದಾಯ್ತು.

ನಮ್ಮ ಮನೆಗೆ ಸಮೀಪದಲ್ಲಿ ಲೇಡೀಸ್ ಕ್ಲಬ್ ಇದೆ. ಇದುವರೆಗೆ ನಾನು 'ಲೇಡೀಸ್' ಕ್ಲಬ್ ನೋಡಿಯೇ ಇರಲಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಸ್ತ್ರೀ ಪುರುಷರು ಒಟ್ಟುಗೂಡಿಯೇ ಕ್ಲಬ್ಬುಗಳಲ್ಲಿ ವ್ಯವಹಾರ. ನಮ್ಮಗಳ ಮಧ್ಯೆ ಸಂಕೋಚದ ಪ್ರಶ್ನೆ ಏಳುವುದೇ ಇಲ್ಲ. ಭಾಸ್ ಡಿಪಾರ್ಟ್‌ಮೆಂಟಿನ ಇತರ ಅಧಿಕಾರಿಗಳ ಪತ್ನಿಯರು ಕ್ಲಬ್ಬಿನಲ್ಲಿ ಸಿಗುತ್ತಾರೆ. ಅವರಾರೂ ಸಣ್ಣಪುಟ್ಟ ಹುದ್ದೆಗಳಿಗೆ ಕೈಚಾಚುವವರಲ್ಲ. ಅಲ್ಲದೆ ಸ್ಕೂಲ್ ಎಜುಕೇಶನ್ ಮುಗಿಸಿ ಟೈಪಿಂಗ್ ಕಲಿತವಳು ನಾನು. ಅದು ವಿನಾ ಇನ್ನೇನು ಮಾಡಬಲ್ಲೆ....? ಭಾಸ್ಕರನ ವ್ಯಾವಹಾರಿಕ ಪತ್ರಗಳ ಟೈಪಿಂಗ್ ಆಫೀಸಿನಲ್ಲೇ ನಡೆದುಹೋಗುತ್ತದೆ. ನಾನು ಯಾವುದಾದರೂ ಪುಸ್ತಿಕೆ–ಪತ್ರಿಕೆಗಳಲ್ಲಿ ಗಮನವಿಡಬೇಕು ಅಷ್ಟೆ.

ಒಮ್ಮೆ ನಾನು ಈ ವಿಚಾರವಾಗಿ ಭಾಸ್‌ನೊಂದಿಗೆ ಪ್ರಸ್ತಾಪಿಸಿದಾಗ ಅವನು

"ಈ ದೇಶದಲ್ಲಿ ಕೆಲಸ ಮಾಡುತ್ತೇನೆಂದರೆ ಬಡತನವೇ ? ಸೋಷಿಯಲ್ ಸರ್ವಿಸ್ ಮಾಡಿದರಾಯ್ತು. ಅವಿದ್ಯೆ, ಬಡತನ, ಮೌಢ್ಯ ಇವುಗಳಿಂದ ನರಳುತಿದ್ದಾರೆ ಬಡಜನ. ಅಂತಹವರಿಗೆ ಸಹಾಯದ ಅಗತ್ಯವಿದೆ. ಯಾವ ಯಾವ ರೀತಿಯಲ್ಲಿ ಸಹಾಯ ಮಾಡಬಹುದು ನೀನೇ ಯೋಚಿಸಿ ನೋಡು. ಅನಂತರ ಕೆಲಸ ತಾನಾಗಿಯೇ ಕೈಗೂಡಿಬರುತ್ತದೆ.

ಆ ಮಾತು ನುಂಗಲಾರದ ತುತ್ತಾದರೂ ಅದನ್ನು ಕಡೆಗಣಿಸದೆ ವಿಚಾರಪರವಶಳಾದೆ.

o o o o

ಸತ್ಯಭಾಮಾ ಶಾಲೆಗೆ ಹೋಗುತಿದ್ದಾಳೆ. ಬೆಳಿಗ್ಗೆ ಅವಳನ್ನು ಶಾಲೆಗೆ

ಅಣಿಗೊಳಿಸುವುದೇ ಒಂದು ದೊಡ್ಡ ಕೆಲಸ. ಅವಳಿರುವಾಗ ಮನೆಮನೆ ಯೆಲ್ಲಾ ಕಲಕಲಮಯ. ಅವಳಿಲ್ಲ ಎಂದರೆ ಬಣಬಣ. ಅವಳನ್ನು ಕಳು ಹಿಸುವುದಕ್ಕೂ ಕರೆಯುವುದಕ್ಕೂ ನಾನೇ ಹೋಗುವೆ. ಅದನ್ನು ಬಿಟ್ಟರೆ ಬೇರೆ ಉದ್ಯೋಗವೇ ಇಲ್ಲ.

ಭಾಸ್ ಮನೆಗೆ ಬಂದಾಗ ಏಳು ಗಂಟೆ. ಗಗನಮಂಡಲದಲ್ಲಿ ಅರ್ಧ ಚಂದ್ರನು ರಾಜ್ಯವಾಳುತ್ತಿದ್ದ, ಕೋಟಿ ಕೋಟಿ ನಕ್ಷತ್ರಗಳ ಅದ್ಭುತ ಲೋಕದಲ್ಲಿ. ತಂಗಾಳಿ ತಣ್ಣಗೆ ತೀಡುತಿತ್ತಾದರೂ ಮೈ ಬೆವರುವಂತಹ ಸೆಕೆ.

ವರಾಂಡದ ಕುರ್ಚಿಯಮೇಲೆ ಕುಳಿತುಕೊಳ್ಳುತ್ತ "ಸತ್ಯಭಾಮಾ ಎಲ್ಲಿ ?" ಎಂದ ಭಾಸ್

"ಕೊಠಡಿಯಲ್ಲಿ ಹೋಂವರ್ಕ್ ಮಾಡುತಿದ್ದಾಳೆ"

"ಓ ಹಾಗೋ ?" ಎಂದ ಭಾಸ್ ಅವಳನ್ನು ಗಟ್ಟಿಯಾಗಿ ಕರೆದ "ಸತ್ಯಾ...ಸತ್ಯಾ !"

ಅವಳು ಕದವನ್ನು ತೆರೆದು 'ಏನಪ್ಪಾ !' ಎನ್ನುತ್ತಲೇ ಓಡಿಬಂದಳು. ಕೊರಳಿಗೆ ತೋಳುಗಳ ಮಾಲೆಯಿಕ್ಕಿ ಕೆನ್ನೆಗೆ ಮುದ್ದಿಟ್ಟು ನವಿಲಿನ ಕ್ರೇಂ ಕಾರದಂತೆ ದನಿಯನ್ನು ಹರಿಯಬಿಟ್ಟು ಕೇಳಿದಳು "ಏನಪ್ಪಾ ?"

"ನಾನು ಈಗಷ್ಟೆ ಮನೆಗೆ ಬಂದೆ. ಒಂದೆರಡು ನಿಮಿಷ ಹೊರ ಬಂದು ಒಂದೆರಡು ಮಾತಾಡಿ ಹೋಗಬಾರದೇ ?"

"ಸರಿ, ಸರಿ. ನೀವು ಬಂದುದೇ ತಿಳಿಯಲಿಲ್ಲ. ಕಾರಿನ ಸದ್ದೂ ಕೇಳಿಸಲಿಲ್ಲ. ಕೇಳಿಸಿದ್ದರೆ ಹೊರಬಂದೇ ಬರುತ್ತಿದ್ದೆ."

"ಆಗಲಿ, ಓದು. ಮುಂದೆ ಏನಾಗಬೇಕು ಎಂದು ಯೋಚಿಸಿದ್ದಿ ? ನ್ಯಾಯ ಶಾಸ್ತ್ರ, ವಿಜ್ಞಾನ ಶಾಸ್ತ್ರ, ವೈದ್ಯ ಶಾಸ್ತ್ರ, ಯಾವುದನ್ನು ಐಚ್ಛಿಕ ವಾಗಿ ತೆಗೆದುಕೊಳ್ಳುತ್ತಿ ?"

"ಮೊದಲೊಮ್ಮೆ ಪರೀಕ್ಷೆ ಮುಗಿಯಲಿ. ಅನಂತರ ಆ ಯೋಚನೆ ಎಂದವಳೇ ತಂದೆಗೊಂದು ಹೂ ಮುತ್ತನಿತ್ತು ಓಡಿಹೋಗಿ ತನ್ನ ಕೊಠಡಿಯ

ಕದವನ್ನು ಮುಚ್ಚಿಕೊಂಡಳು. ದೂರದ ಮರದ ಮೇಲೆ ಹುಗಿದುಕುಳ್ಳಿ ತಿದ್ದ ಕೋಗಿಲೆಯೊಂದು ಇಂಪಾಗಿ ಕೂಗಿದಾಗ ಕೊರಳೆತ್ತಿ ನೋಡಿದೆ.

"ಎಷ್ಟು ಇಂಪಾದ ಧ್ವನಿ ?"

"ಈ ಧ್ವನಿಯ ಸೊಂಪಿಗೆ ಮೆಚ್ಚಿದ ಪಾಶ್ಚಾತ್ಯ ಕವಿ, ಸರೋಜಿನಿ ನಾಯ್ಡುರವರ ಕವಿತ್ವವನ್ನು ಓದಿ ಆನಂದಿಸಿ "ನೈಟಿಂಗೇಲ್ ಆಫ್ ಇಂಡಿಯಾ !" ಎಂದು ಅವರಿಗೆ ಬಿರುದುಕೊಟ್ಟಿದ್ದು.

"ಅಹ !" ಎಂದ ನಾನು ಪುನಃ "ಆಕೆ ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವ್ಯಕ್ತಿ ಅಲ್ಲವೇ ?"

ಭಾಸ್ ನನ್ನ ಪ್ರಶ್ನೆಯಿಂದ ಅಂದಿನ ರಾಜಕೀಯ ರಂಗವನ್ನು ನೆನಪಿಸಿ ಕೊಂಡಂತೆ ಬಿತ್ತರಿಸಿದ,

"ಜಾನಕೀ ! ಆಗಿನ ಕಾಲ, ಆ ಹೋರಾಟ, ಆ ಆಂದೋಳನ ! ಓಹ್ ! ಜೈಲು... ಗಲ್ಲು ... ಲಾಠಿ ಛಾರ್ಜ್... ಗುಂಡು... ದರ್ಪ ಇವುಗಳ ಅಬ್ಬರದ ಮುಂದೆ ಬರಿಗೈಯಲ್ಲಿ ಎದೆಗೊಟ್ಟು ನಿಲ್ಲುವವರ ದಿಟ್ಟತನ ! ನೆನಸಿಕೊಂಡರೆ ಮೈನವಿರೇಳುತ್ತೆ ! ಅದೊಂದು ಮಹಾಪರ್ವ ! ಈ ದೇಶದ ಸ್ವಾತಂತ್ರ್ಯಪೂರ್ವದ ಪರಿಸ್ಥಿತಿಯನ್ನು ಗಮನಿಸಿದ್ದರೆ ನೀನು ಏನು ಹೇಳುತ್ತಿದ್ದೆಯೋ ಒಬ್ಬ ರೈತನಿಗೆ, ಒಬ್ಬ ಕೂಲಿಕಾರನಿಗೆ ತನ್ನ ಜೀವ ಮಾನವೆಲ್ಲಾ ದುಡಿದರೂ ಅನ್ನ ವಸತಿಗಳನ್ನು ಒದಗಿಸಿಕೊಳ್ಳಲು ಸಾಧ್ಯ ವಾಗುತ್ತಿರಲಿಲ್ಲ. ಈಗ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಿದೆ. ಆದರೆ ಎಷ್ಟು ಸುಧಾರಿಸಬೇಕೋ ಅಷ್ಟು ಸುಧಾರಿಸಲಿಲ್ಲ. ಅದಕ್ಕೆ ಕಾರಣವೇನು ಗೊತ್ತೆ ? ಆಗ ಇಂಗ್ಲಿಷರೂ ಮತ್ತು ಇಂಗ್ಲೀಷರಿಗೆ ಗುಲಾಮರೂ ಕೈ ಗೊಂಬೆಗಳೂ ಆಗಿದ್ದ ರಾಜಮಹಾರಾಜರುಗಳೂ, ಶ್ರೀಮಂತರೂ, ಬುದ್ಧಿ ಜೀವಿಗಳೂ ಅನೀತಿ–ಅನ್ಯಾಯ–ಅನಾಚಾರಗಳ ಕೋಟೆಯಲ್ಲಿ ಜನಸಮು ದಾಯವನ್ನು ಕೂಡಿ ಮೌಢ್ಯದ ಅಫೀಮು ತಿನ್ನಿಸಿ ಜಡನಿದ್ದೆ ಮಾಡಿಸಿ ದರು... ಈಗಲೂ ಹರಿಯಲಿಲ್ಲ ಆ ಜಡ ನಿದ್ದೆ. ಇದರಿಂದಾಗಿಯೇ ನಮ್ಮಲ್ಲಿ ಕಮ್ಯುನಿಸಂ ತಲೆಯೆತ್ತುತ್ತಿದೆ. ಈಗೀಗ ಮೌಲ್ವಿಕ ವ್ಯವಹಾರಗಳನ್ನು

ಅರಿತುಕೊಳ್ಳುತ್ತಿದ್ದಾರೆ. ತಮ್ಮತಮ್ಮ ಲೋಪದೋಷಗಳನ್ನು ತಿಳಿದು ಕೊಳ್ಳುವ ಸಮರ್ಥತೆ ಮೂಡುತ್ತಿದೆ...."

"ಹಾಗಾದರೆ ಎಂದಾದರೂ ತಿರುಗಿಬೀಳಬಹುದು ಈ ಜನ ?"

"ಜಾನಕೀ ! ತಿರುಗಿಬೀಳುವುದು ಅಥವಾ ಬಂಡಾಯವೇಳುವುದು ಎಂಬ ವಿಚಾರ ಕೇಳಲು ಕಿವಿಗಳಿಗೆ ಹಿತವಿಲ್ಲ. ಅದು ಸ್ಥಿರವಾದ ಸ್ಥಿತಿಯೂ ಅಲ್ಲ. ಪ್ರತ್ಯೇಕ ಸ್ಥಾನಮಾನಗಳನ್ನೇನೂ ಹೊಂದಿಲ್ಲ. ಅಂದಮೇಲೆ, ಶಿಕ್ಷಣದ ಫಲಿತಾಂಶ ಅಥವಾ ಮನಃಪ್ರಚೋದನೆ ಅಥವ ಸಾಮೂಹಿಕ ಪ್ರಜ್ಞೆಯ ವಿಕಾಸ ಅಥವಾ ದುರ್ದಮ್ಯವಾದ ಒಗ್ಗಟ್ಟು; ಈ ದಿಶೆಯಲ್ಲಿ ಪ್ರಜಾಸಮೂಹ ಮೆಲ್ಲಮೆಲ್ಲನೆ ಮುಂದಡಿಯಿಸುತ್ತಿದೆ, ಎಂಬ ವಿಶ್ವಾಸ ವನ್ನು ನಾನು ವ್ಯಕ್ತಪಡಿಸಿದೆ ಅಷ್ಟೆ. ಹಿಂದೆ ನಾನು ನನ್ನ ಸ್ವಂತ ಕಿವಿ ಗಳಿಂದ ಕೇಳಿದಂತೆ ಕೇವಲ ಆರು ಆಣೆಗಳ ಕೂಲಿ ಎಷ್ಟೋ ಜನಗಳಿಗೆ ಜೀವನಮಾರ್ಗವನ್ನು ತೋರಿಸಿತ್ತು. ಆ ಕಾಲದಲ್ಲಿ ಯಾರಲ್ಲೂ ರೂಪಾಯಿ ಗಳು ಹೆಚ್ಚು ಓಡಾಡುತ್ತಿರಲಿಲ್ಲ. ಧಾನ್ಯ ರಾಶಿರಾಶಿಯಾಗಿ ಬಿದ್ದಿರುತಿತ್ತು. ಸಾರಿಗೆ ಸೌಕರ್ಯ ಸಾಲದೆ ಸ್ವದೇಶೀ ವ್ಯಾಪಾರಸ್ಥರು ಹೊರದೇಶಗಳಿಗೆ ರಫ್ತು ಮಾಡುವಂತಿರಲಿಲ್ಲ. ಹಣವನ್ನು ಹೆಚ್ಚು ಹೆಚ್ಚು ಗಳಿಸುವ ದುರಾಸೆ ಯಾಗಲೀ ಪ್ರಜೆಗಳನ್ನು ವಿನಾಶದ ಹಾದಿಗೆ ತಳ್ಳುವ ಧೋರಣೆಯಾಗಲೀ ಅವರಲ್ಲಿ ಮೂಡಿರಲಿಲ್ಲ. ಇಂದು ನಮ್ಮ ದೇಶ ಯಾವ ಸ್ಥಿತಿಯಲ್ಲಿದೆ ? ವೈಜ್ಞಾನಿಕವಾಗಿ ಎಷ್ಟೆಷ್ಟು ಮುಂದುವರಿದಿದೆ ? ಒಂದು ಹಿಡಿ ಕಸ ಕಡ್ಡಿಯೂ ವ್ಯರ್ಥವಾಗಬಾರದು ಎಂಬ ಉದ್ದೇಶ ಎಷ್ಟು ಜನಕ್ಕಿದೆ ? ವಿಜ್ಞಾನಿಗಳ ಮತ್ತು ಅರ್ಥಶಾಸ್ತ್ರಜ್ಞರ ದೃಷ್ಟಿಯಲ್ಲಿ ಯಾವುದು ಒಳ್ಳೆತೋ ಅದು ಬುದ್ಧಿಹೀನ ರೈತಾಪಿವೃಂದಕ್ಕೂ ಕಾರ್ಮಿಕರಿಗೂ ಮುಟ್ಟುವುದು ಹೇಗೆ ? ಈ ದಿಶೆಯಲ್ಲಿ ವಿಜ್ಞಾನಿಗಳು ಯೋಚಿಸಬೇಕು. ಯಾವುದನ್ನು ಗ್ರಾಮ್ಯಜೀವನ ಪ್ರಗತಿಗಾಗಿ ನಾವು ರೂಪಿಸುತ್ತೇವೋ ಅದು ಮಾತ್ರವೇ ಜನಮನವನ್ನು ಮುಟ್ಟಬೇಕಾದರೆ. ಇಂಗ್ಲೀಷರು ಅಂದು ಮಾಡಿದ್ದೇನು ? ಶೋಷಣೆಯ ಮಾತಿರಲಿ, ಅನಾಗರೀಕರನ್ನು ನಾಗರಿಕ ವಲಯದಿಂದ ದೂರೀಕರಿಸಿ ಇನ್ನಷ್ಟು ಅನಾಗರಿಕರನ್ನಾಗಿ ಮಾಡಿದ್ದಾರೆ. ಅನಾಗರಿಕರು

ಇತ್ತ ತಲೆಹಾಕಿದರೆ ಅಲ್ಲಿಯೇ ಗುಂಡಿಡುತ್ತಿದ್ದ ಪ್ರಸಂಗಗಳಿಗೆ ಲೆಖ್ಖವೇ ಇಲ್ಲ. ಈ ಎಲ್ಲದರ ದುಷ್ಫಲವನ್ನು ಅನುಭವಿಸಿಯೂ ಪ್ರಜೆ ಮೂರ್ಖ ನಾಗಿರುವುದು ಅಸಾಧ್ಯ. ಯಾರಾದರೂ ಸರಿಯೇ, ಉಪ್ಪುಂಡ ಮೇಲೆ ನೀರು ಕುಡಿಯಲೇ ಬೇಕು."

ನಾನು ಸುಮ್ಮನೆ ತಲೆದೂಗಿದೆ.

"ಸ್ವಾತಂತ್ರ್ಯಾನಂತರ ಆದ ದುಷ್ಫಲ-ಸತ್ಫಲಗಳನ್ನು ಕುರಿತು ನಾನು ವಿಶ್ಲೇಷಣೆ ಮಾಡಹೋಗುವುದಿಲ್ಲ. ಆಗಿನ ಶೃಂಖಲಾಬದ್ಧ ಭಾರತಕ್ಕೆ ಹಿರಿಯ ರಾಷ್ಟ್ರಗಳ ಸ್ಥಾನಮಾನಗಳೇನೂ ಇರಲಿಲ್ಲ. ಇಂದು ಕಾಮನ್ ವೆಲ್ತಿನಲ್ಲೂ ವಿಶ್ವಸಂಸ್ಥೆಯಲ್ಲೂ ಸರಿಯಾದ ಸ್ಥಾನಮಾನಗಳಿವೆ. ನಮ್ಮ ನಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಧೀರೋದ್ದಾತತನವಿದೆ; ನೋಡೋಣ ಹೀಗೆಯೇ ಇನ್ನೂ ಬದಲಾವಣೆಗಳಾಗಬಹುದು."

"ನಿನ್ನ ತೀವ್ರತರವಾದ ವಿಚಾರಶೀಲತೆಯಿಂದ ನನ್ನ ಮನಸ್ಸು ಒಮ್ಮೊಮ್ಮೆ ದ್ವಂಧ್ವಭಾವನೆಗಳಿಗೆಡೆಕೊಡುತ್ತದೆ. ಇಂಗ್ಲೀಷರ ದಮನಶಕ್ತಿ ಯನ್ನು ನಾನು ಅರ್ಥಮಾಡಿಕೊಳ್ಳಲಾರೆ ಎಂದಲ್ಲ. ಈ ದೇಶದಲ್ಲಿ ಎಷ್ಟೋ ಸಲಿ ಯಾವ ಕೆಲಸಕ್ಕೂ ಬಾರದ ವಸ್ತುಗಳನ್ನು ನಮ್ಮ ಜೀವನ ಪ್ರಗತಿಯನ್ನು ಕುಂಠಿತಗೊಳಿಸುವುದೂ ಸತ್ಯ. ನಾನು ಬಂದಾಗಿನಿಂದ ನೋಡುತ್ತಿರುವೆ ಬರೀ ಗೊಡ್ಡು ಸಂಪ್ರದಾಯಗಳಿಂದಲೇ ನರಳುತ್ತಿದೆ ಜನತೆ. ಹಳತನ್ನು ಬಿಡದ ಹೊರತು ಹೊಸತು ಕೈಗೂಡುವುದಿಲ್ಲ."

"ಅದಕ್ಕೂ ಕಾರಣಗಳಿಲ್ಲದಿಲ್ಲ. ಅಂದಿಂದಿನ ದಮನಕಾರೀ ಶಕ್ತಿ ಈಗಲೂ ತಾಂಡವನೃತ್ಯಗೈಯ್ಯುತ್ತಲೇ ಇದೆ. ಅವಿದ್ಯಾವಂತರು ಅದರ ರೂಪುರೇಷೆ ಗಳನ್ನು ಅರಿಯುವುದು ಕಷ್ಟವೇ. ಪರಿಸ್ಥಿತಿ ಹೀಗಿರುವಾಗ ಸಹನೆಯೊಂದೇ ದಾರಿದೀಪ."

ಅಷ್ಟರಲ್ಲಿ ಸತ್ಯಾ ಓದು ಮುಗಿಸಿ ಆಕಳಿಸುತ್ತಾ ಅಲ್ಲಿಗೆ ಬಂದುದರಿಂದ ನಮ್ಮ ವಿಚಾರವಂತಿಕೆ ಮುಕ್ತಾಯವಾಯಿತು.

ಮರುದಿನ ಬೆಳಿಗ್ಗೆ ಒಂಭತ್ತು ಗಂಟೆಯ ಹೊತ್ತಿನಲ್ಲಿ ಭಾಸ್ ಹೊರಡುವ ಮುನ್ನ ವಯೋವೃದ್ಧರೊಬ್ಬರು ಮುಂಬಾಗಿಲ ಹೊಸ್ತಿಲಿನಲ್ಲಿ ನಿಂತು "ಭಾಸ್ವಾನ್ ಇದ್ದಾರೆಯೇ ?" ಎಂದು ಕೇಳಿದರು. ಕಣ್ಣೋಟವನ್ನು ಒಳಗಡೆ ನೆಟ್ಟು.

"ಇದ್ದಾರೆ ಬನ್ನಿ"

ಅವರು ಬಂದು ಕುರ್ಚಿಯ ಮೇಲೆ ಕುಳಿತುಕೊಂಡರು. ಭಾಸ್ವಾನ್ ಹೊರಬಂದು ಕೇಳಿದ "ಕ್ಷಮಿಸಿ, ನಿಮ್ಮ ಪರಿಚಯವಾಗಲಿಲ್ಲ ದಯವಿಟ್ಟು...."

"ನಾನು ಕೇಶವಚಂದ್ರ. ಇಂಗ್ಲೆಂಡಿನಲ್ಲಿರುವ ನಿಮ್ಮ ಸ್ನೇಹಿತ ಆನಂದ್ ನನ್ನ ಮಗ. ಅವನ ವಿಚಾರವನ್ನು ನಿಮ್ಮಿಂದ ತಿಳಿಯಬಹುದೆಂದು ಬಂದೆ. ದಯವಿಟ್ಟು ಬೇಸರಿಸಬಾರದು."

"ಛಿಃ ! ಬೇಸರವೇಕೆ ! ತುಂಬ ಸಂತೋಷ. ಏನು ತಿಳಿಯಬೇಕೋ ಹೇಳಿ ಸ್ವಾಮಿ !"

"ನಿಮಗೆ ಅವನ ಮನಸ್ಸು ಚೆನ್ನಾಗಿ ತಿಳಿದಿರಬಹುದಲ್ಲ, ಅವನು ಸದಾ ಹಿಂದಿರುಗಿ ಬರುವೆ ಎಂದು ಬರೆಯುತ್ತಲೇ ಇರುತ್ತಾನೆ. ಆದರೆ ಈವರೆಗೆ ಬರಲಿಲ್ಲ. ನೀವು ಅವನ ವಿಚಾರ ಸರಿಯಾಗಿ ಹೇಳಬಲ್ಲಿರಿ ಎಂದು ಬಂದೆ."

"ಓ ! . ಖಂಡಿತ ಬಂದೇ ಬರುತ್ತಾನೆ, ಈ ವರ್ಷವೇ ಬರುವುದರಲ್ಲಿ ಸಂಶಯವಿಲ್ಲ. ಕೆಲವು ತಿಂಗಳಲ್ಲೇ ಬಂದರೂ ಬರಬಹುದು."

"ಖಂಡಿತವಾಗಿ...?"

"ಹೌದು....ಹೌದು." ಸ್ವಲ್ಪ ಹೊತ್ತಿನ ನಂತರ ಪುನಃ "ಅವನ ಗೆಳೆಯರಿಗೆ ಸರಿಯಾದ ಕೆಲಸ ನೋಡಿ ಕಾಗದ ಬರೆಯಲು ಹೇಳಿದ್ದಾನೆ. ಸಿಕ್ಕಿದೊಡನೆ ಬರುತ್ತಾನೆ, ಅದರಲ್ಲಿ ಸಂಶಯವಿಲ್ಲ." ಅವನ ವಿಚಾರದಲ್ಲಿ ಚಿಂತೆಪಡಬೇಕಾದುದಿಲ್ಲ ಯಜಮಾನರೇ. ಅವನು ತುಂಬಾ ಒಳ್ಳೆಯವ. ಸ್ವದೇಶಾಭಿಮಾನವಿದೆ. ಕುಟುಂಬಿಗರಲ್ಲಿ ಪ್ರೇಮವಿದೆ. ವಿಶ್ವಾಸವಿದೆ."

ಆ ಮಾತಿನಿಂದ ವೃದ್ಧಮಹಾಶಯ ಸಂತುಷ್ಟರಾದರು. ಮುಖಬಿಂಬ ದಲ್ಲಿನ ಅಸಂಖ್ಯಾತ ರೇಖೆಗಳ ನಡುವೆ ಆನಂದಭಾವ ತುಯ್ಯಲಾಡಿತು. ತುಟಿಗಳ ಮೇಲೆ ಎಳೆನಗುವನ್ನು ಸೂಸಿ ನುಡಿದರು "ನಾನು ಆನಂದನಿ ಗಿಂತಲೂ ಇಳಾಗೆ ಹೆಚ್ಚಾಗಿ ಒತ್ತಿ ಹೇಳಿದ್ದೆ ಹಿಂದಿರುಗಿ ಬರಲೇಬೇಕು ಎಂದು. ಅವಳು ಒಪ್ಪಿಕೊಂಡು ಹೋಗಿದ್ದಾಳೆ."

"ಇಳಾಗೆ ಅಲ್ಲಿರುವುದು ಇಷ್ಟವೇ ಇಲ್ಲ. ಇರುವಷ್ಟು ಕಾಲ ದೇಶವನ್ನು ಸುತ್ತಿ ನೋಡಬೇಕೆಂಬ ಇಚ್ಛೆ ಅಷ್ಟೆ."

ನಾನು ಅದುವರೆಗೂ ಮಾತಾಡಿರಲಿಲ್ಲ. ಸುಮ್ಮನೆ ಪತ್ರಿಕೆಯಲ್ಲಿ ಮನವಿಟ್ಟದ್ದೆ. ಅವರೇ ನನ್ನ ಕಡೆ ತಿರುಗಿ ಕೇಳಿದರು. "ನಿನಗೆ ಈ ದೇಶವನ್ನು ನೋಡಿದರೆ ಏನೆನಿಸುತ್ತೆ ?"

ಅವರು ಸ್ವಚ್ಛ ಇಂಗ್ಲೀಷಿನಲ್ಲಿ ಮಾತಾಡುತಿದ್ದರು. ನಾನು ನಮ್ರತೆ ಯಿಂದ ಉತ್ತರಿಸಿದೆ,

"ನನಗೆ ತುಂಬ ಹಿತವಾಗಿದೆ. ಈ ದೇಶ ಬಲು ಸುಂದರವಾದ ದೇಶ."

"ನಿನ್ನ ತಾಯ್ನಾಡನ್ನು ಬಿಟ್ಟು ಇಲ್ಲಿರುವುದರಲ್ಲಿ ನಿನಗೇನೂ ಅನಿಸದೇ ?"

"ಅದಕ್ಕೇನು. ಎಂದಾದರೊಮ್ಮೆ ಹೋಗಿಬರಬಹುದಲ್ಲ ?"

ನನ್ನ ಧ್ವನಿ ಸಮಾಧಾನಪೂರ್ವಕವಾಗಿ ಹೊಮ್ಮಿದುದನ್ನು ಗಮನಿಸಿದ ಅವರು ತಲೆದೂಗುತ್ತ "ನಿನ್ನ ಮೈಯಲ್ಲಿ ಹರಿಯುತ್ತಿರುವುದು ಪಾಶ್ಚಾತ್ಯ ರಕ್ತ; ಜೀವನಾನುಭವ ಪಡೆದಿರುವುದೂ ಪಾಶ್ಚಾತ್ಯ ಪದ್ಧತಿಯಲ್ಲಿ. ಆದರೂ ಕಾಲೋಚಿತವಾಗಿ ವರ್ತಿಸುವುದನ್ನು ಕಲಿತಿದ್ದಿ. ತುಂಬ ಸಂತೋಷ..."

"......"

"ನೀನು ಪಾಶ್ಚಾತ್ಯ ಮತ್ತು ಪ್ರಾಚ್ಯ ಪದ್ಧತಿಗಳಲ್ಲಿ ಪಡೆದ ಜೀವ ನಾನುಭವವನ್ನು ನಿನ್ನ ಪರಿಸರದ ಬಡಜನತೆಗೆ ಧಾರೆಯೆರೆದು ಪುಣ್ಯಕಟ್ಟಿ ಕೊಳ್ಳಬೇಕು."

"ಖಂಡಿತ...!"

"ತುಂಬ ಸಂತೋಷವಮ್ಮಾ. ಭಾಸ್ಕರ್‌ ಒಳ್ಳೆಯ ಜೋಡಿಯನ್ನೇ ಆರಿಸಿಕೊಂಡಿದ್ದಾನೆ. ದೇವರು ನಿಮ್ಮ ಜೀವನವನ್ನು ಚೆನ್ನಾಗಿ ನಡೆಸಿ ಕೊಡಲಿ."

ಭಾಸ್ ಸಂತುಷ್ಟನಾಗಿ ಅಂದ "ಅನುಭವ ಮತ್ತು ಮೇದಸ್ಸುಗಳು ಒಟ್ಟುಗೂಡಿದರೇನೇ ಜೀವನೋದ್ದೇಶದ ಮಹತ್ಸಾಧನೆ. ನೀವು ಸರಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸಿದವರು. ನಿಮ್ಮ ರಕ್ತಗತವಾದ ಮೇಧಸ್ಸು ಸ್ವಾನು ಭವವನ್ನು ಅಭಿವೃದ್ಧಿಗೊಳಿಸಿದೆ ಎಂಬುದು ನಿಮ್ಮ ವರ್ಚಸ್ಸಿನಿಂದಲೇ ತಿಳಿಯುತ್ತದೆ."

ವೃದ್ಧಮಹಾಶಯ ನಕ್ಕುಬಿಟ್ಟರು.

o o o o

ಡೇವಿಡ್ ಆಗಾಗ ಬರುತ್ತಿದ್ದ. ಸತ್ಯಭಾಮ ಎಂದರೆ ಬಲು ಪ್ರೇಮ. ಅವಳನ್ನು ಕರೆದುಕೊಂಡು ಹೋಗಿ ಬೇಕುಬೇಕಾದುದನ್ನು ಕೊಡಿಸುವುದು, ಹೆಗಲಮೇಲೆ ಹೊತ್ತು ತಿರುಗುವುದು, ಚೆಂಡಾಟ ಆಡುವುದು, ಕತೆ ಹೇಳುವುದು ಹೀಗೆ ಒಂದಲ್ಲ ಒಂದು ಕಾರ್ಯಕ್ರಮ ಅವಳೊಂದಿಗೆ. ಅವ ನದು ನಿಷ್ಕಳಂಕ ಪ್ರೇಮವಾದ್ದರಿಂದ ನಾನು ಪ್ರತಿರೋಧಿಸಲಿಲ್ಲ. ಕ್ರಮ ಕ್ರಮೇಣ ಸತ್ಯ ಅವನಿಗೆ ಬಹಳವಾಗಿ ಹೊಂದಿಕೊಂಡಳು. ಅವನು ಬಾರದ ದಿನ ಅವನಿಗಾಗಿ ಹಾದಿ ನೋಡಿ ಬರಲಿಲ್ಲ ಎಂದು ಬೇಸರಪಟ್ಟುಕೊಳ್ಳುವುದೂ ಉಂಟು.

ಇಂದು ಅಂಜನಾ ರಾಘವರವರು ಬಂದಾಗ ಭಾಸ್ ಮನೆಯಲ್ಲಿಯೇ ಇದ್ದ. ಮಕ್ಕಳು ಮೂವರೂ ಪಿಂಗ್‌ಪಾಂಗ್ ಆಟದಲ್ಲಿ ನಿಮಗ್ನರಾದರು. ಅವರ ನಗುವಿನ ಕೇಕೆ ಮಾಡು ಮುಟ್ಟುವಂತೆ ಮೊಳಗುತಿತ್ತು. ನಾವು

ನಾಲ್ವರೂ ವರಾಂಡದಲ್ಲಿ ಕುಳಿತು ಗಾಳಿ ಸೇವನೆಯಲ್ಲಿದ್ದಾಗ ನಾನು ನನ್ನ ಪ್ರಶ್ನೆಯನ್ನು ಮುಂದಿಟ್ಟೆ. "ನನಗೆ ಲಂಡನ್‌ನಲ್ಲಿರುವಾಗ ಕೈತುಂಬಾ ಕೆಲಸ. ಮಾಡಿದಷ್ಟೂ ಮುಗಿಯುತ್ತಿರಲಿಲ್ಲ. ಇಲ್ಲಿ ಕೆಲಸವಿಲ್ಲದೆ ಹೊತ್ತುಕಳೆಯುವುದೂ ಕಷ್ಟ. ನನಗೆ ಯಾವುದಾದರೂ ಸಾರ್ವಜನಿಕವಾದ ಕೆಲಸವನ್ನು ಕೈಕೊಳ್ಳಬೇಕೆಂಬ ಆಸೆಯಿದೆ. ಏನು ಮಾಡಲಿ? ಹೇಗೆ ಆರಂಭಿಸಲಿ? ಎಂಬುದು ಸಮಸ್ಯೆ. ನೀವೆಲ್ಲಾ ಸಲಹೆಕೊಟ್ಟರೆ ಪರಿಶೀಲಿಸಬಹುದು."

ಅಂಜನಾ ಅಂದಳು "ಸೋಷಿಯಲ್ ವರ್ಕ್‌ಮಾಡುವುದು ಒಳ್ಳೆಯದು, ನಾನೂ ಕೂಡಿಕೊಳ್ಳುವೆ. ಬಡಜನರು ಬಡಮಕ್ಕಳು ತುಂಬಿರುವ ದೇಶ ಇದು. ಅವರಿಗೆ ತಿಳುವಳಿಕೆ ನೀಡುವಂತಹ ಯಾವ ಕಾರ್ಯವನ್ನಾದರೂ ಕೈಕೊಳ್ಳಬಹುದು. ಬಡಮಕ್ಕಳಿಗೆ ಉಚಿತ ಶಿಕ್ಷಣ, ಮಕ್ಕಳನ್ನು ಕರೆತರುವ ತಾಯಂದಿರಿಗೆ ತಿಳುವಳಿಕೆ ನೀಡುವುದು ಹೀಗೆ ಕಾರ್ಯಕ್ರಮವನ್ನು ರೂಪಿಸಿಕೊಳ್ಳೋಣ. ಅನಂತರ ಅದು ತಾನೇತಾನಾಗಿ ಬೆಳೆಯುತ್ತದೆ. ವಾಟ್ ಯೂ ಪೀಪಲ್ ಸೇ?" ಎಂದಳು.

ಅವಳ ಮಾತಿಗೆ ಭಾಸ್ ಮತ್ತು ರಾಘವ ಸಮ್ಮತಿ ಸೂಚಿಸಿದರು.

ಅಂಜನಾ ತನ್ನ ಸಲಹೆಯನ್ನು ಮುಂದಿಟ್ಟಳು "ಹೆಚ್ಚು ಮಕ್ಕಳಿರುವೆಡೆಯಲ್ಲಿ ಯಾವುದಾದರೂ ಮನೆಯ ಜಗಲಿ, ಅಥವಾ ಯಾವೊಂದು ಮರದ ನೆರಳು ಅಥವಾ ಪೂರ್ಣಶಾಲೆ ಹೀಗೆ ಎಲ್ಲಿ ಸ್ಥಳ ಸಿಕ್ಕಿದರೆ ಅಲ್ಲಿ ಒಂದು ಶಾಲೆ ಪ್ರಾರಂಭಿಸೋಣ. ಒಮ್ಮೆ ಪ್ರಾರಂಭವಾಯಿತು ಎಂದರೆ ಜವಾಬ್ದಾರಿ ಹೆಗಲೇರುತ್ತದೆ. ಅನಂತರ ದೇವರಿದ್ದಾನೆ."

"ಹಾಗಾದರೆ ಒಮ್ಮೆ ಎಲ್ಲಾ ಬಡಾವಣೆಗಳನ್ನೂ ಸುತ್ತಿ ಬರೋಣ. ಎಲ್ಲಿ ಮಕ್ಕಳಿಗೆ ಶಾಲೆಯ ಅಗತ್ಯವಿದೆ? ಎಲ್ಲಿ ಮಹಿಳೆಯರಿಗೆ ತಿಳಿವಳಿಕೆಯ ಅಗತ್ಯವಿದೆ? ಎಂಬುದನ್ನೂ ತಿಳಿದುಕೊಂಡು ಒಂದು ನಿರ್ಧಾರಕ್ಕೆ ಬರೋಣ. ಯಾವುದೇ ಕಾರ್ಯವನ್ನು ಕೈಕೊಂಡರೂ ಅದರಲ್ಲಿ ಸಫಲರಾದರೇನೇ ನೆಮ್ಮದಿ. ಆ ನೆಮ್ಮದಿಗೆ ಭಂಗಬಾರದಂತೆ ನಾವು ಕಂಕಣಬದ್ಧರಾಗಬೇಕು."

ಅಂಜನಾ ಆ ಮಾತನ್ನು ಅನುಮೋದಿಸುತ್ತ“ ನಮ್ಮ ಪ್ರೊಗ್ರಾಂ ಏನಿದ್ದರೂ ಕೊಳಚೆ ಪ್ರದೇಶಗಳು, ಬಡವರ ಕೇರಿಗಳು ಈ ದಿಶೆಯಲ್ಲೇ ನಡೆಯಬೇಕು.”

ಅದಕ್ಕೆ ಎಲ್ಲರೂ ಸಮ್ಮತಿ ಸೂಚಿಸಿದರು.

ರಾತ್ರಿ ಊಟ ಮುಗಿದಾಗ ಪೂರ್ಣಚಂದ್ರನು ಗಗನಭಿತ್ತಿಯಲ್ಲಿ ವಿರಾಜಮಾನನಾಗಿದ್ದ. ಅಂಗಳದಲ್ಲಿ ಹರಿದ ಬೆಳದಿಂಗಳ ಹೊನಲನ್ನು ನೋಡುತಿದ್ದಂತೆ ಮನಃಪ್ರಾಣಗಳಲ್ಲಿ ನೂರ್ಮಡಿಯಲ್ಲಿ ಆನಂದೋತ್ಸಾಹ ಗಳು ತುಂಬಿ ತುಳುಕಿದುವು. ವಾತಾವರಣವೂ ಸುಮನೋಹರವಾಗಿದ್ದುದ ರಿಂದ ಭಾಸ್ ಮತ್ತು ನಾನು ಅಂಗಳದಲ್ಲಿ ಅಡ್ಡಾಡುತ್ತ ಉದ್ಯಾನದ ಸೊಬಗನ್ನೂ ಪ್ರಕೃತಿಯ ವೈಭವವನ್ನೂ ಒಮ್ಮೆಗೇ ಆಸ್ವಾದಿಸುತ್ತಿರು ವಾಗ ಭಾಸ್ ಅಂದ “ಫಾಲ್ಗುಣ ಪೌರ್ಣಿಮೆಯ ಪ್ರಮತ್ತ ಮದ ನೋತ್ಸವ ಇಂದು ಎಂಬಷ್ಟು ಮನೋಹರವಾಗಿದೆ. ಹೀಗೇ ಎಷ್ಟೊತ್ತಾದರೂ ಅಡ್ಡಾಡೋಣ ಎನಿಸುತ್ತದೆ.”

“ನಿಜವಾಗಿಯೂ...”

“ರಸ್ತೆಗಳಲ್ಲಿ ಆಗಲೇ ವಾಹನ ಸಂಚಾರ ನಿಂತುಹೋಗಿದೆ ಎಲ್ಲೂ ಸದ್ದುಗದ್ದಲವಿಲ್ಲ. ಪೌರ್ಣಿಮೆಗೂ ಶಾಂತ ವಾತಾವತರಣಕ್ಕೂ ಅವಿನಾಭಿ ವಾದ ಸಂಬಂಧವಿದೆ. ನೋಡು, ರಾಗಾನುರಾಗಗಳ ಸಂಬಂಧವೂ ಸಹ ಹೀಗೆಯೇ ಮಧುರಮೈತ್ರಿಯಿಂದ ಕೂಡಿರಬೇಕು.”

ಅವನ ಮಾತಿನ ವಾಚ್ಯಾರ್ಥವನ್ನು ನನ್ನ ಹೃದಯ ಗ್ರಹಿಸಿದಾಗ ವಾಸ್ತವಿಕವೂ ಅಪೂರ್ವವೂ ಸುಂದರವಾದ ಆದ ದಿವ್ಯ ಪ್ರಭೆ ಮಾನಸ ಪ್ರವೃತ್ತಿಯ ಮೇಲೆ ಮೂಡಿತು. ನಾನು ಅತ್ಯಾನಂದ ತುಂದಿಲತೆಯಿಂದ ನುಡಿದೆ “ಅದಿಲ್ಲದ ಮೇಲೆ ಈ ಜೀವನವಾದರೂ ಏಕಿರಬೇಕು ? ಜೀವನವೇ ಸೌಂದರ್ಯ ! ಸೌಂದರ್ಯವೇ ಜೀವನ !”

“ಅಹಃ ! ನಿನ್ನ ವ್ಯಾಖ್ಯಾನ ಸಮಂಜಸವಾಗಿದೆ. ಭಾರತ ಸಂಸ್ಕೃತಿಗೆ ಹೊಂದಿಕೊಳ್ಳುವಂತ ಭಾವನೆ. ನೀನೀಗ ಭಾರತ ಸಂಸ್ಕೃತಿಯನ್ನು

ಚೆನ್ನಾಗಿ ಜೀರ್ಣಿಸಿಕೊಂಡಿದ್ದಿ. ಅದೇ ಒಂದು ಸಂತೋಷ ಅಥವಾ ಹೆಮ್ಮೆ. ನೀನು ಸೋಷಿಯಲ್ ವರ್ಕ್ ಮಾಡು. ಅದರಿಂದ ಆತ್ಮವಿಕಾಸ ಖಂಡಿತ ಆಗುತ್ತದೆ."

ಅವನ ಎದೆಯಾಳದಿಂದ ನುಡಿ ಹೊರಬಿದ್ದಾಗ ಪ್ರೀತಿಯ ಆಗರ ವಾಗಿತ್ತು.

"ಹೂದೋಟದ ಸುಂದರ ಹಾದಿಯಂತೆಯೇ ನಮ್ಮ ಜೀವನಮಾರ್ಗ ಯೋಗ ಸುಗಮವಾಗಿರಲಿ. ಭಗವಂತ ಅಷ್ಟು ಕರುಣೆ ತೋರಿದರೆ ಸಾಕು."

ಆಗ ಭಾಸ್ ನನ್ನ ಕೈಯನ್ನು ಅದುಮಿ ಹಿಡಿದು "ನಡೆ, ಇನ್ನು ಮಲಗೋಣ. ಗಂಟೆ ಹನ್ನೊಂದಾಯಿತು" ಎಂದ.

ನಾನು ಹಿಂಬಾಲಿಸಿದೆ...ದೇವನ ಹಿಂದೆ ದೇವಿಯಂತೆ.

ಒಳ ಬಂದಾಗ ರೇಡಿಯೋ ಹಾಡುತಿತ್ತು

ಕ್ಷಣಶಃ ಕಣ ಶ ಶ್ಚೈವ ವಿದ್ಯಾ
ಮರ್ಥಂ ಚ ಸಾಧಯೇತ್ ।
ಕ್ಷಣ ತ್ಯಾಗೇ ಕುತೋ ವಿದ್ಯಾ
ಕಣ ತ್ಯಾಗೇ ಕುತಃ ಸುಖಂ

— o —

# ಅಧ್ಯಾಯ

## ೭

ಅಂಜನಾ ಮತ್ತು ನಾನು ಕೊಳಚೆ ಪ್ರದೇಶಗಳ ಮತ್ತು ಬಡವರ ಕೇರಿಗಳ ಕಡೆಗೂ ಹೋಗಿ ಸುತ್ತಾಡಿ ಅಲ್ಲಿನ ಸ್ಥಿತಿಗತಿಯನ್ನು ಪರಿಶೀಲಿಸಿದ ಮೇಲೆ ಮಾರ್ಕಂಡೇಯ ಬಡಾವಣೆಯಲ್ಲಿರುವ ಬಡವರ ಕೇರಿಯಲ್ಲಿ ಒಂದು ಶಾಲೆ ತೆರೆಯುವುದೆಂದು ನಿಶ್ಚಿತವಾಯಿತು. ಕಾರನ್ನು ಮೆಯಿನ್ ರಸ್ತೆಯಲ್ಲಿ ನಿಲ್ಲಿಸಿ ಕೇರಿಯನ್ನು ಒಂದು ಸುತ್ತು ಹಾಕಿದಮೇಲೆ ಪರಿಚಯ ಆಯಿತು. ಸುಮಾರಾಗಿ ಮಧ್ಯಪ್ರದೇಶ ಎಂದು ಹೇಳಬಹುದಾದ ಒಂದು ಇಕ್ಕಟ್ಟಿನ ಸ್ಥಳದಲ್ಲಿ ಉದ್ದನೆಯ ಜೋಪಡಿಯಲ್ಲಿ ಒಂದು ಕಮ್ಮಾರ ಶಾಲೆಯಿತ್ತು. ಅದರ ಒಡೆಯ ಅಲ್ಲೇ ಕೆಲಸದಲ್ಲಿ ನಿರತನಾಗಿದ್ದ. ಅದರ ಹಿಂಗಡೆ ಅರ್ಧ ಭಾಗದಲ್ಲಿ ಪ್ರೈಮರಿ ಶಾಲೆ ನಡೆಸಬಹುದು ಎಂಬ ಆಲೋಚನೆಯಿಂದ ಯಜಮಾನನನ್ನು ಕಂಡು ಮಾತನಾಡಿದಾಗ ಅವನು ಸಂತುಷ್ಟನಾಗಿ “ಅಮ್ಮಾವರೇ, ಉಚಿತಶಾಲೆಯೆಂದರೆ ಸಂತೋಷವೇ. ಇಲ್ಲಿಯ ಮಕ್ಕಳು ಶಾಲೆಯಿಲ್ಲದೆ ಅಲೆಮಾರಿಗಳಾಗಿದ್ದಾರೆ. ವಿದ್ಯೆಬುದ್ಧಿಯಿಲ್ಲದೆ ಸೋಮಾರಿಗಳಾಗಿ ಭಿಕ್ಷೆ ಬೇಡುವುದು ಕಳ್ಳತನಮಾಡುವುದು ಜಗಳವಾಡುವುದು ಇದೇ ನಿತ್ಯಕಸುಬಾಗಿದೆ. ನೀವು ಇಂಥ ಅದೃಷ್ಟಹೀನರಿಗೆ ಒಂದು ದಾರಿ ತೋರುವಷ್ಟು ಉದಾರಿಗಳಾದುದು ನಮ್ಮ ಪುಣ್ಯ.”

“ನಾವು ಒಂದು ಕಟ್ಟಡವನ್ನು ಹೊಂದಿಸಿಕೊಳ್ಳುವವರೆಗೆ ನಿನ್ನ ಜೋಪಡಿಯಲ್ಲಿ ಉಳಿದ ಭಾಗವನ್ನು ಮುಫತ್ತಾಗಿ ಬಿಟ್ಟುಕೊಟ್ಟರೆ ನಾಳೆಯಿಂದಲೇ ಕೆಲಸ ಆರಂಭಿಸುತ್ತೇವೆ.”

“ಆಗಬಹುದು ತಾಯಿ” ಆನಂದಗದ್ಗದನಾಗಿ ಕೈಗಳನ್ನು ಜೋಡಿಸಿದ ಕಮ್ಮಾರ.

"ಪ್ರೈಮರಿ ಶಾಲೆ ತೆರೆದರೆ ಎಷ್ಟು ಮಕ್ಕಳು ಇಲ್ಲಿ ಸೇರಬಹುದು ?"

"ಅಯ್ಯೋ, ಅವಕ್ಕೇನು ಬರ ?, ಎಷ್ಟಾದರೂ ಸಿಕ್ಕುತ್ತಾರೆ" ತಾತನ್ಸರ ಭಾವನೆಯಿಂದ ಉತ್ತರಿಸಿದ.

ಅಂಜೂ ಅಲ್ಲಿಯೆ ಅಕ್ಕಪಕ್ಕದ ಮನೆಗಳಲ್ಲಿ ಬಕೆಟ್‌ನಲ್ಲಿ ನೀರು ಪೊರಕೆಗಳನ್ನು ಈಸಿಕೊಂಡು ಬಂದಳು. ಅವಳೂ ನಾನೂ ಪೊರಕೆ ತೆಗೆದುಕೊಂಡು ಗುಡಿಸಲು ಸಿದ್ಧವಾಗುತ್ತಲೂ ಕಮ್ಮಾರ ಅಲ್ಲಿ ಹರಡಿಬಿದ್ದಿದ್ದ ಸಾಮಾನುಗಳನ್ನೆಲ್ಲಾ ಒಂದೆಡೆ ಒಪ್ಪವಾಗಿ ಜೋಡಿಸಿಕೊಂಡ. ಇಕ್ಕಟ್ಟಾಗಿ ಕುಳಿತರೆ ಇಪ್ಪತ್ತು ಮೂವತ್ತು ಮಕ್ಕಳು ಕೂಡುವಷ್ಟು ಸ್ಥಳ ಕಂಡು ಬಂತು. ಹುಡಿಧೂಳು ಕಸಕಡ್ಡಿಗಳಿಂದ ಕೂಡಿದ್ದ ತಾಣವನ್ನು ಎಷ್ಟು ಗುಡಿಸಿದರೂ ಧೂಳು ಏಳುತ್ತದೆ. ಕಸವನ್ನು ತೊಟ್ಟಿಗೆ ಹಾಕಿ ನೀರನ್ನು ಚಿಮುಕಿಸುತ್ತಿರುವಾಗ ಸುತ್ತಮುತ್ತ ಮಹಿಳೆಯರು ನಮ್ಮ ಉದ್ದೇಶವನ್ನು ಅರಿತು ಅತ್ಯಾನಂದದಿಂದ ನಮ್ಮೊಂದಿಗೆ ಕೂಡಿಕೊಳ್ಳುತ್ತ ಪಿಸುಮಾತಿನಲ್ಲಿ ತಮ್ಮತಮ್ಮಲ್ಲೇ ಮಾತಾಡಿ ಒಬ್ಬರಿಗೊಬ್ಬರು ಸುದ್ದಿಯನ್ನು ಹರಡಿದನಂತರ ಇನ್ನೂ ಹಿಂದುಳಿದಿದ್ದ ಸ್ತ್ರೀಯರನೇಕರು ಬಳಿಗೆ ಬಂದರು. ಎಲ್ಲರ ಮುಖದಲ್ಲೂ ಆಶ್ಚರ್ಯ ಕುತೂಹಲಗಳು ಚಿತ್ರವಿಚಿತ್ರವಾಗಿ ತಾಂಡವವಾಡುತಿದ್ದುವು. ಅವರೊಂದಿಗೆ ಮಾತಾಡಿದಾಗ ಪ್ರಪಂಚಜ್ಞಾನ ಏನೇನೂ ಇಲ್ಲವೆಂಬುದರ ಅರಿವಾಯಿತು. ಆಗ ಅಂಜೂ "ನಾವು ಸೂಕ್ತ ಸ್ಥಳವನ್ನೇ ಆರಿಸಿಕೊಂಡಿದ್ದೇವೆ. ಇನ್ನು ನಾಳೆಯಿಂದಲೇ ಕಾರ್ಯಾರಂಭ ಜಾನಕೀ !" ಎಂದಳು ನಗುಮುಖದಿಂದ.

"ಆಗಬಹುದು."

ನನ್ನ ಸಮ್ಮತಿ ಹೊರಬಿದ್ದೊಡನೆಯೇ ಅಂಜು ಅಲ್ಲಿ ಕೂಡಿದ ಹತ್ತಾರು ಮಹಿಳೆಯರನ್ನು ಕುರಿತು ಹೇಳಿದಳು,

"ನಾಳೆ ನಾವು ಇಲ್ಲಿಗೆ ಒಂಭತ್ತು ಗಂಟೆಗೆ ಬರುತ್ತೇವೆ. ಮೊದಲು ಸರಸ್ವತಿ ಪೂಜೆ. ಅದಕ್ಕೆ ಬೇಕುಬೇಕಾದ ಮಂಗಳ ದ್ರವ್ಯಗಳನ್ನು ನಾವು ತರುತ್ತೇವೆ. ನೀವೂ ಸಾಧ್ಯವಾದಷ್ಟು ಕೂಡಿಸಿರಿ. ಹತ್ತೂ ಕೈಕೂಡಿದರೆ

ಚಟುವಟಿಕೆ ಇಮ್ಮಡಿಯಾಗುತ್ತದೆ. ನೀವೆಲ್ಲರೂ ಈ ಸ್ಥಳವನ್ನು ಚೊಕ್ಕಟ ವಾಗಿಡಲು ಸಹಕರಿಸಬೇಕು."

"ಆಗಲಿ, ಅಮ್ಮಣ್ಣಿಯವರೇ, ನಾವು ಕೇವಲ ಬಡವರು. ನಮ್ಮಿಂದ ಎಷ್ಟು ಸಾಧ್ಯವೋ ಅಷ್ಟು ಮಾತ್ರ ತರುತ್ತೇವೆ." ಎಂದು ಕೈ ಮುಗಿದಳು ಒಬ್ಬ ಮಹಿಳೆ.

ಆಗ ಅನೇಕರು ಅವಳ ಮಾತನ್ನು ಅನುಮೋದಿಸುತ್ತ "ಹಾಗೆಂದು ದಕ್ಕೆ ಕ್ಷಮಿಸಿ ತಾಯಿ! ನಾವು ಬಡವರು. ನಾವು ಹೆಚ್ಚೇನೂ ತರ ಲಾರೆವು, ತಾಯಿ!" ಎಂದರು ಕಳಕಳಿಯಿಂದ.

"ಸಂಕೋಚಪಡಬೇಡಿ. ಕೈಯಲ್ಲಿ ಕಾಸಿಲ್ಲದಿದ್ದರೆ ಬೇಡ. ಬಡ ವರಿಗೆ ಸಹಾಯಮಾಡಲೆಂದೇ ನಾವು ಈ ಸ್ಥಳವನ್ನು ಆರಿಸಿಕೊಂಡದ್ದು. ನಾಳೆಯಿಂದ ಎಲ್ಲರೂ ನಿಮ್ಮ ನಿಮ್ಮ ಮಕ್ಕಳನ್ನು ಕೈಕಾಲುತೊಳೆದು ಸ್ವಚ್ಛವಾಗಿ ಕರೆದುಕೊಂಡು ಬನ್ನಿರಿ."

ಅನಂತರ ಅವರ ಹೆಸರನ್ನು ಕೇಳಿ ಎಲ್ಲರ ಪರಿಚಯ ಮಾಡಿಕೊಂಡೆ. ಮಾಸಲು ಮಾಸಲಾದ ಹರಕು ಬಟ್ಟೆಯ ಅವರನ್ನು ನೋಡಿದರೆ ಕರುಳು ನುಲಿಯುತ್ತದೆ. ಗಂಡಂದಿರ ದುಡಿಮೆಯಲ್ಲಿ ಬಹುಭಾಗ ಹೆಂಡ ಸಾರಾಯಿ ಗಳಿಗೆ ಮೀಸಲು. ಇವರು ಕಡಲೆಕಾಯಿ, ತರಕಾರಿ, ಹೂ, ಹಣ್ಣು, ಕಾಯಿ ಮುಂತಾದುವನ್ನು ಮಾರಿ ಅಥವಾ ಧನಿಕರ ಮನೆಯಲ್ಲಿ ಕೆಲಸ ಮಾಡಿ ನಾಲ್ಕು ಕಾಸು ಗಳಿಸಿಕೊಂಡರೆ ಮಕ್ಕಳಿಗೆ ರೊಟ್ಟಿ. ಅಂದ ಮೇಲೆ ಬಾಳಿನ ಗೋಳು ಪರಮಾತ್ಮನಿಗೇ ಸಂವೇದ್ಯ.

ನಾವು ಅಲ್ಲಿಂದ ಹೊರಟಾಗ ಎಲ್ಲ ಹೆಂಗಳೆಯರೂ ಗುಡಿಸಲುಗಳಿಂದ ಹೊರಬಂದು ಅತ್ಯಂತ ನಮ್ರತೆಯಿಂದ ವಂದನೆಯನ್ನರ್ಪಿಸಿದರು ಅವರ ಕಣ್ಣುಗಳಲ್ಲಿ ಬೆಳಗುತಿದ್ದ ಆಶಾಕಿರಣ, ಮುಖದ ಮೇಲೆ ಮೂಡಿದ ಹಸನಾದ ನಗು ನಿಜವಾಗಿಯೂ ದರ್ಶನೀಯವಾಗಿತ್ತು. ನಾನು ಮನದಲ್ಲೇ 'ಪಾಪ' ಎಂದುಕೊಂಡೆ. ಅಂಜನಾ ನನ್ನೊಂದಿಗೆ ಹೆಜ್ಜೆಹಾಕುತ್ತಾ ಹೇಳಿದಳು,

"ಕ್ರಮೇಣ ನಾವು ಕೈತುಂಬ ಹಣ ಕೊಡಿಸಿ ಒಂದು ಒಳ್ಳೆಯ ಸ್ಕೂಲನ್ನು ನಡೆಸುವಷ್ಟು ಜನ, ಧನ ಸಂಗ್ರಹಣೆ ಮಾಡಿಕೊಳ್ಳಬೇಕು. ಒಂದು ಮಹಿಳಾಮಂಡಳಿಯನ್ನು ಸ್ಥಾಪಿಸಿದರೆ ಮುಂದಿನ ಚಟುವಟಿಕೆಗೆ ಸುಲಭ ದಾರಿ."

ನಾನು ಪುಳಕಿತಳಾದೆ; ಮೈಯಲ್ಲಿ ನಿಜವಾಗಿಯೂ ಹೊಸ ಉತ್ಸುಕತೆ ಮೂಡಿತು.

"ನೀನು ದಿನಕ್ಕೊಂದು ಸ್ಫೂರ್ತಿ ನೀಡುತ್ತಿ. ನನಗದೇ ಸಂತೋಷ."

ಅವಳು ನಕ್ಕುಬಿಟ್ಟಳು.

"ನೀನು ಪರವಾಯಿಲ್ಲ. ಎಲ್ಲಿ ಬೇಸರಪಟ್ಟುಕೊಳ್ಳುವಿಯೋ ಎಂದು ಕೊಂಡಿದ್ದೆ. ಇಷ್ಟರವಟ್ಟಿಗೆ ಹೊಂದಿಕೊಂಡಿದ್ದೀ. ವಿಶೇಷವೇ, ಜಾನಕೀ !"

"ಇದರಲ್ಲೇನು ವಿಶೇಷ ?"

"ಗುಡಿಸಲು ಪ್ರದೇಶ, ಗಲೀಜು ವಠಾರ, ದುರ್ವಾಸನೆ ಇದನ್ನೆಲ್ಲಾ ಸಹಿಸಿಕೊಂಡೆಯಲ್ಲಾ ಅದು ವಿಶೇಷವಲ್ಲವೇ ?"

"ಬಿಡು, ಈ ಸಣ್ಣ ವಿಷಯಕ್ಕೇಕೆ ಅಷ್ಟು ಮಹತ್ವ ?"

ಇಷ್ಟು ಮಾತಾಡುವುದರೊಳಗೆ ಮನೆಯನ್ನು ಸೇರಿದ್ದಾಯ್ತು. ಮೊದಲು ಕೈಕಾಲುಗಳನ್ನು ತೊಳೆದು ಬಟ್ಟೆ ಬದಲಿಸದ ಮೇಲೆ ಬಡ ಮಕ್ಕಳ ಸಲುವಾಗಿ ಸ್ಲೇಟು ಬಳಪ ಪುಸ್ತಕ ಪೆನ್ಸಿಲ್ ಮುಂತಾದುವನ್ನು ಕೊಂಡುಕೊಳ್ಳಲು ಕೈಬುಟ್ಟಿಯ ಸಹಿತ ಪೇಟೆಯ ಸಾಲಿಗೆ ಹೋಗಿ ವ್ಯಾಪಾರ ಮುಗಿಸಿ ಮನೆಗೆ ಮರಳಿದಾಗ ಮಧ್ಯಾಹ್ನ ಒಂದು ಗಂಟೆ. ರಣರಣಿಸುವ ಸುಡುಬಿಸಿಲಿಂದ ಮೈಯಲ್ಲಿ ಬಳಲಿಕೆ ಮೂಡಿದ್ದರೂ ಮನಸ್ಸು ಹಗುರ ವಾಗಿತ್ತು. ಅಂಜನಾ ಪೇಟೆಯಿಂದ ಬಂದವಳೇ ತನ್ನ ಮನೆಗೆ ಹೊರಟಳು. ಚಿಗರಿಯಂತಹ ಅವಳ ಚಟುವಟಿಕೆಯನ್ನು ನೋಡಿದರೆ ಒಡಲು ತುಂಬು ತ್ತದೆ. ಅವಳನ್ನು ಕಳುಹಿಸಲು ತಲೆಬಾಗಿಲಿಗೆ ಬಂದ ನಾನು ಅವಳ ಪ್ರಜ್ಞಾಪ್ತಿ ಪ್ರಜ್ಞೆಯನ್ನು ಮನದಲ್ಲೇ ಪ್ರಶಂಸಿದೆ. ಅವಳು ಕಾರನ್ನು

ನಡೆಸಿ ಕಣ್ಮರೆಯಾಗುವ ಮುನ್ನ ತಿರುಗಿ ನೋಡಿ ಕೈಯಾಡಿಸಿ ಸರ್ರನೆ ಹೊರಟುಹೋದಳು.

ಮರುದಿನ ಒಂಭತ್ತು ಗಂಟೆಯ ಸಮಯದಲ್ಲಿ ನಾವು ಸಾಮಗ್ರಿಗಳ ಸಹಿತ ಮಾರ್ಕಂಡೇಯ ಬಡಾವಣೆಯಲ್ಲಿನ ಗುಡಿಸಲ ಪ್ರದೇಶಕ್ಕೆ ಹೋದಾಗ ಎಲ್ಲಾ ಹೆಂಗಳೆಯರೂ ತಮ್ಮ ತಮ್ಮ ಮಕ್ಕಳೊಡನೆ ಕಾದಿದ್ದರು. ನಮ್ಮನ್ನು ನೋಡುತ್ತಲೂ ಅವರಿಗಾದ ಆನಂದ ಅಷ್ಟಿಷ್ಟಲ್ಲ. ನಾವು ಸರಸ್ವತೀ ಪೂಜೆಗಾಗಿ ಅಣಿಗೊಳಿಸುತ್ತಿದ್ದರೆ ಆ ಸಣ್ಣಪುಟ್ಟ ಮಕ್ಕಳಿಗೆ ಮೊದಲೇ ಪುರಿ ಬೆಲ್ಲ ಹಣ್ಣು ಹಂಪಲುಗಳನ್ನು ತಿನ್ನುವ ಆತುರ ಮತ್ತು ತರಾತುರಿ. ಪೂಜೆ ಆಗುವತನಕ ಮಕ್ಕಳನ್ನು ಸುಧಾರಿಸಿಕೊಳ್ಳಬೇಕಾದರೆ ಸಾಕಾಯ್ತು ಆ ತಾಯಂದಿರಿಗೆ. ಪೂಜೆ ಮಾಡುತ್ತಾ ಅಂಜನಾ ಶ್ಲೋಕಗಳನ್ನು ಹಾಡಿದಳು. ಭಕ್ತಿಯಿಂದ ಕಂಠತುಂಬಿ ಹರಿಯುವ ಅವಳ ಭಾವುಕತೆಯನ್ನು ನೋಡಿ ಮಂತ್ರಮುಗ್ಧಳಾದೆ. ಅನಂತರ ಮಂಗಳಾರತಿ ಮತ್ತು ಪ್ರಸಾದವಿನಿಯೋಗವಾದನಂತರ ಹೆಂಗಳೆಯರು ಅವರಿವರ ಮನೆಗಳಿಂದ ನಾಲ್ಕಾರು ಚಾಪೆಗಳನ್ನು ತಂದು ಹಾಸಿ ಮಕ್ಕಳನ್ನು ಕೂಡಿಸಿದರು. ಪುರಿ ಬೆಲ್ಲ ಹಣ್ಣು ತೆಂಗಿನಕಾಯಿ ಆಸೆಯಿಂದ ಅಲ್ಲಿದ್ದ ಬಡಜನರೆಲ್ಲಾ ಬಂದು ಮುತ್ತಿಕೊಂಡರು. ಎಲ್ಲರ ಕೈಗೂ ಇಷ್ಟಿಷ್ಟು ಹಾಕಿ ಮಕ್ಕಳಿಗೆ ಹಂಚಿ ಅವು ತಿಂದು ತೃಪ್ತಿಗೊಂಡನಂತರ ಅಕ್ಷರಾಭ್ಯಾಸ. ಕೆಲಮಕ್ಕಳು ಗೀಚಿದುವು. ಹೇಳಿಕೊಟ್ಟಂತೆ ಪ್ರಯಾಸದಿಂದ ಬರೆದವರು ಕೆಲವರು ಮಾತ್ರ. ಇನ್ನು ಕೆಲವರು ಅತ್ತಿತ್ತ ಓಡಾಡುತ್ತಿದ್ದರೆ ಮತ್ತೆ ಕೆಲವರು ಅಮ್ಮಂದಿರ ನಿರಿಯನ್ನು ಬಿಡಲೇ ಇಲ್ಲ.

ಅಂತೂ ಅಂದಿನ ಪಾಠವನ್ನು ಮುಗಿಸಿ ಹೊರಡುವ ಮುನ್ನ "ಇನ್ನು ಮುಂದೆ ದಿನವೂ ನಾವು ಬರುತ್ತೇವೆ. ಎಲ್ಲಾ ಮಕ್ಕಳೂ ತಪ್ಪದೆ ಕೈಕಾಲು ಮುಖಗಳನ್ನು ಚೆನ್ನಾಗಿ ತೊಳೆದುಕೊಂಡು ಬರಬೇಕು ತಿಳಿಯಿತೆ ?" ಎಂದು ಎಲ್ಲರಿಗೂ ತಿಳಿಯಹೇಳಿ "ಯಾರೂ ಹೊತ್ತು ಮೀರಬಾರದು. ಪಾಠಗಳ ಮಧ್ಯೆ ಹೊರಹೋಗಬಾರದು" ಎಂದು ಒತ್ತಿಹೇಳಿ ಹೊರಟೆವು ಅಲ್ಲಿಂದ.

ಮೊದಲ ದಿನವೇನೋ ತಿಂಡಿತಿನಿಸು ಇದ್ದುದರಿಂದ ಮಕ್ಕಳು ಆಕರ್ಷಿತರಾದರು. ಮುಂದೆಯೂ ಆಕರ್ಷಣೆ ಇಲ್ಲದೆ ಹೋದರೆ ಕಷ್ಟ ಎಂಬುದು ಮನೋವೇದ್ಯ. ಇನ್ನು ದಿನವೂ ಪೆಪ್ಪರ್‌ಮೆಂಟ್ ತೆಗೆದುಕೊಂಡು ಹೋಗದೆ ವಿಧಿಯಿಲ್ಲ. ಪೆಪ್ಪರ್‌ಮೆಂಟ್ ಮುಗಿಯುವವರೆಗೆ ಒಂದು ರೀತಿ; ಅನಂತರದ ಧೋರಣೆಯೇ ಬೇರೆ. ಅದಕ್ಕಾಗಿ ಮೊದಲು ಪಾಠ; ಅನಂತರ ಪೆಪ್ಪರ್‌ಮೆಂಟ್; ಎಂಬ ನಿಯಮ ಆರಂಭಿಸಿದರೂ ಮಕ್ಕಳು ಹತೋಟಿಗೆ ಬೇಗನೆ ಸಿಕ್ಕಲಿಲ್ಲ. ಅದೇ ವಠಾರದಲ್ಲಿದ್ದ ಹೈಸ್ಕೂಲ್‌ವರೆಗೆ ಓದಿ ಕಲಿತ ಇಬ್ಬರು ಹುಡುಗಿಯರನ್ನು ನಮ್ಮ ಸಹಾಯಕ್ಕೆ ಕರೆದಮೇಲೆ ನಮಗೆ ಸ್ವಲ್ಪ ಅನುಕೂಲವಾಯಿತು. ಆ ಹುಡುಗಿಯರಿಗೂ ಅದು ಆನಂದದಾಯಕವೇ.

ನಾನು ಮಂಜೂ ಮಹಿಳೆಯರ ಸಂಘಟನೆಗಾಗಿ ಮನೆಮನೆಯನ್ನೂ ಸುತ್ತುವ ಕಾರ್ಯಕ್ರಮ ಆರಂಭಿಸಿದ್ದು ನಮ್ಮ ಕ್ವಾರ್ಟರ್ಸ್‌ಗಳಿಂದಲೇ. ಹೀಗೆ ನಾಲ್ಕಾರು ದಿನ ಸುತ್ತಿದ ಮೇಲೆ ಮೂವತ್ತಾರು ಮಂದಿ ಸಂಘ ಸದಸ್ಯಿಣಿಯರಾದರು. ಮೀಟಿಂಗ್ ವ್ಯವಸ್ಥೆ ನಮ್ಮ ಮನೆಯಲ್ಲೇ. ಮಧ್ಯಾಹ್ನ ನಾಲ್ಕು ಗಂಟೆಗೆ ಮೀಟಿಂಗ್. ಕಾರ್ಯಕ್ರಮದ ವಿಷಯ ಸೂಚಿಪತ್ರದ ಅಜೆಂಡಾದಲ್ಲಿ ಏನಿರಬೇಕೋ ಅದನ್ನು ಬರೆದವಳು ನಾನೇ. ಎಲ್ಲರೂ ಸಮಯಕ್ಕೆ ಸರಿಯಾಗಿ ವಿಚಾರವಿನಿಮಯ ಮಾಡಿಕೊಂಡಾಗ ಎಲ್ಲರಿಗೂ ಒಂದೊಂದು ಕಾರ್ಯಕ್ರಮ ರೂಪಿತವಾಯಿತು. ಎಲ್ಲರೂ ಸಂತಸದಿಂದ ಒಟ್ಟಾಗಿ ಕೆಲಸ ಮಾಡಲು ಒಪ್ಪಿಕೊಂಡರು. ಅದರ ಕಾರ್ಯಕ್ರಮದ ಅಧ್ಯಕ್ಷತೆಯ ಪಟ್ಟವನ್ನೂ ನನ್ನ ತಲೆಗೇ ಕಟ್ಟಿದರು. ನಾನದರ ಹೊಣೆಗಾರಿಕೆಯಿಂದ ಮುಕ್ತಳಾಗಬೇಕೆಂದು ಎಷ್ಟೆಷ್ಟೋ ಪ್ರಯತ್ನಿಸಿದೆ; ಯಾರೂ ಅದಕ್ಕೆ ಒಪ್ಪಲಿಲ್ಲ. ಹಣಕಾಸು ಸಂಗ್ರಹಿಸಲು ಐದೈದು ಜನರ ಒಂದೊಂದು ತಂಡ ಒಂದೊಂದು ಕಡೆ ಹೋಗಲು ನಿರ್ಧರಿಸಿತು. ಮೊದಲು ಪ್ರಧಾನಿ ಮತ್ತು ರಾಷ್ಟ್ರಪತಿಗಳಿಂದ ವಂತಿಗೆ ಪಡೆಯುವ ಯೋಚನೆ ನಮ್ಮದು. ಅದಕ್ಕಾಗಿ ನಾನು, ಅಂಜು, ನಿರ್ಮಲದಾಯ್, ಮಾಯಾ ಠಾಕೂರ್, ಪಾಂಚಾಲಿವರ್ಮ ಕೂಡಿ ಹೋಗುವುದಕ್ಕೆ ಎಲ್ಲರ ಒಪ್ಪಿಗೆಯ ಮುದ್ರೆಬಿತ್ತು.

ಅನಂತರ...ಪ್ರಾಯಶಃ ಎರಡುವಾರದನಂತರ,

ಒಂದು ಸುರಮ್ಯ ಸಂಜೆ ಐದು ಗಂಟೆಗೆ ಪ್ರಧಾನಿಯವರಲ್ಲೂ, ಆರು ಗಂಟೆಗೆ ರಾಷ್ಟ್ರಪತಿಯವರಲ್ಲೂ ಭೇಟಿಗೆ ಅವಕಾಶ ಸಿಕ್ಕಿದಾಗ ನಮ್ಮ ಉತ್ಸುಕತೆಗೆ ಎಣೆಯೇ ಇರಲಿಲ್ಲ. ಅಂದು ಸಮಯಕ್ಕೆ ಸರಿಯಾಗಿ ಹೋಗಿ ಪ್ರಧಾನಿಯವರನ್ನು ಸಂದರ್ಶಿಸಲು ಅವರ ಆಫೀಸಿನ ವರಾಂಡಕ್ಕೆ ಹೋದೊಡನೆ ಅವರ ಸೆಕ್ರೆಟರಿ ನಮ್ಮನ್ನು ಒಳಗಡೆ ಕರೆದೊಯ್ದು ನೆಹರೂಜಿಯ ಭೇಟಿ ಮಾಡಿಸಿದ.

ನಾವು ಅವರಿಗೆ ಸಂಧ್ಯಾವಂದನೆಯನ್ನರ್ಪಿಸಿದಾಗ ಅವರೂ ಪ್ರತಿನಮಸ್ಕರಿಸಿ ನಮ್ಮನ್ನು ಕುಳಿತುಕೊಳ್ಳಲು ಹೇಳಿ "ಏನು ಸಮಾಚಾರ ?" ಎಂದು ಕೇಳಿದರು ಹಿಂದೀಭಾಷೆಯಲ್ಲಿ.

ನನಗೆ ಹಿಂದಿ ಅಷ್ಟು ಸಮರ್ಪಕವಾಗಿ ಬರುತ್ತಿಲ್ಲವಾದುದರಿಂದ ನಾನೆಂದೆ "ದಯವಿಟ್ಟು ಕ್ಷಮಿಸಿ. ನನಗೆ ಹಿಂದಿ ಬಾರದುದರಿಂದ ಇಂಗ್ಲೀಷಿನಲ್ಲಿ ಉತ್ತರಿಸುವೆ. ನಾವು ಮಾರ್ಕಂಡೇಯ ಬಡಾವಣೆಯಲ್ಲಿರುವ ಗುಡಿಸಲ ಮಕ್ಕಳಿಗೆ ಒಂದು ಶಾಲೆಯನ್ನು ತೆರೆಯುವ ಉದ್ದೇಶವಿಟ್ಟುಕೊಂಡಿದ್ದೇವೆ. ಎಂದು ತಿಳಿಸಿ ನಮ್ಮ ಮೀಟಿಂಗಿನಲ್ಲಿ ಪಾಸಾದ ಠರಾವನ್ನು ಅವರ ಮುಂದಿಟ್ಟು "ವಂತಿಗೆಯ ಮೊದಲ ಮೊತ್ತವನ್ನು ತಮ್ಮಿಂದಲೇ ಪಡೆಯಬೇಕೆಂದು ಬಂದಿದ್ದೇನೆ" ಎಂದೆ.

ಅವರು ಕರಪತ್ರವನ್ನು ಓದಿ ನೋಡಿ ನೂರು ರೂಪಾಯಿಗಳ ನೋಟನ್ನು ನಮ್ಮ ಹುಂಡಿಯ ಡಬ್ಬಕ್ಕೆ ಹಾಕಿ ನಮಗೆ ಶುಭಕೋರಿದರು. ನಾವು ಸಂತುಷ್ಟರಾಗಿ ಅವರನ್ನು ಅಭಿವಂದಿಸಿ ಅಲ್ಲಿಂದ ಹಾಗೇ ರಾಷ್ಟ್ರಪತಿ ಭವನಕ್ಕೆ ಹೋಗಿ ರಾಷ್ಟ್ರಪತಿಗಳನ್ನು ಕಂಡು ನಮ್ಮ ಅಭೀಪ್ಸೆಯನ್ನು ಅವರ ಮುಂದಿಟ್ಟಾಗ ಅವರು ನಮ್ಮ ಕರ್ತವ್ಯಪ್ರಜ್ಞೆಯನ್ನು ಶ್ಲಾಘಿಸಿ ನೂರು ರೂಪಾಯಿನ ನೋಟನ್ನು ನೀಡಿ ನಮಗೆ ಶುಭ ಕೋರಿದರು. ಅವರನ್ನು ಅಭಿವಂದಿಸಿ ಹೊರಬಂದಾಗ ಹೃದಯದಲ್ಲಿ ಆನಂದಾಮೃತ ತುಂಬಿತ್ತು.

ನೀಲಗಗನ ಸರೋವರದಲ್ಲಿ ಉಜ್ವಲಿಸುತಿದ್ದ ಸುವರ್ಣಕಾಂತಿಯ ಅಸ್ತಮಾನ ಸೂರ್ಯ! ಅತ್ಯಾನಂದ ಪ್ರಮತ್ತ ಪಶ್ಚಿಮ ದಿಗ್ದೇಶವೆಲ್ಲಾ ರಾಗರಂಜಿತವಾಗಿದೆ, ದೃತ್ಯಮಾನ ಶೋಭೆಯಲ್ಲಿ!

ಉದ್ಯಾನದ ಸುಂದರ ಹಾದಿಗಳಲ್ಲಿ ಸತ್ಯಭಾಮಾ ತನ್ನ ಗೆಳತಿಯ ರೊಡನೆ ಜೂಟ್ ಆಟ ಆಡುತ್ತಿದ್ದಾಳೆ. ಅತ್ತಿತ್ತ ಚೆಂಡಿನಂತೆ ಜಿಗಿದಾಡುವ ಹೆಣ್ಮಕ್ಕಳ ಕೂಟ ಬಲು ಮೋಹನವಾಗಿತ್ತು. ನಾನು ಅತ್ತಲೇ ದೃಷ್ಟಿ ನೆಟ್ಟು ನಿಂತೆ. ಮನಸ್ಸು ಕಮಲ ಪುಷ್ಪದಂತೆ ದಳದಳವಾಗಿ ಅರಳುತಿತ್ತು.

ಡೇವಿಡ್ ಇದ್ದಕ್ಕಿದ್ದಂತೆಯೋ ಪ್ರತ್ಯಕ್ಷನಾದ.

ಅವನು ಮುಖದ ತುಂಬೆಲ್ಲಾ ಸವಿಜೇನು ಸೂಸುವಂತಹ ಹಸನಾದ ನಗುವನ್ನು ಸೂಸುತ್ತ ಒಳಬಂದ. ಮಕ್ಕಳ ಆಟ ಮುಗಿಯದಿದ್ದುದರಿಂದ ಸತ್ಯಭಾಮ ಮಾತಿಗೆ ಸಿಗುವಂತಿಲ್ಲ. ನಾನು ಅವನಿಗಾಗಿ ಚಹ ತಯಾರಿ ಸಲು ವಿಠ್ಠಲ್‌ರಾವ್‌ಗೆ ಹೇಳಿ ಬಂದೆ. ಅವನು ನನ್ನನ್ನು ನೇರದೃಷ್ಟಿ ಯಿಂದ ನೋಡುತ್ತ "ನೀನು ಈಚೀಚೆಗೆ ಬಹಳ ಸಣ್ಣನಾಗುತಿದ್ದಿ. ಏನು ಕಾರಣ? ಆರೋಗ್ಯವಿಲ್ಲವೆ?"

"ಏನೂ ಇಲ್ಲವಲ್ಲ. ನಾನು ಸರಿಯಾಗಿರುವೆ."

"ಶಾಲೆಗಾಗಿ ತುಂಬ ಒಡಾಡುತ್ತಿ. ಶ್ರಮಸಾಧನೆಯಿಂದ ಸ್ವಲ್ಪ ಸಣ್ಣ ಗಾಗಿರುವೆ. ನಿನಗದು ತಿಳಿಯುತ್ತಿಲ್ಲ ಅಷ್ಟೆ."

"ಹೋಗಲಿಬಿಡು. ಸಣ್ಣಾಗಾಗುವುದರಿಂದ ನಷ್ಟವಿಲ್ಲ."

"ಒಟ್ಟು ಹಣ ಎಷ್ಟು ಸಂಗ್ರಹವಾಗಿದೆ?"

"ಸುಮಾರು ಮೂವತ್ತಾರು ಸಾವಿರ."

"ನೀನೇಕೆ ಎಲ್ಲಾ ರಾಯಭಾರ ಕಛೇರಿಗಳಲ್ಲೂ ಸಂಗ್ರಹಿಸಬಾರದು?"

"ಓ, ನಿಜ! ಈವರೆಗೆ ನೆನಪಾಗಿರಲಿಲ್ಲ. ನೀನು ನೆನಪಿಸಿದುದಕ್ಕೆ ತುಂಬ ಥ್ಯಾಂಕ್ಸ್!"

ಅವನು ತುಂಬ ಗಟ್ಟಿಯಾಗಿ ನಕ್ಕುಬಿಟ್ಟ.

"ನಾವು ಇನ್ನೂ ಫ್ಯಾಕ್ಟರಿಗಳತ್ತ ಹೋಗಿಲ್ಲ. ವಾಣಿಜ್ಯೋದ್ಯಮಿಗಳನ್ನು ಮಾತಾಡಿಸಿಲ್ಲ. ಒಂದಾದ ನಂತರ ಒಂದನ್ನು ಕೈಗೊಳ್ಳಬೇಕು. ನಾಳೆಯೇ ನಿಮ್ಮ ಕಛೇರಿಯ ಕಡೆ ಬರುತ್ತೇವೆ."

"ಸಂತೋಷ."

"ಇನ್ನೂ ಐವತ್ತು–ಅರವತ್ತು ಲಕ್ಷ ದೊರಕಿಸಿಕೊಂಡರೆ ಒಳ್ಳೆಯ ಶಾಲೆಯನ್ನು ಕಟ್ಟುತ್ತೇವೆ.

"ಗುಡ್ !"

ಸತ್ಯಭಾಮಾ ಓಡುತ್ತಾ ಬಿದ್ದು ಅಳತೊಡಗಿದುದರಿಂದ ನಾವಿಬ್ಬರೂ ಅತ್ತ ಧಾವಿಸಿ ಹಿಡಿದೆತ್ತಿದಾಗ ಕೈಕಾಲು ತೆರೆದು ಗಲ್ಲ ಜಜ್ಜಿ ಗಾಯಗಳಲ್ಲಿ ನೆತ್ತರು ಬಸಿದಿತ್ತು. ಮೈಗೆ ಮೆತ್ತಿದ್ದ ಧೂಳನ್ನು ಕೊಡವಿ ಗಾಯವನ್ನು ಹತ್ತಿಯಿಂದ ಒರಿಸಿ ಔಷಧಿ ಹಚ್ಚಿ ಸಮಾಧಾನಪಡಿಸುತ್ತಿದ್ದಾಗಲೇ ಭಾಸ್ ಆಗಮಿಸಿದ. ಅವನಿಗೆ ಸ್ವಲ್ಪ ದಿನಗಳಿಂದ ಡೇವಿಡ್ಡನ ಸಹವಾಸ ಹಿಡಿಸುತ್ತಿರಲಿಲ್ಲ. ಏನೋ ಒಂದು ರೀತಿಯ ನಿಕೃಷ್ಟ ಭಾವನೆಯಿರುವುದನ್ನು ನನ್ನ ಅಂತರಂಗ ಅರಿತುಕೊಂಡಿತ್ತು. ಆದರೆ ನಾನು ಅವನನ್ನು ನಿವಾರಿಸುವುದು ಕಷ್ಟವೇ. ಅವನಿಗೂ ಸತ್ಯಭಾಮೆಗೂ ಇರುವ ಆತ್ಮೀಯತೆ ಅವನನ್ನು ಬರಮಾಡಿಕೊಳ್ಳುತ್ತದೆ. ಇದುವರೆಗೂ ಅವನ ತೊಡೆಯ ಮೇಲೆ ಕುಳಿತು ಅಳುತ್ತಿದ್ದ ಅವಳು ಭಾಸ್ ಬರುತ್ತಲೂ ಅವನ ಬಳಿಗೆ ಹೋಗಿ ಮುಸುಮುಸು ಅಳತೊಡಗಿದಳು.

"ಏನಾಯಿತು ಮಗೂ ?" ಮಗುವನ್ನು ಅಪ್ಪಿ ಮುದ್ದಿಸುತ್ತ ಕೇಳಿದ ಭಾಸ್.

"ಬಿದ್ದೆ. . ."

"ನಿಧಾನವಾಗಿ ನಡೆಯಬಾರದಿತ್ತೆ ?"

"ಮಾಲ ನೂಕಿದಳು."

"ಹೋಗಲಿ ಬಿಡು. ಆಟ ಆಡುವಾಗ ಬೀಳುವುದು ಏಳುವುದು ಸಹಜ."

ಡೇವಿಡ್ ಹೊರಡುತ್ತ ನನಗೆಂದ "ನಾಳೆ ಬರುತ್ತೀಯಷ್ಟೆ ?"

ನಾನು ಉತ್ತರಿಸುವುದರೊಳಗಾಗಿ ಅವನು ಹೆಜ್ಜೆ ಹೊರಗಿಟ್ಟಾಗಿತ್ತು. ಭಾಸ್ ಪ್ರಶ್ನಾರ್ಥಕವಾಗಿ ನನ್ನೆಡೆಗೆ ನಿಟ್ಟಿಸಿದ. ಮುಖ ಕಣ್ಣುಗಳಲ್ಲಿ ಕೋಪ ತಾಪಗಳ ಛಾಯೆ ದಟ್ಟವಾಗಿ ಕಾಣಿಸುತಿತ್ತು.

"ನೀನೇನೆಂದು ತಿಳಿದುಕೊಂಡೆಯೋ ? ಅವನು ಎಲ್ಲಾ ರಾಯಭಾರ ಕಛೇರಿಗಳಲ್ಲೂ ಶಾಲೆಗಾಗಿ ಹಣ ಸಂಗ್ರಹಿಸಿರಿ ಎಂದು ಸಲಹೆ ಕೊಟ್ಟಿದ್ದಾನೆ. ಅದಕ್ಕಾಗಿಯೇ ಕೇಳಿದ್ದು."

ಆದರೂ, ಭಾಸ್ ಸಮಾಧಾನ ಹೊಂದಲಿಲ್ಲ. ಮಾನಸಿಕವಾಗಿ ಸ್ವಾಸ್ಥ್ಯವನ್ನು ಕಳೆದುಕೊಂಡು ನನ್ನನ್ನೂ ತೀರ ನಿಕೃಷ್ಟ ಭಾವನೆಯಿಂದ ಕಾಣತೊಡಗಿದ. ನೆತ್ತರ ಹನಿಹನಿಯೂ ಕುದಿಯುತ್ತಿರುವಂತೆ ಮುಖ ಮೈ ಕಪ್ಪು ತಳೆದಿತ್ತು. ನಾನೇ ಒಳಹೋಗಿ ಚಹ ತಂದೆ. ಚಹ ಸ್ವೀಕರಿಸಿದರೂ ಒಂದು ಮಾತೂ ಆಡಲಿಲ್ಲ. ಪುಸ್ತಕ ಪತ್ರಿಕೆಗಳಲ್ಲಿ ಮನನೆಟ್ಟು ಅದರಲ್ಲೇ ತನ್ಮಯನಾಗಿದ್ದು ನಾನಾಗಿ ಎಷ್ಟು ಪ್ರಯತ್ನಿಸಿದರೂ ಉತ್ತರಿಸಲಿಲ್ಲ. ಅಸಡ್ಡೆ-ಬಿಗುಮಾನಗಳಿಂದ ಕೂಡಿ ಸಿಡಿದೊಡೆಯಲಿರುವ ದಡಾಕಿಯಂತಾದ. ನಾನು ನಿರುಪಾಯಳಾಗಿ ಸುಮ್ಮನೆ ಕುಳಿತುಬಿಟ್ಟೆ. ಮನಃಪ್ರಾಣಗಳು ನೊಂದು ನೀರಾದುವು. ಹೃದಯ ಪ್ರೇಮಕಾತರತೆಯಿಂದ ಹುಯ್ಯಲಿಡುತಿತ್ತು. ಊಟದ ಮೇಜಿನಲ್ಲೂ ಅಷ್ಟೆ. ಸತ್ಯಭಾಮಳೊಂದಿಗೆ ಅಷ್ಟಿಷ್ಟು ಮಾತಾಡಿ ಊಟದ ಶಾಸ್ತ್ರ ಮಾಡಿ ಎದ್ದುಬಿಟ್ಟ. ದಿನವೂ ಹತ್ತು-ಹನ್ನೊಂದು ಗಂಟೆಯವರೆಗೆ ಓದುವ ಪದ್ಧತಿ. ಇಂದು ಊಟ ಮುಗಿದ ತಕ್ಷಣ ಸತ್ಯಭಾಮೆಯನ್ನು ತನ್ನೊಂದಿಗೆ ಮಲಗಿಸಿಕೊಂಡು ಅವಳಿಗೆ ಕತೆ ಹೇಳುತ್ತ ಮಲಗಿ ನಿದ್ದೆ ಮಾಡಿದ. ನನಗೆ ಸತ್ಯಳ ಮಂಚದ ಮೇಲೆ ಪವಡಿಸದೆ ವಿಧಿಯಿರಲಿಲ್ಲ. ಇರಲಿ, ಎಂದಾದರೂ ನಿಜಾಂಶ ತಿಳಿಯದೆ ಹೋಗುವುದಿಲ್ಲ. ನೋಡೋಣ ದೇವರಿದ್ದಾನೆ' ಎಂದು ಅಂತರಾತ್ಮ ಕೂಗಿ ಹೇಳಿತು.

ನಿದ್ದೆ ಬಾರದೆ ಹಾಗೂ ಹೀಗೂ ಹೊರಳಾಡಿ ಹೊತ್ತು ಕಳೆದೆ. ಹೊತ್ತು ಬ್ರಾಹ್ಮೀಮುಹೂರ್ತವನ್ನು ದಾಟಿದನಂತರ ತಣ್ಣನೆಯ

ಹವೆ ಮೈಮನಗಳನ್ನು ಮುದ್ದಿಸಿದಾಗ ನಿದ್ದೆಯ ಮಂಪರ ಆವರಿಸಿತು... ಕನಸಿನ ಲೋಕದಲ್ಲಿ ಬಹುದೂರದ ಹಾದಿ ತುಳಿದಿದ್ದೆ. ದೂರ-ಬಹುದೂರ ನಡೆದರೂ ಮುಗಿಯದ ಹಾದಿ. ಏಕಾಂತ ಪಯಣ, ಏಕಾಂತ ಚಿಂತನೆ. ಸುತ್ತುಮುತ್ತು ನೋಡುತ್ತಲೇ ಮುಂದೆ ಮುಂದೆ ಸಾಗುತ್ತಿರುವಾಗ ದಾರಿಯ ನೇರಕ್ಕೆ ದೂರದಲ್ಲಿ ಕಡ್ಡಿಯಂತೆ ಕಾಣಿಸುವ ವ್ಯಕ್ತಿಯೊಂದನ್ನು ಕಂಡೆ. ಆದರೆ ಅದೆಷ್ಟು ದೂರ ? ಅಲ್ಲಿಗೆ ಹೋಗಬೇಕಾದರೆ ನಾನಿನ್ನೂ ಎಷ್ಟು ನಡೆಯ ಬೇಕು ? ಯೋಚಿಸುತ್ತಲೇ ಕಾಲಿಗೆ ಚುರುಕು ನೀಡಿದೆ. ಆದರೂ ಆ ಹಾದಿ ಸವೆಸುವುದು ನನ್ನಿಂದಾಗಲಿಲ್ಲ. ವ್ಯಕ್ತಿಯೊಮ್ಮೆ ಹಿಂದಿರುಗಿ ನೋಡಿದಾಗ ಕೈಯೆತ್ತಿ ಬೀಸಿ ಕರೆಯುತ್ತ "ಬೇಗ ಬಾ, ಎಷ್ಟು ಹಿಂದೆ ಬಿದ್ದಿದ್ದಿ ?" ಎಂದ. ಅರೆ ! ಭಾಸ್ ಎಷ್ಟು ಮುಂದೆ ಹೋಗಿದ್ದಾನೆ ! ನಾನು ಯಾರೋ ಎಂದು ಕೊಂಡಿದ್ದೆ....ಎನಿಸಿ ಮನದಲ್ಲಿ ಕಾತರ ಮೂಡಿದಾಗಲೇ ಕನಸೊಡೆಯಿತು. ನಾನು ಕಣ್ಣು ಬಿಟ್ಟು ನೋಡಿದೆ. ಭಾಸ್ ಗಾಢವಾದ ನಿದ್ದೆಯಲ್ಲಿದ್ದ. ಎಲ್ಲೋ ದೂರದಲ್ಲಿ, ಮುಂಗೋಳಿಗಳು ಕೂಗುತ್ತಿದ್ದುವು. ಯಾವಾಗಾದರೊಮ್ಮೆ ನಾಯಿಗಳ ಬೊಗಳುವಿಕೆಯೂ ಕೇಳಿಬರುತಿತ್ತು.

ಮನಸ್ಸು ಮತ್ತೆ ಚಿಂತಾಬ್ಧಿಯಲ್ಲಿ ಮುಳುಗಿಯೋಯಿತು. ವಿನಾಕಾರಣ ಭಾಸ್ ನನ್ನ ಮೇಲೆ ಕುಪಿತನಾದನೇ ? ಹೇಗೆ ಸಂಶಯವನ್ನು ನಿವಾರಿಸಿ ಕೊಳ್ಳಲಿ ? ಎಂಬ ಪ್ರಶ್ನೆ ಎದೆಯ ಕರಂಡವನ್ನು ಗುಂಗೆ ಹುಳುವಿನಂತೆ ಕೊರೆಯುತಿತ್ತು. ಮತ್ತೆ ಪ್ರಯತ್ನಿಸಿದರೂ ನಿದ್ದೆ ಬರಲಿಲ್ಲ. ಬೆಳಗಾದಾಗ ಮೊದಲು ಹಾಸಿಗೆ ಬಿಟ್ಟದ್ದು ಭಾಸ್. ಅವನು ಎದ್ದೊಡನೆಯೇ ಶ್ರೀಕೃಷ್ಣ ದರ್ಶನವಾದನಂತರವೇ ಬೇರೆ ವಸ್ತುವಿನ ಮೇಲೆ ಕಣ್ಣು ಹಾಯಿಸಬೇಕಾದರೆ. ಅದಕ್ಕೆಂದೇ ಬೀರುವಿನ ಮೇಲೊಂದು ಶ್ರೀಕೃಷ್ಣ ವಿಗ್ರಹವನ್ನು ಇಟ್ಟಿದ್ದಾನೆ. ಲಂಡನ್‌ನಲ್ಲಿದ್ದಾಗಲೂ ಇದು ಅವನೊಂದಿಗಿತ್ತು. ಅವನು ಕೈಜೋಡಿಸಿ ಕೊಂಡು ನಿಂತಿದುದನ್ನು ನೋಡಿ ನಾನು ಮಿಸುಕಾಡಲಿಲ್ಲ. ಅವನು ಪ್ರಾರ್ಥನೆ ಸಲ್ಲಿಸಿದ ಮೇಲೆ ಮಡಿ ಟವಲ್ಲೊಂದನ್ನು ಅವನ ಕೈಗೆ ನೀಡುತ್ತ ಹೇಳಿದೆ,

"ಸ್ವಲ್ಪ ತಾಳು ಬಕೆಟ್ಟಿಗೆ ನೀರು ಬಿಡುವೆ."

ಅವನದಕ್ಕೆ ಪ್ರತಿಹೇಳಲಿಲ್ಲವಾದರೂ ಒಡಲಲ್ಲಿ ಅಸಮಾಧಾನದ ಕಿಚ್ಚು ಹೊಗೆಯಾಡುತ್ತಿರುವುದು ಸುವ್ಯಕ್ತ. ದಿನಚರಿ ಹೆಚ್ಚು ಮಾತುಕತೆಯಿಲ್ಲದೆ ಎಂದಿನಂತೆಯೇ ಸಾಗಿತು. ಭಾಸ್ ಆಫೀಸಿಗೆ ಹೋದನಂತರ ನಾನು ಪಾಂಚಾಲಿ ವರ್ಮ ಮತ್ತು ಅಂಜೂರವರೊಂದಿಗೆ ಟೆಲಿಫೋನಿನಲ್ಲಿ ಮಾತಾಡಿ ಡೇವಿಡ್ ಸಲಹೆಯನ್ನು ಮುಂದಿಟ್ಟೆ. ಇಬ್ಬರೂ ತತ್‌ಕ್ಷಣವೇ ಒಪ್ಪಿ, ಈ ದಿನವೇ ಬ್ರಿಟಿಷ್ ರಾಯಭಾರ ಕಛೇರಿಗೆ ಹೋಗೋಣ, ಎಂದರು. ಅನಂತರ ಟೆಲಿಫೋನಿನ ಸಂಪರ್ಕವನ್ನು ತುಂಡುಗಡಿದು ನಿರ್ಮಲಾರಾಯ್ ಮಾಯಾ ಠಾಕೂರ್‌ರವರಿಗೂ ಕರೆಕೊಟ್ಟೆ. ಎಲ್ಲರೂ ನಾಲ್ಕು ಗಂಟೆಯೊಳಗಾಗಿ ಬಂದು ಸೇರಿದರು. ಅನಂತರ ಐವರೂ ಒಟ್ಟಾಗಿ ಹೊರಟೆವು. ಅಲ್ಲಿ ಎಲ್ಲಾ ಹಿರಿಯ–ಕಿರಿಯ ಅಧಿಕಾರಿಗಳಿಂದಲೂ ಹಣ ಸಂಗ್ರಹಿಸಬೇಕಾದರೆ ಕಂಠ ಶೋಷಣೆ ಮಾಡಬೇಕಾಯಿತು. ಕೊಟ್ಟಕೊನೆಗೆ ಎಂಟು ನೂರು–ಒಂಭೈನೂರು ರೂಪಾಯಿಗಳಷ್ಟು ಹಣ ಸಂಗ್ರಹವಾಯಿತು.

ಅದನ್ನು ಸಾಯಂಕಾಲ ಭಾಸ್ ಮನೆಗೆ ಬಂದಾಗ ವಿಷಯವನ್ನು ಮುಂದಿಡುತ್ತ ಹೇಳಿದೆ "ನೀನು ವಿನಾಕಾರಣ ತೀರ ಅಸಮಾಧಾನಗೊಂಡಿದ್ದಿ. ಇಷ್ಟು ಹಣವನ್ನು ನಾವು ಸಂಗ್ರಹಿಸಿದ್ದು ಬ್ರಿಟಿಷ್ ರಾಯಭಾರ ಕಛೇರಿಯಲ್ಲಿ."

ಅವನು ನನ್ನ ಮಾತನ್ನು ಅಷ್ಟಾಗಿ ಗಮನಕ್ಕೆ ತೆಗೆದುಕೊಂಡಂತೆ ತೋರಲಿಲ್ಲ. ಏನೋ ಒಂದು ರೀತಿಯಲ್ಲಿ ಚಿಂತಿತನಂತೆಯೇ ಕಂಡುಬರುತಿದ್ದ. ನಗೆ ಮಾತುಗಳು ಕಡಿಮೆಯಾದುವು. ಗಾಂಭೀರ್ಯ ಭಾವ ಮೈಮನಗಳನ್ನು ಆವರಿಸಿತ್ತು ಹೆಡೆಮುರಿಗಟ್ಟಿದಂತೆ. ಮರುದಿನದಿಂದ ನಾವು ಉಳಿದೆಲ್ಲಾ ರಾಯಭಾರ ಕಛೇರಿಗಳಲ್ಲೂ ದಿನಕ್ಕೊಂದು ಕಡೆಯಂತೆ ಹಣ ಸಂಗ್ರಹಿಸಿದೆವು. ಒಟ್ಟು ಮೊತ್ತ ಹತ್ತು ಸಾವಿರವನ್ನು ಮುಟ್ಟಿತು. ಅದರ ವರದಿಯನ್ನು ಪ್ರತಿ ದಿನವೂ ಭಾಸ್ ಮುಂದಿಡುತಿದ್ದೆ. ಇಂದೂ ಇಟ್ಟೆ. ಎಲ್ಲಕ್ಕೂ 'ಹೂಂ' ಎಂದಷ್ಟು ಮಾತ್ರ ಉತ್ತರಿಸಿದ ಭಾಸ್. ಅವನ ವಿಚಿತ್ರ ರೀತಿಯೇ ನನಗೆ ಅರ್ಥವಾಗಲಿಲ್ಲ.

ಡೇವಿಡ್ ಒಂದಿನ ಬಾರದಿದ್ದರೆ ಸತ್ಯಾ ಅವನಿಗೆ ರಿಂಗ್ ಮಾಡಿ "ಅಂಕಲ್ ! ಏಕೆ ಬರಲಿಲ್ಲ?" ಎಂದು ಆಕ್ಷೇಪಿಸುತ್ತಾಳೆ. ಅವನು ಏನಾದರೂ ಕಾರಣ ಹೇಳಿದರೂ ಅವಳು ಒಪ್ಪುವುದಿಲ್ಲ. ಅವನು ಬಂದು ಹೋಗಿಯೇ ತೀರಬೇಕು. ಅವರಿಬ್ಬರೂ ಆನಂದದಿಂದ ಕೂಡಿ ಆಡುವುದನ್ನು ಕಣ್ತುಂಬ ನೋಡಿದ್ದಾನೆ ಭಾಸ್. ಆದರೂ ಅವನ ಅಸಮಾಧಾನ ಅರ್ಥವಾಗದ ಸಮಸ್ಯೆ. ಬಗೆಹರಿಯಲಾರದ ತೊಡಕು. ದಿನಗಳೂ ವಾರಗಳೂ ಉರುಳಿಹೋದುವು. ದಿನಚರಿ ಯಾಂತ್ರಿಕವಾಗಿ ನಡೆಯುತಿತ್ತು. ಜೀವ ಕಸಿವಿಸಿಯಿಂದ ಉಸಿರಾಡುತ್ತದೆ.

ದಿಗಂತದಲ್ಲಿ ನಿಂತು ದಿಗಂತದಾಚೆಯ ಅನಂತತ್ವದಲ್ಲಿ ದೃಷ್ಟಿಯನ್ನು ನೆಟ್ಟು ವಕ್ಷಸ್ಥಲದ ಮೇಲೆ ಕೈಕಟ್ಟಿದೆ. ಗಾಳಿಯಾಟದಿಂದ ಬೆನ್ನ ಹಿಂದಿನ ಸೆರಗು ಅಂಗರಕ್ಷಕನಂತೆ ಅತ್ತಿತ್ತ ಹಾರಾಡುತಿತ್ತು. ಭೌತಿಕ ಜಗತ್ತಿನ ದೃಶ್ಯ ರೂಪಕ್ಕಿಂತ ಅನಂತತೆಯ ಅಗಾಧವಾದ ರಸದೃಷ್ಟಿಯಲ್ಲಿ ಕಣ್ಣಿಡಬಲ್ಲೆನಾದರೆ ದಿನವೆಲ್ಲಾ ಅದರಲ್ಲೇ ಮುಳುಗಬಹುದೇನೋ....ಅಥವಾ ಅಂತಹ ಸೂಕ್ಷ್ಮಾತಿಸೂಕ್ಷ್ಮವಾದ ರಸ ಸಿದ್ಧಾಂತಗಳನ್ನು ಅರಿತುಕೊಳ್ಳಬಲ್ಲೆನಾದರೆ ಈ ಸಂಸಾರ ಬಂಧನವೇ ಬೇಡವಾಗಿತ್ತು ಎಂಬ ಯೋಚನೆ ಬಾರದಿರಲಿಲ್ಲ.

ಹೊತ್ತು ಮೆಲ್ಲಮೆಲ್ಲನೆ ಉರುಳಿತು. ಅದರೊಂದಿಗೆ ಜೀವ ಲಘುವಾಗಿ ಉಸಿರಾಡಿತು.

ಭಾಸ್ ಹೊರಬಂದು ಅಂದ "ಲಂಡನ್‌ನಲ್ಲಿ ಇಂಟರ್ ನ್ಯಾಷನಲ್ ಸೈನ್ಸ್ ಕಾಂಗ್ರೆಸ್ ನಡೆಯುತ್ತದೆ. ಆ ಸಭೆಯಲ್ಲಿ ಭಾಗವಹಿಸಲು ಸರಕಾರ ನನಗೆ ಕರೆ ನೀಡಿದೆ. ಹೊರಡುವುದು ಮುಂದಿನವಾರ. ನೀನೂ ಹೊರಡು ಹೋಗಿಬರೋಣ."

"ಎಷ್ಟು ದಿನ ?"

"ಆರು ದಿನಗಳು."

"ಆಗಬಹುದು. ನಮ್ಮವರನ್ನೊಮ್ಮೆ ನೋಡಿ ಬಂದರಾಯ್ತು."

ಭಾಸ್ ನನ್ನನ್ನು ಆಹ್ವಾನಿಸಿದುದು, ಬಹುಶಃ ನನ್ನೊಬ್ಬಳನ್ನೇ ಇಲ್ಲಿ ಉಳಿಸುವುದು ಇಷ್ಟವಿಲ್ಲದಿರಬಹುದೇ ಎಂಬ ಪ್ರಶ್ನೆ ತಲೆಯಲ್ಲಿ ನಾಗರ ಹಾವಿನಂತೆ ಹೆಡೆಯೆತ್ತಿತ್ತು. ಆದರೂ ಅದಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡದೆ ಅಂಜೂಗೆ ಟೆಲಿಫೋನಿನಲ್ಲಿ ಕರೆನೀಡಿ ಈ ವಿಷಯವನ್ನು ಮುಂದಿಟ್ಟು "ಬಹುಶಃ ನಾವು ಹೋಗಿಬರುವುದು ಆರೇಳು ದಿನಗಳಾಗಬಹುದು. ಅಲ್ಲಿಯ ತನಕ ನೀನೊಬ್ಬಳೇ ಶಾಲೆಯ ಕಡೆ ಹೋಗುವುದಕ್ಕಿಂತ ನೀಲಾರಾಂ ಅಥವಾ ಪಾಂಚಾಲಿ ವರ್ಮ ಯಾರನ್ನಾದರೂ ಕರೆದುಕೊಂಡು ಹೋಗಬಹುದು. ಏನು ಹೇಳುತ್ತಿ ?"

"ಅದೇನೂ ವಿಶೇಷವಲ್ಲ. ಯಾರು ಬಿಡುವಾಗಿರುತ್ತಾರೋ ಅವರನ್ನು ಕರೆದುಕೊಂಡು ಹೋಗುವೆ. ನೀನು ಹೋಗಿ ಬಾ ಪರವಾಯಿಲ್ಲ."

ಆ ಮಾತಿನಿಂದ ಸಂತುಷ್ಟಳಾದೆ. ಮನಸ್ಸು ಲಂಡನ್ ನಗರದ ಸುತ್ತ ಮುತ್ತ ಹರಿದಾಡಿತು. ಭಾಸ್ ತಾನು ಸಿದ್ಧಪಡಿಸುತ್ತಿದ್ದ ಪ್ರಬಂಧದಲ್ಲಿ ತೀವ್ರ ತನ್ಮಯನಾಗಿದ್ದ. ಅವನು ಮಲಗುತಿದ್ದುದೂ ಮಧ್ಯರಾತ್ರಿಯ ನಂತರ. ಹೊರಡುವ ದಿನ ಬಳಿಸಾರಿ ಬಂತು. ನನ್ನವರನ್ನೂ ತಾಯ್ನಾಡನ್ನೂ ಸಂದರ್ಶಿಸುವ ಅಭಿಲಾಷೆ ನರನಾಡಿಗಳಲ್ಲಿ ತೀವ್ರವಾಗಿ ಹರಿದಾಡಿ ಮೈಮನಗಳು ಪುಳಕಿತವಾದುವು. ಸಡಗರ ನನಗರಿಯದಂತೆಯೇ ಉಕ್ಕೇರಿತು. ವಿಮಾನ ಹತ್ತಿದನಂತರ ಭಾಸ್‌ನ ಚರ್ಯೆ ಸ್ವಲ್ಪ ಬದಲಾಯಿತು. ಮಗಳ ಮುದ್ದು ಮುದ್ದು ಮಾತುಗಳಿಂದ ಪಯಣದ ಬೇಸರವೇ ತೋರಲಿಲ್ಲ. ಗಗನ ಸಖಿಯರ ಸ್ನೇಹ ಬೆಳಸಿ ಚಾಕಲೆಟ್‌ಗಳನ್ನು ಮತ್ತೆ ಮತ್ತೆ ಈಸಿಕೊಳ್ಳುತ್ತ ಸಹ ಪ್ರಯಾಣಿಕರ ಮಕ್ಕಳಿಗೆ ಹಂಚಿ ಅವರ ಸ್ನೇಹವನ್ನು ಗಳಿಸಿಕೊಂಡಳು. ಆದರೂ ಅವಳಿಗೆ ಸಮಾಧಾನವಾಗಲಿಲ್ಲ "ಅಮ್ಮಾ ಬಹಳ ಬೇಸರ. ಎಷ್ಟೊತ್ತಿಗೆ ಮುಗಿಯುತ್ತೆ ಈ ಪಯಣ ?" ಎಂದು ಬಾರಿ ಬಾರಿಗೂ ಕೇಳತೊಡಗಿದಳು.

"ಇನ್ನು ಸ್ವಲ್ಪ ಹೊತ್ತು ಮಾತ್ರ."

"ಕಾರಿನಲ್ಲಿ ರೈಲಿನಲ್ಲಿ ಪಯಣಿಸಿದರೆ ಹಾದಿಯುದ್ದಕ್ಕೂ ಊರುಕೇರಿಗಳನ್ನೂ ಬೆಟ್ಟಗುಡ್ಡಗಳನ್ನೂ ನೋಡಬಹುದು. ಇಲ್ಲೇನೂ ಕಾಣಿಸುವುದಿಲ್ಲ."

"ಸ್ವಲ್ಪ ತಾಳಿಕೋ ಮಗು !"

"ಏನೂ ಕಾಣಿಸುವುದಿಲ್ಲ; ಏನು ಮಾಡಲಿ ?"

"ಲಂಡನ್‌ಗೆ ಹೋದಮೇಲೆ ಎಲ್ಲಾ ಕಾಣಿಸುತ್ತೆ. ಅಲ್ಲಿಯವರೆಗೆ ಒಂದು ಕತೆ ಹೇಳಲೇ ?"

"ಹೇಳಿದ್ದೇ ಹೇಳುವುದು ಬೇಡ. ಹೊಸ ಕತೆ ಹೇಳಬೇಕು !"

"ಹೊಸಕತೆ ನಾನು ಹೇಳುವೆ ಕೇಳು" ಎಂದ ಭಾಸ್.

ಅವನು ಮಧ್ಯವರ್ತಿಯಾದುದು ನನಗೆ ಹಿತವೆನಿಸಿತು. ಹಾಗೆ ಅವರಿಬ್ಬರ ಮಾತುಕತೆಯನ್ನು ಗಮನಿಸತೊಡಗಿದೆ.

"ಸತ್ಯಭಾಮಾ ಎಂದು ನಿನಗೆ ಹೆಸರಿಟ್ಟದ್ದು ಏಕೆ ಗೊತ್ತೇ ?"

"ಒಳ್ಳೆಯ ಹೆಸರು."

"ಶ್ರೀಕೃಷ್ಣನ ಸತಿ ಸತ್ಯಭಾಮ. ಅವಳು ಶ್ರೀಕೃಷ್ಣನ ಪರಮಭಕ್ತೆ. ಅವನನ್ನು ಈಗಲೂ ರಾತ್ರಿ ಸ್ಮರಣೆ ಮಾಡುತ್ತ ಕಾಲಹರಣ ಮಾಡಿದ ಮಹಾಸಾಧ್ವಿ. ಅವಳಂತೆಯೇ ನೀನೂ ಆಗಬೇಕೆಂಬ ಮಹದಾಸೆ ನನಗಿದೆ. ಅದನ್ನು ನೆನಪಿನಲ್ಲಿಟ್ಟರು. ಸತ್ಯಭಾಮಾ ಶ್ರೀಕೃಷ್ಣನ ಕಾಲವಾಗಿ ಶತಶತಮಾನಗಳೇ ಉರುಳಿಹೋದುವು. ಈಗಲೂ ಅವರ ಪುಣ್ಯಕತೆ ಎಲ್ಲರ ಬಾಯಲ್ಲೂ ನಲಿಯುತ್ತಿರುತ್ತದೆ. ತಂಪುಹೊತ್ತಿನಲ್ಲಿ ಕಷ್ಟಕಾಲದಲ್ಲಿ ಅವರನ್ನು ಸ್ಮರಿಸುತ್ತಾರೆ ಜನ. ಅಂದರೆ ಅವರ ಚರಿತ್ರೆ ಅಷ್ಟು ಶುದ್ಧವಾಗಿತ್ತು; ಪವಿತ್ರವಾಗಿತ್ತು; ಪ್ರಖ್ಯಾತವಾಗಿತ್ತು. ಹಾಗೆ ಯಾರಿದ್ದರೂ ಸ್ಮರಿಸಿಕೊಂಡಾಡುತ್ತಾರೆ ಜನ. ಅಂತಹ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕು."

"ಇದೇ ಕಥೆಯೋ ?"

"ಹೌದು...ಇದಕ್ಕಿಂತ ಇನ್ನೆಂತಹ ಕಥೆ ?"

ಅಷ್ಟರಲ್ಲಿ ಯಾರೋ ಅವಳ ಕೈಗೊಂದು ಪುಸ್ತಕವನ್ನು ಕೊಟ್ಟರು. ಅದು ಸಣ್ಣ ಕಥೆಗಳ ಸಂಕಲನವಾದ್ದರಿಂದ ಅವಳು ಅದರಲ್ಲೇ ತೀವ್ರ ತನ್ಮಯಳಾದಳು. ಅವಳ ಓದು ಮುಗಿಯುವುದಕ್ಕೂ ವಿಮಾನಯಾನ ಮುಗಿಯು

ಪ್ರದಕ್ಕೂ ಸರಿಹೋಯಿತು. ನಾವು ನಿಲ್ದಾಣವನ್ನು ಬಿಟ್ಟು ಜಾರ್ಜ್ ಮೈಕೇಲ್ ರೆಸ್ಟೋರೆಂಟಿಗೆ ಹೋಗಿ ಮುಖಮಜ್ಜನ ಮಾಡಿದನಂತರ ಆನಂದ್ ಮನೆಗೆ ರಿಂಗ್ ಮಾಡಿದಾಗ ಇಳಾ ಸಿಕ್ಕಿದಳು, ಆನಂದ ಇರಲಿಲ್ಲ.

"ಓ ! ಯಾವಾಗ ಬಂದಿರಿ ?" ಎಂದ ಅವಳು ಪುನಃ "ಒಂದು ಕಾಗದ ಬರೆದಿದ್ದರೆ ನಿಲ್ದಾಣದಲ್ಲೇ ಭೇಟಿ ಮಾಡಬಹುದಿತ್ತಲ್ಲ ?"

"ಇರಲಿ, ಯಾವಾಗ ಭೇಟಿ ?"

"ಆನಂದ್ ಬಂದಿಲ್ಲ; ಈಗಲೇ ನೋಡಬಹುದಾಗಿತ್ತು."

"ಬೇಗ ಬಂದರೆ ಈಗಲೇ ಬನ್ನಿ."

"ಆಗಲಿ."

ಅನಂತರ ವಸಂತನ ಮನೆಗೆ ಕರೆಕೊಟ್ಟಾಗ ವಸಂತ್ ಸಿಕ್ಕಿದ.

"ಗುಡ್ ! ಈವ್ನಿಂಗ್ ! ಯಾವಾಗ ಬಂದೆ ? ಏನು ಸಮಾಚಾರ !"

"ಈಗಷ್ಟೆ ಬಂದಿದ್ದೇನೆ. ಹೇಗಿದ್ದೀರಿ ?"

"ಓ.ಕೆ ! ಈಗೇನು ಕೆಲಸ ?"

"ಏನೂ ಇಲ್ಲ. ನಾಳೆ ಮೀಟಿಂಗ್ ಇದೆ."

"ಹಾಗಿದ್ದರೆ ಈಗಲೇ ಬರುವೆ."

ಅರ್ಧಗಂಟೆಯೊಳಗಾಗಿ ವಸಂತ್ ನಾಗಿನಿಯರು ಹರ್ಷಚಿತ್ತರಾಗಿ ಬಂದಿಳಿದರು. ಇದ್ದ ಹಲ್ಲುಗಳೆಲ್ಲಾ ಒಮ್ಮೆಗೇ ಪ್ರದರ್ಶಿತವಾದುವು, ಬೆಳದಿಂಗಳಂತಹ ಹಸನಾದ ನಗುವನ್ನು ಸೂಸಿದಾಗ. ಅವರನ್ನು ಅತ್ಯಂತ ಆದರಪೂರ್ವಕವಾಗಿ ಬರಮಾಡಿಕೊಂಡೆ. ಅವರಿಗಾಗಿ ಮೇಜಿನ ಮೇಲೆ ಚಹ ಅಣಿಯಾಯಿತು. ಎಲ್ಲರೂ ಚಹಪಾನ ಮಾಡುತ್ತ ಅದೆಷ್ಟು ಮಾತಾಡಿದೆವೋ... ಅಂದಿಂದಿನ ಸುಖದುಃಖಗಳೆಲ್ಲ ಒಂದೇ ಬಾರಿಗೆ ಕರಗಿಹೋದುವು. ಮಾತಿಗೆ ಕೊನೆಮೊದಲೇ ಇರಲಿಲ್ಲ. ನಗೆ ಮಾತುಗಳಿಂದ ನಗುವಿನಲಹರಿ ಪುನಃಪುನಃ ಹರಿಯುತಿತ್ತು. ಹೊತ್ತು ಸಾನಂದದಿಂದ ಹರಿಯುತಿದ್ದಂತೆ ಟೆಲಿಫೋನಿನ

ಕರೆ ಬಂತು. ಆ ಕಡೆಯಿಂದ ಆನಂದನ ದನಿ ಮೊಳಗಿತು "ಸುದ್ದಿಯಿಲ್ಲದೆ ಬಂದಿದ್ದೀರಿ ? ಹೇಗಿದ್ದೀರಿ ಎಲ್ಲಾ ?"

"ಓ.ಕೆ. ಈಗ ಬರುತ್ತೀಯೇನು ? ನಾಳೆ ನನಗೆ ಬಿಡುವಿಲ್ಲ. ವಸಂತ್ ಇಲ್ಲಿದ್ದಾನೆ."

"ಆಗಲಿ....ಈಗಲೇ ಬರುವೆ."

ಸ್ವಲ್ಪ ಹೊತ್ತಿನೊಳಗಾಗಿ ಆನಂದ್ ಸತಿಸಮೇತನಾಗಿ ಬಂದಿಳಿದ. ಪರಸ್ಪರ ಭೇಟಿಯಿಂದ ಎಲ್ಲರ ಮುಖದಲ್ಲೂ ಹಸನಾದ ನಗೆ ಅರಳಿತು. ಸತ್ಯಭಾಮ ಎಲ್ಲರ ಮುದ್ದಿಗೂ ಪಾತ್ರಳಾದಳು. ಆನಂದ್ ಮತ್ತು ಇಳಾ ಚಹ ಪಾನ ಮಾಡುತ್ತ ಕೇಳಿದರು "ನನ್ನ ತಂದೆ ನಿಮ್ಮನ್ನು ಭೇಟಿಮಾಡಿದುದಾಗಿ ಕಾಗದ ಬರೆದಿದ್ದರು."

"ಹೌದಯ್ಯಾ, ನೀನು ಇಂಡಿಯಾಕ್ಕೆ ಹೊರಡುವುದೆಂದು ? ನಾವು ಇಲ್ಲಿಂದ ಹಿಂತಿರುಗಿದ ಕೂಡಲೇ ಅವರು ಪುನಃ ಬಂದರೂ ಬರಬಹುದು. ಅವರಿಗೆ ನಾವು ಉತ್ತರ ಹೇಳಬೇಕಲ್ಲ ?"

"ಈ ವರ್ಷಾಂತ್ಯದಲ್ಲಿ ಹೊರಡುವುದು ಖಂಡಿತ."

ವಸಂತ್‌ನನ್ನು ಕುರಿತು ಕೇಳಿದ ಭಾಸ್ "ನೀನು ?"

"ಇಲ್ಲಿ ಎರಡು ವರ್ಷ ಕೆಲಸ ಮಾಡುವೆ. ಸ್ವಲ್ಪ ಹಣ ಗಳಿಸಿಕೊಳ್ಳಬೇಕು."

"ಆನಂದ್–ಇಳಾ ಹೊರಟಮೇಲೆ ನಿನಗೆ ಬೇಸರವೆನಿಸದೇ ?" ನಾಗಿನಿಯನ್ನು ನಾನು ಕೇಳಿದೆ.

"ಈಚೆಗೆ ನಾನು ಇನ್ನೂ ಕೆಲವು ಗೆಳೆಯರನ್ನು ಗಳಿಸಿಕೊಂಡಿರುವೆ. ಹೇಗಾದರೂ ಕಾಲಕಳೆಯಬೇಕಷ್ಟೇ ?" ಎಂದಳು ಅವಳು.

ಅನಂತರ ನಾವು ಎಷ್ಟೋ ಹೊತ್ತು ಮಾತಾಡಿದೆವು. ಭಾಸ್ ಇಲ್ಲೇ ಎಲ್ಲರಿಗೂ ಡಿನ್ನರ್‌ಗೆ ಆರ್ಡರ್‌ಕೊಟ್ಟ. ನಾವು ಊಟವನ್ನು ಮುಗಿಸಿದಾಗ

ಮಧ್ಯರಾತ್ರಿಯಾಗಿತ್ತು. ಅವರು ಹೊರಟರು. ಅನಂತರ ನಮಗೆ ವಿಶ್ರಾಂತಿ. ಇಂದು ಆಯಾಸವಾಗಿದ್ದುದರಿಂದಲೋ ಏನೋ ಮಲಗಿದೊಡನೆಯೇ ಕಣ್ಣಿಗೆ ಗಾಢವಾದ ನಿದ್ದೆ ಹತ್ತಿತು. ಬೆಳಿಗ್ಗೆ ನಾವು ಹೊತ್ತಾಗಿಯೇ ಹಾಸಿಗೆ ಬಿಟ್ಟದ್ದು. ಛಾಸ್ ಮೀಟಿಂಗಿಗೆ ಹೋದನಂತರ ನಾನು ಸತ್ಯಭಾಮೆಯೊಂದಿಗೆ ಹೋಟೆಲಿನ ಉದ್ಯಾನದಲ್ಲಿ ಸ್ವಲ್ಪ ಹೊತ್ತು ಅಡ್ಡಾಡಿದೆ. ಮಧ್ಯಾಹ್ನ ಆಕ್ಸ್‌ಫರ್ಡ್ ರಸ್ತೆಯವರೆಗೂ ಹೋಗಿಬಂದೆ. ಸತ್ಯಭಾಮ ಹೆಚ್ಚು ನಡೆಯಲಾರಳೆಂದು ಹೆಚ್ಚುದೂರ ಹೋಗಲಿಲ್ಲ. ಛಾಸ್ ಮೀಟಿಂಗ್‌ನಿಂದ ಹಿಂದಿರುಗುವ ಸಮಯಕ್ಕೆ ಸರಿಯಾಗಿ ವಸಂತ್ ಕಾರು ತಂದಿದ್ದ. ಅವನೊಂದಿಗೆ ಮೊದಲು ಆನಂದನ ಮನೆಗೆ ಹೋಗಿ ಆನಂದದಿಂದ ಕಾಲಹರಣ ಮಾಡಿದೆವು. ವಸಂತ್ ನಮ್ಮನ್ನು ಡಿನ್ನರ್ ಸಮಯಕ್ಕೆ ಸರಿಯಾಗಿ ಹೋಟೆಲಿಗೆ ಹಿಂತಿರುಗಿಸಿದ.

ಬೆಳಿಗ್ಗೆ ಛಾಸ್ ಮೀಟಿಂಗಿಗೆ ಹೊರಟ. ನಾನು ಹಿರಿಯಕ್ಕ ಎಲಿಜಳನ್ನು ನೋಡಿಬರುವ ಕುತೂಹಲಕ್ಕೆ ಶರಣಾದೆ. ಅವಳ ಮನೆ ಎಲ್ಲಿದೆ ಎಂಬುದನ್ನು ಕೇಳಿ ತಿಳಿದಿದ್ದೆನೇ ಹೊರತು ಕಣ್ಣಿಂದ ನೋಡಿರಲಿಲ್ಲ. ಅಲ್ಲಲ್ಲೇ ಸುತ್ತಾಡಿದರೆ ಎಲ್ಲಿಯಾದರೂ ಸಿಕ್ಕೀತು. ಹುಡುಕುವುದೇನೂ ಕಷ್ಟವಲ್ಲ; ಎಂಬ ಯೋಚನೆಯಲ್ಲೇ ಹೋಟೆಲಿಂದ ಹೊರಟೆ. ಒಂದು ಟ್ಯಾಕ್ಸಿ ಹಿಡಿದು ಮಾರ್ಟಿನ್ ಲೇನ್‌ನಲ್ಲಿ ಇಳಿದು ಟ್ಯಾಕ್ಸಿಯವನಿಗೆ "ನಾನು ಹಿಂತಿರುಗುವವರೆಗೂ ಇರು. ನಿನಗೆ ವೈಟಿಂಗ್ ಛಾರ್ಜ್ ಕೊಡುವೆ" ಎಂದು ಹೇಳಿ ಸತ್ಯಭಾಮೆಯೊಂದಿಗೆ ಅಲ್ಲೆಲ್ಲಾ ಸುತ್ತಾಡಿ ಮನೆಮನೆಯ ನಂಬರನ್ನು ನೋಡಿದೆ. ಎಲ್ಲಿಯೂ ಮನೆ ಕಾಣಿಸಲಿಲ್ಲ. ದಾರಿಹೋಕರನ್ನು ಕೇಳಿದರೂ ಎಲ್ಲೆಂಬುದು ಅರ್ಥವಾಗಲಿಲ್ಲ. ಇನ್ನೇನು ಹಿಂದಿರುಗಿ ಹೋಗುವ ಯೋಚನೆಯಲ್ಲಿರುವಾಗ ಯಾರೋ ಒಂದು ದೊಡ್ಡಮನೆಯನ್ನು ತೋರಿಸಿ "ಅದರ ಹಿಂದಿನ 'ಔಟ್‌ಹೌಸ್'ಗಳಲ್ಲಿ ನೋಡು ಎಂದರು. ಸರಿ ಅದೊಂದನ್ನು ನೋಡಿಯೇ ಹೋಗೋಣವೆಂದು ಒಳಗಡೆ ಹೋದೆ. ಸಾಲಾದ ನಾಲ್ಕು ಮನೆಗಳಲ್ಲಿ ಯಾವುದಿರಬಹುದೆಂದು ನೋಡುವುದರೊಳಗಾಗಿ ಅಕ್ಕನ ಮಕ್ಕಳಾದ ಎಲ್ಸಾ ಮತ್ತು ಪಿಲೂ ಹೊರಗೆ ಬಂದರು. ಅವರನ್ನು ಕಾಣುತ್ತಲೂ ನಾನು ಸಡಗರದಿಂದ ಒಳಹೋದೆ. ಅಕ್ಕ ಕುರ್ಚಿಯ ಮೇಲೆ ಕುಳಿತು ಪತ್ರಿಕೆಯೋದುವುದರಲ್ಲಿ ನಿಮಗ್ನಳಾಗಿದ್ದಳು. ನಾನು ಇದೇ

ಮೊದಲಿಗೆ ಅವಳ ಮನೆಗೆ ಕಾಲಿಟ್ಟದ್ದು. ಅವಳು ತಲೆಯೆತ್ತಿನೋಡಿ ಅತ್ಯಂತ ನೀರಸವಾದ ಸ್ವಾಗತ ನೀಡಿ "ಯಾವಾಗ ಬಂದೆ ?" ಎಂದಳು.

"ಮೂರು ದಿನಗಳಾದುವು."

ಕುಳಿತುಕೋ ಎಂತಲೂ ಆಕೆ ಹೇಳಲಿಲ್ಲ. ನಾನಾಗಿಯೇ ಕುಳಿತು ಕೊಂಡೆ. ಸತ್ಯಭಾಮಾ ಪಿಲೂ ಜೊತೆಗೆ ಕಾರ್ಟೂನ್‌ಗಳನ್ನು ನೋಡುತ್ತ ಕುಳಿತಳು.

ಎಲಿಜ ಕೇಳಿದಳು "ಎಷ್ಟು ದಿನ ಇರುತ್ತಿ ?"

"ಇನ್ನೂ ಮೂರು ದಿನ ಇರುತ್ತೇನೆ."

"ಹೇಗಿದೆ ನಿನ್ನ ಜೀವನ ಇಂಡಿಯಾದಲ್ಲಿ ?"

"ಚೆನ್ನಾಗಿದೆ."

"ಮುಂದೆ ಅಲ್ಲಿಯೇ ಇರುತ್ತಿತಾನೇ ?"

"ಹೌದು."

"ನೀನು ಕೆಲಸ ಮಾಡುತ್ತಿರುವೆಯಾ ?"

"ಹೌದು. ಸೋಷಿಯಲ್ ವರ್ಕ್."

ನಾನು ಅಣ್ಣಂದಿರನ್ನು ಕುರಿತು ಕೇಳಿದ ಪ್ರಶ್ನೆಗೆ ಅವಳು ಮೊಟಕಾಗಿ ಉತ್ತರಿಸಿದಳು "ಅವರ ವಿಚಾರ ನನಗೇನೂ ತಿಳಿಯದು."

ಅನಂತರ ಮಾತುಕತೆಯಲ್ಲಿ ಅವಳು ಯಾವ ಉತ್ಸಾಹವನ್ನೂ ತೋರ ಲಿಲ್ಲ. ಸ್ನೇಹ ಪ್ರೇಮಗಳ ಆದರವೂ ಮೂಡಲಿಲ್ಲ. ಒಂದೆರಡು ಗಳಿಗೆ ಸ್ತಬ್ಧವಾಗಿ ಕುಳಿತಿದ್ದು ಇನ್ನು ಹೊರಡುವುದು ಒಳ್ಳಿತು ಎಂದು ನನ್ನಲ್ಲೇ ಯೋಚಿಸಿದೆ. ಅದೇ ವೇಳೆಗೆ ಕಾರ್ಟೂನ್‌ಗಳನ್ನು ನೋಡಿ ಮುಗಿಸಿದ ಸತ್ಯಾ ನನ್ನ ಬಳಿಗೆ ಬಂದು "ಹೋಗೋಣ ಅಮ್ಮಾ !" ಎಂದಳು ಪಿಸು ದನಿಯಲ್ಲಿ.

ನನಗೂ ಅಷ್ಟೇ ಬೇಕಾಗಿತ್ತು ಎದ್ದು ನಿಂತು "ನಾನು ಹೊರಡಲೇ ?" ಎಂದೆ.

ಅವಳ ಮುಖಭಾವದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಅತ್ಯಂತ ಸಹಜವಾದ ಶಾಂತಸ್ಫುಟಸ್ವರದಿಂದ "ಆಗಬಹುದು" ಎಂದಳು.

ಮಕ್ಕಳಿಗೂ ಅವಳಿಗೂ 'ಗುಡ್‌ಬೈ' ಹೇಳಿ ಹೊರಟೆ. ಅಕ್ಕ ವರಾಂಡದ ಬಾಗಿಲಲ್ಲಿ ನೋಡುತ್ತ ನಿಂತಿದ್ದಳು. ರಸ್ತೆಯಲ್ಲಿ ಟ್ಯಾಕ್ಸಿ ನನಗಾಗಿ ಕಾದಿತ್ತು. ನಾನು ಹೇಗೆ ಹಠಾತ್ತಾಗಿ ಒಳಹೋದೆನೋ ಹಾಗೆಯೇ ಹಠಾತ್ತಾಗಿ ಹೊರ ಬಂದಾಗ ನಿಜವಾಗಿಯೂ ಮನದಲ್ಲಿ ಕಸಿವಿಸಿಯಾಯಿತು. ಇನ್ನಾರನ್ನಾದರೂ ನೋಡಬೇಕೆಂದು ಅನಿಸಲೇ ಇಲ್ಲ. ಭಾರತದಲ್ಲಾಗಿದ್ದರೆ ಸ್ನೇಹ—ಪ್ರೇಮ—ವಿಶ್ವಾಸ—ಆತ್ಮೀಯತೆಗಳ ಅದ್ಭುತ ಪ್ರವಾಹದಲ್ಲಿ ಕೊಚ್ಚಿಹೋಗುತಿದ್ದೆ. ಇಲ್ಲಿ....?

ಮರುದಿನ ಮಧ್ಯಾಹ್ನ ಇಳಾ ಮನೆಯಲ್ಲಿ ಊಟ. ರಾತ್ರಿಗೆ ವಸಂತ್ ನಾಗಿನಿಯರ ಮನೆಯಲ್ಲಿ. ಅವರಲ್ಲಿ ಕಳೆದ ಸಮಯವೆಲ್ಲಾ ಭಾರತವನ್ನು ನೆನಪಿಗೆ ತರುತಿತ್ತು. ನಾನು ಅತ್ಯಾನಂದ ಪುಳಕಿತಳಾಗಿ ಸ್ವಸ್ತಿಯ ರಸಾನ್ನ ವನ್ನು ಉಣ್ಣುತ್ತಿದ್ದೆ.

ನಮ್ಮ ಬಡಭಾರತದೇಶದಂತಹ ಸ್ವರ್ಗ ಮತ್ತೆಲ್ಲಿಯೂ ಕಾಣಸಿಗದು ! —ಎಂದು ಯಾರೋ ನನ್ನ ಕಿವಿಯ ಬಳಿಯಲ್ಲಿಯೇ ಕೂಗಿ ಹೇಳಿದಂತಾಯಿತು. ಒಡನೆಯೇ "ಹೌದು ಈಗದನ್ನು ಬಹಿರಂಗವಾಗಿ ಒಪ್ಪಿಕೊಳ್ಳುತ್ತಿರುವೆ" ಎಂದು ಎದೆಯ ಹಕ್ಕಿ ಪ್ರತಿ ನುಡಿಯಿತು. ನಾನು ಭಾರತ ಸಂಸ್ಕೃತಿಯನ್ನು ಮನ ದಲ್ಲೇ ಮೆಲುಕು ಹಾಕಿದೆ. ಆ ದೇಶ, ಆ ಸಂಸ್ಕೃತಿ, ಆ ವಾಙ್ಮಯ ಆ ವೇದ ಸಾರ ನಿಜಕ್ಕೂ ಹೃದಯಂಗಮ ಎನಿಸಿ ನನ್ನ ಮೈರೋಮಾಂಚನವಾಯಿತು.

ವಸಂತ್—ನಾಗಿನಿಯರು ನಮ್ಮನ್ನು ರೆಸ್ಟೋರೆಂಟಿಗೆ ಕರೆತಂದು ಬಿಟ್ಟಾಗ ಆನಂದ ಪ್ರೀತಿ ವಿಶ್ವಾಸಗಳೊಡನೆ ಗೆಳತಿಯ ಕೈಯನ್ನು ಅದುಮಿ ಹಿಡಿದುಕೊಂಡು ಆತ್ಮೀಯತೆಯಿಂದ ಹೇಳಿದೆ "ನಿಮ್ಮೊಂದಿಗೆ ಮತ್ತು ಇಳಾ ಆನಂದ್‌ರವರಲ್ಲಿ ನಾವು ಪಡೆದುಕೊಂಡ ಸಂತೋಷವನ್ನು ಇಡೀ ಇಂಗ್ಲೆಂಡ್ ನಮಗೆ ಕೊಡಲಾರದು. ನೀವೆಲ್ಲರೂ ಆದಷ್ಟು ಜಾಗ್ರತೆ ಇಂಡಿ

ಯಾಕ್ಕೆ ಬನ್ನಿ" ಮಾತು ಮುಗಿಯುವುದರೊಳಗಾಗಿ ನನ್ನ ಗಂಟಲು ಗದ್ಗದವಾದಾಗ ಅವಳ ಕಣ್ಣುಗಳೂ ತುಂಬಿಬಂದುವು. ಅವಳು ಸುಖದುಃಖಗಳಲ್ಲಿ ಮುಳುಗೆದ್ದು ಮಳೆಬಿಸಿಲಿನ ಎಳೆನಗುವನ್ನು ಸೂಸಿ ಹೊರಟು ಹೋದಳು.

ಸತ್ಯಭಾಮ ನಿದ್ರಾದೇವಿಯ ಮಡಿಲಲ್ಲಿ ಸುಖನಿದ್ದೆ ಮಾಡಿದ್ದಾಳೆ. ಮುಂಗುರುಳು ಕುರುಳುಕುರುಳಾಗಿ ಮುಖವನ್ನು ಆವರಿಸಿತ್ತು. ನಾನು ಕೂದಲನ್ನು ಹಿಂದಕ್ಕೆ ಸರಿಸಿ ಹೊದ್ದಿಕೆಯನ್ನು ಹೊದಿಸಿದೆ. ಭಾಸ್ ಕಿಟಕಿಯನ್ನು ಮುಚ್ಚಿ ಹಿಮಗಾಳಿಗೆ ತಡೆಹಾಕಿದುದನ್ನು ನೋಡಿ ನಾನೆಂದೆ,

"ಒಂದು ಕಿಟಕಿ ತೆರೆದುಬಿಡು. ಸ್ವಲ್ಪವೂ ಗಾಳಿಯಿಲ್ಲದಿದ್ದರೆ ಹೇಗೆ ?"

"ಮೇಗಳ ಎರಡು ಕಿಟಕಿಯೂ ತೆಗೆದಿದೆ ನೋಡು."

ನಾನು ತಲೆಯೆತ್ತಿ ನೋಡಿದೆ. ಮೇಲಿನ ಎರಡು ಕಿಟಕಿಗಳೂ ತೆರೆದಿದ್ದುದು ಕಂಡುಬಂತು.

"ಅದನ್ನು ನೋಡಿರಲಿಲ್ಲ; ಅಷ್ಟು ಗಾಳಿಯಿದ್ದರೆ ಬೇಕಾದಷ್ಟು ಆಯಿತು."

ಭಾಸ್ ವರ್ತಮಾನ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು "ಬೆಳಿಗ್ಗೆ ಮುಖಪುಟವನ್ನಷ್ಟೆ ನೋಡಿದ್ದೆ. ಒಳಪುಟವನ್ನು ನೋಡಲು ಬಿಡುವಾಗಲಿಲ್ಲ. ಇದಿಷ್ಟು ನೋಡಿಬಿಡುವೆ. ಅನಂತರ ಮಲಗೋಣ" ಎನ್ನುತ್ತ ಪುಟಗಳನ್ನು ತೆರೆದ. ನಾನು ಅವನ ಬಳಿಯಲ್ಲೇ ಕುಳಿತುಕೊಂಡು ಅದೇ ಪತ್ರಿಕೆಯ ಮೇಲೆ ಕಣ್ಣಾಡಿಸಿದೆ. ಮನಸ್ಸು ಪ್ರೇಮಾನುರಾಗದಿಂದ ಮಧುಮಾದಕವಾಗಿತ್ತು. ಬಹುಶಃ ಅದೇ ಸಮಯದಲ್ಲಿ ನಿದ್ದೆಯ ಮಂಪರವೂ ಮನವನ್ನು ಆವರಿಸಿತೇನೋ. ಅವನ ಬಲಗೈ ನನ್ನನ್ನು ಬಳಸಿದರೂ ಓದು ಮುಗಿದ ಮೇಲೆಯೇ ಮಲಗಲು ಎದ್ದುದು. ಆಗ ಬಹುಶಃ ಹೊತ್ತು ಮಧ್ಯ ರಾತ್ರಿಯನ್ನು ಮೀರಿತ್ತು.

ರಸ್ತೆಯಲ್ಲಿ ಬಾಬಿಗಳ ವಿಶಿಲ್ ಮೊಳಗಿದುದು ಕಿವಿಗೆ ಬಿತ್ತು.

° ° • °

ನಾವು ಇಂಗ್ಲೆಂಡ್ ಬಿಟ್ಟು ಭಾರತವನ್ನು ಮುಟ್ಟಿದಾಗ ವಾತಾವರಣ ಪರಿಶುಭ್ರವಾಗಿತ್ತು. ಸೌರಕಾಂತಿಯುಕ್ತ ಸಾಯಂಸೊಂಪು ದಿಗ್ದೇಶದಲ್ಲಿ ಅರುಣರಾಗವನ್ನು ಹರಡುತ್ತಿದೆ.

ನಾನು ಮೊದಲು ಅಂಜನಾಗೆ ಟೆಲಿಫೋನಿನ ಮೂಲಕ ಕರೆಕೊಟ್ಟೆ. ಆ ಕಡೆಯಿಂದ ಅವಳು ಆನಂದಭರಿತ ದನಿಯಲ್ಲಿ ಕೇಳಿದಳು "ಹೇಗಿತ್ತು ನಿಮ್ಮ ಪ್ರವಾಸ ?"

"ಎಲ್ಲಾ ಚೆನ್ನಾಗಿತ್ತು. ನೀನು ಬೆಳಗ್ಗೆ ಬರುತ್ತೀಯಷ್ಟೆ ?"

"ಅಚ್ಛಾ !"

"ನಾವು ಹೋದನಂತರ ಏನಾದರೂ ಧನ ಸಂಗ್ರಹವಾಯಿತೇ ?"

"ಐದು ಸಾವಿರದವರೆಗೆ ಆಗಿದೆ."

"ಗುಡ್ !"

ಅಲ್ಲಿಗೆ ಟೆಲಿಫೋನಿನ ಸಂಪರ್ಕವನ್ನು ತುಂಡುಗಡಿದೆ. ನಾವು ಒಳಹೋಗಿ ಮುಖಮಜ್ಜನ ಮಾಡಿ ಹೊರಬಂದಾಗ ಹಿರಿಯ ಉದ್ದಿಮೆದಾರರೊಬ್ಬರು ಬಂದು ನಮಗಾಗಿ ಕಾದಿದ್ದರು. ಭಾಸ್ ಅವರನ್ನು ಒಳಬರಮಾಡಿ ಕುಳ್ಳಿರಿಸಿದ ಮೇಲೆ ಅವರು ಕೇಳಿದರು,

"ನನ್ನ ಗುರುತು ಹತ್ತಲಿಲ್ಲವೇ ?"

ಭಾಸ್ ಸ್ವಲ್ಪಹೊತ್ತು ಯೋಚಿಸಿ "ನಿಮ್ಮನ್ನು ನೋಡಿದ ಜ್ಞಾಪಕವಿದೆ. ಆದರೆ ಯಾರೆಂಬ ಅರಿವು ಇನ್ನೂ ಮೂಡಲಿಲ್ಲ; ದಯವಿಟ್ಟು ಕ್ಷಮಿಸಿ."

"ನಿಮ್ಮ ಭಾವ ಶಾಂತಿಪ್ರಸಾದರೊಂದಿಗೆ ನಿಮ್ಮ ಮನೆಗೆ ಬರುತಿದ್ದುದು ಜ್ಞಾಪಿಸಿಕೊಳ್ಳಿ."

"ಕ್ಷಮಿಸಿ, ಈಗಲೂ...."

"ನಾನು ಮಾಧವ ಮೆನನ್."

"ಓ, ಈಗ ಅರ್ಥವಾಯಿತು. ಆಗ ಖಾದಿಧಾರಿ, ಈಗ ಸೂಟುಧಾರಿ! ಮೈ ಬೇರೆ ಬೆಳೆಸಿದ್ದೀರಿ!"

ಇಬ್ಬರ ಮುಖದಲ್ಲೂ ನಗುವಿನ ಲಹರಿ ಉಕ್ಕಿ ಹರಿಯಿತು.

ಆಗ ಕಾಂಗ್ರೆಸ್ ಕ್ಷೇತ್ರದಲ್ಲಿ ಕೆಲಸ. ಈಗ ನನ್ನದೇ ಆದ ಸ್ವಂತ ಉದ್ದಿಮೆ. ಇವು ನಮ್ಮ ಮಿಲ್ಲಿನ ಬಟ್ಟೆಗಳೇ! ಅಂದಮೇಲೆ ಈಗೇಕೆ ಖಾದಿ ತೊಡಲಿ?"

"ಓ! ಹಾಗೋ....?" ಎಂದ ಭಾಸ್ವಾನ್ ಹಾರ್ದಿಕವಾಗಿ, ಹಳೆಯ ಗೆಳೆತನದ ಸಲಿಗೆಯಿಂದ ಆದರಪೂರ್ವಕವಾಗಿ ಕೇಳಿದ "ನಿಮ್ಮ ಮಿಲ್ ಇರುವು ದೆಲ್ಲಿ?"

"ಬೊಂಬಾಯಿಯಲ್ಲಿ?"

"ಇಲ್ಲಿಗೆ ಎಂದು ಬಂದಿರಿ?"

"ನಾನಿರುವುದು ಇಲ್ಲೇ. ಹೆಡ್ ಆಫೀಸ್ ಇಲ್ಲಿದೆ. ಬಾಂಬೆಯಲ್ಲಿ ನನ್ನ ಮಗ ವಿಶ್ವಾಸ್ ನೋಡಿಕೊಳ್ಳುತ್ತಾನೆ. ನಾನು ಆಗಾಗ ಹೋಗಿ ಬರುತ್ತೇನೆ ಅಷ್ಟೆ."

ಭಾಸ್ ತಲೆದೂಗಿದ.

"ನಾನು ಈಚೆಗೆ ಬೆಂಗಳೂರಿಗೆ ಹೋಗಿದ್ದೆ. ಶಾಂತಿಪ್ರಸಾದರನ್ನು ಕಂಡಾಗ ನೀವು ಇಲ್ಲಿರುವ ವಿಷಯ ತಿಳಿಯಿತು. ನೀವು ಇಲ್ಲಿಗೆ ಬಂದು ಬಹಳ ಕಾಲವಾಯಿತಂತೆ. ಈವರೆಗೆ ನನಗೆ ತಿಳಿದಿರಲಿಲ್ಲ. ನೀವಿಬ್ಬರೂ ಒಮ್ಮೆ ನಮ್ಮ ಮನೆಗೆ ಬರಬೇಕು. ಯಾವಾಗ ಬರುತ್ತೀರಿ ಹೇಳಿ?"

"ಬರೋಣ, ಅದಕ್ಕೇನಂತೆ. ಎಂದಾದರೂ ಒಂದಿನ ಬಂದ ರಾಯ್ತಲ್ಲ."

"ಹಾಗಲ್ಲ; ಊಟಕ್ಕೆ ಬರಬೇಕು."

"ಏಕೆ ಈ ತೊಂದರೆ ತೆಗೆದುಕೊಳ್ಳುತ್ತೀರಿ?"

"ತೊಂದರೆ ಏನಿಲ್ಲ. ಖಂಡಿತ ಬರಬೇಕು. ನಾಳೆ ರಾತ್ರಿ ನಮ್ಮಲ್ಲೇ ಊಟ. ರಾಘವ ಅಂಜನಾರವರಿಗೂ ಹೇಳುವೆ." ಎಲ್ಲರೂ ಒಂದಿನ ಕೂಡಿ ಸಂತೋಷದಿಂದ ಕಾಲ ಕಳೆಯೋಣ."

"ಆಗಬಹುದು ತುಂಬ ವಂದನೆಗಳು."

ಅವರು ನನ್ನ ಕಡೆಗೆ ತಿರುಗಿ "ದಯವಿಟ್ಟು ಮರೆಯಬೇಡಿ."

ನಾನು ಸಮ್ಮತಿಯನ್ನು ಸೂಸಿ ನುಡಿದೆ "ನಿಮ್ಮ ಪರಿಚಯವಾದುದು ಒಳ್ಳೆಯದಾಯ್ತು. ನಮಗೆ ನಿಮ್ಮಿಂದ ಸ್ವಲ್ಪ ಸಹಾಯವೂ ಆಗ ಬೇಕಾಗಿದೆ."

"ನೀನು ಒಳ್ಳೆಯ ಮೀನನ್ನೇ ಬುಟ್ಟಿಗೆ ಹಕಿಕೊಳ್ಳುತಿದ್ದಿ !" ಎಂದ ಭಾಸ್.

ಅವರಿಗೆ ಏನೆಂಬುದು ಅರ್ಥವಾಗದೆ ನಮ್ಮಿಬ್ಬರ ಮುಖವನ್ನೂ ನೋಡಿ ದರು ಪ್ರಶ್ನಾರ್ಥಕವಾಗಿ.

ಅವರ ಮುಂದೆ ಪ್ರಾಸಂಗಿಕವಾಗಿ ನಾವು ಶಾಲೆಯನ್ನು ಕಟ್ಟುವ ಸಲು ವಾಗಿ ಹಣ ಸಂಗ್ರಹಿಸುತ್ತಿರುವುದು, ಈಗ ಸಧ್ಯಕ್ಕೆ ಒಂದು ಜೋಪಡಿಯಲ್ಲಿ ಶಾಲೆಯನ್ನು ನಡೆಸುತ್ತಿರುವುದು ಮತ್ತು ಮಹಿಳಾಮಂಡಳಿಯ ಉತ್ಸುಕತೆ ಎಲ್ಲವನ್ನೂ ವಿವರಿಸಿ "ಈ ಬಡಮಕ್ಕಳ ಸಹಾಯಾರ್ಥ ನಿಮ್ಮಿಂದ ಎಷ್ಟು ಸಾಧ್ಯವೋ ಅಷ್ಟು ಸಹಾಯ ಮಾಡಿ ಬಡಮಕ್ಕಳ ಬದುಕಿಗೆ ಬೆಳಕು ಬೀರ ಬೇಕು" ಎಂದೆ ವಿನಯದಿಂದ.

ಅವರು ತಲೆದೂಗುತ್ತ "ಒಳ್ಳೆಯ ಸೂಚನೆ" ಎಂದರು.

"ಅದೇ ಬಡಾವಣೆಯಲ್ಲಿ ಕಾರ್ಪೊರೇಶನ್ನಿಗೆ ಸೇರಿದ ಒಂದು ಖಾಲಿ ನಿವೇಶನವಿದೆ. ಅದನ್ನು ದೊರಕಿಸಿಕೊಳ್ಳುವ ಯೋಜನೆ ನಮ್ಮದು. ಅದೊಂದು ತಗ್ಗುಪ್ರದೇಶ. ಅದರಲ್ಲಿ ಬಡಮಕ್ಕಳು ಆಟವಾಡಿಕೊಳ್ಳುತ್ತಾರೆ. ಅದರ ಮೂಲೆಯಲ್ಲಿ ಒಂದು ಸಣ್ಣಕೆರೆ. ಅದರಲ್ಲಿ ಬಡವರು ನೀರೆತ್ತುತ್ತಾರೆ. ಈವರೆಗೆ ಉಪಯೋಗ ಬಡವರಿಗೆ. ಪ್ರದೇಶ ತುಂಬಾ ವಿಸ್ತಾರವಾಗಿದೆ. ಅದು

ಸಿಕ್ಕಿದರೆ ಹೈಸ್ಕೂಲ್‌ವರೆಗೂ ಶಾಲೆಯನ್ನು ವಿಸ್ತರಿಸಿಕೊಳ್ಳಬಹುದು. ಆಟಕ್ಕೂ ಮೈದಾನ, ಪಾರ್ಕ್‌ಗಳನ್ನು ಚೆನ್ನಾಗಿ ರೂಪಿಸಿಕೊಳ್ಳಬಹುದು. ನಮ್ಮ ಯೋಜನೆಗೆ ಕಾರ್ಪೊರೇಶನ್ 'ಅಸ್ತು' ಎನ್ನಬೇಕು. ಎಂದು ಬಡ ಮಕ್ಕಳ ಗ್ರೂಪ್ ಫೋಟೋವನ್ನೂ ಅವರು ವಾಸಿಸುವ ಅಲಕ್ಷಿತ ಪ್ರದೇಶದ ಫೋಟೋವನ್ನೂ ತೋರಿದೆ.

"ನಿಮ್ಮದು ಸ್ತುತ್ಯಕಾರ್ಯ. ದೇವರು ನಿಮಗೆ ಸಹಾಯ ಮಾಡಲಿ!"

"ನಿಮ್ಮ ಕಡೆಯಿಂದ ಎಷ್ಟು ಸಾಧ್ಯವೋ ಅಷ್ಟು ಸಹಾಯಮಾಡಿರಿ. ನಿಮ್ಮವರ ಕಡೆಯಿಂದಲೂ ಸಹಾಯಮಾಡಿಸಿರಿ."

"ಆಗಲಿ."

"ನಿಮ್ಮಂತಹವರ ಪರಿಚಯವನ್ನೂ ಮಾಡಿಕೊಡಿ. ಹನಿಗೂಡಿದರೆ ಹಳ್ಳ."

"ನನಗೂ ಧರ್ಮಕಾರ್ಯದಲ್ಲಿ ತುಂಬ ಮನಸ್ಸು. ಅದಕ್ಕೆ ಸರಿಯಾದ ಮಾರ್ಗ ಹುಡುಕಿಕೊಳ್ಳಬೇಕು. ನಾವು ವಿನಿಯೋಗಿಸಿದ ಹಣ ವ್ಯರ್ಥವಾಗ ಬಾರದು."

"ನಿಜ; ಅದೂ ಮುಖ್ಯ. ಹತ್ತು ಮಕ್ಕಳು ಬುದ್ಧಿವಂತರಾದರೆ ಅದು ನಿಜವಾದ ಪ್ರಗತಿಮಾರ್ಗ."

"ಈಗಲೇ ನಾನು ಏನೂ ಹೇಳಲಾರೆ. ಮುಂದೆ ನನ್ನ ಕೈಲಾದಷ್ಟು ಸಹಾಯ ಮಾಡುವೆ."

"ಆಗಲಿ ತುಂಬ ವಂದನೆಗಳು."

"ವಂದನೆಗಳು."

ಬೆಳಗ್ಗೆ ಅಂಜನಾ ಬಂದಾಗ ನಾನು ಅವಳಿಗಾಗಿ ಕೊಂಡು ತಂದಿದ್ದ ಬಹುಮಾನಗಳನ್ನು ತಂದು ಮುಂದಿಟ್ಟೆ. ರಾಗಿಣಿ–ತಾರಿಣಿಯರಿಗೆ ತಂದ ಸೀರೆಗಳನ್ನು ನೋಡಿ "ಈಗಲೇ ಸೀರೆ ?" ಎಂದಳು ನಗುತ್ತ.

"ಇರಲಿ, ಎತ್ತರವಾಗಿ ಬೆಳೆಯುತಿದ್ದಾರೆ. ಮಧ್ಯೆ ಮಧ್ಯೆ ಎಂದಾದರೊಮ್ಮೆ ಉಡಬಹುದಲ್ಲ ?"

ಅನಂತರ ನಮ್ಮ ನಮ್ಮ ಆಂತರಿಕ ವಿಚಾರಧಾರೆ ಎಷ್ಟೋ ಹರಿದು ಹೋದುವು. ನಾನು ಇಂಗ್ಲೆಂಡಿನಲ್ಲಿ ನಮ್ಮವರ ಕೂಡ ಭೇಟಿಯ ವಿಚಾರವಾಗಿ ಹೇಳುತ್ತ "ನಾನು ಹೋಗದೇ ಇಲ್ಲೇ ಇದ್ದಿದ್ದರೆ ಎಷ್ಟೋ ಕೆಲಸವಾಗುತಿತ್ತು. ಒಂದು ವಾರ ವ್ಯರ್ಥವಾಯಿತು. ಆನಂದ್-ವಸಂತ್‌ರವರನ್ನು ನೋಡಿದ್ದೊಂದನ್ನು ಬಿಟ್ಟರೆ ನನಗೆ ಮತ್ತಾವ ಪ್ರಯೋಜನವೂ ಆಗಲಿಲ್ಲ. ಆ ನಾಗರಿಕ ಸಮಾಜದಲ್ಲಿ ಸ್ನೇಹ ಪ್ರೀತಿ ವಿಶ್ವಾಸಗಳು ಲವಲೇಶವೂ ಇಲ್ಲ. ಐರೋಪ್ಯ ಸಂಸ್ಕೃತಿಯನ್ನು ನೆನೆಸಿಕೊಂಡರೆ ನನಗೆ ನಿಜಕ್ಕೂ ತಲೆ ತಗ್ಗಿಸುವಂತಾಗುತ್ತದೆ."

"ನಮ್ಮಲ್ಲಿ ಧನ ಸಂಸ್ಕಾರಕ್ಕೆ ಕೊರತೆಯಿರುವುದರಿಂದ ಅತಿಥಿ ಸತ್ಕಾರಕ್ಕೂ ಧಕ್ಕೆ ತಗುಲುತ್ತದೆ. ಆದರೆ ಆದರಾತಿಥ್ಯಗಳಿಗೆ ಎಂದೆಂದೂ ಕೊರತೆ ಬೀಳುವ ಪ್ರಸಂಗ ಬರಲಾರದು. ಎಷ್ಟೇ ತೊಂದರೆಯಾದರೂ ಎಷ್ಟೇ ಆರ್ಥಿಕ ದುಸ್ಥಿತಿ ಒದಗಿದರೂ ಜನ್ಮಗತವಾದ-ರಕ್ತಗತವಾದ ಗುಣಗಳಿಗೆ ಚ್ಯುತಿ ಬರುವುದಿಲ್ಲ. ಇದನ್ನೂ ಉಳಿಸಿಕೊಳ್ಳಲು ಅಶಕ್ತರಾದರೆ ಇನ್ನೇನನ್ನು ಉಳಿಸಿಕೊಳ್ಳಬಲ್ಲೆವು ?"

"ಕ್ಷಮಿಸು, ನಾನು ಬೆರಗಾದದ್ದು ಅತಿಥಿ ಸತ್ಕಾರಕ್ಕಲ್ಲ. ನಿಮ್ಮ ಸ್ನೇಹ-ಪ್ರೇಮ-ಸೌಜನ್ಯತೆಗಳಿಗಾಗಿ, ಪ್ರೀತಿಯಿದ್ದಲ್ಲಿ ಸತ್ಕಾರ ಇರಲೇ ಬೇಕಲ್ಲವೇ ?"

"ವಾಸ್ತವ್ಯ."

"ಅಶಾಶ್ವತವಾದ ಈ ಶರೀರದಲ್ಲಿ ಎಷ್ಟು ಸ್ವಾರ್ಥ ತುಂಬಿದೆಯೆಂಬುದನ್ನು ಗಮನಿಸಿದರೆ ನಿಜವಾಗಿಯೂ ಆಶ್ಚರ್ಯ-ಅಸಹ್ಯಗಳೆರಡೂ ಏಕ ಕಾಲದಲ್ಲಿ ಮೂಡುತ್ತವೆ."

"ಈ ಜಗತ್ತು ಇಷ್ಟೆ; ನಾವು ಎಷ್ಟೆಷ್ಟು ಸುಭದ್ರವಾದ ಕೋಟೆಯನ್ನು ನಿರ್ಮಿಸಿಕೊಳ್ಳುತ್ತೇವೋ ಅದಕ್ಕೆ ತಳಪಾಯವೇ ಇಲ್ಲವೆಂಬುದನ್ನು ಕಂಡು ಕೊಳ್ಳುವುದರೊಳಗಾಗಿ ಆಯುಸ್ಸು ಮುಗಿಯುತ್ತದೆ. ಸ್ವಾರ್ಥಮೂಲವಾದ ಆಸೆಯಕೋಟೆ ಎಷ್ಟು ಕಾಲ ಉಳಿದೀತು ?"

"ಸಹಜ..."

ನಾನು ಸ್ತಬ್ಧಗತಿಯಲ್ಲಿ ಯೋಚಿಸಿದೆ; ಹೃದಯಮೃದಂಗ ಮಂದ ಗತಿಯಲ್ಲಿ ಮಿಡಿಯಿತು.

 ೦ ೦ ೦ ೦

...ಕಾಲ್ಕಂದ–ಸಿಮ್ಲಾದ ಓಡುವ ನ್ಯಾರೋಗೇಜ್ ರೈಲು.

...ನಿಶ್ಶಬ್ದ ಶಾಂತಿಯನ್ನು ಭೇದಿಸಿ ಹೊಮ್ಮುವ ಶಬ್ದಾಯಮಾನ ವಾದ ಗುಜುಗುಜು ಸದ್ದು. ಕರ್ಕಶಕರವಾದ ದೀರ್ಘ ಶಿಳ್ಳೆ !

ಪಯಣದ ಹಾದಿಯಲ್ಲಿ ಮುಂದುವರಿದೆಂತೆಲ್ಲಾ ಪ್ರಕೃತಿಯಲ್ಲಿ ಕಂಡು ಬರುವ ವೈವಿಧ್ಯಮಯ ದೃಶ್ಯಮಾನ ಸೌಂದರ್ಯ ಜನ್ಮಾಂತರಕ್ಕೂ ಮರೆಯುವಂತಾದ್ದಲ್ಲ. ದೃಷ್ಟಿಯ ಕಕ್ಷೆಯಲ್ಲಿ ಕಣ್ಸೊಳಿಸುವ ಹಿಮಾ ಚ್ಛಾದಿತ ಗಿರಿ ಶಿಖರಗಳು. ನಾನಾ ವರ್ಣರಂಜಿತ ತಳಿರುಗಳಿಂದಲಂಕೃತ ವಾದ ವನದೇಶ. ಗಿರಿಕಂದರಗಳಿಂದ ಹೊಮ್ಮಿ ಮುಂದೆ ಮುಂದೆ ಭೋರ್ಗರೆದು ಹರಿಯುವ ನದಿಗಳ ಶೋಭೆ. ಭೂದೇವಿಯ ವಡ್ಯಾಣದಂತೆ ಕಣ್ಸೊಳಿಸುವ ತೊರೆಗಳ ಅಂದ, ಅವು ತಗ್ಗುಪ್ರದೇಶಗಳಿಗೆ ಇಳಿದಾಗ ನಿರ್ಮಿಸಿರುವ ಮಹಾಪುಷ್ಕರಣಿಗಳು. ದೂರ ಹಿಮಗಿರಿಯ ಕರ್ಬಂಡೆಗಳ ಮೇಲೆ ಧಾರೆಧಾರೆಯಾಗಿ ಬೆಳ್ಳಿಯ ಝುರಿಯಂತೆ ಇಳಿದು ಬರುವ ಚಿಲುಮೆ ಗಳು ನೋಡಿದಷ್ಟೂ ಕಣ್ಮನಗಳನ್ನು ಸೆಳೆಯುತ್ತವೆ. ಮೇಲಾಗಿ, ಪಚ್ಚೆ ಪಾರ್ಥಿಯ ನಿಮ್ನೋನ್ನತ ಪ್ರದೇಶಗಳಲ್ಲಿ ಕಂಡುಬರುವ ಕಮನೀಯ ಕಂಪುಗುವ ಪುಷ್ಪರಾಜಿಯಿಂದ ಕೂಡಿದ ರೋಡೋಡೆಂಟ್ರಾನ್ ಮರಗಳು, ಹಸುರು ಬಣ್ಣದ ನೆಯ್ದಿಲೆಯ (ಆಸ್ಫೊಡೆಲ್) ಹೂವುಗಳಿಂದಲಂಕೃತ

ವಾದ ಹುಲ್ಲುಗಾವಲಿನ ಮನಸೋಹಕ ಚಿತ್ತಾರ. ಗಗನಚುಂಬಿ ದೇವದಾರು ವೃಕ್ಷಗಳ ವೈಭವೋಪೇತವಾದ ದೃಶ್ಯವೊಂದು ಕಡೆ; ಪೈನ್ ಮರಗಳ ಅದ್ಭುತ ಶ್ರೇಣಿ ಮತ್ತೊಂದು ಕಡೆ.

ಓಹ್ !

ನಾನೇನು ಬಣ್ಣಿಸಬಲ್ಲೆ ಆ ಪ್ರವಾಸಿಗಳ ಸ್ವರ್ಗವನ್ನು ? ಹಿಂದೆ ಶಾಲೆಯ ಟ್ರಿಪ್ಪಿನಲ್ಲಿ ಒಮ್ಮೆ ಸ್ವಿಟ್ಜರ್ಲೆಂಡಿಗೆ ಹೋದುದುಂಟು. ಆಗ ತುಂಬ ಚಿಕ್ಕವಳಾದುದರಿಂದ ಅದರ ರಸಾಸ್ವಾದನೆ ಮಾಡಲು ಸಾಧ್ಯ ವಾಗಿರಲಿಲ್ಲವೇನೋ. ಈಗ ನೋಡಿದರೆ ಅದಕ್ಕೆ ಕಡಿಮೆಯದಲ್ಲ ಇದು ಎನಿಸುತ್ತದೆ ನನಗೆ. ನೆಟ್ಟ ಕಣ್ಣುಗಳನ್ನು ಒಮ್ಮೆಯಾದರೂ ಹಿಂತೆಗೆದುಕೊಳ್ಳಲಾಗದಷ್ಟು ಎಲ್ಲಿಂದ ಎಲ್ಲಿಯವರೆಗೂ ಹಬ್ಬಿದ ಪರ್ವತ ಶ್ರೇಣಿಗಳಲ್ಲಿ, ಹಸುರು...ಹಸುರು. ಹಸುರಿನ ರಸಾಬ್ಧಿಯಲ್ಲಿ ಮೈಮನಗಳೂ ಹಸುರುಗಟ್ಟುವಂತಹ ಸನ್ನಿವೇಶ. ನಿಸರ್ಗದೇವತೆಯ ಉಡಿಯಲ್ಲಿ ತಿರುವು ಮುರುವಾಗಿ ಹರಿದ ಹಳಿಯಮೇಲೆ ಹೆಬ್ಬಾವಿನಂತೆ ಬುಸುಗುಡುತ್ತ ಓಡುವ ರೈಲಿಗೆ ಬಾರಿಬಾರಿಗೂ ಸಿಗುವ ಸುರಂಗ ಮಾರ್ಗಗಳು ಮತ್ತು ಆ ಸಂದರ್ಭದಲ್ಲಿ ಮಕ್ಕಳ ಹರ್ಷೋದ್ಗಾರ ಮೈಮನಗಳನ್ನು ಮತ್ತೆ ಮತ್ತೆ ಪುಳಕಿತಗೊಳಿಸುವುದರಿಂದ ಪಯಣ ಬಲು ಹಿತ.

ಮೊದಲು ನಾವು ತೀರ್ಮಾನಿಸಿದ್ದು ಸಿಮ್ಲಾಕ್ಕೆ ವಿಮಾನದಲ್ಲಿ ಪಯಣಿಸುವ ಎಂದು. ಕ್ಲುಪ್ತಕಾಲಕ್ಕೆ ಟಿಕೆಟ್ಟುಗಳು ಸಿಗಲಿಲ್ಲವಾದ್ದರಿಂದ ನಾವು ರೈಲು ಹಿಡಿಯಲು ಕಾರಣ. ಈಗ ನೋಡಿದರೆ ಹಾಗಾದದ್ದು ಎಷ್ಟು ಒಳ್ಳೆಯದು ಎನಿಸುತ್ತೆ. ಪಯಣ ಮುಂದುವರಿದಂತೆಲ್ಲಾ ಕಾಣ ಸಿಗುವ ಊರುಗಳು, ಹಳ್ಳಿಗಳು, ಕಾಡುಮೇಡುಗಳು ಕಣ್ಣಿಗೆ ನಿಜ ವಾಗಿಯೂ ಹಬ್ಬದೂಟ.

ಮಕ್ಕಳಿಗೆ ರಜೆಯಿತ್ತಾದ ಕಾರಣ ಸಿಮ್ಲಾ ಪ್ರವಾಸ ಹೂಡಿದ್ದು. ಅದು ಪೂರ್ವಯೋಜಿತವಲ್ಲವಾದರೂ ಯೋಜಿಸಿದಾಗಲೇ ಕೈಗೂಡಿದ್ದು

ವಿಶೇಷವೇ. ಸಿಮ್ಲಾದಲ್ಲಿ ಹತ್ತು ದಿನಗಳಿದ್ದು ಆ ಪ್ರಾಂತ್ಯವನ್ನೆಲ್ಲಾ ಸುತ್ತಾಡಿ ನಿಸರ್ಗಸೌಂದರ್ಯವನ್ನು ಸವಿದು ರಸಾಸ್ವಾದನೆ ಮಾಡುವ ಉದ್ದೇಶದಿಂದಲೇ ಅಂಜೂ ಸಂಸಾರದೊಡನೆ ನಾವು ಹೊರಟಿದ್ದು. ರಾಗಿಣಿ–ತಾರಿಣಿ–ಸತ್ಯಭಾಮೆಯರಿಗೆ 'ಸಿಮ್ಲಾ ಟ್ರಿಪ್' ಕೈಗೂಡಿದುದು ಆನಂದವೋ ಆನಂದ.

ಅಂಜನಾ ಪ್ರಾಸಂಗಿಕವಾಗಿ ಅಂದಳು "ನಾವು ದೆಹಲಿಗೆ ಬಂದು ಹತ್ತಿರಹತ್ತಿರ ಮೂರು ವರ್ಷಗಳೇ ಆದುವು- ಸಿಮ್ಲಾ ಪ್ರವಾಸ ಬಹಳ ಸಲಿ ಯೋಚಿಸಿಯೂ ಕೈಗೂಡಿರಲಿಲ್ಲ. ಸಮಯ ಕೂಡಿ ಬಂದುದು ಇಷ್ಟು ಸುಲಭವಾಗಿ ಈ ಸಲಿಯೇ. ಬಹುಶಃ ನಾವೂ ನೀವೂ ಒಟ್ಟಾಗಿ ಹೋಗುವ ಯೋಗವಿದ್ದುದರಿಂದಲೋ ಏನೋ, ನಮ್ಮ ಬಯಕೆ ಕೈಗೂಡ ಲಿಲ್ಲ ಈ ಹಿಂದೆ."

"ಇರಬಹುದು. ಯೋಗಾಯೋಗ ಎಂದೂ ದೈವನಿಯತ್ತವಾದುದು" ನಾನೆಂದೆ.

ಇನ್ನೂ ಬೆಳಗಿನ ತಣ್ಣಾರದ ಹೊತ್ತು. ನೀಲಾಕಾಶದ ಅಂಚಿನಲ್ಲಿ ಮಿಂಚಿನ ಹೊನಲಂತೆ ಹರಿದ ಮಂಜಿನ ಮಹಾಸಾಗರದ ಮೇಲೆ ಬಿದ್ದ ಸೂರ್ಯರಶ್ಮಿ ಹೊನ್ನರಾಗವನ್ನು ನೆಯ್ದ ವೈಭವ ದರ್ಶನೀಯವಾಗಿತ್ತು. ದಿಶೆಯಿಂದ ದಿಶೆಗೆ ಭರ್ರನೆ ನುಗ್ಗುವ ಸುಯ್ಗಾಳಿ ಸುಯ್ಯನೆ ಸುಯ್ಯುತ್ತ ಮುಖ ಮೈಗಳನ್ನು ಮುದ್ದಿಸುವಾಗ ಬಲು ಆಹ್ಲಾದಮಯ. ವನದೇಶ ದಲ್ಲಿ ಹೊಮ್ಮುವ ಎಲೆಗಳ ಮರ್ಮರ ಸದ್ದು ವಿವಿಧ ಪಕ್ಷಿಗಳ ಸವಿ ಗೊರಳ ರಾಗಮಾಧುರ್ಯಕ್ಕೆ ಶ್ರುತಿಯೂಡುತ್ತವೆ. ಊರುಕೇರಿಗಳನ್ನು ಹಿಂದೆ ಬಿಟ್ಟು ರೈಲು ವನಾಂತರವನ್ನು ಹೊಕ್ಕಷ್ಟೂ ನಿಃಸಂಜ್ಞ–ನೀರವ–ನಿರಾಳಗತಿಯ ಮಡಿಲಲ್ಲಿ ನಿರ್ಭಯದಿಂದ ರೆಕ್ಕೆ ಬಿಚ್ಚಿ ಹಾರಾಡುವ ಪಕ್ಷಿ ಸಮಾಜವಂತೂ ಬಲೂ ಮೋಹನೀಯ....

"ಯೋಗಾಯೋಗ ಎಂಬುದರಲ್ಲಿ ತಥ್ಯವಿದೆ" ಎಂದರು ರಾಘವ.

"ಒಂದು ವಸ್ತು ಕೈಗೆಟುಕುವುದಿಲ್ಲನೆಂದು ಸುಮ್ಮನಿರುವುದಕ್ಕೂ ಅದ ಕ್ಕಾಗಿ ಪ್ರಯತ್ನಿಸುವುದಕ್ಕೂ ಬಹಳ ವ್ಯತ್ಯಾಸವಿದೆ. ನಮ್ಮ ಪ್ರಯತ್ನವನ್ನೂ ಮೀರಿ ಕೈಮಿಂಚಿ ಹೋಗುವುದನ್ನೇ 'ಯೋಗ' ಎನ್ನುತ್ತಾರೆ" ಎಂದಳು ಅಂಜನಾ.

ಭಾಸ್ ಭಾವನಾತ್ಮಕವಾಗಿ ನುಡಿದ "ಯಾವುದನ್ನು ನೀನು ಯೋಗ ಎಂದೆಯೋ ಅದೇ ಸಮಯೋಚಿತ ಪರಿಜ್ಞಾನ ಮೂಡಿಸದಿರುವುದಕ್ಕೂ ಕಾರಣ."

ಸತ್ಯಭಾಮಾ–ರಾಗಿಣಿ–ತಾರಿಣಿಯರು ತಮ್ಮದೇ ಆದ ಲೋಕದಲ್ಲಿ ಸಂಪೂರ್ಣ ಮುಳುಗಿಹೋಗಿದ್ದರು. ಅವರಿಗೆ ತಮ್ಮ ಮಾತುಕತೆಯ ಮೇಲಾ ಗಲೀ ಅಥವಾ ನಮ್ಮ ಅಭಿರುಚಿಯ ಮೇಲಾಗಲೀ ಸ್ವಲ್ಪವೂ ಗಮನವಿರಲಿಲ್ಲ. ಬಾಲಿಶವಾದ ಅಭಿಲಾಷೆಯಲ್ಲಿ ಮೈಮರೆತಿದ್ದು ಕೆಲವೊಮ್ಮೆ 'ಹಾ ! ಎಷ್ಟು ಚೆನ್ನ ! ಆ ಬೆಟ್ಟ ನೋಡು ! ಎಷ್ಟು ಹಿಮಾಚ್ಛಾದಿತವಾಗಿದೆ ; ನಾವು ಅಲ್ಲಿಗೆ ಹೋಗುವಂತಿದ್ದರೆ ನಿಜವಾಗಿಯೂ ಎಷ್ಟು ಮೋದಪ್ರದವಾಗಿರು ತಿತ್ತೋ....?" ಎಂದು ಉದ್ಗರಿಸುತ್ತಿದ್ದರು. ಅದೆಲ್ಲಾ ಸ್ವಲ್ಪ ಹೊತ್ತು ಮಾತ್ರ. ಅನಂತರ ತಮ್ಮದೇ ಆದ ಪ್ರಪಂಚ. ಹಾಸ್ಯ–ಕೀಟಲೆ–ಚಕ್ಕಂದ– ಮಾತುಕತೆ–ಕಿಲಕಿಲ ನಗು. ಇವುಗಳಲ್ಲೇ ಸಮಯ ಉರುಳಿಹೋಗುತ್ತದೆ. ನಗು....ನಗು...ನಗು ಮಾತಿನ ಮಧ್ಯೆ ಕಿಲಕಿಲ ನಗುವೇ ಪ್ರಧಾನ.

ಅಂಜು ತಿಂಡಿ ತಿನಸುಗಳ ಬುಟ್ಟಿಯನ್ನು ತೆರೆದು ಎಲ್ಲರಿಗೂ ನೀಡಿ ಕುಡಿ ಯಲು ತಣ್ಣನೆಯ ಪಾನೀಯವನ್ನು ಕೊಟ್ಟಳು. ಪಯಣ ಸಾಗು ತ್ತಿದ್ದಂತೆಯೇ ಹಸಿವು ನೀರಡಿಕೆಗಳೂ ಅಡಗಿದ್ದುವು. ನಾನು ಹಿಂದೆ ಭಾರತ ಪ್ರವಾಸ ಮಾಡಿದುದನ್ನು ನೆನಪಿಸಿಕೊಳ್ಳುತ್ತ ಹೇಳಿದೆ,

"ನಾವು ಟಾಜ್‌ಮಹಲನ್ನು ನೋಡಿದಾಗ ನಮ್ಮವರೆಲ್ಲರೂ ಆನಂದಾ ಶ್ಚರ್ಯಗಳಿಂದ ಒಮ್ಮೆಗೇ ಮೂಕಮೌನ ತಾಳಿದರು ! ಎಂತಹ ಅಮೋಘ ವಾದ ಸೌಂದರ್ಯ ಅದರಲ್ಲಿ ?"

ಆಗ ರಾಘವ ಉತ್ತರಿಸಿದರು "ಆಗಿನ ಕಾಲದಲ್ಲಿ ಯಂತ್ರಜ್ಞಾನವಿರಲಿಲ್ಲ. ಎಲ್ಲವೂ ಕರಕುಶಲವೇ. ಅಲ್ಲದೆ ಅಷ್ಟು ಬಗೆಯ ಅತ್ಯುನ್ನತ ಶಿಲೆಗಳನ್ನು ಕಲೆ

ಹಾಗಿರಬೇಕಾದರೆ ಎಲ್ಲಿಲ್ಲಿಂದ ತಂದಿರಬಹುದು ? ಹೇಗೆ ತಂದಿರಬಹುದು ? ಕರಕುಶಲ ಕೆಲಸಗಾರರು ಆ ಅಮೃತಲೋಕವನ್ನು ಹೇಗೆ ನಿರ್ಮಿಸಿರಬಹುದು? ಅದರ ವಿನ್ಯಾಸಕಾರ ಯಾವ ಬಟ್ಟೆಯ ಮೇಲೆ ಅದರ ಚಿತ್ತಾರವನ್ನು ಚಿತ್ರಿಸಿರಬಹುದು ? ಆ ಮಹಾವಿದ್ಯೆಗೆ ಮೂಲಭೂತ ಪ್ರಜ್ಞೆಯನ್ನು ಯಾವ ರೀತಿಯಲ್ಲಿ ಸಂಪಾದಿಸಿರಬಹುದು ? —ಎಂಬೆಲ್ಲಾ ಪ್ರಶ್ನೆಗಳು ಏಳುತ್ತಿರುತ್ತವೆ. ಈಗಲೂ ಅವುಗಳಿಗೆ ಉತ್ತರಸಿಗುವುದು ಕಷ್ಟವೇ."

"ಖಂಡಿತ" ಭಾಸ್ಕರ್‌ ಅನು ಮೋದಿಸುತ್ತ ನುಡಿದ "ಅದಕ್ಕೆ ತಕ್ಕ ಅಸ್ತಿ ಭಾರವನ್ನು ಹಾಕಲು ಮತ್ತು ಮಂದಿರದ ನಿರ್ಮಾಣಕ್ಕೆ ಸಿಮೆಂಟಿಗೆ ಬದಲಾಗಿ ಏನೇನು ಉಪಯೋಗಿಸಿದರು ಎಂಬುದಕ್ಕೂ ಯಾವ ಮಾಹಿತಿಯೂ ಇಲ್ಲ. ಸಹಸ್ರಾರು ವರ್ಷಗಳಿಂದ ಅದು ಬಣ್ಣಗೆಡದೆ ಶಿಥಿಲವಾಗದೆ ಇದ್ದಂತೆಯೇ ಇರುವುದು ಅಂದಿನವರ ಬುದ್ಧಿವಂತಿಕೆಗೆ ಸಾಕ್ಷಿ ! ಅಂತೂ ಬಲು ಅದ್ಭುತ !"

"ನಾವೆಲ್ಲರೂ ಕೂಡಿ ಒಮ್ಮೆ ಆಗ್ರಾಕ್ಕೆ ಹೋಗಿ ಬರೋಣ. ಮುಂದಿನ ಹುಣ್ಣಿಮೆಗೆ ಇನ್ನೊಂದು ಟ್ರಿಪ್ ! ಎಂದು ನನ್ನ ಆಶಯವನ್ನು ಹೊರ ಹಾಕಿದೆ. ಭಾಸ್ ಆನಂದ ತುಂದಿಲನಾಗಿ ಒಮ್ಮೆಗೇ ತನ್ನ ಹರ್ಷವನ್ನು ಸೂಸಿ ಅಂದ "ನೋಡಿದೆಯಾ, ಹೇಗಿದೆ ಭಾರತದ ವೈಶಿಷ್ಟ್ಯ ?"

ಅವನ ಆನಂದೋತ್ಸಾಹಗಳು ಗರಿಗೆದರಿದ್ದುವು.

ನಾವು ಪಯಣ ಮುಗಿಸಿ ಸಿಮ್ಲಾ ತಲುಪಿದಾಗ ಸೂರ್ಯ ಅಸ್ತಮಾನೋತ್ಸವವನ್ನು ಆಚರಿಸುವುದರಲ್ಲಿದ್ದ. ಸುಂದರ ಗಿರಿ ಬೆಟ್ಟಗಳ ತಾಣದಲ್ಲಿ ಬೀಡುಬಿಟ್ಟ ನಗರ. ಶರದೃತುವಿನ ವೈಭವ ಚೆಲ್ಲಿ ಸೂಸುವ ಆ ಸ್ವರ್ಗೋಪಮವಾದ ಸಿಮ್ಲಾ ನಗರಿಯನ್ನು ಹೊಕ್ಕಾಗ ಎಂತಹ ಆನಂದವೋ....! ಓಹ್ ! ಅದೊಂದು ಭೂಮಿಯ ಕಿನ್ನರ ಲೋಕ ! ನೋಡಿದಷ್ಟೂ ಕಣ್ಮನಗಳು ತಣಿಸುವು. ಆಸ್ವಾದಿಸಿದಷ್ಟೂ ಮನಃಪ್ರಾಣಗಳು ದಣಿಯವು. ಮೂಕ ಮೌನ ಶಾಂತಿಯಲ್ಲಿ ಪುಳಕಿತವಾದ ಮೈರೋಮಾಂಚನವಾಗುತ್ತದೆ....!

ಸರ್ಕಿಟ್ ಹೌಸ್‌ನಲ್ಲಿ ಎಲ್ಲರೂ ಬೀಡುಬಿಟ್ಟು ಅಲ್ಲಿಯ ದರ್ಶನೀಯ ವಾದ ಸ್ಥಳಗಳಿಗೆಲ್ಲಾ ಹೋಗಿ ಬರಲು ಒಂದು ಟ್ಯಾಕ್ಸಿಯನ್ನು ಗೊತ್ತು ಮಾಡಿದರು. ಮರುದಿನವೇ ಚೈನೀ ಬಂಗಲೆಯ ಪ್ರದೇಶಕ್ಕೆ ಹೋಗಿ 'ಸ್ಕೀಯಿಂಗ್' ಮತ್ತು 'ಸ್ಕೇಟಿಂಗ್' ಆಟಗಳನ್ನು ಮನದಣಿಯೇ ನೋಡಿದಾಗ ಮಕ್ಕಳಿಗಾದ ಆನಂದಕ್ಕೆ ಎಣೆಯೇ ಇರಲಿಲ್ಲ. ಆ ತರುವಾಯ ಒಂದೊಂದಾಗಿ ಜೈಲ್, ನಾಲ್ಡೇರ, ವೈಲ್ಡ್‌ಫ್ಲವರ್, ಹಾಲ್, ಫಾಗು, ನಾರ್ಕ್ಯಾಂದ, ಕುಫ್ರಿ, ಕಾಟ್‌ಗ್ರಾ ಮುಂತಾದ ಪ್ರೇಕ್ಷಣೀಯ ಸ್ಥಳಗಳಿಗೆ ಸಂಭ್ರಮಯುಕ್ತ ಭೇಟಿ ನೀಡುವಾಗಲೂ ಮಕ್ಕಳೇ ಮುಂದು. ಅವರ ಕೂಟದಲ್ಲಿದ್ದ ನಮಗೂ ಬಾಲ್ಯಾವಸ್ಥೆಗಿಳಿದಷ್ಟು ಉತ್ಸಾಹ. ಅನಂತರ ಸಿಮ್ಲಾದಲ್ಲಿರುವ ಗಾಥಿಕ್ ಶೈಲಿಯ ದೊಡ್ಡ ಚರ್ಚ್ ನೋಡುವುದರಲ್ಲಿ ಮಕ್ಕಳೂ ಮತ್ತು ಅಂಜನಾ ಉತ್ಸಾಹ ತೋರಿದುದರಿಂದ ಅಲ್ಲಿಗೂ ಭೇಟಿ ನೀಡಲು ಅವಕಾಶ ಸಿಕ್ಕಿತು. ಬಹುಶಃ ಭಾಸ್ವಾನ್ ಇದೇ ಮೊದಲ ಬಾರಿಗೆ ಚರ್ಚಿಗೆ ಪ್ರವೇಶಿಸಿದ್ದು. ನನಗೆ ಒಳಗೊಳಗೇ ನಗು. ಆದರೂ ಬಾಯಿ ಬಿಟ್ಟು ಏನೂ ಹೇಳಲಿಲ್ಲ. ಸಿಮ್ಲಾದ ಮಣಿಮುಕುಟವಾದ ಜಾಕು ಪರ್ವತವನ್ನೇರಲು ಎಲ್ಲರೂ ಉತ್ಸುಕರಾದರು. ಮುಂಜಾನೆಯೇ ನಾವು ಪರ್ವತವನ್ನೇರಿದುದರಿಂದ ಆದ ದಿವ್ಯದರ್ಶನ ವರ್ಣನಾತೀತ. ಸೂರ್ಯೋದಯವಾದಾಗ ಅರುಣ ಕಿರಣಗಳು ಮಂಜಿನ ಹಸೆಯ ಮೇಲೆ ಮಿರಮಿರನೆ ಮಿರುಗುವ ಮನಮೋಹಕ ದೃಶ್ಯವನ್ನು ನೋಡಿ ಆನಂದ ಸ್ತಬ್ಧವಾಯಿತು. ನನ್ನ ಜೀವ, ನಾಳನಾಳಗಳಲ್ಲಿ ನೆತ್ತರು ಹೆಪ್ಪುಗಟ್ಟಿ ನ್ಯೈಮರವಟ್ಟಂತೆ !

ನಾರ್ಕ್ಯಾಂದ ಹೃನ್ಮನಗಳನ್ನು ಅರಳಿಸುವ ಒಂದು ಸುಂದರ ಸುರಮ್ಯ ಹಿಮಾಚ್ಛಾದಿತವಾದ ಖಂಡವೇ ಎನ್ನಬಹುದು. ಅಲ್ಲಲ್ಲಿ ಹಿಮರಾಶಿಯ ಮೇಲೆ ಹಾವು ಹರಿದಂತೆ ಕಾಲುಹಾದಿಗಳ ಅಂಕುಡೊಂಕಿನ ಚಿತ್ತಾರ. ಹಾಟುಪೀಕ್, ಫಾಗು, ಕಾಟ್‌ಗ್ರಾ ಗಿರಿಕಣಿವೆಗಳ ನೋಟ ಅತ್ಯಂತ ಸುಂದರವಾದುದು ರಸದೃಷ್ಟಿಯುಳ್ಳವರಿಗೆ. ಬೆಟ್ಟಗಳ ಮೈ ತುಂಬೆಲ್ಲಾ ಸೇಬು ಹಾಗೂ ಏಪ್ರಿಕಾಟ್ ತೋಟಗಳ ಮಹಾ ವಿಸ್ತಾರ. ಸಿಮ್ಲಾದಲ್ಲಿ ಅತ್ಯಂತ ಹಿರಿಯ ಕಟ್ಟಡವಾದ 'ಕೆನಡಿ ಹೌಸ್'ಗೆ ಭೇಟಿ ನೀಡಿ ಅದರ ಒಳ ಹೊರಗೆ

ಸುತ್ತಾಡಿ ಅದರ ವಿನ್ಯಾಸವನ್ನು ಆದ್ಯಂತ ನೋಡಿದ ನಂತರ ನಾವು ಅಲ್ಲಿಂದ ಸ್ವಲ್ಪ ದೂರ ಮುಂದುವರಿದು ನೋಡಿದರೆ ಘೋರ ಗೊಂಡಾರಣ್ಯ ಗರ್ಭದಲ್ಲಿ ಅರವತ್ತೇಳು ಮೀಟರ್ ಎತ್ತರದಿಂದ ಭೋರ್ಗರೆಯುತ್ತ ಧುಮ್ಮಿಕ್ಕುವ 'ಚಾಡ್ವಿಕ್ ಫಾಲ್ಸ್'ನ ರೌದ್ರ ರಮಣೀಯವೂ ಅತ್ಯಂತ ಶಬ್ದಾಯಮಾನವೂ ಆದ ಅನನ್ಯ ದೃಶ್ಯವನ್ನು ನೋಡುವಷ್ಟು ನೋಡಿ ಆನಂದದ ಹಾಲೋಗರವುಂಡಮೇಲೆ, ಅಲ್ಲಿಂದ ತಾರಾ ದೇವಾಲಯಕ್ಕೆ ಒಂದು ಸಣ್ಣ ಟ್ರಕ್ಕಿಂಗ್. ಅಲ್ಲಿ ನಾವು ಮನಃಪೂರ್ವಕವಾದ ಪೂಜೆ ಸಲ್ಲಿಸಿದ ನಂತರ 'ಟಿಟ್ಟಪಾನಿ'ಯಲ್ಲಿನ ಗಂಧಕಯುಕ್ತ ಬಿಸಿ ನೀರಿನ ಬುಗ್ಗೆಗಳಿಗೆ ಭೇಟಿ. ಹೀಗೆ ಅಲ್ಲಿದ್ದಷ್ಟು ಕಾಲವೂ ಅನುಕ್ರಮವಾಗಿ ನಾನಾ ಕಾರ್ಯಕ್ರಮಗಳಿಗೆ ಮೀಸಲಾಗಿ ಸ್ವಲ್ಪವೂ ವಿಶ್ರಾಂತಿ ದೊರೆಯದೇ ಹೋದರೂ ನಮಗೆ ಆಯಾಸ ಇನಿತೂ ಮೂಡಲಿಲ್ಲ.

ಆದರೆ, ಅಲ್ಲಿ ಒಂದೇ ಒಂದು ಅತೃಪ್ತಿಯೆಂದರೆ ಬಡತನ....! ಸಿಮ್ಲಾದ ಪ್ರಕೃತಿ ಸೌಂದರ್ಯವನ್ನು ಸವಿದಾಗ ನಮಗೆ ಎಷ್ಟು ಆನಂದವಾಗುವುದೋ ಅಷ್ಟೇ ದುಃಖವಾಗುತ್ತದೆ ಅಲ್ಲಿಯ ಬಡ ಜನರನ್ನು ಕಣ್ಣಿಂದ ನೋಡಿದಾಗ, ಇಂಥ ಅಮೋಘವಾದ ಪ್ರಕೃತಿಯ ಉಡಿಯಲ್ಲಿ ಅದೆಂತಹ ಬಡತನ ? ಕರುಳಿರಿಯುವ ಸಂಕಟಕರವಾದ ಪ್ರಸಂಗ ಕಲ್ಲೆದೆಯವರನ್ನೂ ಕರಗಿಸುತ್ತದೆ. ಹಳ್ಳಿ ಹಳ್ಳಿಗಳಿಂದ ಪಟ್ಟಣ ನಗರಗಳಿಗೆ ಹಳ್ಳಿಗರು ತಾವು ಬೆಳೆದ ಅಥವಾ ಸಂಪಾದಿಸಿದ ಸಮಸ್ತ ವಸ್ತುವನ್ನೂ ತಲೆಯ ಮೇಲೆ ಹೊತ್ತು ನಡೆಯಲಾರದೆ ನಡೆಯುತ್ತ ಬೆವರಿಳಿಸುವುದನ್ನು ನೋಡಿದರೆ ನಿಜವಾಗಿಯೂ ಕಣ್ಣುಗಳು ಹನಿಯುತ್ತವೆ. ಅವರಿಗೆ ಸಾರಿಗೆ ಸೌಕರ್ಯವಾಗಲೀ ಆಸ್ಪತ್ರೆ ಶಾಲೆಗಳಾಗಲೀ ಆಯಾಯಾ ಕ್ಷೇತ್ರಗಳಲ್ಲಿ ಸುಲಭವಾಗಿ ಕೈಗೆಟುಕಬೇಕಾದರೆ ಇನ್ನೆಷ್ಟು ಕಾಲ ಬೇಕೋ ದೇವರಿಗೇ ಗೊತ್ತು. ಅವರು ಧರ್ಮಭೀರುಗಳು ಶುಚಿವಂತರು, ಸಂಗೀತ ನೃತ್ಯ ಪ್ರಿಯರು. ವಿಳಂಬಗತಿಯ 'ಪಹರಿರಾಗ' ಹಾಗೂ ತೀವ್ರತೆಗೆ ಹೆಸರಾದ ಭಾರತೀಯ ಶಾಸ್ತ್ರೀಯ ಸಂಗೀತ 'ಜಾನ್ ಜೋತಿ' ಎಂದರೆ ಇವರಿಗೆ ನಿಜಕ್ಕೂ ಪಂಚಪ್ರಾಣ. ಮೇಲಾಗಿ ಸೋಲೋ ನೃತ್ಯದಲ್ಲಿ ಪರಿಣಿತರು.

ಇಷ್ಟೆಲ್ಲಾ ಇದ್ದೂ ಇವರ ದುಸ್ಥಿತಿಯನ್ನು ಅವಲೋಕಿಸಿದ ನಾನು ನನ್ನೊಳಗೇ ನೊಂದುಕೊಳ್ಳುತ್ತ ಅಂಜೂಗೆಂದೆ "ಇಲ್ಲಿಯ ನೈಸರ್ಗಿಕ ಸಂಪತ್ತು ಅಗಾಧವಾಗಿದ್ದರೂ ಹಳ್ಳಿಗಾಡಿನ ಜನ ಬಡತನದ ಬವಣೆಯಿಂದ ನರಳುತ್ತಿರು ವುದನ್ನು ನೋಡಿದರೆ ನಿಜವಾಗಿಯೂ ಸಂಕಟವಾಗುತ್ತದೆ. ಇದರ ಅರ್ಥ ವೇನು ?"

"ಪರದೇಶಗಳಲ್ಲಿ ಆಧುನಿಕ ವ್ಯವಸಾಯದಲ್ಲಿ ಮುಂದುವರಿದಿದ್ದಾರೆ ಜನ. ಇವರು ಆ ಮಟ್ಟಕ್ಕೆ ಏರಬೇಕಾದರೆ ಬಹಳ ಕಾಲ ಬೇಕು. ಉತ್ಪನ್ನ ಕಡಿಮೆ. ಖರ್ಚು ಜಾಸ್ತಿ. ವ್ಯವಸಾಯ ಇಲಾಖೆಯವರು ಈ ದಿಶೆಯಲ್ಲಿ ಜನರಿಗೆ ತಿಳಿವಳಿಕೆ ನೀಡಲು ಮುಂದೆ ಬಂದಿದ್ದಾರೆ. ಆದರೆ ಈ ವಿದ್ಯಾಹೀನ ಜನಮನಕ್ಕೆ ಅದು ಮುಟ್ಟಬೇಕಾದರೆ ಇನ್ನೆಷ್ಟು ಕಾಲ ಬೇಕೋ"

ಆಗ ರಾಘವ ಅಂದರು "ದೇಶಕ್ಕೆ ದೇಶವೇ ಬಡದೇಶ. ಅಂದಮೇಲೆ ಅಲ್ಪಕಾಲದಲ್ಲಿ ಎಲ್ಲವೂ ಸಾಧಿತವಾಗುವುದು ಕಷ್ಟವೇ."

ಅಂಜನಾ ನನ್ನ ಸಹಾಯಕ್ಕೆ ಬಂದಳು "ಸಾರಿಗೆ ಸೌಕರ್ಯ ಎಂದರೆ ಸರಕಾರ ಹಳ್ಳಿಹಳ್ಳಿಗೂ ರಸ್ತೆ ಸೇತುವೆಗಳನ್ನು ನಿರ್ಮಿಸಿ ಪಟ್ಟಣಗಳಿಗೆ ಸಂಪರ್ಕ ವನ್ನು ಕಲ್ಪಿಸಬೇಕು. ಆದರೆ ಆ ಕಡಿದಾದ ಕಣಿವೆಗಳಲ್ಲಿ ಸಾರಿಗೆ ಸೌಕರ್ಯ ಅಷ್ಟು ಸುಲಭದ ಮಾತಲ್ಲ" ಒಂದು ಗಳಿಗೆ ತಡೆದು ಅವಳೇ ಮುಂದುವರಿ ದಳು "ಪರಿಸ್ಥಿತಿ ಹೀಗಿರುವುದರಿಂದ ಬಡಜನರಿಗೆ ತಮ್ಮ ಸಾಮಗ್ರಿಗಳನ್ನು ತಲೆಯಮೇಲೆ ಹೊತ್ತುಕೊಂಡೊಯ್ಯದೆ ವಿಧಿಯಿಲ್ಲ."

ನನ್ನ ಎದೆಯಾಳದಿಂದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು. "ಒಂದು ಕಾಲದಲ್ಲಿ ಸಿಮ್ಲಾ ಬ್ರಿಟಿಷರಬೇಸಿಗೆ ರಾಜಧಾನಿ. ಅವರು ಮಾಡಿಕೊಂಡದ್ದು ರಾಜಮಾರ್ಗ ಮಾತ್ರ!" ಎಂದು ಅಂತರ್ವಾಣಿ ಕೂಗಿ ಹೇಳಿತು. ನಾನು ನಿರಾಸೆಯ ನಿಟ್ಟುಸಿರನ್ನು ಬಿಟ್ಟೆ.

• • • •

ಮಹಿಳಾ ಮಂಡಳಿಯ ಸೆಕ್ರೆಟರಿ ನೀಲಾರಾಂ ಹೈಹೀಲ್ಡ್ ಶೂ ಟಕಟಕ ಸದ್ದು ಮಾಡುತ್ತ ಒಳಬಂದಾಗ ಅಂಜೂ ಹಾಸ್ಯ ಪ್ರಧಾನವಾದ ನುಡಿಯಲ್ಲಿ ನುಡಿದಳು "ಪರವಾಯಿಲ್ಲ; ನಾವು ವಿದೇಶೀಯರ ಸಂಪರ್ಕದಿಂದ ಬಹಳಷ್ಟು ಕಲಿತುಕೊಂಡೆವು !"

ಅವಳು ಸ್ವಲ್ಪ ಆಶ್ಚರ್ಯದಿಂದ ಹುಬ್ಬೆತ್ತಿ ನೋಡುತ್ತ "ಏನದು ? ಏತಕ್ಕಾಗಿ ಈ ಕಾಮೆಂಟ್ಸ್?" ಎಂದಳು ನಿಂತಲ್ಲೇ ನಿಂತು. ಅರಳುಗಣ್ಣ ನೋಟ ನಮ್ಮಿಬ್ಬರನ್ನೂ ನೋಡಿತು.

ಆಗ ಅಂಜೂ ನಗುತ್ತ "ಅಹಹ ! ನಿನಗೆ ಎಲ್ಲಾ ಅರ್ಥವಾಗಿದೆ ಅದರಲ್ಲಿ ಸಂಶಯವಿಲ್ಲ !" ಎಂದಳು ತಿಳಿಹಾಸ್ಯವಾಣಿಯಲ್ಲಿ.

"ನಿಜವಾಗಿಯೂ...ನನಗೆ ಏನೆಂದು ಅರ್ಥವಾಗಲಿಲ್ಲ."

"ಅಲ್ಲಮ್ಮಾ ಬಡಮಕ್ಕಳ ಸೇವೆಗಾಗಿ ಶ್ರಮಿಸುತ್ತಿರುವ ನಾವೆಲ್ಲರೂ ಆ ಬಡತನಕ್ಕೆ ಹೊಂದಿಕೊಳ್ಳುವಂತಿದ್ದರೆ ಬಡಜನರ ಮನಸ್ಸಿಗೆ ತೀರ ಹತ್ತಿರದವರಾಗುತ್ತೇವೆ. ಇಲ್ಲವಾದರೆ ನಮ್ಮ ಶ್ರಮವೆಲ್ಲವೂ ವ್ಯರ್ಥವಾದೀತು. ಅವರ ಮುಂದೆ ತೀರ 'ಸಿಂಪಲ್' ಆಗಿರುವುದನ್ನು ಕಲಿಯಬೇಕು.

"ಹಾಗಾದರೆ..."

ಮುಂದೆ ಮಾತು ಹೊರಡದೆ ಸುಮ್ಮನಾದಳು ನೀಲ. ಮುಖಬಿಂಬ ಗಂಭೀರವಾಯಿತು. ನಾನು ಅವಳಿಗೆ ನೆರವಾದೆ. "ನಿನ್ನ ಹೈಹೀಲ್ಡ್ ಶೂ ಮತ್ತು ಟಾಕುಟೀಕಿನ ಠೀವಿ ಬಡತನಕ್ಕೆ ಹೇಳಿಸಿದ್ದಲ್ಲ. ನಾವು ಬಡವರಿಗಾಗಿ ಕೆಲಸ ಮಾಡುವಾಗ ಸಿಂಪಲ್ ಆಗಿರೋಣ. ಕೆಲಸ ಮುಗಿದನಂತರ ಆಡಂಬರ ಗೀಡಂಬರ ಏನಾದರೂ ಸರಿಯೆ. ಆ ಬಡಮಂದಿಯ ಮುಂದೆ ಮಾತ್ರ ಆಡಂಬರ ಬೇಡವೇ ಬೇಡ; ಎಂಬುದು ನಮ್ಮ ಅಭಿಲಾಷೆ."

ಆ ಮಾತಿಗೆ ಒಪ್ಪಿಕೊಂಡಳು ನೀಲಾರಾಂ. ಹೆಜ್ಜೆ ಹಿಂತೆಗೆಯುತ್ತ "ನನಗೆ ಐದು ನಿಮಿಷ ಅವಕಾಶ ಕೊಡಿ," ಎಂದು ಹೊರಟೇಬಿಟ್ಟಳು.

"ಏನೂ ಬೇಸರಪಟ್ಟುಕೊಳ್ಳಬೇಡ."

"ಇಲ್ಲ ಅಂಜೂ, ಈಗಲೇ ಬಂದುಬಿಡುವೆ."

ಅವಳ ಕ್ವಾರ್ಟರ್ಸ್ ಇಲ್ಲಿಂದ ನಾಲ್ಕನೆಯದು. ಅವಳು ಹೇಳಿದ್ದಂತೆಯೇ ಐದು ನಿಮಿಷಗಳೊಳಗಾಗಿ ಹಿಂದಿರುಗಿದಳು, ಸರಳ ರೀತಿಯ ಉಡುಪನ್ನು ಅಚ್ಚುಕಟ್ಟಾಗಿ ಉಟ್ಟು, ಬಂದ ಅವಳ ಕ್ಷಿಪ್ರ ಪರಿವರ್ತನೆ ನಿಜವಾಗಿಯೂ ನನ್ನ ಅಂತರಂಗವನ್ನು ಉಕ್ಕೇರಿಸಿತು, ನಾನು ವಿಸ್ಮಯ ವಿಮೂಕಳಾದೆ.

ಇನ್ನಷ್ಟು ಹೊತ್ತಿನೊಳಗಾಗಿ ಮಹಿಳಾ ಮಂಡಳಿ ಇಲ್ಲಿಯೇ ನೆರೆಯಿತು. ಸಮಯಕ್ಕೆ ಸರಿಯಾಗಿ ವ್ಯಾನ್ ತಂದು ಮುಂಬಾಗಿಲಲ್ಲಿ ನಿಲ್ಲಿಸಿ ಸಣ್ಣಗೆ ಹಾರನ್ ಮಾಡಿದ ಡ್ರೈವರ್. ನಾವೆಲ್ಲರೂ ಹತ್ತಿದ ಮೇಲೆ ಹತ್ತಿಪ್ಪತ್ತು ನಿಮಿಷಗಳ ಪಯಣ ಮುಗಿಸಿ ಕಾರ್ಪೊರೇಷನ್ ಆಫೀಸಿನ ಮುಂದೆ ನಿಂತಿತು ವ್ಯಾನ್. ನಾವು ಒಳಗಡೆ ಹೋಗಿ ಅಧ್ಯಕ್ಷರನ್ನು ಕಂಡಾಗ ನಾನೇ ಅರ್ಜಿಯೊಡನೆ ನಮ್ಮ ಬೇಡಿಕೆಯನ್ನು ಒತ್ತಾಯಪೂರ್ವಕವಾಗಿ ಮುಂದಿಟ್ಟೆ.

"ಇದುವರೆವಿಗೂ ಈ ಭೂಮಿ ಹಾಳುಬಿದ್ದಿದ್ದು ಬಡ ಮಕ್ಕಳಿಗೆ ಆಟದ ಬಯಲಾಗಿದೆ. ಅದರ ತುಂಬೆಲ್ಲಾ ಕಸದ ರಾಶಿಯೇ ಇದೆ. ಒಂದು ಮೂಲೆಯಲ್ಲಿ ಹಾಳುಬಿದ್ದ ಸಣ್ಣ ಕೆರೆಯೂ ಇದೆ. ಇದೆಲ್ಲವನ್ನೂ ಸ್ವಚ್ಛಗೊಳಿಸಿಕೊಂಡರೆ ಶಾಲೆಗೆ ಸೂಕ್ತ ಸ್ಥಳವಾಗುತ್ತದೆ, ಇದನ್ನು ದಯವಿಟ್ಟು ಆಗಮಾಡಿಸಿ ಮಕ್ಕಳ ಪ್ರಗತಿಗೆ ಪಾತ್ರರಾಗಿ," ಎಂದಳು ನೀಲಾರಾಂ.

"ಮೊದಲು ಅದರ ಸ್ಥಳ ಪರಿಶೀಲನೆಯಾಗಬೇಕು, ಅದು ಸೂಕ್ತವೆಂದು ತೋರಿದರೆ ಮೀಟಿಂಗಿನಲ್ಲಿಟ್ಟು ಅಂತ್ಯ ತೀರ್ಮಾನವಾದ ನಂತರ ನಿಮಗೆ ತಿಳಿಸುತ್ತೇವೆ."

"ನಾವು ಸಾರ್ವಜನಿಕರಿಂದ ಹಣಯೆತ್ತಿ ಶಾಲೆ ಕಟ್ಟುವುದರಿಂದ ಸ್ಥಳವನ್ನು ನಮಗೆ ಮುಫತ್ತಾಗಿ ನೀಡುವಷ್ಟು ಉದಾರತೆಯನ್ನು ತೋರಬೇಕು" ನಾನು ಒತ್ತಾಯಿಸಿದೆ "ಅದರ ಎಲ್ಲಾ ವಿವರವನ್ನೂ ಅರ್ಜಿಯಲ್ಲಿ ಕಾಣಿಸಲಾಗಿದೆ."

"ಅದನ್ನೀಗಲೇ ಏನೂ ಹೇಳುವಂತಿಲ್ಲ..."

ಆ ಕೂಡಲೇ ಎಲ್ಲಾ ಮಹಿಳೆಯರೂ ಏಕ ಕಂಠದಿಂದ ಬಿತ್ತರಿಸಿದರು "ದಯವಿಟ್ಟು ಅಲಕ್ಷಿಸಬಾರದು, ಆ ಬಡ ಮಕ್ಕಳನ್ನು ನಿಮ್ಮ ಮಕ್ಕಳೆಂದೇ ಭಾವಿಸಿಕೊಳ್ಳಿ."

ಅವರು ಸ್ಥಳ ಪರಿಶೀಲನೆಗಾಗಿ ಮರುದಿನ ಮಧ್ಯಾಹ್ನ ಬರುವುದಾಗಿ ಒಪ್ಪಿಕೊಂಡರು. ವಿಷಯ ಒಂದು ನಿರ್ಧಿಷ್ಟ ಚೌಕಟ್ಟಿನಲ್ಲಿ ಅಳವಟ್ಟ ಮೇಲೆ ನಾವು ಹೊರಟೆವು ಅಲ್ಲಿಂದ.

ರಾಣೀಬೆನ್ ದಿಟ್ಟತನದಿಂದ ನುಡಿದಳು "ಅವರೆಷ್ಟೇ ಸಂಕೋಚ ಪಟ್ಟರೂ ನಾವು ಬಿಡಬಾರದು, ಹೋರಾಡಿ ಗೆಲ್ಲಲೇಬೇಕು" ದನಿಯಲ್ಲಿ ವೀರ ರಸ ಸ್ಫುರಿಸಿದಾಗ ಕಣ್ಣುಗಳ ಹೊಳಪು ಮಿಂಚಿತು.

ನೀಲಾರಾಂ ಅವಳ ಧಾಟಿಯನ್ನೇ ಅನುಸರಿಸಿ "ಸ್ವಾತಂತ್ರ್ಯಾನಂತರ ಸರಸ್ವತೀ ಮಂದಿರಗಳಿಗೆ ಆದ್ಯತೆ ಕೊಡುತ್ತಿರುವುಧೇನೋ ನಿಜ. ಆದರೂ ಸಹ ಕಣ್ಣಿದ್ದೂ ಕುರುಡರಂತೆ ವರ್ತಿಸುವುದನ್ನು ನೋಡಿದರೆ ಅಸಹ್ಯವಾಗುತ್ತದೆ. ಈ ಸಂಕುಚಿತ ಮನೋಭಾವ ಹೋಗದೆ ಜೀವನ ಸುಧಾರಿಸುವುದಿಲ್ಲ."

"ನಾಳೆ ಮಧ್ಯಾಹ್ನ ಸಮಯಕ್ಕೆ ಸರಿಯಾಗಿ ನಾವೆಲ್ಲ ಆ ಬಡ ಮಹಿಳೆಯರು ಮತ್ತು ಬಡಮಕ್ಕಳ ಸಹಿತ ಅಲ್ಲಿ ಕಾದಿರೋಣ. ದೈವವಶಾತ್ ಅಲ್ಲೊಂದು ದೊಡ್ಡ ಮರವಿದೆ. ದಟ್ಟವಾದ ನೆರಳು, ಎಷ್ಟೊತ್ತಾದರೂ ಕಾಯಬಹುದು."

"ಅಂದರೆ ಅವರು ಹೊತ್ತಿಗೆ ಸರಿಯಾಗಿ ಬರಲಾರರೆಂದೇ ? ವಾಟ್ ಡು ಯೂ ಮೀನ್ ?"

"ನಮ್ಮವರಿಗೆ ಕಾಲದ ಬೆಲೆ ಗೊತ್ತಿದ್ದರೆ ತಾನೇ ?"

ಎಲ್ಲರ ಮುಖ ಮಂಡಲದಲ್ಲೂ ನಗುವಿನ ಲಹರಿ ಉಕ್ಕಿ ಹರಿಯಿತು. ವ್ಯಾನ್ ಎಲ್ಲರನ್ನೂ ಅವರವರ ಮನೆ ಮುಟ್ಟಿಸಿದಾಗ ನೇಸರು ಮುಳುಗುವುದ ರಲ್ಲಿದ್ದ. ಸತ್ಯಾ ತನ್ನ ಗೆಳತಿಯರೊಡನೆ ಟೇಬಲ್ ಟೆನ್ನಿಸ್ ಆಡುತ್ತಿದ್ದಳು. ಭಾಸ್ ಇನ್ನೂ ಬಂದಿರಲಿಲ್ಲ. ನಾನು ಹಾಗೇ ಗಾರ್ಡನ್ ಕಡೆ ಹೋದೆ. ಎಲ್ಲಾ ಪಾತಿಗಳಲ್ಲೂ ಈಗೀಗ ಹೂ ಗಿಡಗಳು ಮೈತುಂಬಿ ನಳನಳಿಸುತ್ತಿವೆ. ತಣ್ಣಗುವ ತಣ್ಣನೆಯ ಸಮಯ ; ಎಷ್ಟು ಅಡ್ಡಾಡಿದರೂ ಹಿತವೇ. ಸುಂದರ ಉದ್ಯಾನದಲ್ಲಿ ಅಚ್ಚುಕಟ್ಟಾಗಿ ಹರಿದ ಸಣ್ಣ ಹಾದಿ, ಎರಡೂ ಬದಿಯಲ್ಲಿ ಇಟ್ಟಿಗೆಯ ಕಟ್ಟೆಯಿಂದ ಕಟ್ಟಿದ ಪಾತಿಗಳಲ್ಲಿ ಹೂಗೊಂಚಲ ಕೈಗಳಿಂದ ಸ್ವಾಗತಿಸುವ ಗಿಡಗಳನ್ನು ನೋಡುತ್ತಿದ್ದರೆ ಮನಸ್ಸಿಗೆ ಎಷ್ಟು ಆನಂದ! ಪಾತಿಗಳಿಗೆ ನೀರೆರೆಯುತ್ತಿದ್ದ ಮಾಲಿ ಕೈಯಲ್ಲಿ ಭರ್ತಿ ಬಿಂದಿಗೆಯನ್ನು ಹಿಡಿದು ಕೊಂಡೇ ನುಡಿದ "ಮೇಮ್‌ಸಾಬ್, ಈ ಗಿಡಗಳನ್ನು ನೋಡಿ! ಎಷ್ಟು ಬೇಗ ಬೆಳೆಯುತ್ತಿವೆ? ಇದಕ್ಕೆ ಎರಡು ಪಟ್ಟು ಗೊಬ್ಬರ ಕೊಟ್ಟಿದ್ದೇನೆ!"

ಆ ಹಿಂದೀವಾಲ ಸಂತೋಷದಿಂದ ಹಲ್ಕಿರಿದು ಹೇಳುತಿದ್ದರೆ ನನಗೆ ಅರ್ಥವೇ ಆಗಲಿಲ್ಲ. ಅವನ ಉಚ್ಚಾರಣೆ, ಅವನ ಭಾಷೆ ಇನ್ನೇನೋ ಒಂದು ಬಗೆ. ಯಾವ ಯಾವ ಭಾಷೆಗಳ ಸಂಮಿಶ್ರಣವೋ ದೇವರಿಗೇ ಗೊತ್ತು. ಅವನು ಒರಿಸ್ಸಾದಿಂದ ಬಂದವನು. ಬಹುಶಃ ಒರಿಯ ಮಿಶ್ರಣವೇ ಇರಬೇಕು. ನಾನು ಸುಮ್ಮನೆ ತಲೆದೂಗಿ ಹೇಳಿದೆ—"ನೀರಿನ ಭಾರ ಹೊತ್ತುಕೊಂಡೇ ಮಾತಾಡುತ್ತೀಯೆ? ಮೊದಲು ನೀರನ್ನು ಸುರಿದು ಕೈ ಹಗುರ ಮಾಡಿಕೋ!"

ಅವನು ನಗುತ್ತ ನೀರನ್ನು ಸುರಿದು ಖಾಲಿ ಬಿಂದಿಗೆಯೊಡನೆ ಹಿಂದಿರುಗಿದ.

ನನಗೆ ಈಗಲೂ ಅಲ್ಲಿನ ಭಾಷಾ ಸಮಸ್ಯೆ ಒಂದು ಹಿರಿಯ ಸಮಸ್ಯೆಯೇ. ಹಿಂದಿಯನ್ನೇನೋ ಕಲಿತಿದ್ದಾಯ್ತು. ಆದರೆ ಎಷ್ಟೆಷ್ಟು ಪ್ರಯತ್ನಿಸಿದರೂ ಅದರಲ್ಲಿ ಹೇಳಿಕೊಳ್ಳುವಂತಹ ಪಾಂಡಿತ್ಯವೇನೂ ಬರಲಿಲ್ಲ. ಸಾಧಾರಣ ಬಳಕೆಗೆ

ಸಾಕು ಎನ್ನಬಹುದು. ಭಾಸ್ವಾನನ ಭಾಷೆ ಕನ್ನಡ. ಅವನು ನನಗಾಗಿ ಮಾತಾಡುವುದು ಇಂಗ್ಲೀಷಿನಲ್ಲಿ ಅಥವಾ ಹಿಂದಿಯಲ್ಲಿ. ನನಗೆ ಕನ್ನಡ ಕಲಿಯ ಬೇಕೆಂಬ ಉತ್ಕಟೇಚ್ಛೆಯುಂಟು. ಆದರೆ ಕನ್ನಡದ ಆಳುಗಳಾರೂ ಇಲ್ಲದಿರು ವುದರಿಂದ ನಾನು ನೇರವಾಗಿ ಭಾಸ್ ಮತ್ತು ಅಂಜು ಇವರಲ್ಲೇ ಮಾತಾಡಿ ಕಲಿಯಬೇಕು. ಸತ್ಯಾ ಆಗಲೇ ಹಿಂದಿಯನ್ನು ಚೆನ್ನಾಗಿ ಕಲಿತಿದ್ದಾಳೆ. ಕನ್ನಡ ಅರ್ಥಂಬರ್ಥ ಬರುತ್ತದೆ. ತಂದೆಯೊಂದಿಗೆ ಸಾಧ್ಯವಾದಷ್ಟು ಕನ್ನಡದಲ್ಲೇ ಮಾತಾಡುತ್ತಾಳೆ. ನನಗದರ ಉಚ್ಚಾರಣೆ ಕಷ್ಟ ಎನಿಸುತ್ತದೆ. ವ್ಯಾಕರಣ, ಏಕವಚನ, ಬಹುವಚನ ಇವು ಅರ್ಥವಾಗುವುದು ಬಹಳ ಕಷ್ಟ. ಅಂಜು ಬಂದಾಗಲೆಲ್ಲ 'ಅದೇನು ಮಹಾ ವಿಶೇಷ ? ನಾನೇ ನಿನಗೆ ಕಲಿಸುವೆ' ಎನ್ನುವುದುಂಟು. ಅಂತಲೇ ಅವಳೊಂದಿಗೆ ಕಲಿತುಕೊಳ್ಳುವ ಯೋಚನೆ. ಆದರೂ ಸಹ ಕುಳಿತು ಒಂದು ಗಂಟೆ ಶ್ರಮಿಸುವಷ್ಟು ಬಿಡುವು ಸಹ ದೊರೆಯ್ಯು ವುದಿಲ್ಲ. ಬೆಳಿಗ್ಗೆ ಶಾಲೆಯಲ್ಲಿ ಕಳೆದರೆ ಸಾಯಂಕಾಲ ಹಣ ಸಂಗ್ರಹಿಸುವ ಕಾರ್ಯ.

ಭಾಸ್ ಇದೇ ತಾನೇ ಬಂದ. ಚಹದ ಟ್ರೇಯನ್ನು ತಂದು ನಾನೇ ಮುಂದಿಟ್ಟೆ. ಇಂಗ್ಲೆಂಡಿನಲ್ಲಿದ್ದಾಗ ನಾವಿಬ್ಬರೂ ಕೂಡಿಯೇ ಚಹ ತಯಾರಿ ಸುತ್ತಿದ್ದೆವು. ಈ ದೇಶದಲ್ಲಿ ಅಡಿಗೆಯ ಕೆಲಸದಲ್ಲಿ ಗಂಡು ಭಾಗವಹಿಸುವುದಿಲ್ಲ. ನಾನು ಇಂಡಿಯಾಕ್ಕೆ ಬಂದಾಗಿನಿಂದ ಇಲ್ಲಿಯ ಪದ್ಧತಿಯನ್ನು ಅನುಸರಿಸುತ್ತಿ ರುವೆ. ಈಗ ದಿನವೂ ಭಾಸ್‌ನ ಹೆಚ್ಚುಕಡಿಮೆ ಎಲ್ಲಾ ಅಗತ್ಯಗಳನ್ನು ಪೂರೈಸುವವಳು ನಾನೇ.

ಟ್ಯಾಕ್ಸಿಯೊಂದು ನೇರವಾಗಿ ಬಂದು ಪೋರ್ಟಿಕೋದಲ್ಲಿ ನಿಂತಿತು. ಅದ ರಿಂದ ಇಳಿದವರು ಶಾಂತಿಪ್ರಸಾದ್. ಭಾಸ್ವಾನ್ ತಕ್ಷಣ ಅವರ ಬಳಿಗೆ ಹೋಗಿ ಕೈಯನ್ನು ಬಿಗಿ ಹಿಡಿದು ಸ್ವಾಗತಿಸಿದ. ಪರಸ್ಪರ ಭೇಟಿಯ ಸಂತಸ ಮುಖ ಬಿಂಬಗಳನ್ನು ಹೂವಿನಂತೆ ಅರಳಿಸಿತು. ಭಾಸ್ವಾನ್ ಅವರ ಭುಜದ ಮೇಲೆ ಆತ್ಮೀಯತೆಯಿಂದ ಕೈಹಾಕಿ ಅದುಮಿ ಹಿಡಿದುಕೊಂಡು ಕೇಳಿದ "ಈ ಹೊತ್ತಿನಲ್ಲಿ ಹೇಗೆ ಬಂದಿರಿ ? ರೈಲೋ ? ಪ್ಲೇನೋ ?"

"ಪ್ಲೇನ್ ಕಣಯ್ಯ, ಒಂದು ಗಂಟೆ ಲೇಟ್ !"

ಭಾಸ್ಕರ್ ನಕ್ಕುಬಿಟ್ಟ. "ನೀವು ಮುಂದಾಗಿ ತಿಳಿಸಿದ್ದರೆ ನಿಮ್ಮನ್ನು ನಿಲ್ದಾಣದಲ್ಲಿ ಕಾಣಬಹುದಿತ್ತು."

ನಾನು ಸ್ವಾಗತಿಸಿದೆ 'ಬನ್ನಿ....ಬನ್ನಿ ! ನೀವು ತಿಳಿಸದೆ ಬಂದಿರಲ್ಲ...?"

"ಇರಲಿ, ಅಂತಹ ಅಗತ್ಯವೇನಿಲ್ಲ." ಎಂದ ಬಳಿಕ ಪುನಃ

"ಏನಮ್ಮಾ, ಹೇಗಿದ್ದಿ ? ಮಗಳೆಲ್ಲಿ ?"

"ಚೆನ್ನಾಗಿದ್ದೇವೆ. ಮಂಜುಳಾ ಏಕೆ ಬರಲಿಲ್ಲ ?

"ಮಕ್ಕಳಿಗೆ ರಜೆಯಿಲ್ಲವಲ್ಲ...ಬಹಳ ಸೆಕೆ. ಒಳಹೋಗುವುದಕ್ಕಿಂತ ಇಲ್ಲಿರುವುದೇ ಲೇಸು," ಎಂದರು ಕರವಸ್ತ್ರದಿಂದ ಮುಖವನ್ನು ಒರಸಿ ಕೊಳ್ಳುತ್ತ.

ನಿಜವಾಗಿಯೂ ಹೇಳುವುದಾದರೆ ನಮಗಿದು ಸೆಕೆ ಅನಿಸದಷ್ಟು ಅಭ್ಯಾಸ ವಾಗಿದೆ. ಅವರು ಬೆವರನ್ನು ಒರಸಿಕೊಂಡಾಗಲೇ ಸೆಕೆ ಎಂಬುದರ ಅರಿವು ಮೂಡಿದ್ದು. ನಾನು ಒಳಹೋಗಿ ಅವರಿಗೆ ಪ್ರಿಯವಾದ ತಣ್ಣನೆಯ ಪಾನೀಯವನ್ನು ತಯಾರಿಸಿ ಸಿಹಿ ಕಾರಗಳ ಸಹಿತ ತಂದುಕೊಟ್ಟೆ. ಅವರು ಲೋಟೆಯನ್ನೆತ್ತಿ ಕುಡಿಯುತ್ತ "ನನಗಿಲ್ಲಿ ಸ್ವಲ್ಪ ಕೆಲಸವಿದ್ದುದರಿಂದ ಬಂದೆ. ಆಮದು–ರಫ್ತು ವ್ಯಾಪಾರದಲ್ಲಿ ಎಲ್ಲಿಲ್ಲದ ತೊಡಕು. ಡೈರೆಕ್ಟರ್ ಮನುದೇವ್ ರವರನ್ನು ಕಾಣಬೇಕಿತ್ತು. ಈಗಣ ಆಫೀಸುಗಳಲ್ಲಿ ಕೆಲಸ ಸಾಗುವುದೇ ಇಲ್ಲ. ಎಲ್ಲಿ ನೋಡಿದರೂ ಲಂಚ–ರುಷುವತ್ತುಗಳು ತಾಂಡವವಾಡುತ್ತವೆ. ಒಮ್ಮೆ ಬೇಸರ ಮೂಡಿದರೆ ಇನ್ನೊಮ್ಮೆ ಸಿಟ್ಟು ಬರುತ್ತದೆ. ಆಫೀಸಿನಿಂದ ಆಫೀಸಿಗೆ ಅಲೆದಲೆದು ಸಾಕಾಗಿದೆ. ಕಾಂಗ್ರೆಸ್ ಸರಕಾರದಲ್ಲಿ ಮೊದಮೊದಲು ಕೆಲಸ ಚೆನ್ನಾಗಿ ನಡೆಯುತಿತ್ತು...ಪರವಾಯಿಲ್ಲ ಎಂದುಕೊಳ್ಳುವುದರೊಳಗೇ ಎಲ್ಲಾ ಅಡಿಮೇಲಾಗುತ್ತಿದೆ. ಅಧಿಕಾರಿಗಳಿಗೆ ಕೆಲಸಕಾರ್ಯಗಳ ಮೇಲೆ ಸ್ವಲ್ಪವೂ ಲಕ್ಷ್ಯವೇ ಇಲ್ಲ. ರೈತಾಪಿವರ್ಗ ಪಡುವ ಕಷ್ಟ ನೋಡಿದರೆ ಮರುಕದ ಕಟ್ಟೆ ಒಡೆಯುತ್ತದೆ. ಮೇಲಾಗಿ, ಬುದ್ಧಿಯಿಲ್ಲದ ಜನ, ವ್ಯವ

ಹಾರ ಜ್ಞಾನ ಲವಲೇಶವೂ ಇಲ್ಲ. ಆದರೂ ಅವರ ಕಡೆಗೆ ಯಾರ ಲಕ್ಷ್ಯವೂ ಹರಿಯುವುದಿಲ್ಲ."

ಭಾಸ್ ಅವರ ದನಿ ವಿಷಾದಪೂರ್ವಕವಾಗಿ ಹರಿದು ಬಂದುದನ್ನು ಗಮನಿಸಿ ಅಂದ,

"ಹತ್ತು ಜನ ಕೂಡಿ ಹೊಡೆದಾಡಿದರೆ ಏನಾದರೂ ಆದೀತು. ಒಬ್ಬಿಬ್ಬರ ಮಾತಿಗೆ ಬೆಲೆ ಬರುವುದಿಲ್ಲ ಈ ಕಾಲದಲ್ಲಿ."

"ಹತ್ತು ಜನಕ್ಕೂ ಬಗ್ಗುವುದಿಲ್ಲ ಈ ಅಧಿಕಾರಶಾಹಿ. ಲಂಚ ತಿಂದೂ ತಿಂದೂ ತಾನೇ ತಾನಾಗಿ ಕೊಬ್ಬಿದ ರಕ್ತಕ್ಕೆ ಬಡ ಜನರ ಕಷ್ಟ ಹೇಗೆ ತಿಳಿಯಬೇಕು ? ಪರಿಸ್ಥಿತಿ ದಿನ ದಿನಕ್ಕೂ ಹದಗೆಡುತ್ತಿದೆ."

"ಇಲ್ಲೂ ಅಷ್ಟೆ. ಎಲ್ಲಾ ಆಫೀಸುಗಳಲ್ಲೂ ಇದೇ ಸಮಾಚಾರ. ನನಗೂ ಬೇಸರವಾಗುತ್ತಿದೆ."

ಭಾಸ್ ಅತ್ಯಂತ ಜಿಗುಪ್ಸೆಯಿಂದ ಹೇಳಿದ. ಮನಸ್ಸಿನ ಮುಜುಗರ ಮುಖ ಬಿಂಬದಲ್ಲಿ ಮುದ್ರೆಯೊತ್ತಿತು. ಅವನು ಒಂದು ಗಳಿಗೆ ಸುಮ್ಮನಿದ್ದು ಪುನಃ ಮುಂದುವರಿದ "ದೇಶಕ್ಕೆ ಸ್ವಾತಂತ್ರ್ಯ ಬಂತು. ನಮ್ಮವರು ಪ್ರಗತಿಯ ಹಾದಿಯಲ್ಲಿ ಮುಂದುವರಿಯಬೇಕು. ಆದರೆ ಇಂದು ಎಲ್ಲೆಲ್ಲಿಯೂ ಸ್ವಾರ್ಥವೇ ಪರಮಾರ್ಥ, ಹತ್ತು ಮಂದಿಯನ್ನು ತುಳಿದೇ ಮುಂದೆ ಬರುವ ಯೋಜನೆ. ಜನ ಈ ದಿಶೆಯಲ್ಲಿ ಮುಂಬರಿದರೆ ಇದಕ್ಕೆ ಮದ್ದೆಲ್ಲಿ?"

"ಯೋಚನಾತೀತ !"

"ಇಷ್ಟು ದಿನಗಳ ಮೇಲೆ ಬಂದಿದ್ದೀರಿ ! ಅದೂ ಸಹ ಯಾವುದೋ ಕೆಲಸದ ನಿಮಿತ್ತ. ಅಂಥ ಯಾವೊಂದು ತೊಂದರೆಯನ್ನೂ ಇಟ್ಟುಕೊಳ್ಳದೆ ಸಂಸಾರ ಸಮೇತರಾಗಿ ಬಂದು ಇಲ್ಲಿ ತಿಂಗಳಾನುಗಟ್ಟಲೆ ಇದ್ದರೂ ನೋಡಿ ತಿರುಗಾಡಿ ಕಾಲಹರಣ ಮಾಡುವಷ್ಟು ಪ್ರೇಕ್ಷಣೀಯ ಸ್ಥಳಗಳಿವೆ. ನೀವು ಹೀಗೆ ಒಬ್ಬರೇ ಬಂದುದು ಸರಿಯಲ್ಲ," ಎಂದೆ ನಾನು.

"ಇನ್ನೊಮ್ಮೆ ಬರೋಣ. ಈಗಲೇ ಕಾಲ ಮುಗಿಯಲಿಲ್ಲ."

ಆಗ ಭಾಸ್ "ನಮ್ಮ ಭಾವ ಅಷ್ಟು ಸುಲಭದ ವ್ಯಕ್ತಿಯಲ್ಲ. ಯಾವಾಗಲೂ ಕೆಲಸ ..ಕೆಲಸ...ಕೆಲಸವೇ ಅವರಿಗೆ ಆರಾಧ್ಯ ದೈವ!" ಎಂದ ತಿಳಿ ಹಾಸ್ಯದ ಧಾಟಿಯಲ್ಲಿ.

ಮರುದಿನ ಬೆಳಿಗ್ಗೆ ಶಾಂತಿ ಪ್ರಸಾದ್ ತಮ್ಮ ಕಾರ್ಯಾರ್ಥ ಹೊರ ಹೋದವರು ಮಧ್ಯಾಹ್ನ ಊಟಕ್ಕೂ ಬರಲಿಲ್ಲ. ನಾನೂ ಅಂಜೂ ಮಹಿಳಾ ಮಂಡಳಿಯನ್ನು ಕೂಡಿಕೊಂಡು ಶಾಲೆಯ ಸ್ಥಳ ಪರಿಶೀಲನೆಗೆ ಬರಲಿದ್ದ ಕಾರ್ಪೋರೇಷನ್ ಅಧ್ಯಕ್ಷರನ್ನು ಕಾಣಲು ಆ ಬಡಾವಣೆಯ ಬಡಮಕ್ಕಳನ್ನೂ ತಾಯಂದಿರನ್ನೂ ಮುಂದಿಟ್ಟುಕೊಂಡು ಸ್ಥಳಕ್ಕೆ ಹೋಗಿ ಸೇರಿದ ಎಷ್ಟೋ ಹೊತ್ತಿನ ಮೇಲೆ ಅವರೂ ಬಂದರು. ಸ್ಥಳ ಪರಿಶೀಲನೆ ನಡೆದು ಸಂತೃಪ್ತಿ ಮೂಡಿದರೂ ಅವರ ಬಿಗಿ ಮನಸ್ಸು ಸಡಿಲವಾದಂತೆ ಕಾಣಲಿಲ್ಲ. ನಾವು ವಿನಾ ಈವರೆಗೆ ಅದನ್ನು ಬೇರೆ ಕೇಳಿದವರೂ ಇರಲಿಲ್ಲ.

"ನೋಡೋಣ" ಎಂದು ಒಂದೇ ವಾಕ್ಯದಲ್ಲಿ ವ್ಯವಹಾರವನ್ನು ಮುಗಿಸಿ ಹೊರಟರು. ಆ ಬಡಮಕ್ಕಳ ದುರ್ದೆಶೆಯೂ ಮನವನ್ನು ಕರಗಿಸಲಿಲ್ಲ. ಅನಂತರ ನಾವು ಅವರನ್ನು ಪುನಃ ಪುನಃ ಎಷ್ಟೆಷ್ಟು ಬಾರಿ ಕೇಳಿಕೊಂಡರೂ ವ್ಯವಹಾರ ಮುಂದುವರಿಯುತ್ತಲೇ ಹೋಯಿತು. ಅದರಿಂದ ಮಹಿಳಾ ಮಂಡಳಿಯ ಮನಸ್ಸು ನೊಂದುದು ಮಾತ್ರವಲ್ಲ, ಎಲ್ಲರೂ ದಿಟ್ಟತನದಿಂದ ಹೋರಾಡಲೇಬೇಕೆಂಬ ನಿರ್ಣಯಕ್ಕೂ ಕಾರಣವಾಯಿತು. ಅನಂತರ ಅವರಿಗೂ ನಮಗೂ ತಿಕ್ಕಾಟ. ಎಷ್ಟೋ ಸಮಯ ಕಳೆಯುತಿದ್ದುದು ಕಾರ್ಪೋರೇಷನ್ ಆಫೀಸಿನಲ್ಲಿ. ಕೆಲವೊಮ್ಮೆ ಆ ಬಡಮಕ್ಕಳನ್ನು ಮುಂದಿಟ್ಟುಕೊಂಡು ಹೋದುದೂ ಉಂಟು. ಆದರೂ ಆಡಳಿತ ವರ್ಗ ಕಪಿ ಮುಷ್ಟಿಯನ್ನು ಸಡಿಲಗೊಳಿಸಲಿಲ್ಲ, ಕೊನೆಗೆ ಅಂಜನಾ "ನಾವು ಈ ವಿಚಾರದಲ್ಲಿ ಪ್ರೈಮಿನಿಸ್ಟರನ್ನು ಕಾಣುವುದು ಲೇಸು! ಎಂದಳು.

ಅವಳ ದನಿಯಲ್ಲಿ ದಿಟ್ಟತನವಿತ್ತು; ಸ್ಫೂರ್ತಿಯಿತ್ತು; ಹೋರಾಟದ ಕಾವು ಸ್ಫುರಿಸುತಿತ್ತು.

ಅದೇ ಪ್ರಕಾರವಾಗಿ ನಾವು ಪ್ರೈಮಿನಿಷ್ಟರಲ್ಲಿ ಭೇಟಿಗಾಗಿ ಕೇಳಿಕೊಂಡು ಅವರನ್ನು ಕಂಡದ್ದು ಆ ಬಡಮಹಿಳೆಯರು ಮತ್ತು ಮಕ್ಕಳ ಸಹಿತ. ನಮ್ಮೊಂದಿಗೆ ಸ್ಥಳದ ನಕ್ಷೆಯೂ ಚಿತ್ರಪಟವೂ ಇತ್ತು. ನಾವು ನೇರವಾಗಿ ಅವರ ಛೇಂಬರಿಗೆ ಹೋದಾಗ ಮಹಿಳಾ ಮಂಡಳಿ ಮತ್ತು ಮಕ್ಕಳಿಂದ ಕಿಕ್ಕಿರಿ ತುಂಬಿಹೋಯಿತು. ಅವರನ್ನು ನೋಡಲು ದೇಶೀಯರೂ ವಿದೇಶಿಯರೂ ಕಾದು ಕುಳಿತಿದ್ದರು. ಅವರ ಹೆಚ್ಚು ಸಮಯವನ್ನು ಹಾಳು ಮಾಡಬಾರದು ಎಂದು ನಮ್ಮ ನಮ್ಮ ಅಂತಃಪ್ರಜ್ಞೆ ಹೇಳುತಿತ್ತು. ಮುಂದಾಳಾಗಿದ್ದ ನಾನು ಅವರಿಗೆ ನಾವು ಹೊತ್ತ ಹೊಣೆಗಾರಿಕೆಯನ್ನು ಕಾರ್ಪೋರೇಷನ್ನಿನ ಘೋಷಣೆಯನ್ನೂ ವಿವರಿಸಿ ಹೇಳಿದ ನಂತರ ಹೇಳಿದೆ "ಇವರು ಈ ರೀತಿ ಮುಂದೂಡುತ್ತಿರುವುದರಲ್ಲಿ ಏನೋ ದುರುದ್ದೇಶವಿದೆ."

ಆ ಮಾತನ್ನು ಕೇಳಿ ಕಿವಿ ಚುರುಕಾದಂತೆ ಹುಬ್ಬೆತ್ತಿ ನೋಡುತ್ತ "ದುರುದ್ದೇಶ...?" ಎಂದು ಉದ್ಗರಿಸಿ ಒಂದೆರಡು ಕ್ಷಣ ಯೋಚಿಸಿದ ನಂತರ ನೆಹರೂರವರು "ದುರುದ್ದೇಶ ಎಂದರೇನು ಮಕ್ಕಳ ವಿಚಾರದಲ್ಲಿ? ಅದು ಸರ್ವಥಾ ಕೂಡದು!"

ಅನಂತರ ಅವರ ಸೆಕ್ರೆಟರಿಯವರನ್ನು ಕುರಿತು "ಇದನ್ನು ಈಗಿಂದೀಗಲೇ ಪರಿಶೀಲಿಸಿ ಯಾವ ಅನಾನುಕೂಲವೂ ಇಲ್ಲದಿದ್ದರೆ ತತ್ಕ್ಷಣವೇ ಶಾಲೆಗಾಗಿ ಮಂಜೂರು ಮಾಡುವಂತೆ ಅರ್ಜಿಯ ಮೇಲೆ ಬರೆ" ಎಂದು ಆದೇಶ ನೀಡಿದರು. ಅವನು ಹಾಗೆಂದು ಬರೆದ ನಂತರ ತಾವು ಸಹಿ ಹಾಕಿ ಮಕ್ಕಳನ್ನು ಹರಸಿ ಬೀಳ್ಕೊಟ್ಟರು. ನಾವು ಸಂತಸದ ಮೂಟೆಯಾಗಿ ಹೊರಬಂದೆವು.

ಇಂದು ಡೇವಿಡ್ ಬರುವುದಕ್ಕೂ ಸತ್ಯಾ ಬರುವುದಕ್ಕೂ ಸರಿಹೋಯಿತು.

"ಅಂಕಲ್! ಇದೇನು ವಿಪರೀತ? ಒಂದು ವಾರದಿಂದ ಇತ್ತ ಮುಖ ಹಾಕಲಿಲ್ಲ?" ತೀರ ಆಕ್ಷೇಪಿಸುತ್ತ ಕೇಳಿದಳು ಸತ್ಯಾ.

ಅಷ್ಟೇ ಉತ್ಸಾಹದಿಂದ ಡೇವಿಡ್ ಬಿತ್ತರಿಸಿದ "ಒಂದು ವಾರ ಕಾಶ್ಮೀರ್ ಪ್ರವಾಸ ಹೋಗಿದ್ದೆ. ಇಲ್ಲಿರಲಿಲ್ಲ."

"ನನಗೇಕೆ ತಿಳಿಸದೇ ಹೋದಿರಿ ?"

"ತಿಳಿಸಿದ್ದರೆ ನೀನು ಬರುತಿದ್ದೆಯಾ ?"

"ಯಾಕಾಗಬಾರದು ?"

"ಸರಿ ಬಿಡು. ಇನ್ನೊಂದು ಬಾರಿ ಹೋದಾಗ ನಿನ್ನನ್ನು ಕರೆದೊಯ್ಯುವೆ."

ಡೇವಿಡ್ ಅವಳೊಡನೆ ಒಳಬಂದ. ಅವಳು ಶಾಲೆಯ ಉಡುಪು ಕಳೆದು ಮುಖಮಜ್ಜನ ಮಾಡಿದಮೇಲೆ ಇಬ್ಬರೂ ಪಿಂಗ್ ಪಾಂಗ್ ಆಡ ತೊಡಗಿದರು. ಪ್ರವಾಸ ಹೋಗಿದ್ದ ಭಾಸ್ ಈಗ ಬರುವವನಿದ್ದ. ಅವನಿಗಾಗಿ ಎದುರುನೋಡುತಿದ್ದ ನಾನು ವರಾಂಡದಲ್ಲೇ ಅಡ್ಡಾಡಿದೆ.. ಐದು ಗಂಟೆಗೇ ಬರಬೇಕಾಗಿದ್ದ ಅವನು ಏಳು ಗಂಟೆಯಾದರೂ ಬರಲಿಲ್ಲ. ಈದಿನ ಯಾಕೋ ಮೈಯೆಲ್ಲಾ ಭಾರ, ಬೆನ್ನು ನೋವು, ಹೊಟ್ಟೆಯಲ್ಲಿ ತಳಮಳ. ಹೋಗಿ ಹಾಸಿಗೆಯ ಮೇಲೆ ಅಡ್ಡಾದೆ. ಮೈಯ್ಯಲ್ಲಿ ಬಿಸಿಯೇರತೊಡಗಿತು. ಕೊನೆಗೆ ಒಂದು ವಾಂತಿಯೂ ಆಯಿತು. ಕ್ಷಿಪ್ರವಾಗಿ ಜ್ವರ ಏರುತಿದ್ದುದರಿಂದ ವೈದ್ಯರಿಗೆ ಹೇಳಲೋ ಬೇಡವೋ ಎಂಬ ಭಾವವಿಭಾವಗಳಲ್ಲಿ ತೊಳಲುತಿತ್ತು ಮನಸ್ಸು. ಈಗಲೇ ಏಕೆ ? ರಾತ್ರಿ ಹೇಗಾಗುತ್ತೋ ನೋಡಿಕೊಂಡು ಬೆಳಿಗ್ಗೆ ತಿಳಿಸಿದರಾಯಿತು ಎಂಬ ತೀರ್ಮಾನಕ್ಕೆ ಶರಣಾಗಿ ಸುಮ್ಮನಾದೆ. ನಾನು ಹಾಸಿಗೆ ಹಿಡಿದುದನ್ನು ನೋಡಿ ಡೇವಿಡ್ ಒಳಬಂದು ಕುರ್ಚಿಯ ಮೇಲೆ ಕುಳಿತುಕೊಂಡ. ಕಾದು ಕೆಂಡವಾದ ನನ್ನ ಮುಖವನ್ನು ನೋಡಿ "ಬಹಳ ಜ್ವರವಿದ್ದಂತಿದೆ ಡಾಕ್ಟರನ್ನು ಕರೆತರಲೇ ?" ಎಂದ.

"ಜ್ವರ ಹೆಚ್ಚಿರಲಾರದು. ನೋಡೋಣ, ಅವಸರವೇಕೆ ?"

ಅವನು ಹಣೆ ಮುಖವನ್ನು ಮುಟ್ಟಿ ನೋಡಿ "ಸುಡುತ್ತಿದೆ" ಎಂದ.

ಅದೇ ವೇಳೆಗೆ ಪ್ರವಾಸದಿಂದ ಹಿಂದಿರುಗಿದ ಭಾಸ್‌ಗೆ ಡೇವಿಡ್ಡನನ್ನು ನೋಡಿ ತೀವ್ರ ಅಸಮಾಧಾನವಾಯಿತು. ನಾನದನ್ನು ಯೋಚಿಸಿದ್ದೆ ಕೂಡ.

ಅವನು ನಮ್ಮಿಬ್ಬರನ್ನು ಕಣ್ಣೆತ್ತಿಯೂ ನೋಡದೆ ಶೌಚ ಗೃಹಕ್ಕೆ ಹೋಗಿ ದಡ್ಡನೆ ಬಾಗಿಲು ಹಾಕಿಕೊಂಡ. ಡೇವಿಡ್ ಅದನ್ನು ಅಷ್ಟಾಗಿ ಗಮನಿಸದೆ ನನಗೂ ಸತ್ಯಭಾಮಳಿಗೂ 'ಗುಡ್‌ನೈಟ್' ! ಹೇಳಿ ಹೊರಟು ಹೋದ. ಭಾಸ್ ಮುಖಮಜ್ಜನ ಮಾಡಿ ಹೊರ ಬರುತ್ತಲೂ ವಿಠ್ಠಲ್ ರಾವ್ ತಣ್ಣನೆಯ ಪಾನೀಯವನ್ನು ತಂದುಕೊಟ್ಟು ರಾತ್ರಿಯೂಟಕ್ಕೆ ಏನೇನಿರಬೇಕೆಂಬುದನ್ನು ಕೇಳಿಕೊಂಡು ಹೋದ. ಸತ್ಯಾ ಡೇವಿಡ್ಡನನ್ನು ಬೀಳ್ಕೊಟ್ಟು ಒಳಬಂದಳು. ಪಿಂಗ್‌ಪಾಂಗ್ ಆಡಿದ ಉತ್ಸಾಹ ಮೈಮನಗಳಲ್ಲಿ ಉಕ್ಕುತಿತ್ತು. ತಂದೆಯನ್ನು ಎರಡೂ ಕೈಗಳಿಂದ ಅಪ್ಪಿ ಹಿಡಿದುಕೊಂಡು "ಹೇಗಿತ್ತಪ್ಪಾ, ಪ್ರವಾಸ ?"

"ಚೆನ್ನಾಗಿತ್ತು" ಎಂದು ಮಗಳನ್ನು ಮುದ್ದಿಡುತ್ತ ಪುನಃ ಅಂದ "ಇಲ್ಲಿ ನಿನ್ನ ದಿನಗಳು ಹೇಗಿದ್ದುವು ?"

"ಚೆನ್ನಾಗಿದ್ದುವು !" ಕಣ್ಣುಗಳನ್ನು ಅರಳಿಸಿ ಹಸನಾದ ನಗುವನ್ನು ಸೂಸಿ "ಹೆಚ್ಚು ದಿನ ಪ್ರವಾಸ ಹೋಗಬೇಡಿ ಅಪ್ಪಾ ! ನೀವಿಲ್ಲದೆ ಹೋದರೆ ಬಲು ಬೇಸರ."

"ಹಾಗೆಂದರೆ ಹೇಗೆ ? ನಮ್ಮ ಕೆಲಸವೂ ಆಗಬೇಕಲ್ಲ ?"

ಭಾಸ್ ಅವಳೊಂದಿಗೆ ಮನಬಿಚ್ಚಿ ಮಾತಾಡುತ್ತಿರಲಿಲ್ಲ. ಏನೋ ಒಂದು ರೀತಿಯಲ್ಲಿ ಪ್ರಸಂಗೋಚಿತವಾಗಿ ಮಾತಾಡುತ್ತಿರುವುದು ಸುವ್ಯಕ್ತ. ಮುಖದ ವರ್ಚಸ್ಸು ಬಣ್ಣಗೆಟ್ಟಿತ್ತು. ನಾನೇ ಮಾತಾಡಿಸೋಣವೆಂದರೆ ಬಾಯೇ ಬರಲಿಲ್ಲ. ಕರವಸ್ತ್ರದಿಂದ ಮುಖವನ್ನು ಒರೆಸಿಕೊಳ್ಳುತ್ತ ದೃಷ್ಟಿಯನ್ನು ಬೇರೆಡೆಗೆ ಹರಿಸಿದೆ. ಅವನು ಬಟ್ಟೆ ಬದಲಿಸಿ ನನ್ನನ್ನು ಪ್ರಾಸಂಗಿಕವಾಗಿ ಕೇಳಿದ "ಯಾವಾಗಿನಿಂದ ಜ್ವರ ?"

"ಮಧ್ಯಾಹ್ನದಿಂದಲೇ ಏನೋ ಒಂದು ರೀತಿಯಿತ್ತು. ಸಾಯಂಕಾಲ ದಿಂದ ಜ್ವರ ಬಂದಿದೆ."

ಭಾಸ್ ಬೀರುವಿನಿಂದ ಮಾತ್ರೆ ತೆಗೆದುಕೊಟ್ಟು ಒಂದು ಲೋಟ ನೀರನ್ನು ನೀಡಿ ಅಂದ "ಈಗ ಇದನ್ನು ತೆಗೆದುಕೊ. ನಾಳೆಯೂ ಜ್ವರ ಬಂದರೆ ವೈದ್ಯರಿಗೆ ಹೇಳಿದರಾಯಿತು."

"ಆಗಲಿ", ಎಂದ ನಾನು ಅವನ ಮುಖಭಾವದಲ್ಲಿ ಒಸರುತಿದ್ದ ಕಹಿ ಯನ್ನು ಗಮನಿಸಿ ನಿಟ್ಟುಸಿರುಬಿಟ್ಟು,

"ಏಕೆ ಏನೋ ಒಂದು ರೀತಿಯಾಗಿದ್ದಿ, ಆರೋಗ್ಯ ಚೆನ್ನಾಗಿಲ್ಲವೆ ?"

"ಏನಿಲ್ಲ" ಎನ್ನುತ್ತ ಹೊರಹೋದ.

ನನಗೆ ಹಿಡಿದ ಜ್ವರ ಬಿಡಲೇ ಇಲ್ಲ. ಒಮ್ಮೊಮ್ಮೆ ಸ್ವಲ್ಪ ಇಳಿದರೂ ಪುನಃ ಏರುತಿತ್ತು. ವೈದ್ಯರು ಬಂದು ನೋಡಿ ವಿಷಮಶೀತ ಜ್ವರವೆಂದೂ ಎಲ್ಲರೂ ಅದರ ನಿರೋಧಕ ಚುಚ್ಚು ಮದ್ದನ್ನು ತೆಗೆದುಕೊಳ್ಳಬೇಕೆಂದೂ ವಿನಂತಿಸಿಕೊಂಡರು. ಅದರ ಪ್ರಕಾರ ಎಲ್ಲರಿಗೂ ಚುಚ್ಚು ಮದ್ದು ಕೊಡಿ ಸಿದ್ದಾಯ್ತು. ಅಂಜನಾ ಸುದ್ದಿ ತಿಳಿದವಳೇ ಓಡಿಬಂದಳು. ಅವಳು ಚಿಕಿತ್ಸೆಯಲ್ಲಿ—ಪಥ್ಯ ಪಾನಾದಿಗಳಲ್ಲಿ ತೆಗೆದುಕೊಳ್ಳುತಿದ್ದ ಶ್ರಮ ಅನ್ಯಾದೃಶ ವಾದುದು. ಅವಳು ಶಾಲೆಯ ಪಾಠ ಪ್ರವಚನಗಳನ್ನು ನೀಲಾರಾಂ ಮತ್ತು ಪಾಂಚಾಲಿವರ್ಮ ಇವರುಗಳಿಗೊಪ್ಪಿಸಿ ನನ್ನ ಶುಶ್ರೂಷೆಗಾಗಿ ಇಲ್ಲಿಯೇ ನಿಂತಳು. ಅವಳೂ ಮತ್ತೆಲ್ಲರೂ ರೋಗ ನಿರೋಧಕ ಚುಚ್ಚು ಮದ್ದು ತೆಗೆದುಕೊಂಡಿದ್ದುದರಿಂದ ಕಾಹಿಲೆಬೀಳುವ ಯೋಚನೆಯಿಲ್ಲದಿದ್ದರೂ ನನ್ನಿಂದಾಗಿ ಅವಳಿಗೆ ಎಷ್ಟು ಶ್ರಮ ಎನಿಸುತಿತ್ತು ನನಗೆ. ಬೆಳಿಗ್ಗೆ ಭಾಸ್ ಹೊರಡುವ ಸಮಯಕ್ಕೆ ಸರಿಯಾಗಿ ಬಂದರೆ ಸಾಯಂಕಾಲ ಭಾಸ್ ಬರುವವರೆಗೂ ಇದ್ದು ಮನೆಗೆ ಧಾವಿಸುತಿದ್ದಳು.

ಶಾಂತಿ ಪ್ರಸಾದ್ ಆಗ ಬಂದವರು ಹಿಂದಿರುಗಿ ಹೋಗಿದ್ದು ಅದೇ ಕಾರ್ಯಾರ್ಥ ಪುನಃ ಬಂದರು. ನಾನು ಹಾಸಿಗೆ ಹಿಡಿದಿರುವುದನ್ನು ಕಂಡು

"ನಿನಗೆ ಅಗತ್ಯ ತೋರಿದರೆ ಹೇಳು ಮಂಜುಳೆಯನ್ನು ಕಳುಹಿಸಿ ಕೊಡುವೆ." ಎಂದರು ಎದೆಯಲ್ಲಿ ಅನುಕಂಪೆಯನ್ನು ತುಂಬಿಕೊಂಡು.

"ಬೇಡ ; ಅಂತಹ ಅಗತ್ಯವೇನಿಲ್ಲ. ಅಂಜನಾ ಒಬ್ಬಳಿದ್ದರೆ ಹತ್ತು ಜನ ಇದ್ದ ಹಾಗೆ."

ನನ್ನ ಮಾತು ಕೇಳಿ ಶಾಂತಿಪ್ರಸಾದರ ಮುಖಬಿಂಬ ಅರಳಿ ಹೂವಾಯಿತು. ಅವರೆಂದರು,

"ವಿದ್ಯಾವಂತರು ಎನಿಸಿಕೊಂಡವರು ಹಾಗಿರಬೇಕು ಅಲ್ಲವೆ ?"

ಆ ಮಾತು ನನ್ನ ಅಂತರಂಗವನ್ನು ಮುಟ್ಟಿತು. ನಾನೂ ನರ್ಸಿಂಗ್ ಮಾಡಿದ್ದೆ. ಆದರೆ ಇವಳ ಮುಂದೆ ನಾನು ತೀರ ಸಣ್ಣವಳು ಎನಿಸುತ್ತದೆ. ಅವಳು ಚಾಚೂ ತಪ್ಪದೆ ಯಾವೊಂದೂ ಏರು ಪೇರಾಗದಂತೆ ನೋಡಿಕೊಳ್ಳು ವುದನ್ನು ನೋಡಿದರೆ ಕರುಳು ಕರುಣೆಯಿಂದ ಮಿಡಿಯುತ್ತದೆ. ಅವಳು ನಿಜ ವಾಗಿಯೂ ಭಾರತದ ಪ್ರತೀಕ; ಸಂಸ್ಕೃತಿಯ ಕೇಂದ್ರ; ವಿಶ್ವಭಾವದ ಸಾಂದ್ರ.

ಎದೆಯ ಹಕ್ಕಿ ತಾನೇ ತಾನಾಗಿ ಉಲಿಯಿತು.

o o o o o

ಶಾಲೆಗೆ ಸ್ಥಳವನ್ನು ಮುಫತ್ತಾಗಿ ಕೊಟ್ಟಿರುವುದಾಗಿ ಆರ್ಡರ್ ಬಂತು. ನಾವು ಕಳುಹಿಸಿದ ಕಟ್ಟಡದ ನಕ್ಷೆ, ವಿನ್ಯಾಸ ಮತ್ತು ವಿಸ್ತೀರ್ಣಗಳನ್ನು ಒಪ್ಪಿ ಕೊಂಡಿತು ಕಾರ್ಪೋರೇಷನ್. ಅನಂತರ ಕಟ್ಟಡ ಕಟ್ಟಿಕೊಡಲು ಟೆಂಡರ್ ಕರೆದದ್ದೂ ಆಯ್ತು. ನಾವು ಸಂಗ್ರಹಿಸಿದ ಹಣ ಎಪ್ಪತ್ತು ಸಾವಿರವನ್ನು ಮುಟ್ಟಿತು. ಐವತ್ತು ಸಾವಿರಕ್ಕಿಂತ ಕಡಿಮೆಯಾಗಿ ಕಟ್ಟಡವನ್ನು ಕಟ್ಟಿ ಕೊಡಲು ಯಾವ ಕಂಟ್ರಾಕ್ಟರೂ ಒಪ್ಪಲಿಲ್ಲ. ಹಾಗೆ ಐವತ್ತು ಸಾವಿರಕ್ಕೆ ಒಪ್ಪಿಕೊಂಡವನು ರಾಮರತನ್ ಒಬ್ಬನೇ. ಮಿಕ್ಕವರೆಲ್ಲ ಅರವತ್ತರಿಂದ ಎಂಭತ್ತರವರೆಗೂ ಇದ್ದರು. ರಾಮರತನ್‌ಗೆ ಬಿಲ್ಡಿಂಗ್ ನಕ್ಷೆಯನ್ನು ಕೊಟ್ಟು ಕಟ್ಟಡವನ್ನು ಕಟ್ಟಲು ಒಪ್ಪಿಗೆ ಕೊಟ್ಟು ಸಾಮಗ್ರಿಗಳನ್ನು ಕೊಳ್ಳಲು ಆಡ್ವಾ ನ್ಸ್ ಕೊಟ್ಟಿದ್ದಾಯ್ತು. ಏಳೆಂಟು ತಿಂಗಳ ಒಳಗಾಗಿ ಕಟ್ಟಡ ತಯಾರಾಗುವು ದೆಂದು ನಮ್ಮ ಆಶಯ. ಆದಕ್ಕೆ ಅವನ್ನು ಒಪ್ಪಿ ಕೆಲಸ ಆರಂಭಿಸಿದ.

ಕಟ್ಟಡದ ಕೆಲಸ ಅನುಕ್ರಮವಾಗಿ ನಡೆಯಹತ್ತಿದಾಗ ಮಹಿಳಾ ಮಂಡಳಿಯಿಂದ ದಿನಕ್ಕೊಬ್ಬ ಮಹಿಳೆ ಸೂಪರ್‌ವೈಸ್ ಮಾಡಲು ಟೊಂಕ ಕಟ್ಟಿದರು.

ನನಗೆ ಪುನಃ ಪುನಃ ವಿಷಮ ಶೀತಜ್ವರ ಬಂದು ನನ್ನ ದೇಹಸ್ಥಿತಿ ತೀರ ಹದಗೆಟ್ಟಿದ್ದುದರಿಂದ ನಾನು ಕೆಲಸದಲ್ಲಿ ಪಾಲ್ಗೊಳ್ಳುವಂತಿರಲಿಲ್ಲ. ಚಿಕಿತ್ಸೆ-ಶುಶ್ರೂಷೆ-ವಿಶ್ರಾಂತಿ ಯಾವುದರಲ್ಲೂ ಕೊರತೆಯಿರಲಿಲ್ಲ. ಆದರೂ ಚೇತರಿಸಿಕೊಳ್ಳದಿದ್ದುದು ನನ್ನ ದೌರ್ಭಾಗ್ಯ.

ಈ ದಿನ ಬರುವಾಗ ಅಂಜೂ ತನ್ನ ನಾದಿನಿ ರಾಗಮಯಿಯನ್ನು ಕರೆತಂದಳು. ಅವಳನ್ನು ನಾನು ನೋಡಿದ್ದು ಇದೇ ಮೊದಲು. ಹೆಚ್ಚು ಎತ್ತರವಲ್ಲದ ಮಟ್ಟಸವಾದ ಆಳ್ತನ. ಒಳ್ಳೆ ಲಕ್ಷಣವಾದ ಹೆಣ್ಣು. ಮದುವೆಯಾಗಿದ್ದಾಳೆ. ಗಂಡ 'ಷಿಪ್‌ಯಾರ್ಡ್'ನಲ್ಲಿ ಇಂಜಿನೀಯರು. ನಾನು ಅವಳನ್ನು ಸ್ವಾಗತಿಸುತ್ತ ಕೇಳಿದೆ "ಇಷ್ಟು ದಿನ ಏಕೆ ಬಗಲಿಲ್ಲ ದೆಹಲಿಗೆ ?"

ಆಗ ಅಂಜೂ ಅಂದಳು "ಬಂದು ಹೋಗಲು ಅದೆಷ್ಟು ಕಾಗದ ಬರೆದಿದ್ದೇನೋ ಈಗ ಬಂದಿದ್ದಾಳೆ. ಆಗಲೇ ಹೊರಡುವ ತರಾತುರಿ ಬೇರೆ !"

"ಅಂದರೆ....?"

"ಮನೆಯಲ್ಲಿ ತುಂಬಿದ ಸಂಸಾರ. ಯಜಮಾನರಿಗೆ ಯಾವ ಕೊರತೆಯೂ ಇಲ್ಲ. ಆದರೂ ಒಂದು ತಿಂಗಳು ಇರುವುದು ಕಷ್ಟವಂತೆ !"

ಅಂಜೂ ಮಾತು ಕೇಳಿ ಅವಳು ನಗುತ್ತ "ನೀನು ರಾಘು ಬಿಟ್ಟು ಎಷ್ಟು ದಿನ ಇರುತ್ತಿ ಹೇಳು ?"

"ನನ್ನ ಮಕ್ಕಳಿಗೆ ತೊಂದರೆಯಾಗುತ್ತೆ ನಾನಿಲ್ಲದಿದ್ದರೆ. ನಿನಗೆ ಆ ತೊಂದರೆ ಇಲ್ಲವಲ್ಲ ?"

ಅನಂತರ ಅಂಜನಾ ಒಳಹೋಗಿ ವಿಠ್ಠಲ್‌ರಾವ್‌ಗೆ ಚಹ ತರಲು ಹೇಳಿ ಬಂದಳು. ನಾನು ರಾಗಮಯಿಯನ್ನು ಕುರಿತು ಅಂದೆ "ಅಂಜೂ ಶಾಲೆಯ ಕಡೆ ಹೋದಾಗ ನೀನು ನನ್ನ ಬಳಿ ಇರು. ನನಗೆ ಒಬ್ಬಳೇ ಇದ್ದು ಬೇಸರವಾಗಿದೆ."

ನನ್ನ ಮಾತಿಗೆ ಅಂಜನಾ ನಗುತ್ತ "ಅವಳಿಗೆ ಬಾರದ ಕೆಲಸವಿಲ್ಲ. ಕರಕುಶಲ ಕಲೆಯಲ್ಲಿ ಎತ್ತಿದ ಕೈ. ಕೆಲಸ ಕಾರ್ಯಗಳಲ್ಲಿ ಬಲು ಚುರುಕು. ನಿನಗೆ ಯಾವುದು ಬೇಕೋ ಎಲ್ಲಾ ಕಲಿಸುತ್ತಾಳೆ."

ನಾನು ತಲೆದೂಗಿ ಮೆಚ್ಚಿಗೆಯನ್ನು ಸೂಚಿಸಿದೆ.

ಅಂಜು ದೇಶದ ಪ್ರಸಕ್ತ ಪರಿಸ್ಥಿತಿಯನ್ನು ಕುರಿತು"ಈಚೀಚೆಗೆ ದೇಶದಲ್ಲಿ ಮಳೆಬೆಳೆಗಳು ಹಿತಕರವಾಗಿಲ್ಲ, ಅತಿವೃಷ್ಟಿ-ಅನಾವೃಷ್ಟಿ-ಅಕಾಲವೃಷ್ಟಿ ಗಳಿಂದ ತೊಳಲುವುದೇ ಆಗಿದೆ. ಒಂದು ಕಾಲದಲ್ಲಿ ಭಾರತವರ್ಷ ಅತ್ಯಂತ ದಾರಿದ್ರ್ಯ-ಅಜ್ಞಾನ-ಅಸ್ವಂತ್ರ್ಯಗಳಿಂದ ಸಂಕಷ್ಟಗಳ ಪಾಲಾಗಿತ್ತು. ಅನಂತರ ರಾಜಕೀಯ ಬಿರುಗಾಳಿಯಿಂದ ಅಸುತೆತ್ತವರಿಗೆ ಲೆಕ್ಕವೇ ಇಲ್ಲ. ಆಗ ಇಡೀ ಭಾರತ ವರ್ಷವೇ ಅಲ್ಲೋಲಕಲ್ಲೋಲವಾಗಿದ್ದುದನ್ನು ಸ್ಮರಿಸಿಕೊಂಡರೆ ಈಗಲೂ ಮೈನವಿರೇಳುತ್ತದೆ. ಏನೋ ಆ ಸಂಕಷ್ಟ ಕಾಲಗಳು ಕಳೆದುವು ಎಂದರೆ ಒಂದಲ್ಲ ಒಂದು ರೀತಿಯಲ್ಲಿ ದೇಶ ತೊಂದರೆಗೆ ಸಿಕ್ಕುತ್ತಲೇ ಇದೆ. "ಈಸಲ ಅನಾವೃಷ್ಟಿ"

"ಇನ್ನು ಬೆಲೆಗಳು ಗಗನಕ್ಕೇರುವ ಪ್ರಸಂಗ ಬರುತ್ತದೆ. ಬಡವರಿಗೆ ಜೀವನೋಪಾಯ ಕಷ್ಟ. ಮುಂದಿನ ಬೆಳೆ ಬರುವವರೆಗೆ ಜೀವನ ಹೇಗೆ ಕಳೆಯುತ್ತದೋ ದೇವರೇ ಬಲ್ಲ. ಜನ ಹೊಟ್ಟೆಗಿಲ್ಲದೆ ಸಾಯುವ ಪ್ರಸಂಗ ಬರದಿದ್ದರೆ ಸಾಕು," ಎಂದಳು ರಾಗಮಯಿ.

"ಹಿಂದಿನ ವರ್ಷಗಳಲ್ಲಿ ಭೂಕಂಪ-ಪ್ರವಾಹಗಳಿಂದ ಸಹಸ್ರ ಸಂಖ್ಯೆಯಲ್ಲಿ ಪ್ರಾಣ ತೆತ್ತಿದ್ದಾರೆ ನತದೃಷ್ಟ ಜನ. ದೈವಕ್ಕೆ ಕರುಣೆಯಿಲ್ಲ, ಬಡಜನ ಪಡುವ ಕಷ್ಟವನ್ನು ನೋಡಿದರೆ ಹೃದಯ ಸಂಕಟದಿಂದ ಮಿಡಿಯುತ್ತದೆ."

ನಾನು ಅವರಿಬ್ಬರ ಸಂಭಾಷಣೆಯನ್ನು ಮೌನವಾಗಿ ಆಲಿಸುತಿದ್ದೆ.

"ಬಡತನದ ದಳ್ಳುರಿಯಲ್ಲಿ ಬೇಯುತ್ತಿರುವ ದೇಶ ಇದು. ಹೀಗೆ ಮೇಲಿಂದ ಮೇಲೆ ಬೀಳುತ್ತಿರುವ ಪೆಟ್ಟುಗಳು ದೇಶೋದ್ಯಮಕ್ಕೆ ಅಡ್ಡಿ-ಆತಂಕ ಗಳನ್ನು ತಂದೊಡ್ಡುತ್ತವೆಯಾದ್ದರಿಂದ ಪ್ರಗತಿ ನಿಧಾನ. ಬ್ರಿಟಿಷರ ಕಾಲಕ್ಕೂ

ಈ ಕಾಲಕ್ಕೂ ಅಜಗಜಾಂತರ ವ್ಯತ್ಯಾಸವಾಗಿದೆ. ಇನ್ನೂ ಆಗ ಬೇಕಾದುದು ಬ್ರಹ್ಮಾಂಡವೇ ಇದೆ ಎನ್ನೋಣ. ಈ ಮಹಾ ಪ್ರಯತ್ನಕ್ಕೆ ಅಗತ್ಯವಾದ ದೀರ್ಘಕಾಲ ಸಹಿಷ್ಣುತೆ ಬೇಕೇಬೇಕು. ಒಮ್ಮೆ ಸೇವಾ ಸೌಜನ್ಯತೆ ಕರಗತವಾದರೆ ದೇಶೋದ್ಯಮ ದಳದಳವಾಗಿ ಅರಳುತ್ತದೆ. ಪ್ರತಿಯೊಬ್ಬರೂ ಇದರಲ್ಲಿ ಪಾತ್ರರು; ಕರ್ತರು. "ಆಗಬೇಕಾದುದು ನ್ಯಾಯ, ಆದರೆ...!" ಅಷ್ಟಕ್ಕೇ ವಾಕ್ಯಸರಣಿ ತುಂಡುಗಡಿಯಿತು.

ರಾಗಮಯಿಯ ಮಾತನ್ನು ಕೇಳಿ ಕ್ರಿಶ್ಚಿಯನ್ ಸೋಷಿಯಲ್ ವರ್ಕರ್ಸ್ ಕಡೆ ನೂರಾರು ಶ್ರೋತಗಳಾಗಿ ಮನವನ್ನು ಹರಿಯಬಿಟ್ಟೆ... ಅದೇನು ಸಾಮಾನ್ಯ ವ್ಯವಸ್ಥೆಯೇ? ಲೋಕವೇ ಮೆಚ್ಚುವಂತಹ ಅಮೋಘವಾದ ಸೇವೆ!

ಅಂಜು ತನ್ನ ಅಭಿಪ್ರಾಯವನ್ನು ಹೊರಹಾಕಿದಳು. "ನಮ್ಮವರು ವಿದೆಯಲ್ಲಿ ಸಂಸ್ಕೃತಿಯಲ್ಲಿ ಯಾರಿಗೂ ಯಾವಾಗಲೂ ಕಡಿಮೆಯಿರಲಿಲ್ಲ. ವಿದೇಶೀಯರು ವಸ್ತ್ರಧಾರಣೆಯನ್ನೇ ಕಂಡರಿಯದ ದಿನಗಳಲ್ಲಿ ಭಾರತೀಯರು ಮಸ್ಲಿನ್ ಬಟ್ಟೆಗಳನ್ನು ತಯಾರಿಸುತಿದ್ದರಂತೆ. ಯೂರೋಪಿಯನ್ನರು ಮರಗಳ ಕೆಳಗೆ ವಾಸಿಸುತ್ತಿದ್ದಾಗ ನಮ್ಮವರು ದೊಡ್ಡ ದೊಡ್ಡ ಭವನಗಳಲ್ಲಿ ವಾಸಿಸುತಿದ್ದರು ಎನ್ನುತ್ತಾರೆ. ಆದರೂ ಸಹ ಜೀವನದಲ್ಲಿ ಏನೇನು ಆಘಾತಗಳು ನಡೆಯಬೇಕೋ ಅವು ಸಹ ನಿತ್ಯ ಸತ್ಯವೆ."

ಹೊರಗಡೆ ಮುಸ್ಸಂಜೆ ಮುಸುಗುತಿತ್ತು, ನಾನು ಸಂಧ್ಯಾದೀಪವನ್ನು ಹೊತ್ತಿಸಿದೆ.

ರಾಗಮಯಿ ಸಂಧ್ಯಾ ಜ್ಯೋತಿಗೆ ಕೈ ಜೋಡಿಸಿ "ಇದೆಲ್ಲವನ್ನೂ ದುರಭಿಮಾನ ಎಂದುಕೊಳ್ಳಬೇಡ ಜಾನಕೀ. ಭಾರತೀಯರು ಅಷ್ಟೊಂದು ಶ್ರೇಷ್ಠರಾಗಿದ್ದ ಪಕ್ಷದಲ್ಲಿ ಸ್ವಾತಂತ್ರ್ಯ ಗಳಿಸಿ ದಶಮಾನಗಳು ಉರುಳಿದ್ದರೂ ಇನ್ನೂ ಏಕೆ ಕುಂಟುತ್ತಿದ್ದಾರೆ ಎಂದು ನೀನು ಆಕ್ಷೇಪಿಸಬಹುದು. ಅದೇ ನೇರಕ್ಕೆ ತೀವ್ರ ಪ್ರಗತಿಪರ ದೇಶಗಳ ಕಡೆ ಬೊಟ್ಟು ಮಾಡಿ ಅವರು ಹೇಗೆ

ತ್ವರಿತಗತಿಯಲ್ಲಿ ಮುಂದುವರಿಯುತಿದ್ದಾರೆ ಎಂದೂ ಕೇಳಬಹುದು. ಆದರೆ ಅವರು ಅವರೇ. ನಾವು ನಾವೇ. ರೀತಿ ನೀತಿಗಳಲ್ಲಿ ವೈವಿಧ್ಯವುಂಟು."

ನಾನು ಮುಗುಳು ನಗೆ ಬೀರಿ ಒಪ್ಪಿಗೆ ಸೂಚಿಸಿದೆ. ಅಂತರಂಗ ಹಿರಿಯ ದ್ರಷ್ಟಾರರನ ಚೆನ್ನುಡಿಯನ್ನು ನೆನೆಯಿತು...ಜೀನ್ಯುಸ್ ಈಸ್ ಓನ್ಲಿ ಲ್ಯನ್ ಆಪ್ಟಿಟ್ಯೂಡ್ ಫಾರ್ ಪೇಶನ್ಸ್.

ನಾನು ಸ್ವಲ್ಪ ಯೋಚನಾಕ್ರಾಂತಳಾದೆ. ಮನಸ್ಸು ಗತಕಾಲದ ಕಡೆ ಹರಿಯಿತು. ದೃಷ್ಟಿಪಥದಲ್ಲಿ ಬ್ರಿಟಿಷರ ಸಾಹಸ ಮಾತ್ರವಲ್ಲ. ಅವರ ನಾನಾ ಬಗೆಯ ಕುಟಿಲೋಪಾಯಗಳು ಧೀರ ಸೈನಿಕರಂತೆ ಸಾಗಿಹೋದುವು. ಒಡನೆ ಅಂತರ್ವಾಣಿ ಕೂಗಿ ಹೇಳಿತು–ಅವರಿವರ ನೆಲವನ್ನು ಬಾಚಿದೋಚಿ ತಮ್ಮ ರಾಜ್ಯವನ್ನು ವಿಸ್ತರಿಸುತ್ತ ಮೆರೆದ ಸಾಮ್ರಾಜ್ಯದಾಹ ಎಂಥಾದ್ದು ? ಭಾರತ ಸಾಮ್ರಾಜ್ಯಕ್ಕೆ ಬ್ರಿಟಿಷರು ಹೇಗೆ ಸಾಮ್ರಾಟರಾದರು ? ಮೂರು ಶತಮಾನ ಗಳ ಕಾಲ ರಾಷ್ಟ್ರವನ್ನು ಆಳಿ ಹಿಂಡಿ ಹಿಪ್ಪೆಮಾಡಿದ್ದು ಯಾವ ನ್ಯಾಯ ???

— ೦ —

# ಅಧ್ಯಾಯ

## ೮

ಅಂಜನಾ ರಾಗಮಯಿ ಒಟ್ಟಾಗಿಯೇ ಒಳಗಡೆ ಪದಾರ್ಪಣೆ ಮಾಡಿದರು.

ಪ್ರಸನ್ನಮಯ ಮುಖಬಿಂಬಗಳಲ್ಲಿ ಕುಲಕುಲು ನಗೆಯ ಸುಂದರ ಹರವು. ನಾನು ಆನಂದ ತುಂದಿಲತೆಯಿಂದ ಸ್ವಾಗತಿಸಿದೆ. ರಾಗಮಯಿಯ ಕುಲುಕುಲು ನಗೆಯ ಸ್ವಭಾವದಿಂದ ಅವಳನ್ನು ಮುದ್ದಿಸೋಣವೇ ಎಂಬಷ್ಟು ಮನಸ್ಸು ಅರಳುತ್ತದೆ. ಇಬ್ಬರೂ ಸೋಫಾದ ಮೇಲೆ ಮಂಡಿಸಿದರು. ರಾಗಮಯಿ ಬಿ.ಎಸ್ಸಿ. ಪದವೀಧರೆ. ಅವಳ ಅತ್ತೆಯ ಮನೆಯವರು ಹಿಂದುಳಿದವರಾದುದರಿಂದ ಅವಳು ಹೊರಗಣ ಕಾರ್ಯಕ್ಷೇತ್ರಕ್ಕೆ ಇಳಿದವಳಲ್ಲ. ಅವಳಿಗೆ ಎಂ.ಎಸ್ಸಿ. ಮಾಡುವ ಹಂಬಲ. ಅದಕ್ಕೂ ಮನೆಯವರ ಸಮ್ಮತವಿಲ್ಲ. ಪತಿ ಷಿಪ್ ಯಾರ್ಡಿನಲ್ಲಿ ಕೆಲಸ ಮಾಡುವ ಇಂಜಿನೀಯರು. ಬಹುತೇಕವಾಗಿ ಅವನ ಕಾಲಯಾನ ಸಮುದ್ರದ ಮೇಲೆ. ಅವನೊಂದಿಗೆ ಒಮ್ಮೊಮ್ಮೆ ಮಾತ್ರ ಹೋಗುತ್ತಾಳೆ ಯಾನಕ್ಕೆ. ಉಳಿದ ಸಮಯವೆಲ್ಲಾ ಮನೆಯಲ್ಲಿ ಉಳಿಯುವ ಪ್ರಸಂಗ ಬರುತ್ತದೆ. ಅವಳ ಬಾಳು ನಿಜಕ್ಕೂ ವ್ಯರ್ಥ ಎನ್ನಬಹುದು. ಆದರೂ, ಅವಳು ಬೇಸರಿಸದೆ ಹೊಂದಿಕೊಂಡಿದ್ದಾಳೆ. ನಾನು ಅವಳಿಗಾಗಿ ಮನದಲ್ಲೇ ಮರುಗುವೆ. ಆದರೂ, ಆ ವಿಷಯವಾಗಿ ನಾನು ಚಕಾರ ಎತ್ತಲಿಲ್ಲ. ಅವಳು ಗೃಹ ನೀತಿಯನ್ನು ಕುರಿತು ಬಾಯಿ ಬಿಡುತ್ತಿರಲಿಲ್ಲ. ವಿಠ್ಠಲ್‌ರಾವ್ ಚಹ ಸಹಿತ ಸಿಹಿ–ಕಾರಗಳನ್ನು ತಂದು ಮುಂದಿಟ್ಟ.

ಲಾರ್ಡ್ ಕೃಷ್ಣನ ಮುಂದೆ ಉರಿಯುತಿದ್ದ ದೀಪಾಂಜನದಲ್ಲಿ ಜ್ಯೋತಿ ಕುಡಿ ಮಸಿ ಕಟ್ಟಿತ್ತು. ಅದನ್ನು ಕೆಡವಿ ಬತ್ತಿಯನ್ನು ನಸು ಎತ್ತರಿಸಿದೆ.

ಅಂಜನಾ ಸಮಾಧಾನ ಪೂರ್ವಕವಾಗಿ ನುಡಿದಳು "ಕಟ್ಟಡ ಮುಗಿಯುತ್ತ ಬಂತು. ಇನ್ನು ಮುಂದಿನ ನಿರ್ವಹಣೆ ಅಥವಾ ಕಾರ್ಯಭಾರ ಕಷ್ಟವೇ ಕ್ರಮಬದ್ಧವಾಗಿ ನಡೆಸುವುದರೊಂದಿಗೆ ಸರಿಯಾದ–ಉತ್ತಮ ಶಿಕ್ಷಕಿಯರನ್ನು ಸೇರಿಸಿಕೊಳ್ಳಬೇಕು. ಜೀವನ ಪ್ರಯುಕ್ತ ಎಲ್ಲರೂ ಶಿಕ್ಷಕ ವರ್ಗಕ್ಕೆ ನುಗ್ಗುತ್ತಾರೆ. ಕೆಲವು ಕಾಲ ಟೆಂಪರರಿಯಾಗಿಟ್ಟುಕೊಂಡು ಅವರವರ ಕಾರ್ಯದಕ್ಷತೆಯನ್ನು ಅರಿತು ಕಾಯಂ ಮಾಡಿಕೊಳ್ಳುವುದು ಸೂಕ್ತ."

"ನಿಜ...ನಿಜ"

ರಾಗಮಯಿಗೆ ನಾನೆಂದೆ "ನೀನೇಕೆ ಎಂ.ಎಸ್ಸಿ. ಮಾಡಿಕೊಳ್ಳಬಾರದು ? ನಿಮ್ಮವರು ಕೆಲಸ ಮಾಡಲು ಒಪ್ಪದಿದ್ದರೆ ಇರಲಿ, ಓದಿಸಲೂ ಒಪ್ಪಲಾರರೆ ?"

ಅವಳು ಸುಮ್ಮನೆ ಗೋಣು ಅಲ್ಲಾಡಿಸಿ 'ಇಲ್ಲ' ಎಂಬುದನ್ನು ಸೂಚಿಸಿದನಂತರ "ಮುಂದೆ ನೋಡೋಣ. ದೇವರಿದ್ದಾನೆ" ಎಂದಳು ಗಂಭೀರವಾಗಿ. ನಂತರ ಒಂದೆರಡು ಗಳಿಗೆ ನಿಧಾನಿಸಿ ನುಡಿದಳು "ನಮ್ಮಲ್ಲಿ ಒಂದು ಮಾತು ಸತ್ಯ. ಅಂದಿಂದಿಗೂ ನಾವು ಮತ್ತು ನಮ್ಮವರು ಜೀವನ ಜ್ಯೋತಿಯ ಕುಡಿ ಎತ್ತರಿಸುವುದರಲ್ಲಿ ಆತ್ಮಜ್ಯೋತಿಯನ್ನು ಅಲಕ್ಷಿಸುತ್ತಿರುವ ಅಗಾಧ ನಷ್ಟವನ್ನು ಅರಿತುಕೊಳ್ಳುವುದೇ ಇಲ್ಲ. ಅದೇ ನಮ್ಮ ಅವನತಿಗೆ ಕಾರಣ."

ಆಗ ಅಂಜನಾ ದನಿಗೂಡಿಸಿದಳು "ಅದೇ ಎಲ್ಲಾ ಕರ್ಮಕಾಂಡಕ್ಕೂ ಕಾರಣ." ಆಗ ನಾನೆಂದೆ "ಆತ್ಮಜ್ಯೋತಿ–ಜೀವನಜ್ಯೋತಿ ಎಂಬ ವಿಚಾರ ಶ್ರದ್ಧೆಗೆ ಪುಟವಿಟ್ಟು ತಲೆಕೆಡಿಸಿಕೊಂಡರೆ ದೇವರೇಗತಿ ! ನೋಡಿ, ನಾವು ವಿದ್ಯೆಗೇ ಪ್ರಾಶಸ್ತ್ಯ ಅಥವಾ ವಿದ್ಯೆಯಿಂದಲೇ ಸರ್ವಸ್ವ ಎಂಬ ತತ್ವಕ್ಕೆ ಅಂಟಿಕೊಂಡವರಲ್ಲ. ಯಾರು ಯಾರಿಗೆ ಎಷ್ಟೆಷ್ಟು ಲಭ್ಯವೋ ಅಷ್ಟಷ್ಟರಲ್ಲೇ ಸಂತೃಪ್ತಿ. ಎಷ್ಟು ಗಳಿಸಿದರೆ ಅಷ್ಟೇ ಸಾಕು ಎಂಬ ಸಮಾಧಾನ. ಅಂತಲೇ ಸಂಸಾರದಲ್ಲಿ ಒಬ್ಬರಿಗೊಬ್ಬರು ಭಾರವಾಗುವುದಿಲ್ಲವೇನೋ ಎನಿಸುತ್ತೆ ನನಗೆ."

ಹಠಾತ್ತಾಗಿ ಹೊರಬಿದ್ದ ನನ್ನ ಉತ್ತರದಿಂದ ರಾಗಮಯಿ "ಇದು ನಿಮ್ಮ ಅಭಿಪ್ರಾಯ ಎನ್ನೋಣ. ಇಲ್ಲಿಯದು ಅವಿಭಕ್ತ ಕುಟುಂಬ. ನಾವು ಯಾವುದನ್ನೂ 'ಭಾರ' ಎಂದು ಕೊಳ್ಳುವುದಿಲ್ಲ.

ಅಂಜನಾ ಅವಳ ಮಾತನ್ನು ಸಮರ್ಥಿಸುತ್ತ "ಹೌದು, ಜಾನಕೀ ರಾಗಮಯಿ ಹೇಳಿದುದರಲ್ಲಿ ಅರ್ಥವಿದೆ. ನೀನು ಯಾವುದನ್ನು 'ಭಾರ' ಎಂದೆಯೋ ಅದನ್ನು ನಾವು 'ಕರ್ತವ್ಯ' ಎನ್ನುತ್ತೇವೆ. ನಿನಗೆ ಹಿಂದೊಮ್ಮೆ ಈ ವಿಚಾರವಾಗಿ ಹೇಳಿಯೂ ಇದ್ದೆ. ಅಲ್ಲದೆ ನೀನು ಈಗಾಗಲೇ ಭಾರತೀಯ ಕೌಟುಂಬಿಕ ಪದ್ಧತಿಯನ್ನು ಅರ್ಥ ಮಾಡಿಕೊಂಡಿರುವುದರಿಂದ ಇನ್ನು ಹೇಳುವ ಅಗತ್ಯವಿಲ್ಲ. ನಮ್ಮ ಜೀವನ ವೈಶಿಷ್ಟ್ಯ ಕಾಲಾನುಕಾಲಕ್ಕೂ ಇರುವಂತಾದ್ದು."

ನಾನು ಒಂದೆರಡು ಗಳಿಗೆ ನನ್ನಲ್ಲೇ ಯೋಚಿಸಿ ಮುಗುಳು ನಗೆಯಿಂದ ಪುಷ್ಟೀಕರಿಸಿದೆ.

ಅಂಜನಾ ನುಡಿದಳು "ನಿಮ್ಮಲ್ಲಿ ನೀವು ಗಳಿಸಿಕೊಂಡಿರುವ ವೈಯಕ್ತಿಕ ಸ್ವಾತಂತ್ರ್ಯ ಮೆಚ್ಚುವಂತಾದ್ದು. ಇಲ್ಲಿ ಮುಖ್ಯವಾಗಿ ಸ್ವಾತಂತ್ರ್ಯವೇ ಇಲ್ಲವಾಗಿದೆ. ಎಷ್ಟೋ ಮಂದಿ ಬುದ್ಧಿಜೀವಿಗಳು ಕೂಡ ಶೃಂಖಲಾಬದ್ಧ ಜೀವನ ದಿಂದ ಹೊರತಾಗಿಲ್ಲ. ಇದೊಂದು ದೊಡ್ಡ ಕುಂದು. ನಮ್ಮ ದೇಶ ಇಷ್ಟೊಂದು ಹಿಂದುಳಿಯಲು ಕಾರಣ ಸ್ತ್ರೀ ಶಕ್ತಿಯ ಮೂಲೋತ್ಪಾಟನೆ !" ಎಂದ ಅವಳು ಪುನಃ ತಿರಸ್ಕಾರ ಭಾವನೆಯಿಂದ "ನಾವು ಯಾವುದನ್ನು 'ಸ್ವಾರ್ಥ' ಎನ್ನುತ್ತೇವೋ ಅದನ್ನೇ ಅನೇಕರು 'ಪವಿತ್ರ' ಎಂದು ಎತ್ತಿ ಹಿಡಿಯುವುದರಲ್ಲಿ ಇಂದಿಗೂ ಮುಂದಿದ್ದಾರೆ. ಅಂದಮೇಲೆ ನಮ್ಮಗಳ ಆಲೋಚನಾ ಶಕ್ತಿಯ ಹರಣ ಬಹುಮತದಿಂದಲೇ ನಡೆಯುತ್ತದೆ."

ಅಂಜನಾಳ ವ್ಯಾಖಾನದಿಂದ ರಾಗಮಯಿ ನೊಂದು ನುಡಿದಳು "ಈಗೀಗ ವಿದ್ಯಾವಂತ ತರುಣರಿಗೆ ಮುದಿಯರನ್ನು ಪಶುಪಕ್ಷಿಗಳಂತೆ ಸಾಕು ವುದು ಸರ್ವಥಾ ಇಷ್ಟವಿಲ್ಲ. ಲೋಕ ನಾಗಲೋಟದಿಂದ ಓಡುತ್ತಿರುವಾಗ

ತನುಗೂ ಓಡುವ ಹುಮ್ಮಸ್ಸಿದೆ. ಆದರೂ ಕಾಲಾನುಕಾಲದಿಂದ ವಂಶ ಪಾರಂಪರ್ಯವಾಗಿ ಹರಿದುಬಂದ ನೆತ್ತರಿನ ಕಿಲುಬು ಅಷ್ಟು ಸುಲಭವಾಗಿ ಹರಿಯುವುದಿಲ್ಲ. ಆದ್ದರಿಂದ ಪ್ರಗತಿಯಲ್ಲಿ ಮಂದಗತಿ."

ಹಾಗೆಂದ ರಾಗಮಯಿಯ ಮುಖಬಿಂಬದಲ್ಲಿ ಜಾಹೀರಾತಿಗೆ ಬೀರುವಂತಹ ಕೃತಕ ನಗೆಯನ್ನು ಬೀರಿದರೂ ಚಿಂತಾಪರಳಾದುದು ಸುವ್ಯಕ್ತ. ಆದೇ ವೇಳೆಗೆ ಡೇವಿಡ್ ಪ್ರಸನ್ನ ಮುಖದಿಂದ ಒಳಬಂದ. ತುಟಿಗಳಲ್ಲಿ ಹಸನಾದ ನಗು. ಅವನನ್ನು ಇಬ್ಬರಿಗೂ ಪರಿಚಯ ಮಾಡಿಸಿದ ನಂತರ ಅಂದೆ,

"ಸತ್ಯಭಾಮ ಎಂದರೆ ಇವನಿಗೆ ಬಲು ಪ್ರೀತಿ. ಅವಳಿಗಾಗಿ ಓಡಿ ಬರುತ್ತಾನೆ, ಅವಳಿಗೂ ಅಷ್ಟೆ ಅಂಕಲ್ ಎಂದರೆ ಪಂಚ ಪ್ರಾಣ. ಅವನು ಒಂದಿನ ಬರದಿದ್ದರೆ ಹತ್ತು ಬಾರಿ ಕೇಳುತ್ತಾಳೆ."

ಆದೇ ಶಾಲೆಯಿಂದ ಬಂದು ಮುಖ ಮಜ್ಜನ ಮಾಡುತಿದ್ದ ಸತ್ಯಭಾಮ ಹೊರಬಂದು "ನೀವೆಲ್ಲಾ ದಿನಾಲೂ ಹೀಗೆ ಬರುತಿದ್ದರೆ ಎಷ್ಟು ಚೆನ್ನ ?" ಎನ್ನುತ್ತ 'ಹಲೋ ಆಂಟಿ ! ಹಲೋ ಅಂಕಲ್ !' ಎಂದು ಸ್ವಾಗತಿಸಿದಳು. ಸತ್ಯಭಾಮ ಅವನ ಬೆನ್ನಮೇಲೆ ಹತ್ತಿ ಇಳಿದು ಕುದುರೆಯಾಟ ಆಡಿ ತೊಡೆಯನ್ನೇರಿ ಮಾತಿನ ಮಳೆಗರೆದಳು. ಅವಳ ಬಾಲಲೀಲೆ ಎಲ್ಲರ ಮನವನ್ನೂ ಅರಳಿಸಿತು ಹೂವಿನಂತೆ. ಡೇವಿಡ್ ಎಲ್ಲರೊಡನೆಯೂ ಸರಸ ಸಂಭಾಷಣೆ ನಡೆಸಿದ. ಸ್ವಲ್ಪಹೊತ್ತು ಸಾನಂದದಿಂದ ಉರುಳಿತು ಆತ್ಮೀಯರ ಮಧ್ಯೆ. ಡೇವಿಡ್ ಮಾತಿನ ನಡುವೆ ನನ್ನನ್ನು ಕೇಳಿದ "ನಿನಗೆ ಮನೆಯಲ್ಲೇ ಕುಳಿತಿದ್ದು ಬೇಸರವಾಗದೆ ? ನೀನೇಕೆ ಕೆಲಸ ಮಾಡಬಾರದು ?"

ನಾನು ಮುಗುಳು ನಕ್ಕು ನುಡಿದೆ— "ನನಗೆ ಶಾಲಾ ಸಂಪತ್ತಿಯ ಹೊರತು ಮತ್ತೊಂದು ಧ್ಯೇಯವಿಲ್ಲ ... ಅದಕ್ಕೂ ಮಿಗಿಲಾಗಿ ಯಾವ ಆಸೆಯೂ ಇಲ್ಲ. ಈ ಪ್ರಪಂಚದಲ್ಲಿ ಸರಸ್ವತೀ ಆರಾಧನೆ ಅಂದರೆ ವಿದ್ಯಾರಾಧನೆ ಎಲ್ಲಕ್ಕಿಂತಲೂ ಮಿಗಿಲಾದುದು....ಮಕ್ಕಳ ಜ್ಞಾನ ವಿಕಾಸ ರಾಷ್ಟ್ರೀ

ನ್ನತಿಗೆ ಪೂರಕ...ಒಂದು ವಿಧವಾಗಿ ಆಲೋಚಿಸಿ ನೋಡಿದರೆ ವ್ಯಕ್ತಿಗತವಾದ ಸ್ನೇಹ–ಪ್ರೇಮ–ಪ್ರೋತ್ಸಾಹ–ವಿವೇಕ–ವಿವೇಚನೆಗಳೂ ಸಹ ಸಮಾಜೋನ್ನತಿಗೆ ಪೂರಕ. ಜ್ಞಾನ ಸಂವೃದ್ಧಿಯುಳ್ಳ ಮನಃಕುಂಡದ ಪುಣ್ಯ ಜಲದಲ್ಲಿ ಮಿಂದು ಮಡಿಯಾದ ಅಂತರಂಗ ಸಾವಿರ ಶರಣಾರ್ಥಿಗಳಿಗಿಂತಲೂ ಶಾಂತಿಯುಳ್ಳವು. ಅಂದಮೇಲೆ, ಟೈಪಿಸ್ಟ್ ಆಗಿ ದುಡಿದು ಗಳಿಸುವ ನಾಲ್ಕು ಕಾಸು ಯಾವ ಲೆಕ್ಕ?"

ಅವನು ಗಂಭೀರವಾಗಿ ಯೋಚಿಸಿ ತಲೆದೂಗಿದ.

ಈ ಜೀವನ ಮಾರ್ಗ ಯೋಗದಲ್ಲಿ ಅಭಿಶಪ್ತ ಹೆಜ್ಜೆಗಳ ಮುನ್ನಡೆಗೆ ತ್ಯಾಗ–ನಿಷ್ಠೆ–ಪರಿಜ್ಞಾನಗಳ ಬಲವೇ ಬಲ. ಈ ರಹಸ್ಯವನ್ನು ನಾನು ಅರಿತುಕೊಂಡದ್ದು ಭಾರತ ಸಂಸ್ಕೃತಿಗೆ ಹೊಂದಿಕೊಂಡಮೇಲೆ. ಅದು ನಿಸ್ಸಂಶಯ."

ರಾಗಮಯಿ ಅಂಜನಾ ಡೇವಿಡ್‌ರವರು ಒಟ್ಟಾಗಿಯೇ ಮೆಟ್ಟಿಲಿಳಿದರು. ಅದೇ ಸಮಯಕ್ಕೆ ಭಾಸ್ ಆಗಮಿಸಿದ. ಕಾರು ನಡೆಸುವುದು ಅವನೇ. ಡಾಂಬಿಕ ಜೀವನ ಅವನಿಗೆ ಇಷ್ಟವಿಲ್ಲ. ಸಾಧ್ಯವಿದ್ದಷ್ಟು ಅವನ ಅಗತ್ಯಗಳನ್ನು ತಾನೇ ನಿರ್ವಹಿಸುವವ. ಕಾರನ್ನು ನಿಲ್ಲಿಸಿದ ಬಳಿಕ ಅಂಜನಾ ಮತ್ತು ರಾಗಮಯಿಯರನ್ನು ಆನಂದಸ್ಫೂರ್ತಿಯಿಂದ ಮಾತಾಡಿಸಿದನಾದರೂ ಡೇವಿಡ್ಡನನ್ನು ತಿರುಗಿಯೂ ನೋಡಲಿಲ್ಲ. ಭಾಸ್ ಅವನನ್ನು ಕಾಣುವುದು ಸಂಶಯ ದೃಷ್ಟಿಯಿಂದಲೇ. ನನಗಂತೂ ಇದೊಂದು ಅನುಭವಿಸಲಾರದ ಸಂಕಟ. ಭಾಸ್ ಯಾಂತ್ರಿಕವಾಗಿ ಒಳಬಂದ. ಮಾತುಕತೆಯಲ್ಲಿ ಬಹಳ ಬಿಗುಮಾನ. ಉದಾಸೀನದಿಂದ ಕೂಡಿದ ಒಂದೆರಡು ಮಾತುಗಳು. ಮಗಳನ್ನು ಮುದ್ದಿಟ್ಟು ಶೌಚಾಲಯಕ್ಕೆ ಹೋಗಿ ದಡ್ಡನೆ ಕದ ಮುಚ್ಚಿಕೊಂಡು ಸ್ನಾನ ಮುಗಿಸಿದ. ಮಾತಾಡಿಸಿದರೂ ಉತ್ತರಿಸಲಾರದಷ್ಟು ಸಿಟ್ಟು–ಅಸಮಾಧಾನ ಏನಾದರೂ ಅನ್ನಬಹುದು. ಅವನ ಬಿಗುಮಾನದ ಪ್ರತಿಯೊಂದು ಉಸಿರೂ ನನ್ನ ಅಂತರಂಗವನ್ನು ಕಿಚ್ಚಿನ ಕಿಡಿಯಂತೆ ಸುಡುತ್ತದೆ. ಮಾನಸಿಕ ತಳಮಳದಿಂದ ಕಣ್ಣುಗಳು ಸಣ್ಣಗೆ ಹನಿತುವು.

ಕರವಸ್ತ್ರವನ್ನು ತೆಗೆದು ಮುಖವನ್ನು ಒರಿಸಿಕೊಳ್ಳುವ ನೆಪದಲ್ಲಿ ಕಣ್ಣು ಗಳನ್ನೂ ಒರಿಸಿಕೊಂಡು, ಸಂಧ್ಯಾ ಫಲಾಹಾರ ಮತ್ತು ಚಹವನ್ನು ಮುಂದಿಟ್ಟೆ. ಚಹ ಅವನ ಪ್ರಿಯವಾದ ಪಾನೀಯ. ಫಲಾಹಾರ ಮುಗಿದ ನಂತರ ಪತ್ರಿಕಾವಲೋಕನದಲ್ಲಿ ಮನವಿಟ್ಟ. ಮುಖ ಭಾವದಲ್ಲಿ ಕಹಿಮುದ್ರೆ. ಮಾತುಕತೆಯಲ್ಲಿ ಗೆಲುವಿಲ್ಲ. ಏನೋ ಒಂದು ಬಗೆಯ ಗಾಂಭೀರ್ಯ ಇನ್ನೇನೋ ಒಂದು ಬಗೆಯ ಮಾನಸಿಕ ತುಮುಲ, ಮತ್ತೇನೋ ಒಂದು ಬಗೆಯ ಆತಂಕಗಳ ಭಯಾವಹ ಮೂರ್ತರೂಪ. ನನಗದು ಅನುಭವಿಸ ಲಾಗದ ಹಿಂಸೆ ಅಥವಾ ಚಿಂತೆ. ಆ ರುದ್ರ ಗಂಭೀರ ಕ್ಷಣಗಳು ಕಳೆಯ ಲೆಂದು ನಾನು ಒಂದು ಮಾಸಿಕದಲ್ಲಿ ಮನವಿಟ್ಟೆ. ಅದರಲ್ಲೊಂದು ಕಥಾ ಸುರುಳಿಯಲ್ಲಿ ಇದೇ ಬಗೆಯ ಅಸನೀಯವಾದ ಸನ್ನಿವೇಶದ ಚಿತ್ರಣ ವಿತ್ತು. ಅದರಲ್ಲಿ ಸತ್ಯಾಂಶ ಬೆಳಕಿಗೆ ಬಾರದೆಯೆ ಹೋದಾಗ ಮಡದಿ ಮನಸ್ವಾಸ್ಥ್ಯವನ್ನು ಕಳೆದುಕೊಂಡು ರೋಗವಶಳಾಗುತ್ತಾಳೆ. ನಾನದನ್ನು ಗಂಭೀರವಾಗಿ ಯೋಚಿಸುತ್ತ ಅದರಾಳದಲ್ಲಿ ತೀವ್ರ ಮುಳುಗಿದೆ.

ಸತ್ಯಭಾಮ ಓಡಿಬಂದು ತಂದೆಯ ಮೈಮೇಲೆ ಬಿದ್ದು ಮಾತಿನ ಮಳೆಗರೆಯುತ್ತ ಮುತ್ತಿನ ಸೇಸೆಯನ್ನು ಸುರಿದಳು, ಮುಖ ಬಿಂಬದ ಮೇಲೆ. ತಂದೆ ಮಗಳ ಮಧ್ಯೆ ಸಂತಸದ ಹೂಗಳು ಅರಳಿದುವು. ಮಾತಿನ ಮಳೆ ಸುರಿದು ಮಿಂಚಿನ ನಗೆಯ ಹೊನಲು ಹರಿಯಿತು. ನಾನು ಪುಸ್ತಕವನ್ನು ತೆಗೆದಿಡುವ ನೆಪದಲ್ಲಿ ಒಳಹೋದೆ. ಮನಸ್ಸಿಗೆ ಅತೀವ ಆಘಾತವಾಗಿದ್ದರೂ ಒಂದಲ್ಲ ಒಂದು ದಿನ ಸತ್ಯ ಬೆಳಕಿಗೆ ಬಂದೇ ಬರುತ್ತದೆ ಎಂಬ ದೃಢವಾದ ನೆಚ್ಚು ಮನದಾಳದಲ್ಲಿ ನೆಲೆಗೊಂಡಿತ್ತು ; ನೋಡೋಣ, ದೇವರಿದ್ದಾನೆ ಎಂಬ ಧೋರಣೆಗೆ ಶರಣಾದೆ.

ಮರುದಿನ ಬೆಳಿಗ್ಗೆ ನೀಲಾರಾಂ, ಲಲಿತ ಮೂರ್ತಿ ಒಟ್ಟಾಗಿಯೇ ಬಂದರು, ಲಲಿತೆಯನ್ನು ನೋಡಿದರೆ ಪುಷ್ಕಳವಾಗಿ ಉಂಡು ಯಾವ ಕಾಲವೋ ಎನಿಸುವಂತೆ ಕ್ಷೀಣಿತ ದೆಶೆಗೆ ಇಳಿದಿದ್ದುದು ಗೋಚರಿಸಿತು. ನಾನು ಅನು ರಾಗದಿಂದ ಅವರನ್ನು ಬರಮಾಡಿಕೊಂಡೆ.

"ಲಲಿತಾ, ಏಕೆ ಹೀಗಾಗಿದ್ದೀಯೇ ? ಮೈಯಲ್ಲಿ ಆರೋಗ್ಯವಿಲ್ಲವೆ ? ಡಾಕ್ಟರನ್ನು ಕಂಡಿದ್ದೀಯಾ ?" ನನ್ನ ಪ್ರಶ್ನೆಗಳು ಮೇಲಿಂದ ಮೇಲೆ ಏಳುತ್ತಲೇ ಇದ್ದರೆ ಅವಳಿಗೇನೆನ್ನಬೇಕೋ ಹೊಳೆಯದೆ ಸ್ವಲ್ಪ ತಬ್ಬಿಬ್ಬಾದಳು. ಗಳಿಗೆಯೊಂದು ಮಾತಿಲ್ಲದೆ ಉರುಳಿತು. ಅನಂತರ ತನ್ನನ್ನು ತಾನು ಸಾವರಿಸಿಕೊಳ್ಳುತ್ತ ನುಡಿದಳು ಅವಳು "ಮನುಷ್ಯರು ಅಂದಮೇಲೆ ಏನಾದರೊಂದು ಇದ್ದೇ ಇರುತ್ತೆ ಬಿಡು. ನಾವು ಸೂಕ್ಷ್ಮ ಜೀವಿಗಳು. ಸ್ವಲ್ಪದರಲ್ಲೇ ತನುಮನಗಳಿಗೆ ಭವರೋಗ ಅಂಟಿಕೊಳ್ಳುತ್ತೆ. ಅನುಭವಿಸುವುದೊಂದೇ ದಾರಿ. "ಪ್ರಯತ್ನ ಪೂರ್ವಕವಾಗಿ ಕಿರುನಗೆಯೊಂದು ಮೂಡಿ ಮಾಯವಾಯಿತು. ಅವಳ ತುಟಿಗಳಲ್ಲಿ ಅವಳ ಸಂಸಾರದ ವಿರಸವನ್ನು ತುಂಬ ಹಿಂದಿಲಿಂದಲೇ ಕೇಳಿ ತಿಳಿದಿದ್ದೆ. ನಾನು ಮನದಲ್ಲೇ ನೊಂದು ನುಡಿದೆ–" ನೀನು ಎಂ.ಎ. ಓದಿದವಳು. ನಿನಗೆ ನಾನು ಹೇಳುವಂತಾದ್ದು ಏನೂ ಇಲ್ಲ. ನೀನು ಯಾವುದಾದರೊಂದು ಕೆಲಸ ಹಿಡಿದರೆ ಒಳ್ಳೆಯದು ಎನಿಸುತ್ತೆ. ನೀನೇ ಯೋಚಿಸಿ ನೋಡು."

ಮೂವರೂ ಸೋಫಾದ ಮೇಲೆ ಕುಳಿತು ಕೊಂಡನಂತರ ನೀಲಾ ನುಡಿದಳು "ಅವಳದು ವಿರಸದಾಂಪತ್ಯ, ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು ಎಂಬಂತಾಗಿದೆ. ಸಾಲದುದಕ್ಕೆ ಸಂತಾನವೂ ಇಲ್ಲ. ಎಂ.ಎ. ಓದಿ ಮನೆಯಲ್ಲಿ ಕೂರುವ ಪ್ರಸಂಗ. ಇವಳಿಗೆ ಕೈತುಂಬ ಕೆಲಸ ಮಾಡುವ ಇಚ್ಛೆ. ಆದರೆ ಅವಳನ್ನು ಹೊರ ಪ್ರಪಂಚಕ್ಕೆ ಕಾಲಿಡಗೊಡಿಸುತ್ತಿಲ್ಲ ಮೂರ್ತಿ ! ಅದೇ ಅವಳಿಗೆ ಮಾನಸಿಕ ಹಿಂಸೆ."

"ನಾಲ್ಕು ಜನ ಕೂಡಿ ಹಿತವಾದ ಹೇಳಬಾರದೇಕೆ ?"

"ಅಷ್ಟು ಸುಲಭವೇ ? ಸಣ್ಣ ಮನಸ್ಸಿನವರು ಯಾವತ್ತೂ ಹೀಗೆಯೇ ಯಾರ ಮಾತನ್ನೂ ಕೇಳುವವರಲ್ಲ. ವೃಥಾ ಅಶಾಂತಿ, ಜೀವನ ಸೌಖ್ಯ ನಷ್ಟ. ಅವನೇನೂ ಅವಿದ್ಯಾವಂತನಲ್ಲ. ಕಲಿತು ಅಧಿಕಾರ ಸ್ಥಾನದಲ್ಲಿದ್ದು ಹೀಗಿದ್ದರೆ ಏನು ಮಾಡೋಣ ?"

ಆ ಮಾತಿಗೆ ನಾನು ಮರು ನುಡಿಯುದಾದೆ. ಮನಸ್ಸು ಹಕ್ಕಿಯಂತೆ ಹಾರಿ ಲಂಡನ್ನಿನಾದ್ಯಂತ ಸಂಚರಿಸಿತು. ಅಲ್ಲಿನ ಸ್ತ್ರೀಯರ ಸುಖಜೀವನ ದೃಷ್ಟಿಪಟಲದ ಮೇಲೆ ಚಲನಚಿತ್ರದಂತೆ ಸುಳಿಸುಳಿದಳಿಯಿತು. ಹುಡುಗಿಯರದೇ ಮೇಲುಗೈ. ಇಂಥ ಪ್ರಸಂಗದಲ್ಲಿ ಹುಡುಗಿಯರು ಒಂದು ಕ್ಷಣವೂ ನಿಲ್ಲಲಾರರು ಅಲ್ಲಿ... ಎನಿಸಿದಾಗ ಮರ್ಮರ ಮರುಗಿತು ಮನಸ್ಸು.

ನೀಲಾ ಬೇಸರದಿಂದ ನುಡಿದಳು "ಮಹಾಸ್ವಾರ್ಥಿ ! ಹೆಣ್ಣು ಯಾವತ್ತೂ ತನ್ನಂಕೆಯೊಳಿರಬೇಕು ಎಂಬ ಕುತ್ಸಿತ ಮನೋಭಾವ ಮೂರ್ತಿಯದು!"

ನಾನು ಮೂಕಮೌನ ತಾಳಿದೆ. ಮನಸ್ಸು ಲಲಿತಳಿಗಾಗಿ ಚಿಂತಾ ಸಮುದ್ರದಲ್ಲಿ ಮುಳುಗಿಹೋಯಿತು. ದೃಷ್ಟಿ ಪಟಲದ ಮುಂದೆ ಗಂಡಿನ ಕಾಮಲಾಲಸೆಯು ವಿಕೃತರೂಪ ಸುಳಿ ಸುಳಿಯಿತು, ಚಲನಚಿತ್ರದಂತೆ.

ಲಲಿತ ಹೇಳ ತೊಡಗಿದಳು "ಈ ದೇಶದಲ್ಲಿ ಸ್ತ್ರೀಸ್ವಾತಂತ್ರ್ಯ ಇಲ್ಲವೇ ಇಲ್ಲ ಎಂದೇನಿಲ್ಲ. ಬುದ್ಧಿವಾನ್ಯರು ಸ್ವಾತಂತ್ರ್ಯ ಜೀವನದಲ್ಲಿ ಸುಖಿಗಳಾಗಿದ್ದಾರೆ ಎಂಬುದು ಸುಳ್ಳಲ್ಲ. ಅದು ಶೇಕಡಾ ಹತ್ತಿಪ್ಪತ್ತು ಮಾತ್ರ ! ಉಳಿದವರಲ್ಲಿ ಕೆಲವರು ನನ್ನಂತಹ ನತದೃಷ್ಟರು. ಉಳಿದವರೆಲ್ಲಾ ಮಂಕು ದಿಣ್ಣೆಗಳು ! ಅವರಿಗೆ ಸ್ವಾತಂತ್ರ್ಯಾಸ್ವಾತಂತ್ರ್ಯಗಳ ಅರಿವಿಲ್ಲ. ಹೇಗೆ ಬಾಳಿಗೆ ಬಂದರೋ ಹಾಗೆಯೇ ನಿರ್ಗಮಿಸುತ್ತಾರೆ. ಜೀವನರಂಗದಲ್ಲಿ ಬುದ್ಧಿಜೀವಿಗಳಿಗೆ ಮಾತ್ರ ಇದು ಸಂಕಟಕಾರಕ...."

"ಸರಿ, ಮುಂದೇನು ಮಾಡಬೇಕೆಂದಿದ್ದೀ ?"

"ಭಗವಂತ ಹೇಗೆ ದಾರಿ ತೋರಿಸುತ್ತಾನೋ ಹಾಗೆ..." ನಿಟ್ಟುಸಿರು ಬಿಟ್ಟಳು ಅವಳು. ಸ್ವಲ್ಪ ತಡೆದು ಪುನಃ ಅತ್ಯಂತ ವಿಷಾದವಾಣಿಯಲ್ಲಿ ಭಾವೋದ್ವೇಗದಿಂದ "ನಾವು ಗಂಡಿನ ಅಂಗೈಯಲ್ಲಿ ಆಡುವ ಗಿಳಿಗಳಾಗಿದ್ದರೆ ಬಾಳು-ಬದುಕು. ಮಾತು ಮೀರಿದರೆ ಹಿಂಸೆ–ನರಕ, ಅಂದಮೇಲೆ, ಇದೆಲ್ಲಾ ಏಕೆ ? ಎಂಬ ಜುಗುಪ್ಸೆ ಯಾರಿಗಾದರೂ ಬಂದೇ ಬರುತ್ತದೆ. ಬುದ್ಧಿ

ಚಾತುರ್ಯವನ್ನು ಕಸದ ಬುಟ್ಟಿಗೆಸೆದು ಮೂಲೆಗುಂಪಾಗುತ್ತಾರೆ ಗೃಹಿಣಿಯರು. ಇಂತಹ ಪ್ರಸಂಗಗಳಲ್ಲಿ ಎಷ್ಟೆಷ್ಟು ಕೊಲೆಗಳು, ಎಷ್ಟೆಷ್ಟು ಆತ್ಮಹತ್ಯೆಗಳು ನಡೆದಿವೆಯೋ ಅವನ್ನು ದೇವರೂ ಗ್ರಹಿಸಿ ಹೇಳಲಾರ. ಈ ಜೀವನ ಮೇಲೆ ತಳುಕು ಒಳಗೆ ಹುಳುಕು. ಇಂಥಹ ಜೀವನ ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ" ನಿರಾಸೆ–ಜುಗುಪ್ಸೆಗಳ ಒಕ್ಕೂಟವಾಗಿ ಹರಿದುಬಂತು ದನಿ. ಮುಖಬಿಂಬ ನಿರ್ವಿಣ್ಣವಾಯಿತು.

ನಾನು ಏನೂ ಹೇಳಲಿಲ್ಲ. ಕೆಲವು ಗಳಿಗೆಗಳು ನಿರಾತಂಕವಾಗಿ ಉರುಳಿದುವು.

ಲಲಿತ ಮುಂದುವರಿದಳು "ಜಾನಕೀ, ನಮ್ಮಲ್ಲಿ ಇದೊಂದು ದೊಡ್ಡ ಪಿಡುಗು. ಬಹುತೇಕ ಜನರ ಜೀವನದಲ್ಲಿ ಇದು ಇದ್ದೇ ಇರುತ್ತೆ. ಅಂತರಂಗಿಕವಾದ ಈ ದುರ್ವ್ಯವಹಾರ ಒಳಗಿಂದೊಳಗೇ ಕೊರಳನ್ನು ಕೊಯ್ಯುತ್ತಿರುವಾಗಲೂ ಸಂಸಾರಕ್ಕಂಟಿಕೊಳ್ಳುವ ಸ್ತ್ರೀ ಚೇತನಕ್ಕಿರುವ ಸಹನಾಶಕ್ತಿ ಅಪಾರ. ಎಷ್ಟೋ ಸಂಸಾರಗಳಲ್ಲಿ ಈ ರುದ್ರಹಿಂಸೆ ತೆರೆಮರೆಯಲ್ಲಿ ನಡೆಯುತ್ತೆ, ಹೊರಬೀಳುವುದೇ ಇಲ್ಲ; ಕೊನೆಗೊಮ್ಮೆ ಆಕೆಗೆ ಅದೇ ಮೃತ್ಯು !"

"ಹಾ....!"

"ನಮ್ಮಲ್ಲಿಯ ರೀತಿನೀತಿಗಳು ಇಲ್ಲಿಯೂ ಆಚರಣೆಗೆ ಬಂದಲ್ಲಿ ಸ್ತ್ರೀಯರಿಗೆ ಅನುಕೂಲ..." ನಾನೆಂದೆ. ನೀಲಾ ಬಾಯ್ದೆರೆದಳು "ಅದು ಸರಿಯಲ್ಲ ಎನಿಸುತ್ತೆ ಕೇಳು, ಅದರಿಂದ ಎಷ್ಟೋ ಸಹಪಾಟಿಗಳ ಸ್ನೇಹ ಸಂಬಂಧ ಬೆಳೆಯುತ್ತದೆ. ಅಂದಮೇಲೆ, ಪವಿತ್ರತೆ ಎಲ್ಲಿ ಉಳಿಯುತ್ತದೆ ? ಇದು ನಮ್ಮ ಸಂಸ್ಕೃತಿಗೆ ಸರಿಹೋಗುವುದಿಲ್ಲ. ಮುಖ್ಯವಾಗಿ ನಮ್ಮ ಪುರುಷವರ್ಗ ಕಣ್ತೆರೆಯಬೇಕು. ವಿಶಾಲ ದೃಷ್ಟಿಯಿಂದ ವಿಶ್ವ ಜಗತ್ತಿನ ವ್ಯವಹಾರವನ್ನು ಅಳೆಯಬೇಕು. ಅಂದರೆ, ನಮ್ಮ ಆಳವನ್ನು ನಾವು ಅಳೆಯಬಲ್ಲವರಾಗುತ್ತೇವೆ. ಅಷ್ಟಲ್ಲದೆ ನಮ್ಮ ಸಂಕುಚಿತಭಾವ ತೊಲಗುವುದಿಲ್ಲ. ಸರ್ವತ್ರ ಸದಾ ನಾರೀಶ್ರೀಚರಣಗಳಲ್ಲಿ ಪವಿತ್ರತೆಯನ್ನು ದಿಟ್ಟ

ತನವನ್ನು ಪಡೆದುಕೊಂಡಲ್ಲದೆ 'ಜೀವನ ಸಫಲತೆ' ಎಂಬುದು ಕೈಗೂಡ ಲಾರದು. ಆ ದಿವ್ಯಾನುಭೂತಿಗೆ ಅಗತ್ಯವಾದ ಪ್ರೌಢ ಶಿಕ್ಷಣ–ಆರ್ಥಿಕ ಸ್ವಾತಂತ್ರ್ಯ–ವ್ಯವಹಾರ ಸ್ವಾತಂತ್ರ್ಯಗಳನ್ನು ಹಿರಿದು, ಕಸಿದು ಅವರನ್ನು ವಿವೇಚನಾ ರಹಿತರನ್ನಾಗಿ ಮಾಡುವುದು ಎಂತಹ ಕ್ರೂರತನ ? ಎಂತಹ ಅನೀತಿ, ಅಧರ್ಮ ? ಅವರೂ ನಮ್ಮಂತೆಯೇ ಮಾನವರು ಎಂಬ ಚಿಂತನೆ ಲವಲೇಶವೂ ಇಲ್ಲವೇ ಇಲ್ಲ ಪುರುಷವರ್ಗಕ್ಕೆ ಸ್ವಾರ್ಥವೇ ಪರಮಾರ್ಥ. ಇಂದಿನ ಸರಸ್ವತೀ ಆರಾಧನೆಯಲ್ಲಿ ಪುರುಷರಿಗಿಂತ ಮಹಿಳಾ ಮಣಿಯರೇ ಮುಂದು ! ಜೀವನಕ್ಕೆ ಪದಾರ್ಪಣೆ ಮಾಡುವ ಮುನ್ನ ಅವರು ಸಂಪೂರ್ಣ-ಸ್ವತಂತ್ರರೇ, ಅನಂತರವೇ, ಕೈಕಾಲಿಗೆ ಶೃಂಖಲೆ ! ಭಾರತೀ ಯತ್ವದಲ್ಲಿ ಸತೀತ್ವ ಶ್ರೇಷ್ಠ ನಿಜ. ಆದರೆ, ಅದನ್ನೇ ನಾರೀ ಜೀವನದ ಪರಮ ಲಕ್ಷ್ಯವೆಂದು ಪರಿಭಾವಿಸುತ್ತ ಆಕೆಗೆ ಶೃಂಖಲೆ ತೊಡಿಸುವುದು ಎಂತಹ ಹೇಯಕೃತ್ಯ ? ಹೆಣ್ಣು ಸಾರ್ವಜನಿಕ ಕ್ಷೇತ್ರಕ್ಕೆ ಕಾಲಿರಿಸಿದರೆ ಪಾವಿತ್ರ್ಯ ಅಳಿಯುತ್ತೆ ಎಂಬ ವಾದವನ್ನು ಎಂತಹ ಮೂರ್ಖನೂ ಒಪ್ಪ ಲಾರ. ಇದಂತೂ ತೀರಾ ಹಾಸ್ಯಾಸ್ಪದ. ಕೆಲವರು ತಪ್ಪು ಮಾಡುತ್ತಾರೆ ನಿಜ ; ಅದು ಎಲ್ಲರಿಗೂ ಅನ್ವಯಿಸುವುದಿಲ್ಲ. ಅಂದಮೇಲೆ, ಅದೇ ನೆಪದಲ್ಲಿ ಹೆಣ್ಣಿಗೆ ಶೃಂಖಲೆ ತೊಡಿಸುವುದು ತುಂಬಾ ಹೇಯ ! ಈ ಸಂಕುಚಿತ ಮನೋಭಾವ, ಜೀವನ ಭಾರ !"

ನಾನು ಅವಳ ಆವೇಶಪೂರಿತ ಮಾತುಗಳನ್ನು ಮನವಿಟ್ಟು ಕೇಳಿದೆ. ಅವೇ ಮಾತುಗಳು ಕಿವಿಯಲ್ಲಿ ಮತ್ತೆಮತ್ತೆ ಪ್ರತಿಧ್ವನಿಸಿದುವು. ಒಂದೆರಡು ಗಳಿಗೆ ನಿಧಾನಿಸಿ ನಾನು ಅವಳನ್ನು ಕೇಳಿದೆ "ನೀಲಾ. ಒಂದು ವೇಳೆ ನೀನು ಇಂತಹ ಪ್ರಸಂಗದಲ್ಲಿ ಸಿಕ್ಕಿಕೊಂಡಿದ್ದಿದ್ದರೆ ಏನು ಮಾಡುತಿದ್ದಿ ?" ಪ್ರಶ್ನೆ ಅವಳನ್ನು ಕೊಕ್ಕೆಯಂತೆ ಚುಚ್ಚಿ ಎಳೆಯಿತೇನೋ...ಅವಳು ತಟ್ಟನೆ ಕೇಳಿದಳು,

"ನೀನೇ ಒಂದು ವೇಳೆ ಇಂತಹ ನಿರ್ಬಂಧಕ್ಕೊಳ್ಳಗಾಗಿದ್ದರೆ...?" ಹುಬ್ಬುಗಳು ಏರಿ ಇಳಿದುವು. ಪ್ರಶ್ನೆಯಲ್ಲಿ ಸವಾಲಿತ್ತು; ಪರೀಕ್ಷೆಯಿತ್ತು; ಬೌದ್ಧಿಕ ವಿಚಕ್ಷಣೆಯಿತ್ತು.

"ನಾನು ಭಾರತೀಯತ್ವವನ್ನು ಸಂಪೂರ್ಣ ಒಪ್ಪಿರುವೆ. ಹಾಗಿಲ್ಲದಿದ್ದರೆ ಒಂದು ಗಳಿಗೆಯೂ ಇಂಥ ಸಂಸ್ಕಾರಕ್ಕೆ ಅಂಟಿಕೊಳ್ಳುತ್ತಿರಲಿಲ್ಲ."

ನೀಲಾ ಅನುಮೋದಿಸುತ್ತ ನುಡಿದಳು "ಅದೇ ಸರಿಯಾದ ಮಾರ್ಗ. ಇಂತಹ ಶಂಡರಿಗೆ ಪಾಠ ಕಲಿಸುವುದರಲ್ಲಿ ನಾವು ಮುಂದಾದರೆ ದಾರಿದೀಪ ವಾಗುತ್ತೇವೆ ಮುಂದಿನವರಿಗೆ."

ಲಲಿತಮೂರ್ತಿ ಖಿನ್ನ ಮುಖದಿಂದ ನುಡಿದಳು "ಹಾಗೆನ್ನುವುದು ಸುಲಭ. ಹಿಂದೂ ಜೀವನದಲ್ಲಿ 'ಬಿಡುಗಡೆ' ಸುಲಭವಲ್ಲ. ಅಲ್ಲದೆ ಅದು ಅಪಮಾನ ಪ್ರಸಂಗವೂ ಸಹ. ಗಂಡಸಿಗೆ ಕಾನೂನು ಬಲದೊಂದಿಗೆ ತೋಳ್ಬಲವೂ ಇರುತ್ತದೆ. ಹೊಡೆದಾಡುವುದು ಕಷ್ಟಕರ. ಅಂತಲೇ ಹೆಣ್ಣು ಸೋಲುತ್ತಾಳೆ, ಗೆದ್ದು ಬರುವುದು ವಿರಳ."

ನೀಲಾ ಗೆಳತಿಯ ಬೆನ್ನನ್ನು ನೇವರಿಸುತ್ತ ಸ್ವಾಂತನದ ದನಿಯಲ್ಲಿ ನುಡಿದಳು "ನಿಜ....ಸಾಮರಸ್ಯವಿಲ್ಲದ ಬದುಕಿನಲ್ಲಿ ಹೆಣ್ಣು ಬಲಿಯಾಗುವುದು ಸರ್ವೇಸಾಮಾನ್ಯ. ಇವು ನಿಜವಾಗಿಯೂ ನಾಚಿಕೆಯ ಪ್ರಸಂಗಗಳು. ವರ್ತಮಾನಯುಗದ ನಾಗರಿಕ ದಿನಗಳಲ್ಲಿಯೂ ಸ್ತ್ರೀ ಜಾತಿಯನ್ನು ಅಂಧಕಾರದಲ್ಲಿಟ್ಟು ಜೀವನಾನಂದವನ್ನು ಅನುಭವಿಸುವುದು ಗಂಡಿಗೆ ಸಾಧ್ಯವಿಲ್ಲ. ಮೇಲಾಗಿ, ಅದು ದೈವ ಸಂಕಲ್ಪವೂ ಅಲ್ಲ. ಆದರೂ ಇಂಥ ಪ್ರಸಂಗಗಳಿಗೆ ಕೊನೆಯೇ ಇಲ್ಲ. ಅದೇ ಆಶ್ಚರ್ಯ ! ಈ ಕ್ಷುದ್ರತರ ಧೋರಣೆಯಿಂದಲೇ ಅವಳು ಬುದ್ಧಿಜೀವಿಯಾಗುವುದು ಅನಿವಾರ್ಯ. ಈ ಹೀನಾಯ ಜೀವನ ಚಿರಕಾಲ ಸತ್ಯವೆಂದು ತಿಳಿಯಬೇಡ."

"ಅಂದರೆ...?" ನಾನು ಕೇಳಿದೆ.

"ಕಾಲಾಂತರದಲ್ಲಿ ಈ ಧೋರಣೆ ಬದಲಾಗಲೇಬೇಕು."

"ಆ ಕಾಲ ಎಷ್ಟು ಬೇಗನೆ ಬಂದರೆ ಅಷ್ಟು ಕ್ಷೇಮ." ನಾನೆಂದೆ.

ನೀಲಾ ಮುಗುಳು ನಕ್ಕಳು. ಲಲಿತ ಮಾತಾಡಲಿಲ್ಲ. ಅವಳ ಮನಸ್ಸು ಗಗನಗಾಮಿಯಾಗಿತ್ತು.

o o o o

...ಅರುಣಾರುಣ ಉಜ್ವಲ ತೇಜದಿಂದ ಬೆಳಗುವ ಸುಂದರ ಪ್ರಾತಃ ಸಮಯ.

....ಅತ್ಯಂತ ಶೀತಲ ಶಾಂತಿಯಿಂದ ಕೂಡಿದ ವಾತಾವರಣ.

ಓಹ್ ! ಮಕ್ಕಳ ಕಲಕಲ ಕಂಠದಿಂದ ಸಣ್ಣ ಪ್ರಾರ್ಥನಾ ಗೀತೆ.

"ಸ್ವಾಮಿದೇವನೇ ಲೋಕಪಾಲನೇ ತೇ ನಮೋಸ್ತು ನ ಮೋಸ್ತುತೇ" ಸಂಗೀತ ಮೊಳಗಿ ತಂಗಾಳಿಯಲೆಯೇರಿ ದೂರದೂರ ತೇಲಿಹೋಯಿತು. ನಾನು ಪರಮಾನಂದ ಪರವಶಳಾಗಿ ಕೇಳಿದೆ. ಕಾರ್ಯ ಸಫಲತೆಯ ಪ್ರಪ್ರಥಮ ಹಂತ ಎಂಬುದು ಮನವನ್ನು ತಣಿಸಿತು. ಅಳಿಲ ಮಳಲ ಸೇವೆಯು ಕಿಂಚಿತ್ ಫಲಪ್ರದ ಎನಿಸಿತು ನನಗೆ.

ಜನ....ಜನ. ಶಾಲೆಯ ಆವರಣವೆಲ್ಲಾ ತುಂಬಿಹೋಗಿತ್ತು ಜನ ಸಂದಣಿ. ತಳಿರು ತೋರಣಗಳಿಂದ ಸಿಂಗರಿಸಿದ ಸುಂದರ ಹಾದಿಯಲ್ಲಿ ಶ್ರೀ ಜವಹರಲಾಲ್ ನೆಹರೂ ನಡೆದು ಬಂದು ವೇದಿಕೆಯನ್ನೇರಿದರು. ಶಾಲೆಯ ಉದ್ಘಾಟನಾ ಸಮಾರಂಭ ಸರಳ ರೀತಿಯಲ್ಲಿ ನಡೆದು ನಮ್ಮ ಬಹು ದಿನದ ಶ್ರಮದ ಫಲ ಕೈಗೂಡಿತು. ಮನಃಪ್ರಾಣಗಳು ಆನಂದ ಸುಧೆ ಯಿಂದ ತುಂಬಿ ತುಳುಕುವಂತಹ ಸನ್ನಿವೇಶ. ಶ್ರೀ ನೆಹರೂರವರು ಮಕ್ಕಳ ವೃಂದಕ್ಕೆ ನಾಲ್ಕು ಹಿತವಚನಗಳನ್ನು ಹೇಳುತ್ತ ಹೀಗೆಂದರು. "ಮಕ್ಕಳೇ, ಭಾರತ ಜನನಿಯ ಮುದ್ದು ಮಕ್ಕಳೇ ! ಈ ಶಾಲೆ ಇಂದಿನ ಶುಭ ಗಳಿಗೆಯಲ್ಲಿ ನಿಮಗಾಗಿಯೇ ಜನ್ಮತಾಳಿದ್ದು, ನಿಮಗೆ ಭವ್ಯ ಭವಿಷ್ಯವನ್ನು ರೂಪಿಸಿ ನಿಮ್ಮನ್ನು ಧೀಮಂತರನ್ನಾಗಿ ಮಾಡುವ ಹೊಣೆಗಾರಿಕೆಯನ್ನು ಹೊಂದಿದೆ. ನೀವು ಕಷ್ಟಪಟ್ಟು ಓದಿ ವಿದ್ಯಾ ಲಾಭವನ್ನು ಪಡೆದುಕೊಂಡು ನಿಮ್ಮ ಉಜ್ವಲ ಭವಿಷ್ಯತ್ತನ್ನು ರೂಪಿಸಿಕೊಳ್ಳಿರಿ. ಭಗವಂತನು ನಿಮ್ಮನ್ನು ಸನ್ಮಾರ್ಗದಲ್ಲಿ ನಡೆಸಲಿ ಭಾರತ ಜನನಿಯ ಆಶೀರ್ವಾದ ಸದಾ ನಿಮ್ಮ ಮೇಲಿರಲಿ !

"... ಭಾರತ ವರ್ಷ ಅನಾದಿ ಕಾಲದಿಂದಲೂ ಪ್ರಸಿದ್ಧವಾದ ರಾಷ್ಟ್ರ. ವೇದಾಂತಿಕವಾಗಿ ಸಾಂಸ್ಕೃತಿಕವಾಗಿ ಭಾರತವನ್ನು ಮೀರಿಸುವ ರಾಷ್ಟ್ರ

ಮತ್ತೊಂದಿಲ್ಲ, ಈ ವಿಶ್ವ ಜಗತ್ತಿನಲ್ಲಿ. ಗ್ರೀಸ್ ಇನ್ನೂ ಹುಟ್ಟದಿರುವಾಗ ರೋಂ ದೇಶವು ಆಲೋಚನೆ ಮಾಡದಿರುವಾಗ, ಆಧುನಿಕ ಐರೋಪ್ಯ ಜನಾಂಗದ ಪೂರ್ವಿಕರು ಕಾನನಾಂತರಗಳಲ್ಲಿ ನೆಲಸಿ ಮೈಗೆ ಬಣ್ಣವನ್ನು ಬಳಿದುಕೊಳ್ಳುತ್ತಿದ್ದಾಗ ನಮ್ಮ ನಾಡು ಪ್ರಬುದ್ಧವಾಗಿತ್ತು....!"

ಅನಂತರ ಅವರು ಶುಭ ಹಾರೈಸಿ ಹೊರಟರು. ಅವರನ್ನು ಕಾರು ಹತ್ತುವವರೆಗೆ ಹಿಂಬಾಲಿಸಿ ಗೌರವಪೂರ್ವಕವಾಗಿ ಬೀಳ್ಕೊಟ್ಟು ಬಂದ ನಂತರ ಸರಳ ಸಮಾರಂಭವನ್ನು ಮುಗಿಸಿದಾಗ ಮಕ್ಕಳ ಎಣೆಯಿಲ್ಲದ ಆನಂದೋತ್ಸಾಹ ನೋಡಬೇಕು! ಒಳಬಂದು 'ಇದು ನನ್ನ ಬೆಂಚು' 'ಇದು ನನ್ನ ಡೆಸ್ಕ್' 'ಇದು ನನ್ನ ಕ್ಲಾಸ್' ಎಂದು ಮುಂತಾಗಿ ತಮಗೆ ತಾವೇ ನಿರ್ಣಯಿಸಿ ಕೊಳ್ಳುವ ರೀತಿಯಂತೂ ಬಲು ಮೋಹಕ. ನೆರೆದ ಜನರೆಲ್ಲ ತಮಾಷೆಯಿಂದ ಅವರನ್ನು ಗಮನಿಸುತ್ತಿದ್ದುದು ಸಹ ಅವರ ಗಮನಕ್ಕೆ ಬರಲಿಲ್ಲ.

ಒಮ್ಮೆ ಎಲ್ಲರೂ 'ಹೋ!' ಎಂದು ನಕ್ಕರು. ಆಗ ಎಚ್ಚೆತ್ತ ಮಕ್ಕಳೂ ತಮ್ಮ ದನಿಯನ್ನು ಹರಿಯಬಿಟ್ಟರು. ಶಾಲೆಯ ಮಾಡು 'ಹೊ!' ಎಂದು ಮರುದನಿ ಕೊಟ್ಟಿತು.

ಮರುದಿನವೇ ಒಂದು ಶುಭ ಮುಹೂರ್ತದಲ್ಲಿ ಶಾಲಾ ಜೀವನದ ಕಾರ್ಯಾರಂಭವಾಯಿತು. ಮಕ್ಕಳ ಸಂಖ್ಯೆ ಒಟ್ಟು ಇನ್ನೂರೆಂಭತ್ತು. ಉಚಿತ ಶಿಕ್ಷಣವಾದುದರಿಂದ ಅಪಾರವಾದ ನೂಕು ನುಗ್ಗಲು. ದಿನನಿತ್ಯದ ಕಾಟವನ್ನು ತಪ್ಪಿಸಿಕೊಳ್ಳಲು ಬಾಗಿಲಲ್ಲಿ 'ಸ್ಥಳವಿಲ್ಲ' ಎಂಬ ಬೋರ್ಡ್ ಹಚ್ಚಬೇಕಾಯಿತು. ಮಹಿಳಾ ಮಂಡಳಿಯಲ್ಲಿ ಅನೇಕ ಮಹಿಳೆಯರು ಟೀಚರ್ ಟ್ರೈನಿಂಗ್ ಆದವರು ಇದ್ದಾರೆ. ಶಾಲೆ ಒಂದು ಉತ್ತಮ ಸ್ಥಿತಿಗೆ, ಬರುವವರೆಗೆ ದಿನಕ್ಕೊಬ್ಬರು ಆನರರಿಯಾಗಿ ಕೆಲಸ ಮಾಡುವುದಾಗಿ ಒಪ್ಪಿ ಕೊಂಡುದುದರಿಂದ ಹೊಸದಾಗಿ ಟೀಚರುಗಳನ್ನು ಅರಸುವ ಪ್ರಮೇಯ ಬರ ಲಿಲ್ಲ, ನಾನು ಪ್ರಿನ್ಸಿಪಾಲ್ ಆದೆ. ರಜನೀ ಮೆಹತ ಸೆಕ್ರೆಟರಿಯಾಗಿ ಆಯ್ಕೆ ಯಾದಳು. ನರ್ಸರಿಯಲ್ಲಿ ಎರಡು ವಿಭಾಗ, ಉಳಿದವರೆಲ್ಲಾ ಅನಕ್ಷರಸ್ಥ ರಾದುದರಿಂದ ಒಂದೇ ಕ್ಲಾಸು. ಸೆಕ್ಷನ್ ಬೇರೆ ಬೇರೆ.

ಕಾರ್ಯಕಾರೀ ಸಮಿತಿಯಲ್ಲಿ ಎಂಟು ಮಂದಿ. ಇಂದು ಸಮಿತಿ ನಮ್ಮ ಮನೆಯಲ್ಲಿ ಸೇರುವುದಿತ್ತು. ಸಮಯಕ್ಕೆ ಸರಿಯಾಗಿ ಎಲ್ಲರೂ ಸೇರಿದರು. ಮೀಟಿಂಗಿಗೆ ಅಜೆಂಡಾದಲ್ಲಿದ್ದ ವಿಷಯ ಇಷ್ಟು. ಮಧ್ಯಾಹ್ನ ಒಂದರಿಂದ ಮೂರರವರೆಗೆ ಮಕ್ಕಳ ತಾಯಂದಿರಿಗೆ ವಯಸ್ಕರ ಶಿಕ್ಷಣ ಆರಂಭಿಸುವುದು. ಓದು–ಬರೆಹ ಕಲಿತ ತಾಯಂದಿರಿಗೆ ಕುಶಲ ಕೈಗಾರಿಕೆ ಕಲಿಸುವುದು ಮತ್ತು ಮಕ್ಕಳಿಗೆ ಶುದ್ಧವಾದ ಹಾಲಿನ ಪೂರೈಕೆ. ಈ ಎಲ್ಲಕ್ಕೂ ಯಾರ ವಿರೋಧ ವಿಲ್ಲದಿದ್ದರೂ ಆರ್ಥಿಕ ವ್ಯವಸ್ಥೆ ಸಣ್ಣ ವಿಷಯವೇನೂ ಅಲ್ಲ. ಹೇಗೆ ಯಾವ ರೀತಿ ನಡೆಸಿಕೊಳ್ಳಬೇಕು ಎಂಬುದು ಎಲ್ಲರ ಮುಂದಿನ ಪ್ರಶ್ನೆ. ಕಾರ್ಯ ಕೈಗೂಡಿಸಬೇಕೆಂದರೆ ಪುನಃ ಚಂದಾ ಎತ್ತಲೇಬೇಕು, ಈ ಸಲ ಹಿರಿಯ ಕೈಗಾರಿಕೋದ್ಯಮಿಗಳನ್ನು ಹಿಡಿದರೆ ಹಣ ಕೂಡಿಸುವುದು ಕಷ್ಟವಲ್ಲ. ಕೆಲವು ಲಕ್ಷಗಳನ್ನು ಗಳಿಸಿ ಬ್ಯಾಂಕಿನಲ್ಲಿಟ್ಟರೆ ಅದರ ಬಡ್ಡಿಯಲ್ಲಿ ಶಾಲೆ ನಡೆಯುವಂತೆ ಮಾಡಬಹುದು; ಎಂಬುದು ಎಲ್ಲರ ಒಮ್ಮತದ ಅಭಿಪ್ರಾಯ. ಆದರೆ ಹೊರ ಹೊರಡಲು ಯಾರಿಗೆ ಬಿಡುವಿದೆ ? ಯಾರು ಯಾರು ಎಲ್ಲೆಲ್ಲಿಗೆ ಹೋಗಬೇಕು? ಎಂಬುದು ನಮ್ಮ ಮುಂದಿನ ಪ್ರಶ್ನೆ. ಕೊನೆಗೆ ನಾಲ್ಕು ನಾಲ್ಕು ಮಂದಿಯ ತಂಡ ಹೋಗಿಬರುವುದೆಂದು ತೀರ್ಮಾನವಾಗಿ ಸಭೆ ವಿಸರ್ಜನೆಯಾಯಿತು.

ಮರು ದಿನ ಮಧ್ಯಾಹ್ನ ತಲೆಬಾಗಿಲ ಕರೆ ಗಂಟೆ ಕಿರ್ರನೆ ಕೂಗಿ ಕರೆ ನೀಡಿದಾಗ ಮುಂಬಾಗಿಲನ್ನು ತೆರೆದವಳು ನಾನೇ. ನೋಡಿದರೆ ಇಳಾ-ಆನಂದ್ ಪ್ರತ್ಯಕ್ಷವಾಗಿದ್ದಾರೆ !

'ಹಾ, ಎಂತಹ ಸುದಿನ !' ಎಂದೆ ನಾನು.

ಆನಂದ್ ಇಂಗ್ಲೆಂಡಿನಿಂದ ಹಿಂದಿರುಗಿ ಆಗಲೇ ತಿಂಗಳಾಗಿತ್ತು. ಅವನು ಗ್ವಾಲಿಯರ್‌ನಲ್ಲಿ ಒಳ್ಳೆಯ ಕೆಲಸ ಹಿಡಿದು ಅಲ್ಲಿಯೇ ನೆಲೆಸಿದ್ದಾನೆ. ಇಳಾ ಈಗ ಸ್ವಲ್ಪ ಮೈತುಂಬಿಕೊಂಡು ಇನ್ನಷ್ಟು ಲಕ್ಷಣವಾಗಿ ಕಾಣಿಸು ತ್ತಾಳೆ. ಪರಸ್ಪರ ದರ್ಶನದಿಂದ ಎಲ್ಲರ ಮುಖಗಳೂ ಅರಳಿ ಹೂವಾದುವು. ಮಾತು ಮಾತಿಗೂ ಎಳೆ ನಗುವಿನ ಲಹರಿ ಉಕ್ಕಿ ಹರಿಯಿತು. ನಾನು ಅವರನ್ನು ಆತ್ಯಂತ ಆತ್ಮೀಯತೆಯಿಂದ ಒಳ ಬರಮಾಡಿಕೊಳ್ಳುತ್ತ ಕೇಳಿದೆ,

"ಗ್ವಾಲಿಯರ್‌ನಿಂದ ಇಲ್ಲಿಗೆ ಬರಲು ನಿಮಗೆ ಇಷ್ಟು ದಿನ ಬೇಕಾಯಿತೇ ?"

ಅದಕ್ಕೆ ನಾನಾ ತೊಡಕುಗಳ ಸರಮಾಲೆಯನ್ನೇ ಮುಂದಿಟ್ಟ ಆನಂದ್. ಅನಂತರ ಅಂದಿಂದಿನ ಕಷ್ಟಸುಖಗಳೆಲ್ಲ ನಮ್ಮ ನಮ್ಮಗಳ ಮಧ್ಯೆ ಕರಗಿದುವು. ಚಹ ಸಿಹಿ ಕಾರಗಳ ಸ್ವೀಕಾರಾನಂತರ ಇಳಾ ಕೇಳಿದಳು "ನೀನು ಸೋಷಿಯಲ್ ವರ್ಕ್ ಮಾಡುತಿದ್ದೀಯಂತೆ ?"

ಅದಕ್ಕೆ ಉತ್ತರವಾಗಿ ನಾವು ಇದುವರೆಗೆ ಏನೇನು ಮಾಡಿದ್ದೇವೋ ಮುಂದೇನು ಮಾಡಲಿದ್ದೇವೋ ಅದನ್ನು ವಿವರಿಸಿ ಆನಂದ್‌ಗೆ ನಾನೆಂದೆ "ನಮಗೆ ಇನ್ನೂ ಬಹಳಷ್ಟು ಫಂಡ್ ಬೇಕಾಗಿದೆ. ನಿಮ್ಮ ಕಡೆಯಿಂದ ಎಷ್ಟು ಸಾಧ್ಯವೋ ಅಷ್ಟು ಸಹಾಯ ಮಾಡಿರಿ."

"ಆಗಬಹುದು. ಅದಕ್ಕಾದರೂ ಗ್ವಾಲಿಯರ್‌ಗೆ ಬರುತ್ತೀಯಷ್ಟೆ ?"

ನಾನು ನಕ್ಕುಬಿಟ್ಟೆ. ಹೃದಯಕುಂಡ ಆನಂದರಸದಿಂದ ಉಕ್ಕೇರಿತು.

"ಬಡರಾಷ್ಟ್ರ, ಬಡಜನ. ಮತಿವಂತರೂ, ಶಕ್ತಿವಂತರೂ ಉದಾತ್ತ ಭಾವದಿಂದ ಸಾರ್ವಜನಿಕ ಕ್ಷೇತ್ರಕ್ಕೆ ಇಳಿದರೆ ಸಾಕಷ್ಟು ಪ್ರಗತಿಯಾಗುತ್ತದೆ."

"ನಮ್ಮದು ಕೇವಲ ಅಳಿಲ ಮಳಲ ಸೇವೆ."

"ಎಲ್ಲರೂ ಅಷ್ಟೇ ಸಲ್ಲಿಸಿದರೆ ಸಾಕಲ್ಲ ? ಇನ್ನು ನಾನು ಸಾರ್ವಜನಿಕ ಕ್ಷೇತ್ರಕ್ಕೆ ಇಳಿಯಬೇಕು!"

"ಸಂತೋಷ ಇಳಾ !"

ಅಷ್ಟು ಮಾತುಕತೆ ಮುಗಿಯುವಷ್ಟರಲ್ಲಿ ಸತ್ಯಭಾಮಾ ಶಾಲೆಯಿಂದ ಆಗಮಿಸಿದಳು. ಕೈತುಂಬ ಹೊರಲಾರದಷ್ಟು ಪುಸ್ತಕಗಳ ಹೊರೆಯನ್ನು ಹೊತ್ತುಕೊಂಡೇ ಕಿಲಕಿಲ ನಕ್ಕು "ಅಂಕಲ್ ! ಎಷ್ಟು ದಿನಗಳ ಮೇಲೆ.... ದರ್ಶನ ? ನಮ್ಮನ್ನು ಮರೆತೇ ಬಿಟ್ಟಿದ್ದೀರೋ ಹೇಗೆ ?"

ಅವಳು ಇಬ್ಬರ ಮುದ್ದಿಗೂ ಆಕ್ಷಣವೇ ಪಾತ್ರಳಾದಳು.

ಆನಂದ್ ಅವಳನ್ನು ಬೇಕೆಂತಲೇ ಕೇಳಿದ "ಇಲ್ಲಿಯ ಸ್ಕೂಲು ಚೆನ್ನಾಗಿಲ್ಲವೆಂದು ನಿನ್ನನ್ನು ಲಂಡನ್‌ಗೆ ಕಳುಹಿಸುತ್ತಾರಂತೆ ? ಹೌದೇ ?"

"ಎಲ್ಲಾ ಸುಳ್ಳು !"

"ನಿಮ್ಮಮ್ಮನನ್ನು ಕೇಳಿ ನೋಡು !"

"ನಾನು ಕೇಳೋಲ್ಲ....ಕೇಳೋಲ್ಲ....ಕೇಳೋಲ್ಲ !"

"ನೀನೀಗ ಬಹಳ ತುಂಟಿಯಾಗಿದ್ದಿ !"

"ಗೊತ್ತಿಲ್ಲವೆ ? ಕುಡಿಯುವುದು ಯಮುನಾ ನೀರು !"

"ಥೇಮ್ಸ್ ನೀರು ಹೀಗಿಲ್ಲವೇ ?"

ತಲೆಯಾಡಿಸುತ್ತ "ಉಹೂ !" ಎಂದಳು ಸತ್ಯಾ.

ಆನಂದ್ ವಿಸ್ಮಯಾಧಿಕ್ಯದಿಂದ ನನಗೆಂದ "ಒಂದು ವೇಳೆ ನೀವು ಇಂಗ್ಲೆಂಡಿಗೆ ಹೋಗುತ್ತೇನೆಂದರೂ ಇವಳು ಬರುವುದಿಲ್ಲ ನಿಮ್ಮೊಂದಿಗೆ."

"ಇಲ್ಲಿಯ ವಾತಾವರಣಕ್ಕೆ ಚೆನ್ನಾಗಿ ಹೊಂದಿಕೊಂಡಿದ್ದಾಳೆ. ಇನ್ನೆಲ್ಲಿಯ ಇಂಗ್ಲೆಂಡ್ ?"

ಅದೇ ವೇಳೆಗೆ ಭಾಸ್ ಸಣ್ಣಗೆ ಶಿಳ್ಳು ಹಾಕುತ್ತ ಒಳಬಂದ. ಗೆಳೆಯನನ್ನು ನೋಡಿ ಆನಂದಪರವಶನಾಗಿ ಕೈಕುಲುಕಿ ಆತ್ಮೀಯತೆಯಿಂದ ಕ್ಷೇಮ ಸಮಾಚಾರವನ್ನು ವಿಚಾರಿಸಿಕೊಂಡನಂತರ ಇಳಾಕಡೆ ನೋಡುತ್ತ "ಹೇಗಿದೆ ಗ್ವಾಲಿಯರ್ ? ನಿಮ್ಮ ಮಾವನಿಗೆ ದೆಹಲಿಯಲ್ಲೇ ಇರಿಸಿಕೊಳ್ಳುವ ಇಚ್ಛೆಯಿತ್ತು ?"

"ಅಲ್ಲಿಗೂ ಇಲ್ಲಿಗೂ ಹತ್ತಿರ. ಓಡಾಡಿಕೊಂಡಿರುತ್ತಾರೆ. ಅಂತೂ ನಾವು ಹಿಂದಿರುಗಿ ಬಂದದ್ದು ದೊಡ್ಡ ಸಮಾಧಾನ ಅವರಿಗೆ. ಎಂದ ಆವಳು ಪುನಃ ಪಾಪ, ವಯಸ್ಸಾದವರು. ಮಕ್ಕಳು ಹತ್ತಿರ ಇರಲಿ ಎಂಬ ಆಸೆ ಸ್ವಾಭಾವಿಕ."

ಅಂದು ಆನಂದ್ ಮತ್ತು ಇಳಾ ರಾತ್ರಿಯ ಭೋಜನ ಮುಗಿಸಿಕೊಂಡು ಹೊರಟರು.

ಮರುದಿನದಿಂದ ವಾಣಿಜ್ಯೋದ್ಯಮಿಗಳನ್ನು ಕಂಡು ಚಂದಾ ಎತ್ತುವ ಕಾರ್ಯಾರಂಭ. ನಾನು, ಪಾಂಚಾಲಿವರ್ಮ, ಅಂಜೂ, ನೀಲಾರಾಂ ಒಂದು ತಂಡ. ದೆಹಲಿಯ ವಾಣಿಜ್ಯೋದ್ಯಮಿಗಳನ್ನು ಕಂಡ ಮೇಲೆ ಗ್ವಾಲಿಯರ್ ಕಡೆ ಹೋಗುವ ಇಚ್ಛೆ. ಈಚೆಗೆ ವಯಸ್ಕ ಮಹಿಳೆಯರ ಶಿಕ್ಷಣ ಆರಂಭವಾಗಿದೆ. ಸದ್ಯಕ್ಕೆ ಹೆಮ್ಮರದ ನೆರಳೇ ಶಾಲೆಗೆ ತಾಣ. ಹಣ ಸಾಕಷ್ಟು ಕೂಡಿ ಬಂದರೆ ಒಂದು ಕೊಠಡಿಯನ್ನು ಹೆಚ್ಚಿಸಿಕೊಳ್ಳುವ ಯೋಚನೆ. ನಮಗೆ ದೈವಬಲ ಇದ್ದುದರಿಂದ, ನಮ್ಮ ನಿರೀಕ್ಷೆಗೂ ಮೀರಿ ಹಣ ಕೂಡುತಿತ್ತು. ಶಾಲೆಯ ಅಂಗಳ ಉಬ್ಬುತಗ್ಗುಗಳಿಂದ ಕೂಡಿ ಅಸಹ್ಯವಾಗಿತ್ತು. ಈ ಸಲ ಬುಲ್ಡೋಜರ್ ತರಿಸಿ ಅದನ್ನು ಮಟ್ಟಮಾಡಿ ಕೆರೆಯನ್ನು ಮುಚ್ಚಿ ಸ್ವಚ್ಛಗೊಳಿಸುವ ಇಚ್ಛೆ. ಹಣ ಕೈಗೂಡಿದುದರಿಂದ ಅದೂ ಸುಲಭಸಾಧ್ಯವಾಯಿತು. ಕೆರೆ ಮುಚ್ಚಿದುದರಿಂದ ಅಪಾಯದ ಶಂಕೆಯೂ ನಿವಾರಣೆಯಾಯಿತು. ಅಂಗಣ ಶುದ್ಧಿಯಿಂದ ಮಕ್ಕಳಿಗೆ ಆಟದ ಮೈದಾನವೂ ದೊರೆಯಿತು.

ಗ್ವಾಲಿಯರ್‌ನಲ್ಲಿ ಇದ್ದ ಎರಡು ದಿನವೂ ಬಿಡುವಿಲ್ಲದ ಕಾರ್ಯಕ್ರಮ. ಆನಂದ್ ಇಳಾರವರ ಸಹಕಾರದಿಂದ ಜೋಳಿಗೆ ತುಂಬಿ ತನುಮನಗಳು ಪುಳಕಿತವಾದುವು. ಇಷ್ಟು ಸುಲಭವಾಗಿ ಹಣ ಕೈಗೂಡೀತೆಂಬ ಆಲೋಚನೆ ಕನಸುಮನಸಿನಲ್ಲೂ ಮೂಡಿರಲಿಲ್ಲವಾದುದರಿಂದ ಸ್ವರ್ಗವೇ ಕೈಗೆಟುಕಿದಷ್ಟು ಸಂತಸ. ಕೆಲಸ ಕಾರ್ಯಗಳು ಹುರುಪಿನಿಂದ ನಡೆಯಹತ್ತಿದುವು.

೦ ೦ ೦ ೦

ಧೋ ಧೋ ಎಂದು ಸುರಿಯುವ ಭಯಂಕರ ಕುಂಭದ್ರೋಣ ಮಳೆ. ಗುಡುಗು ಮಿಂಚು ಬಿರುಗಾಳಿಗಳ ಅವ್ಯಾಹತ ಹೋರಾಟ. ಯಾವ ಗಳಿಗೆಯಲ್ಲಿ ಯಾವ ಮರ, ಯಾವ ಕಟ್ಟಡ ಕುಸಿದು ಬೀಳುವುದೋ ಎಂಬ ಅತೀವ ಆತಂಕ. ಅನಪೇಕ್ಷಿತವೂ ಅನಿರೀಕ್ಷಿತವೂ ಆದ ರುದ್ರಭೈರವ ವರ್ಷಧಾರಾವಾಹಿಯಿಂದ ಕೆಲಸ ಕಾರ್ಯಗಳೆಲ್ಲಾ ಅಸ್ತವ್ಯಸ್ತ. ಕ್ಷಣಕ್ಷಣಕ್ಕೂ ಎದೆ ತಲ್ಲಣಿಸುವಂತಹ ಭೀಭತ್ಸ ಸನ್ನಿವೇಶ. ಇಡೀ ನಗರವನ್ನೇ ತೊಳೆದು

ಕಸ ಕಡ್ಡಿಗಳೊಂದಿಗೆ ತಗ್ಗು ಪ್ರದೇಶಗಳಿಗೆ ನುಗ್ಗುತ್ತಿತ್ತು ನೀರು ಕೆನ್ನೀರಾಗಿ. ವಿದ್ಯುಚ್ಛಕ್ತಿಯೂ ಕಡಿದು ಹೋದುದರಿಂದ ಹೊರ ಜಗತ್ತಿನ ಸಂಪರ್ಕವೂ ದೂರ.

ಇಂದು ಪಾಠಕ್ಕೆ ಹೋದವರು ಅಂಜು ರಾಗಮಯಿ ಮತ್ತು ನೀಲಾರಾಂ.

ಹೊಸದಾಗಿ ಕಟ್ಟಿದ ಕಟ್ಟಡ. ಒಳಗಡೆ ನೂರಾರು ಮಕ್ಕಳಿದ್ದಾರೆ. ಎಲ್ಲರ ಗತಿ ಏನಾಯಿತೋ ಎಂಬ ಅತೀವ ಆತಂಕ-ತಳಮಳ ಮನಸ್ಸಿಗೆ. ನೀಲಾರಾಂ ಮನೆ ಇಲ್ಲೇ. ನಾಲ್ಕನೆಯ ಕ್ವಾರ್ಟರ್ಸ್. ಅವರಲ್ಲಿ ವಿಚಾರಿಸಲಾಗಿ ಅವಳು ಹಿಂದಿರುಗಿರಲಿಲ್ಲ. ಅಂದರೆ ಯಾರೂ ಹಿಂದಿರುಗಿಲ್ಲವೆಂಬುದು ಖಚಿತ. ರಸ್ತೆಯಲ್ಲಿ ವಾಹನ ಸಂಚಾರ ತೀರಾ ವಿರಳವಾಗಿದೆ. ಮನೆಯಲ್ಲಿ ಕಾರಿರಲಿಲ್ಲ. ಒಂದು ವ್ಯಾನ್ ತರಿಸಬೇಕಾದರೆ ಅದೆಷ್ಟು ಪ್ರಯಾಸವಾಯಿತೋ, ಹೋಗಿ ತಂದವನ ಪಾಡು ದೇವರೇ ಬಲ್ಲ. ಕೆಲವಾರು ಕೊಡೆಗಳನ್ನು ಸಂಗ್ರಹಿಸಿ ಒಬ್ಬ ಜವಾನನೊಡನೆ ಶಾಲೆಗೆ ಹೋದೆ. ಆದರೇನು ? ಇತ್ತೀಚೆಗೆ ಮಟ್ಟಸಗೊಳಿಸಿದ ಶಾಲೆಯ ಅಂಗಣ ನೀರು ತುಂಬಿ ಕೆಸರು ಕೆಸರಾಗಿ ತುಯ್ಯಲಾಡುತ್ತಿದೆ. ಎಲ್ಲಿ ಹೆಜ್ಜೆ ಇಟ್ಟರೆ ಅಲ್ಲಿ ಕುಸಿತ. ಬಾಗಿಲ ಬಳಿಗೆ ಹೋಗುವುದು ಸಾಧ್ಯವೇ ಇಲ್ಲ.

ಆ ಕ್ಷಣವೇ ಬಜಾರಿಗೆ ಹೋಗಿ ಕೆಲವು ಹಲಗೆಗಳನ್ನು ತಂದು ಸಾಲಾಗಿ ಹಾಕಿ ಮಕ್ಕಳನ್ನು ದಾಟಿಸುತಿದ್ದಂತೆಯೇ ಘೋರಾತಿಘೋರ ಸಿಡಿಲೊಂದು ಭಯಂಕರ ಸದ್ದಿನೊಡನೆ ಬಡಿಯಬೇಕೇ ? ತಲೆಬಾಗಿಲ ಬಳಿ ತಮ್ಮ ಸರದಿಗಾಗಿ ಕಾದಿದ್ದ ಅನೇಕರು ನೇರ ಸಿಡಿಲಿನ ರಭಸ ತಾಗಿ ಅಲ್ಲಲ್ಲೇ ಉರುಳಿದರು ! ದುರ್ದೈವವಶಾತ್ ಮೂರು ಮಕ್ಕಳು ಅಸು ನೀಗಿದ್ದಾರೆ! ಮೂರ್ಛಿತರಲ್ಲಿ ಅಂಜು-ರಾಗಮಯಿಯರೂ ಇದ್ದಾರೆ! ಇಂತಹ ದುರ್ಭರ ಸನ್ನಿವೇಶವನ್ನು ಎಂದೂ ಎದುರಿಸಿರಲಿಲ್ಲವಾಗಿ ನನ್ನ ಜಂಘಾಬಲವೇ ಬಿದ್ದುಹೋಯಿತು. ಭಯಂಕರ ಜಡಿಮಳೆಯಲ್ಲಿ ಮೂರ್ಛಿತರನ್ನು ಹೊತ್ತು ಸಾಗಿಸುವುದೂ ಸಾಮಾನ್ಯ ಪ್ರಶ್ನೆಯಲ್ಲ. ಹತ್ತಿರದ ಪೋಲೀಸ್ ಸ್ಟೇಷನ್ನಿಗೆ ಹೋಗಿ ಬೇಡಿ

ಸಹಾಯ ಪಡೆದುಕೊಂಡರೂ ಎಲ್ಲರನ್ನೂ ಸಾಗಿಸಿದ್ದು ಒಂದು ಸಾಹಸವೇ ಎನ್ನೋಣ. ಮೂರ್ಛಿತರನ್ನು ಆಸ್ಪತ್ರೆಗೆ ಸಾಗಿಸಿ ಚಿಕಿತ್ಸೆಗೆ ಅಳವಡಿಸಿದ ಮೇಲೂ ನನ್ನ ದೇಹದಾದ್ಯಂತ ಚಳಿಯ ಅಲೆ ಚಿಲ್ಲನೆ ಹರಿದಾಡುತಿತ್ತು.

ರಾಗು-ಅಂಜುರವರಿಗೆ ಬೇಗ ಪ್ರಜ್ಞೆ ಮರಳಿದುದು ಸುದೈವ. ಇನ್ನುಳಿದ ಮಕ್ಕಳೂ ಚೇತರಿಸಿಕೊಳ್ಳತೊಡಗಿದಾಗ ಎದೆ ಹಗುರಾದರೂ ಆ ನತದೃಷ್ಟ ಮೂರು ಮಕ್ಕಳು? ಹಾ, ವಿಧಿ!

ಕಟ್ಟಡಕ್ಕೂ ಅಲ್ಪ ಸ್ವಲ್ಪ ಹಾನಿಯಾಗಿತ್ತು.

ಅಂಜು ರಾಗವುಯಿಯರನ್ನು ನಾನೇ ಮನೆಯಲ್ಲಿಟ್ಟುಕೊಂಡು ಉಪಚರಿಸಿದೆ. ಸಿಡಿಲಿನ ರಭಸಕ್ಕೆ ಸಿಕ್ಕಿದ ದೈಹಿಕ ಪ್ರವೃತ್ತಿ ಅತೀವ ಉಷ್ಣತೆಗೊಳಗಾಗಿದ್ದು ಕ್ಷಣಕ್ಷಣವೂ ಅದರ ತೀವ್ರ ಸಂಚಾರದಿಂದ ನೋವು ನರಳುವಿಕೆ ಅಪಾರ. ಎರಡು ಮೂರು ದಿನಗಳ ತೀವ್ರ ಅಸ್ವಸ್ಥತೆಯ ನಂತರ ಇಬ್ಬರೂ ಸ್ವಲ್ಪ ಸ್ವಲ್ಪವಾಗಿ ಚೇತರಿಸಿಕೊಳ್ಳತೊಡಗಿದರು.

ಸಧ್ಯ, ರಾಗಿಣಿ, ತಾರಿಣಿಯರ ಬೀಡು ಇಲ್ಲೇ. ಆದುದರಿಂದ ಸತ್ಯಳ ಆನಂದಕ್ಕೆ ಎಣೆಯೇ ಇಲ್ಲ. ಡೇವಿಡ್‌ನೊಂದಿಗೆ ಎಲ್ಲರೂ ಪಿಂಗ್‌ಪಾಂಗ್ ಆಟ, ಚೆಂಡಾಟಗಳಲ್ಲಿ ಸ್ವಚ್ಛಂದವಾಗಿ ಪಾಲ್ಗೊಂಡು ಸಂತಸದಿಂದ ನಲಿಯುತ್ತಾರೆ. ಅವನಂತೂ ಮಕ್ಕಳೊಂದಿಗೆ ಮಗುವಾಗಿ ಬಿಡುವ. ಭಾಸ್ಕರನಿಗೆ ಇದೆಲ್ಲಾ ಏಕೆ ಅರ್ಥವಾಗುವುದಿಲ್ಲವೋ, ದೇವರಿಗೇ ಗೊತ್ತು; ನೋಡಿದರೆ ಉತ್ತಮ ಜ್ಞಾನಿ! ಯಾವತ್ತೂ ಅಸಮಾಧಾನವೇ. ನನಗೆ ಎಷ್ಟು ಯೋಚಿಸಿದರೂ ಬಗೆ ಹರಿಸಲಾರದ ಸಮಸ್ಯೆ. ನುಂಗಲಾರದ ತುತ್ತು. ಈ ಇಕ್ಕಟ್ಟಿನಿಂದ ಪಾರಾಗುವ ಚಿಂತೆ ಮನಃಪ್ರಾಣಗಳನ್ನೆಲ್ಲಾ ಆವರಿಸಿ ಹೃದಯವನ್ನು ಕಾಣದ ಕೈಗಳಿಂದ ಹಿಸುಕುತ್ತದೆ. ಅತ್ಯಂತ ಅಸಹನೀಯವಾದ ಕಳಂಕ ಮಾಲೆಯನ್ನು ಕಿತ್ತೊಗೆಯದ ಹೊರತು ಮನಸ್ಸಿಗೆ ಶಾಂತಿ ಬರುವುದಿಲ್ಲ. ಆದರೆ, ಹೇಗೆ, ಎಂತು ಎಂಬುದು ಹಿರಿಯ ಪ್ರಶ್ನೆ. ಅಂತರ್ಯದಲ್ಲಿ ಗುಂಗೆ ಹುಳುವಿನಂತೆ ಕೊರೆಯುವ ಪ್ರಶ್ನೆಯನ್ನು ಎದುರಿಸಲಾರದೇ ತನುಮನಗಳು ದಣಿದುವು. ನಾನು ಕಾಯಾ ವಾಚಾ ಮನಸಾ ಭಗವಂತನಿಗೆ ಆತ್ಮ ನಿವೇದನೆ ಮಾಡಿಕೊಂಡೆ.

ವಾರವೊಂದು ಉರುಳಿತು. ಮಳೆಗಾಳಿಗಳ ಹಾವಳಿ ಕಡಿಮೆಯಾಗಿದ್ದರೂ ಸಂಪೂರ್ಣ ನಿಂತಿರಲಿಲ್ಲ. ದಿನವೆಲ್ಲಾ ಉಣ್ಣೆ ಬಟ್ಟೆಗಳೇಬೇಕು ಎಂಬಷ್ಟು ತಂಡಿಯ ವಾತಾವರಣ.

ಶಾಂತಿ ಪ್ರಸಾದ್ ಕುಟುಂಬ ಸಮೇತರಾಗಿ ಬಂದಿಳಿದಾಗ ಎಲ್ಲರಿಗೂ ಎಲ್ಲಿಲ್ಲದ ಸಂತಸ. ನಾವು ದೆಹಲಿಯಲ್ಲಿ ನೆಲೆಸಿದ ಮೇಲೆ ಮಂಜುಳಾ ಇದೇ ಮೊದಲ ಬಾರಿಗೆ ಬಂದುದು ನಮ್ಮಲ್ಲಿಗೆ. ಒಳಬಂದವಳೇ ಒಮ್ಮೆ ಮನೆಯನ್ನೂ ಅಂಗಳವನ್ನೂ ಸುತ್ತುಹಾಕಿ ಸಂತೃಪ್ತಿಯಿಂದ ಹುಬ್ಬು ಏರಿಸಿ "ಪರವಾಯಿಲ್ಲವಮ್ಮಾ ! ನಿನ್ನ ಮನೆ ಬಲು ಚೆನ್ನಾಗಿದೆ. ಉದ್ಯಾನ ಸಹ ಸುಂದರವಾಗಿ ಬೆಳೆಸಿದ್ದಿ !" ಎಂದಾಗ ಮುಖಬಿಂಬ ಹೂವಿನಂತೆ ಅರಳಿತು. ತಮ್ಮನನ್ನು ತರಾಟೆಗೆ ತೆಗೆದುಕೊಳ್ಳುತ್ತ "ನೀನು ಬೆಂಗಳೂರಿಗೆ ಬಾರದ ಹೊರತು ನಾನಿಲ್ಲಿಗೆ ಬರಬಾರದು ಎಂದುಕೊಂಡಿದ್ದೆ. ಆದರೆ, ಬರಲೇಬೇಕಾದ ಪ್ರಸಂಗ ಒದಗಿಬಂದುದರಿಂದ ಬಂದೆ. ನೀನು ಮರೆತರೂ ನಾವು ಮರೆಯಬಾರದಷ್ಟೆ ?"

"ಅದು ಹೇಗೆ ? ನೀನು ಈವರೆಗೆ ಎಷ್ಟು ಬಾರಿ ಬೇಕಾದರೂ ಬರಬಹುದಾಗಿತ್ತು. ನೀನೂ ಈಗಷ್ಟೆ ಬಂದಿದ್ದಿ. ನಾನೂ ಇಷ್ಟರಲ್ಲೇ ಒಮ್ಮೆ ಹೊರಟರೆ ಸರಿತಾನೇ ?" ಅಷ್ಟೇ ಸರಳವಾಗಿ ಹಾಸ್ಯ ಪ್ರಧಾನವಾದ ದನಿಯಲ್ಲಿ ಭಾಸ್ ನುಡಿದ. ತುಟಿಗಳಲ್ಲಿ ತುಂಟನಗೆ ಅರಳಿತು.

"ಅಹಹ ! ಬಹಳ ಜಾಣ ! ನಿನ್ನ ಹಾಗಲ್ಲ ಬಿಡು, ನಾನು ಮರೆತಿದ್ದರೆ ಇಲ್ಲಿಗೇಕೆ ಬರುತಿದ್ದೆ ? ಅಂಜೂ ಮನೆಯಲ್ಲೋ ನಮ್ಮ ಬಂಧುಗಳ ಮನೆಯಲ್ಲೋ ಇಳಿಯುತಿದ್ದೆ. ನನಗೊಬ್ಬ ತಮ್ಮನಿದ್ದಾನೆ ಎಂದಲ್ಲವೇ ಇಲ್ಲಿಗೆ ಹುಡುಕಿಕೊಂಡು ಬಂದದ್ದು !" ಒಳ್ಳೆಯ ರೀತಿಯಿಂದ ನುಡಿದಳು ಮಂಜುಳಾ.

"ಬರಬಾರದು ಎಂದೇನಿಲ್ಲ, ಬರಲು ಬಿಡುವಾಗಬೇಕಲ್ಲ ? ಒಂದು ವಾರ ರಜೆ ಸಿಕ್ಕಿದರೆ ಸಾಕು, ಈ ಹುಡುಗಿಯರು ಮೂವರೂ ಒಟ್ಟಾಗಿ ಒಂದು

ಪ್ರೋಗ್ರಾಂ ಹಾಕಿಕೊಳ್ಳುತ್ತಾರೆ. ಆಯಿತಲ್ಲ, ರಾಗಿಣಿ–ತಾರಿಣಿ ಮುಂದೆ! ಸತ್ಯಾ ಹಿಂದೆ! ಅನಂತರ ಅವರು ಹೇಳಿದಂತೆ ನಾವು ಕೇಳಬೇಕು!"

ಅವಳು ಒಂದು ಕ್ಷಣ ಯೋಚಿಸಿ ನಾವೆಲ್ಲರೂ ಒಂದೇ ಕಡೆ ಇದ್ದಿದ್ದರೆ ಆಗಾಗ ಒಟ್ಟಾಗಿಯೇ ಪ್ರವಾಸ ಹೊರಡಬಹುದಾಗಿತ್ತು. ಒಬ್ಬೊಬ್ಬರೆ ಹೋಗುವುದು ಏನು ಚೆನ್ನ? ಅಲ್ಲವೇ?"

"ಅದೂ ಸರಿಯೆ. ಮುಂದಿನ ಸಾಲಿನಿಂದ ನೀನೂ ರಾಘವ ಬೆಂಗಳೂರಿಗೇ ವರ್ಗಾಯಿಸಿಕೊಳ್ಳಿ!" ಎಂದರು ಶಾಂತಿ ಪ್ರಸಾದ್ ಅವರ ಮುಖದಲ್ಲಿ ಗಾಂಭೀರ್ಯವಿತ್ತು. ತುಂಬು ನೋಟದಲ್ಲಿ ಸ್ಥಿರತೆಯಿತ್ತು.

ಶಾಂತಲಾ ಶ್ರೀವತ್ಸರಿಗೆ ಇದಾವುದರ ಪರಿವೆಯೂ ಇಲ್ಲದೆ ಮಾಸಿಕಗಳಲ್ಲಿ ಕಣ್ಣು ಹಾಯಿಸಿದ್ದರು. ಮತ್ತೆ ಶಾಂತಿಪ್ರಸಾದ್ ನೇರವಾಗಿ ಪ್ರಶ್ನಿಸಿದರು "ಒಂದೆರಡು ವಾರವಾದರೂ ಬಿಡುವು ಮಾಡಿಕೊಳ್ಳಬಾರದೇನಯ್ಯಾ? ಸದಾ ಕೆಲಸವೇ ಆದರೆ ಬಿಡುವು ದೊರೆಯುವುದು ಯಾವಾಗ? ಕೌಟುಂಬಿಕ ಸೌಖ್ಯ, ಮನರಂಜನೆ ಹೇಗೆ?"

"ದಿನದಿನಕ್ಕೂ ವಿಜ್ಞಾನ ಬೆಳೆಯುತ್ತಲೇ ಇರುವುದರಿಂದ ತೊಡಕುಗಳು ಹೆಚ್ಚುತ್ತಲೇ ಇರುತ್ತವೆ. ನೋಡೋಣ, ಯಾವಾಗ ಸಾಧ್ಯವಾಗುತ್ತೋ? ಬಾಂಬೆ–ಬರೋಡ ಯೂನಿವರ್ಸಿಟಿಗಳಿಂದ ಕರೆ ಬಂದಿದೆ. ಅಲ್ಲಿಗೆ ಹೋದಾಗ ಹಾಗೇ ಅಲ್ಲಿಂದ ಬೆಂಗಳೂರಿಗೆ ಬರುವೆ. "ಎನ್ನುತ್ತ ಶಾಂತಲಾ ಶ್ರೀವತ್ಸರ ಮಧ್ಯೆ ಕುಳಿತು ಇಬ್ಬರನ್ನೂ ಎರಡೂ ಕೈಗಳಿಂದ ಅಪ್ಪಿ ಹಿಡಿದು "ಈಗ ಹೇಳಿ ನಾನು ಮರೆತಿದ್ದೇನೆಯೋ?" ಎಂದ ಭಾಸ್.

"ಅಲ್ವೇ ಮತ್ತೆ? ನೀವೇ ಹೇಳಿ!"

ನಗುವಿನಲಹರಿ ಮಾಡು ಮುಟ್ಟುವಂತೆ ಮೊಳಗಿತು.

ಕೊಠಡಿಯಲ್ಲಿ ಬಟ್ಟೆ ಬದಲಿಸುತಿದ್ದ ಸತ್ಯಭಾಮ ಓಡಿಬಂದು ಮಕ್ಕಳೊಂದಿಗೆ ಕೂಡಿಕೊಂಡಳು. ಎಷ್ಟೆಷ್ಟು ವಿಚಾರಗಳು ಅಲ್ಲಿ ಎದ್ದಿದ್ದು

ಮೂಡಿದುವೊ ಅವುಗಳಿಗೆ ಕೊನೆ ಮೊದಲೇ ಇಲ್ಲ. ಚಹ ತೀರಿದ ನಂತರ ಮಕ್ಕಳು ಮೂವರೂ ಹೋಗಿ ಅಂಜನಾ ಮಕ್ಕಳನ್ನೂ ಕರೆತಂದರು. ಮರುದಿನ ಭಾನುವಾರವಾದ್ದರಿಂದ ಎಲ್ಲರಿಗೂ ರಜೆ. ಕ್ಷಣಕ್ಷಣಗಳೂ ಸಂತಸದ ಗಣಿಗಳಾದುವು.

ಈ ಮಧ್ಯೆ ಒಂದು ದುರ್ದೈವದ ಸಂಗತಿ ಕೇಳಬೇಕಾಗಿ ಬಂತು. ಶಾಂತಿ ಪ್ರಸಾದ್ ಒಂದು ವಾರವಿದ್ದು ಗೆಳೆಯರಲ್ಲಿ ಬಂಧುಗಳಲ್ಲಿ ದಿನಕ್ಕೊಂದು ಕಡೆ ಕಳೆದು ಊರಿಗೆ ಹೊರಡುವ ತಯಾರಿಯಲ್ಲಿರುವಾಗ ಹಠಾತ್ತನೆ ರಾಗಮಯಿ ಯ ಗಂಡ ತೀರಿಕೊಂಡ ದಾರುಣ ಸುದ್ದಿ ತಿಳಿದುಬಂತು. ಅಂಜನಾ ಮಕ್ಕಳೊಡನೆ ಕಾತರತೆಯಿಂದ ಆಗಮಿಸಿದಳು. ಅತ್ತೂ ಅತ್ತೂ ಕಣ್ಣುಗಳು ಕೆಂಪಾಗಿವೆ. ಕೆನ್ನೆಯ ಮೇಲೆ ಕಂಬನಿಯ ಕಲೆ ಮಾಸಿಯೇ ಇಲ್ಲ.

ಆ ಕೂಡಲೇ ಶಾಂತಿಪ್ರಸಾದ್ ಬೆಂಗಳೂರಿಗೆ ಹೋಗುವ ವಿಚಾರವನ್ನು ಬಿಟ್ಟು ಅಂಜನಾ ರಾಘವರೊಂದಿಗೆ ಮದರಾಸಿನ ಮಾರ್ಗ ಹಿಡಿಯಬೇಕಾ ಯಿತು. ಮಕ್ಕಳಿಗೆ ರಜೆಯಿದ್ದುದರಿಂದ ಭಾಸ್ "ಮಕ್ಕಳೆಲ್ಲಾ ಇಲ್ಲೇ ಇರಲಿ. ಹೇಗೂ ನಾನು ಬೊಂಬಾಯಿಗೆ ಹೋದಾಗ ಹಾಗೇ ಕರೆತರುವೆ" ಎಂದ. ನಾನೂ ಹಾಗೆಂದೇ ಒತ್ತಾಯಿಸಿದೆ. ಸರಿ, ನಾಲ್ವರೂ ಇಲ್ಲೇ ಉಳಿದರು. ನಾವು ಅವರನ್ನು ವಿಮಾನ ನಿಲ್ದಾಣದಲ್ಲಿ ಬಿಟ್ಟು ಹಿಂದಿರುಗಿದಾಗ ಮಧ್ಯಾಹ್ನ ಎರಡು ಗಂಟೆ. ಮರುದಿನ ರಾಗಿಣಿ–ತಾರಿಣಿಯರ ಹುಟ್ಟುಹಬ್ಬ. ಅದರ ತಯಾರಿಗಾಗಿ ಇಂದು ಶಾಪಿಂಗ್ ಬೇರೆ ಇತ್ತು. ಶಾಲೆಯ ದುರಸ್ತಿ ಕಾರ್ಯ ನಡೆಯುತಿದ್ದು ಒಂದು ವಾರದಿಂದ ಅತ್ತ ಹೋಗಲಾಗಿರಲಿಲ್ಲ. ನೀಲಾರಾಂ, ಪಾಂಚಾಲಿವರ್ಮ ನೋಡಿಕೊಳ್ಳುತಿದ್ದುದರಿಂದ ಪರವಾಯಿಲ್ಲ ಎಂದರೂ ನಮ್ಮ ಜವಾಬ್ದಾರಿಯೂ ಹೆಚ್ಚಿನದೇ.

ತಲೆಬಾಗಿಲಲ್ಲಿ ಲಲಿತಮೂರ್ತಿ ಹಠಾತ್ತಾಗಿ ಕಾಣಿಸಿಕೊಂಡಳು. ಮುಖಬಿಂಬ ಅತ್ಯಂತ ಖಿನ್ನವಾಗಿತ್ತು. ಅವಳು ಬರಬರುತ್ತಲೇ ಕೇಳಿದಳು "ರಾಗಮಯಿಗೆ ಒದಗಿದ ದುರ್ಗತಿ ತಿಳಿದು ತುಂಬ ವ್ಯಸನವಾಯಿತು. ಅಂಜೂಮನೆಗೆ ಫೋನ್ ಮಾಡಿದೆ. ಅಲ್ಲಿ ಯಾರು ಇಲ್ಲ. ವಿಷಯ

ಏನೆಂಬುದು ತಿಳಿಯದೆ ಇಲ್ಲಿಗೆ ಬಂದೆ. ಒಮ್ಮೆ ನಿಜವೋ ಸುಳ್ಳೋ ಎಂಬ ಅನುಮಾನವೂ ಉಂಟಾಯಿತು. ನಾನೂ ಅವಳೂ ತುಂಬಾ ಗೆಳತಿಯರು...."

"ಪಾಪ, ಬಲೂ ಚಟುವಟಿಕೆಯ ಹುಡುಗಿ...ಗಂಡನಿಗೆ ಹೃದಯಾ ಘಾತವಾಗಿ ಚಿಕಿತ್ಸೆಗೆ ಅವಕಾಶ ಸಿಗದಷ್ಟು ಬೇಗನೆ ಪ್ರಾಣಹೋಗಿದೆ. ಮುಂದೇನು ಮಾಡುತ್ತಾಳೋ, ತುಂಬ ಅನ್ಯಾಯವಾಯಿತು," ಎಂದೆ. ನನ್ನ ಎದೆಯಾಳದಿಂದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು.

"ಅವಳನ್ನು ನೋಡಿ ನಾಲ್ಕು ಸಮಾಧಾನದ ಮಾತುಗಳನ್ನು ಹೇಳುವು ದಕ್ಕೆ ಅವಕಾಶವಿಲ್ಲ..."

"ನಿನ್ನವರಿಗೆ ಹೇಳಿಕೊಂಡು ಒಮ್ಮೆ ಹೋಗಿ ಬಾ."

ಅವಳು ಮಾತಾಡಲಿಲ್ಲ. ಭಾರವಾದ ಹೆಜ್ಜೆಯನ್ನು ಎಳೆದುಕೊಳ್ಳುತ್ತ ಹೊರಟಳು. ಅವಳ ಮುಖದ ಮೇಲೆ ಮೂಡಿದ ದಪ್ಪ ಅಕ್ಷರಗಳ ಮುದ್ರೆ ನಿಸ್ಸಹಾಯಕತೆಯನ್ನು ಸಾರಿ ಹೇಳುತಿತ್ತು. ಅವಳ ಸಂಕಟ ಪರಿಸ್ಥಿತಿ ಯನ್ನು ಕಂಡು ನನ್ನ ಹೃದಯ ಸಂಕಟದ ಬೀಡಾಯಿತು. ಅವಳನ್ನು ತಲೆ ಬಾಗಿಲವರೆಗೂ ಹೋಗಿ ಬೀಳ್ಕೊಟ್ಟು ಒಳಬಂದೆ.

ಅನಂತರ ಕನ್ನಾಟ್‌ಪ್ಲೇಸ್‌ಗೆ ಮಕ್ಕಳೊಂದಿಗೆ ಹೋಗಿ ಎಲ್ಲರಿಗೂ ಬೇಕುಬೇಕಾದ ಬಟ್ಟೆಬರೆಗಳನ್ನೂ ತಿಂಡಿತಿನಿಸುಗಳನ್ನೂ ಕೊಂಡು ತಂದೆ. ಆಹ್ವಾನ ಪತ್ರಿಕೆಗಳನ್ನು ಎಲ್ಲರೂ ದುಂಡು ಮೇಜಿನ ಸುತ್ತ ಕುಳಿತು ಬಣ್ಣ ಕುಂಚಗಳನ್ನಿಟ್ಟುಕೊಂಡು ಚಿತ್ರವಿಚಿತ್ರವಾಗಿ ಬರೆದು ಪೂರೈಸಿದರು. ನಾನೂ ಅವರೊಂದಿಗೆ ಕುಳಿತು ಅವರ ಚಟುವಟಿಕೆಯನ್ನು ಗಮನಿಸಿ ಅವರ ಸಂತಸದಲ್ಲಿ ಪಾಲ್ಗೊಂಡರೂ ರಾಗಮಯಿಯ ದುಃಖ ನನ್ನ ಎದೆಯನ್ನು ಕೀಟ ದಂತೆ ಕೊರೆಯುತಿತ್ತು.

ಬೆಳಿಗ್ಗೆ ಶಾಲೆಯ ಕಡೆ ರಜನೀ ಮೆಹತ ಮತ್ತು ನೀಲಾರಾಂ ಇವ ರೊಂದಿಗೆ ಹೋದೆ. ದುರಸ್ತಿ ನಡೆಯುತಿತ್ತು. ಕಟ್ಟಡ ನೋಡಿದರೆ ಕಂಬನಿ

ಮಿಡಿಯುವಂತಹ ಸನ್ನಿವೇಶ. ನಾವು ಹಾಕಿದ ಹಣ ಸ್ವಲ್ಪ ನಷ್ಟವಾಗಿತ್ತು. ಇನ್ನೂ ಒಂದೆರಡು ವಾರಗಳಷ್ಟು ಕೆಲಸ ಹಿಡಿಯುತ್ತದೆ. ಅನಂತರ ಅಂಗಣಕ್ಕೆ ಜಲ್ಲಿಯನ್ನು ಹಾಕಿಸುವುದಿತ್ತು. ನಾವು ಎತ್ತಿದ ಹಣದಲ್ಲಿ ಬಹಳಷ್ಟು ಖರ್ಚಾಗುವ ಸಂಭವವಿದ್ದು ನಿಜವಾಗಿಯೂ ಮನಸ್ಸಿಗೆ ಬಹಳ ನೋವಾಯಿತು.

ಸಂಜೆಯಲ್ಲಿ ರಾಗಿಣಿ–ತಾರಿಣಿಯರ ಹುಟ್ಟು ಹಬ್ಬದ ಮಕ್ಕಳ ಕೂಟ ನಗೆ ಮಾತುಗಳಿಂದ ಹಾಸ್ಯದ ಚಟಾಕಿಗಳಿಂದ ಕೂಡಿ ಸುರಮ್ಯವಾಗಿತ್ತು. ಹೊತ್ತು ಮುಳುಗುವವರೆಗೂ ಕೂಡಿದ್ದ ಮಕ್ಕಳು ಹೊರ ಹೊರಟಾಗ "ಬೈ ಬೈ" "ಚೀರಿಯೋ" ಮುಂತಾದ ಶಬ್ಧಗಳು ಮೊಳಗಿ ಆತ್ಮೀಯತೆಯಿಂದ ಬೀಳ್ಕೊಟ್ಟರು. ಹೊತ್ತು ಉರುಳಿದುದೇ ತಿಳಿಯಲಿಲ್ಲ. ಆಕಾಶ ಯಾವಾಗ ನಕ್ಷತ್ರಗಳ ಚಿತ್ತಾರದ ಸೀರೆಯನ್ನು ಧರಿಸಿತೋ, ಹುಣ್ಣಿಮೆ ಚಂದ್ರಮ ಯಾವಾಗ ಬಾನೇರಿ ಬಂದನೋ ಸಂಧ್ಯಾ ಕಾಲದ ತಂಪು ಯಾವಾಗ ಆರಂಭ ವಾಯಿತೋ ಒಂದೂ ತಿಳಿಯಲಿಲ್ಲ.

ಸ್ವಲ್ಪ ಹೊತ್ತು ಹಾಗೇ ನೋಡುತ್ತ ನಿಂತೆ.

ಸಿಡಿಲಿಗೆ ಆಹುತಿಯಾದ ಆ ನತದೃಷ್ಟ ಮಕ್ಕಳು ಮನದಲ್ಲಿ ಮೂಡಿ ನಿಂತರು. ಹಾಲ್ಗೆನ್ನೆಗಳ ಆ ಮಕ್ಕಳು ಮಾಡಿದ ತಪ್ಪಾದರೂ ಏನು? ದುರ್ವಿಧಿ ಯಾವ ಕಾರಣಕ್ಕಾಗಿ ಶಿಕ್ಷೆಗೆ ಗುರಿ ಪಡಿಸಿದ? ಅವರು ಬದುಕಿದ್ದರೆ ಮುಂದೆ ಯಾವ ಯಾವ ಕ್ಷೇತ್ರಕ್ಕೆ ಪದಾರ್ಪಣೆ ಮಾಡಿ ವಿಜೃಂಭಿಸುತಿದ್ದರೋ! ಹಾ! ವಿಧಿ ವಿನಾಕಾರಣ ಕತ್ತು ಹಿಸುಕಿತು. ನಾವು ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಕಟ್ಟಿದ ಶಾಲೆಯೇ ಅವರಿಗೆ ಮರಣಶಯ್ಯೆಯಾಗಬೇಕೇ? ಓ ಮಯ್ ಗಾಡ್! ನನ್ನ ಆತ್ಮ ಸಂಕಟದ ನಿವೇದನೆ ನಿಜವಾಗಿಯೂ ನಿನಗೆ ಸಲ್ಲಲಿ! ಎಲ್ಲಕ್ಕೂ ಹೊಣೆಗಾರನಾದ ನೀನು ಅವರ ಪವಿತ್ರಾತ್ಮಗಳಿಗೆ ನಿತ್ಯ ಶಾಂತಿಯನ್ನುಂಟುಮಾಡು....!

ನನ್ನ ಕಣ್ಣುಗಳಲ್ಲಿ ಸಣ್ಣಗೆ ನೀರಾಡಿತು ಆ ಮುಹೂರ್ತದಲ್ಲಿ.

ಆದರೆ...

ಆಲೋಚನಾಹೀನರ ಮನದಾಳದಲ್ಲಿ ನತದೃಷ್ಟ ಶಾಲೆಯ ಮಕ್ಕಳ ಮಾರಣ ಹೋಮಕ್ಕೆ ಕಟ್ಟಿದ ಅರ್ಥ ಭೂತ ಪ್ರೇತಗಳ ಕಾಟ ಎಂದು. ಆ ದುರ್ಭಾವನೆಯನ್ನು ಹೋಗಲಾಡಿಸುವುದೊಂದು ದೊಡ್ಡ ಹಗರಣವೇ ಆಯ್ತು. ಮಕ್ಕಳನ್ನು ಕಳುಹಿಸಲು ಎಷ್ಟೋ ಜನ ಹಿಂಜರಿದರು. ಅವರನ್ನು ಸಮಾಧಾನಪಡಿಸಿ ಮತಿಗೆ ಮೆತ್ತಿದ ಬಾಲಗ್ರಹವನ್ನು ತೊಡೆದು ಸರಿದಾರಿಗೆ ತರುವುದೊಂದು ಹಗರಣವೇ ಆಯ್ತು. ಮೂಢಜನ ಮೂಢ ಮತಿಗಳ ಯೋಚನಾಗಾರದಲ್ಲಿ ಭೂತಪ್ರೇತಗಳಲ್ಲದೆ ಮತ್ತಾರು ಸುಳಿಯ ಬಲ್ಲರು ? ಆ ಕೆರೆಯಲ್ಲೊಂದು ಭೂತ ಇತ್ತು, ಅದನ್ನು ಮುಚ್ಚಿದು ತಪ್ಪು. ಇತ್ಯಾದಿ....

ಶ್ರೀ ಶಾರದಾನಂದಸ್ವಾಮಿಗಳ ಪ್ರವಚನ ಕೇಳುವ ಸುಯೋಗ ಒದಗಿದ್ದು ನನಗೆ ಆಕಸ್ಮಿಕವಾಗಿ. ಮಹಿಳಾಮಂಡಳಿಯ ಸದಸ್ಯರಲ್ಲಿ ಬಹುತೇಕ ಮಂದಿ ಹೊರಟುದುದರಿಂದ ನಾನೂ ಉತ್ಸಾಹಿತಳಾದೆ. ಹಿಂದೊಮ್ಮೆ ಕಲಿಕತ್ತೆಯಲ್ಲಿ ಶ್ರದ್ಧಾನಂದಜೀಯವರ ಪ್ರವಚನ ಕೇಳುವ ಸುಯೋಗ ಒದಗಿತ್ತು. ಅದರ ನೆನವರಿಕೆಯಿಂದ ಕಿವಿಯವರೆಗೂ ಬಿಸಿಬಿಸಿಯಾದಂತೆ ಉದ್ಭಾಸಿತವಾಯಿತು. ತೀವ್ರ ಮಾನಸ ತುಡಿತದಿಂದ ಮೈಮನಗಳು ಪುಳಕಿತವಾಗುತ್ತಿದ್ದುವು. ನನ್ನ ಅದೃಷ್ಟಕ್ಕೆ ಶ್ರೀ ಶಾರದಾನಂದಜೀ ಮಾತಾಡಿದ್ದು ಸ್ವಚ್ಛ ಇಂಗ್ಲೀಷಿನಲ್ಲಿ. ಅವರು ಕೊಟ್ಟ ಒಂದು ದೃಷ್ಟಾಂತ : ಮಹಾಭಾರತದಲ್ಲಿ ಶ್ರೀ ಕೃಷ್ಣ ಸಂಧಿಗೆ ಒಪ್ಪಿಕೋ ಎಂದು ದುರ್ಯೋಧನನಿಗೆ ಹೇಳುತ್ತಾನೆ. ಆದರೆ ಅದಕ್ಕೆ ದುರ್ಯೋಧನ ಕೊಟ್ಟ ಉತ್ತರ ಹೀಗೆ: "ನನಗೆ ಧರ್ಮ ಯಾವುದು ಗೊತ್ತಿದೆ; ಅದನ್ನು ಮಾಡಲಾರೆ. ಅಧರ್ಮ ಯಾವುದು ಗೊತ್ತಿದೆ; ಅದನ್ನು ಬಿಡಲಾರೆ." ನಾವೆಲ್ಲಾ ಇರುವುದು ಈ ಪರಿಸ್ಥಿತಿಯಲ್ಲೇ. ತಪ್ಪು ಮಾಡುವವರೆಲ್ಲರಿಗೂ ಅದು ತಪ್ಪು ಎಂದು ತಿಳಿದಿರುತ್ತದೆ; ಆದರೂ ಮಾಡುತ್ತಾರೆ. ಧರ್ಮ ಯಾವುದು ಎಂಬುದು ಎಲ್ಲರಿಗೂ ಗೊತ್ತು. ಆದರೆ ಅದನ್ನು ಮಾಡಲು ಹಿಂಜರಿಯುತ್ತಾರೆ. ಏಕೆ ? ಅದು ಸ್ವಾರ್ಥದಿಂದ. ಯಾರು ಸ್ವಸುಖವನ್ನು ಬಿಟ್ಟುಕೊಡಲು ತಯಾರಿದ್ದಾರೆ...?

ಅವರ ಪ್ರಶ್ನೆ ಮನದಾಳಕ್ಕಿಳಿಯಿತು. ನಾನು ಶ್ರದ್ಧಾಭಕ್ತಿಗಳಿಂದ ಕೇಳಿದೆ. ಅಕ್ಷರ ಅಕ್ಷರವನ್ನೂ ಮನನ ಮಾಡಿದೆ. ಜೀವಿತದಲ್ಲಿ ನಾವು ಮಾಡಿದ್ದು ಇದು ಎಂದು ಹೇಳಿಕೊಳ್ಳಲು ಅಥವಾ ಜೀವನ ಸಾರ್ಥಕತೆಯನ್ನು ಮಾಡಿಕೊಳ್ಳಲು ಸುವರ್ಣಾವಕಾಶವಿರುವಾಗ ನಾವು ಕಣ್ಣು ಮುಚ್ಚಿ ಕೊಂಡರೆ ತಪ್ಪು ನಮ್ಮದೇ. ನನ್ನ ಜೀವಮಾನದಲ್ಲಿ ಈಗಾಗಲೇ ಅರ್ಧವೋ ಮುಕ್ಕಾಲೋ ಕಳೆದುಹೋಗಿದೆ. ಇನ್ನುಳಿದ ಕಾಲಮಾನ ಸ್ವಲ್ಪೇಸ್ವಲ್ಪ. ಅಷ್ಟನ್ನಾದರೂ ಸಾರ್ಥಕ ಮಾಡಿಕೊಳ್ಳಲೇಬೇಕು ಎಂಬ ಉತ್ಕಟೇಚ್ಛೆ ಮೂಡಿತು. ಭಾಸ್ವಾನನ ಗೆಳೆತನವಾಗದಿದ್ದರೆ ನಾನು ನಿಜವಾಗಿಯೂ 'ನನ್' ಆಗುತ್ತಿದ್ದೆ. ಆದರೆ ಭಗವಂತ ಸ್ನೇಹ ಮೃದುಲ ಹೃದಯದಲ್ಲಿ ರಾಗಾತ್ಮಕ ಶ್ರದ್ಧೆಯನ್ನು ಏಕೆ ಬೆಳೆಸಿದನೋ ಊಹಿಸುವುದು ಕಷ್ಟ. ಈಗಲೂ ಎಷ್ಟೋ ಬಾರಿ ಸನ್ಯಾಸಿನಿಯರೆಡೆಗೇ ಓಡುತ್ತದೆ ಮನಸ್ಸು. ಆದರೆ, ಈ ಪುಟ್ಟ ಸಂಸಾರಕ್ಕೆ ಕಿಚ್ಚುಹಚ್ಚುವುದು ಏನೇನೂ ಇಷ್ಟವಿಲ್ಲ. ಇವರ ಮನಸ್ಸನ್ನು ಖಂಡಿತ ನೋಯಿಸಲಾರೆ. ಆದ್ದರಿಂದ ಜನ್ಮ ಸಾರ್ಥಕ್ಯವನ್ನು ಗುರಿಯಿಟ್ಟುಕೊಂಡೇ ಸಂಸಾರವನ್ನು ನಡೆಸಬೇಕು ಎಂಬ ತೀರ್ಮಾನಕ್ಕೆ ನಾನೇ ನಾನಾಗಿ ಶರಣಾದೆ. ಕರ್ಣದೇಶದಲ್ಲಿ "ನನಗೆ ಧರ್ಮ ಯಾವುದು ಗೊತ್ತಿದೆ; ಅದನ್ನು ಮಾಡಲಾರೆ. ಅಧರ್ಮ ಯಾವುದು ಗೊತ್ತಿದೆ; ಅದನ್ನು ಬಿಡಲಾರೆ;" ಎಂಬ ವ್ಯಾಖ್ಯಾನ ಪುನಃ ಪುನಃ ಮೊಳಗುತ್ತಿತ್ತು. ಶ್ರೀ ಶಾರದಾನಂದ ಸ್ವಾಮೀಜಿ ದೃಷ್ಟಿಪಥದಲ್ಲಿ ಮೂಡಿ ನಿಲ್ಲುತ್ತಿದ್ದರು. ನಾನು ಚಿಂತಾಪರವಶಳಾಗುತ್ತಿದ್ದೆ.

ಮರುಕ್ಷಣದಲ್ಲಿ ಈ ಭವಸಾಗರದಲ್ಲಿ ಲಕ್ಷ್ಯವಿಲ್ಲದೆ ಹರಿಯುತ್ತಿರುವ ಅಕರ್ಮಣ್ಯ ಜೀವನಗಳು ದೃಷ್ಟಿಪಥದಲ್ಲಿ ಸಾಗಿಹೋದುವು. ಛೀ! ಜೀವನ ಸಾರ್ಥ್ಯಕ್ಯಕ್ಕಾಗಿ ಸದಾ ಶ್ರಮಿಸದೇ ಹೋದರೆ ಈ ಜೀವನವೇ ವ್ಯರ್ಥ. ನಾನು ಇನ್ನೊಂದು ಗಳಿಗೆಯನ್ನೂ ವ್ಯರ್ಥಗೊಳಿಸಬಾರದು ಎನಿಸಿ ಭಾವ ಪರವಶಳಾದೆ. ಅಂತರ್ವಾಣಿ ನಿನ್ನ ಶರೀರ-ಮನಸ್ಸು-ಜ್ಞಾನ-ಮಮತೆ-ಸತೀತ್ವ ಎಲ್ಲವೂ ಸಾರ್ಥಕ! ಸ್ತ್ರೀ ಧರ್ಮದ ಸರ್ವಾಲಂಕಾರವೇ ಇದು! ಎಂದು ಕೂಗಿ ಹೇಳಿತು. ಆಕ್ಷಣವೇ ಅದೇ ವಾಣಿ

ನನನಗಳಲ್ಲೂ ಮರುಪ್ರಸಾರಹೊಂದಿತು. ನಾನು ಆತ್ಮ ನಿವೇದನೆ ಮಾಡಿಕೊಂಡಿರುವುದೇ ಅದಕ್ಕೆ ಎಂದು ಧೈರ್ಯವಾಗಿ ಹೇಳಿಕೊಂಡೆ.

o o o o

ನಾನು ಅಂಜೂ ಜೊತೆಯಲ್ಲಿ ಲಕ್ಷ್ಮೀನಾರಾಯಣನ ದೇವಾಲಯಕ್ಕೆ ಹೋದೆ. ತಾರಿಣಿ–ರಾಗಿಣಿ ಯರು ಮನೆಯಲ್ಲಿದ್ದುದರಿಂದ ಸತ್ಯಭಾಮೆ ಆಟದ ಅರಗಿಳಿ ! ರಾಘವ ಪ್ರವಾಸ ಹೋಗಿದ್ದುದರಿಂದ ಅಂಜನಾಗೂ ನಿಶ್ಚಿಂತೆ. ಆ ದೇವಮೂರ್ತಿಯ ಮುಂದೆ ಎಷ್ಟೊತ್ತಾದರೂ ಧ್ಯಾನಸ್ಥರಾಗಬಹುದು ಎಂಬಷ್ಟು ನಿರಾಳ ಮನಸ್ಸಿಗೆ.

ನಾವಿಬ್ಬರೂ ದೇವಾಲಯವನ್ನು ಒಂದು ಸುತ್ತು ಹಾಕಿ ಮುಂಭಾಗಕ್ಕೆ ಬಂದಾಗ ಜನಬಾಹುಳ್ಯದಿಂದ ಗಜಿಬಿಜಿ ಮೂಡಿತ್ತು. ನಾವು ದೇವ ಮೂರ್ತಿಗೆ ಸಾಷ್ಟಾಂಗ ನಮಸ್ಕಾರವನ್ನು ಸಲ್ಲಿಸಿ ಬಲಭಾಗದ ಪೌಳಿಯಲ್ಲಿ ಕುಳಿತೆವು. ಅಂಜೂ "ಮಾನವನ ಆಂತರಿಕ ಕಲ್ಮಷವನ್ನು ದೀರ್ಘ ಸಾಧನೆಯೂ ಭಸ್ಮೀಭೂತಗೊಳಿಸಲಾರದು; ವಸ್ತುತಃ ಕಲ್ಮಷವೂ ಮಾನವ ಜನ್ಮದ ಅನನ್ಯ ಸತ್ಯ !" ಎಂದು ನುಡಿದಾಗ ಅವಳ ಕಣ್ಣುಗಳಲ್ಲಿ ಮಿಂಚಿದ ಬೆಳಕು ಭಾವಾರ್ಥವನ್ನು ಸ್ವಚ್ಛಂದವಾಗಿ ಬೆಳಗಿಸಿತು. ನಾನು ಹಾಗೇ ಯೋಚಿಸಿದೆ, ಎಂತಹ ವ್ಯಾಖ್ಯಾನ ?....ಎಂತಹ ಸತ್ಯಸ್ಯ ಸತ್ಯ ? ಬೀಸುಗಾಳಿಯಲ್ಲಿ ಅದೇ ನುಡಿ ಪುನಃ ಮರ್ಮಾಂತಿಕವಾಗಿ ಮೊಳಗಿತು. "ಮಾನವನ ಆಂತರಿಕ ಕಲ್ಮಷವನ್ನು ದೀರ್ಘಸಾಧನೆಯೂ ಭಸ್ಮೀಭೂತ ಗೊಳಿಸಲಾರದು; ವಸ್ತುತಃ ಕಲ್ಮಷವೂ ಮಾನವ ಜನ್ಮದ ಅನನ್ಯ ಸತ್ಯ !" ಹಾ ! ಎಂತಹ ವಿಶ್ಲೇಷಣೆ !

ವಿಚಾರಶ್ರದ್ಧೆ ಮನವನ್ನು ತರ್ಕವಿತರ್ಕಗಳ ಅಲುಗಿನ ಮೇಲೆ ಎಳೆದಾಡಿತು.

"ಹಾಗಾದರೆ ಉಪಾಯವೇನು ?"

ಅಂಜು ನಗುತ್ತ ವಿವರಿಸಿದಳು "ಉಪಾಯ ಅಂದರೆ ಕರುವನ್ನು ಎಳೆದು ಕಂಬಕ್ಕೆ ಕಟ್ಟುವಂತೆ ಸರ್ವತೋವಿಸಾರಿಯಾದ ಮನಸ್ಸನ್ನು ಬಿಗಿದು ಕಟ್ಟುತ್ತಲೇ ಇರುವುದು !"

"ನಿಜ."

ಸ್ವಲ್ಪ ಯೋಚಿಸಿ ನಾನೆಂದೆ "ಶ್ರೀ ಶಾರದಾನಂದಜೀಯವರು ಇನ್ನೊಮ್ಮೆ ಬಂದಾಗ ಒಂದು ತಿಂಗಳು ಮೊಕ್ಕಾಂ ಮಾಡುವರೆಂದು ಕೇಳಿದ್ದೇನೆ. ಅವರ ಪ್ರವಚನಗಳನ್ನು ಕೇಳುತ್ತಿದ್ದರೆ ನಮ್ಮ ಸಮಸ್ಯೆಗಳ ಕೊಂಡಿಗಳು ತಾವಾಗಿಯೇ ಕಳಚಿ ಬೀಳುತ್ತವೆ. ಅವರಿರುವಷ್ಟು ಕಾಲವೂ ಹೋಗಿ ಕೇಳುವ ಮನಸ್ಸಿದೆ ನನಗೆ."

"ಒಳ್ಳೆಯದು ! ಭಾಸ್ ಮನೆಗೆ ಹಿಂದಿರುಗುವುದು ಹೊತ್ತಾಗುವುದರಿಂದ ನಿನಗೆ ಬಹಳಷ್ಟು ಕಾಲಾವಕಾಶ ದೊರೆಯುತ್ತದೆ; ಎಷ್ಟಾದರೂ ಕೇಳಬಹುದು. ಅದೇ ನನಗೆ ರಾಘವ ಮನೆಯಲ್ಲಿರುತ್ತಾರಾದ್ದರಿಂದ ಸಮಯ ಆಗುವುದಿಲ್ಲ. ಪ್ರವಚನ ಕೇಳಿ ಕೇಳಿ ನಿನ್ನ ಸಮಸ್ಯೆಗಳನ್ನು ಬಗೆಹರಿಸಿಕೊಂಡೆಯಾದರೆ ನಿನಗೆ ಆಧ್ಯಾತ್ಮಿಕ ಗ್ರಂಥಗಳು ಸುಲಭವಾಗಿ ಅರ್ಥವಾಗುತ್ತವೆ."

ನನಗದು ಸಹಜವೆನಿಸಿತು. ನಾನು ಆಲೋಚನಾಶೀಲಳಾದೆ.

ಬಹುಶಃ ನಾವು ಹಿಂದಿರುಗುವಾಗ ಎಂಟು ಗಂಟೆ. ಭಾಸ್ ವೃತ್ತಪತ್ರಿಕೆಯಲ್ಲಿ ಮನವಿಟ್ಟಿದ್ದ. ಅಂಜನಾ ನನ್ನನ್ನು ಬಿಟ್ಟವಳೇ ಮಕ್ಕಳನ್ನು ಕರೆದುಕೊಂಡು ಹೊರಟುಹೋದಳು. ನಾವು ದೇವಾಲಯದಲ್ಲಿ ಹೊತ್ತು ಕಳೆದುದನ್ನು ವಿವರಿಸಿದನಂತರ ಭಾಸ್‌ಗೆ "ನಿಜಕ್ಕೂ ಆ ದೇವಾಲಯದ ಪರಿಸರದಲ್ಲಿ ಅಪಾರವಾದ ಶಾಂತಿಭಕ್ತಿಗಳು ನೆಲಸಿವೆ. ಹೋಗಿಬಂದರೆ ದೈವೀಕವಾದ ಶಾಂತಿ ಮನಸ್ಸಿಗೆ ಲಭಿಸುತ್ತದೆ" ಎಂದೆ.

"ನಿಜ, ಜಾನಕೀ ! ಆದರೆ ನನಗೆ ಲವಲೇಶವೂ ಬಿಡುವಿಲ್ಲವಾದ್ದರಿಂದ ಆಧ್ಯಾತ್ಮದ ಮೆಟ್ಟಿಲನ್ನು ಏರಲು ಸಮಯವೇ ಇಲ್ಲ. ಮನದಲ್ಲಿ ಆಸೆ ಇದೆ. ಹೃದಯದಲ್ಲಿ ನೆಲೆಯಿದೆ. ಆದರೆ ಚಿಂತನೀಯವಾದುದು

ಇತರೆ ವಿಚಾರ. ನೋಡೋಣ, ಹಿಡಿದ ಕೆಲಸ ಬೇಗ ಕೈಗೂಡಿದರೆ ವಿಜ್ಞಾನ ಕ್ಷೇತ್ರದಿಂದ ನಿವೃತ್ತಿ ಹೊಂದಬಹುದು ..”

ಅವನ ದ್ವಿಧಾಹೀನ ಭಾಷೆಯಲ್ಲಿ ಹೊರಬಿದ್ದ ಉತ್ತರ ನನಗೆ ತುಂಬಾ ಕಳಕಳಿ ಹಿಡಿಸಿತು. ನಾನು ಅವನ ಗಂಭೀರ ಮುಖಭಾವವನ್ನೇ ಗಮನಿಸಿದೆ. ಏನು ಹೇಳಲೂ ಬಾಯಿ ಬರಲಿಲ್ಲ. ಈಗಾಗಲೇ...ನಿವೃತ್ತಿ ?

“ಜಾನಕೀ, ಯಾವ ವೇದಾಂತಿಯೇ ಆಗಲೀ ಮುನಿ ಋಷಿಗಳೇ ಆಗಲಿ ಈ ಲೋಕದ ಸಂಸರ್ಗವನ್ನು ಸಂಪೂರ್ಣ ಕಡಿದುಕೊಳ್ಳಲು ಸಾಧ್ಯವಿಲ್ಲ. ಎಷ್ಟೋ ಅಷ್ಟರಲ್ಲಿದ್ದುಕೊಂಡೇ ಆತ್ಮ ಚಿಂತನೆ ಮಾಡಿಕೊಳ್ಳುವುದು ಸರಿಯಾದ ಮಾರ್ಗ.”

ನಾನು ‘ಹೌದು’ ಎಂಬಂತೆ ತಲೆದೂಗಿದೆ. ಏನಾದರೂ ಕೇಳಬೇಕೆಂದರೆ ಮನಸ್ಸೇ ಬರಲಿಲ್ಲ.

○ ○ ○ ○

ಶ್ರೀ ಶಾರದಾನಂದಜೀಯವರು ಬಂದು ದೆಹಲಿಯಲ್ಲಿ ಮೊಕ್ಕಾಂ ಹೂಡಿದ್ದು ಮೂರು ವಾರಗಳು ಮಾತ್ರ. ಅವರ ಸಭೆಗೆ ಮಧ್ಯೆ ಮಧ್ಯೆ ನನ್ನೊಂದಿಗೆ ಹೊರಡಲು ಯಾರಾದರೂ ಸಿಕ್ಕುತಿದ್ದರೇನೋ ನಿಜ. ಅನೇಕ ಸಮಯ ನಾನೊಬ್ಬಳೇ ಅಲ್ಲಿಂದ ಹಿಂದಿರುಗುವುದು ಅನಿವಾರ್ಯ. ಕಾರು ಆಫೀಸಿನಲ್ಲಿರುತ್ತಿದ್ದುದರಿಂದ ಒಬ್ಬಳೇ ಟ್ಯಾಕ್ಸಿಯಲ್ಲಿ ಹಿಂದಿರುಗುವುದು ಭಯ. ಅಂತಲೇ ಸಭೆಗೆ ಭಾಸ್ ಸೆಕ್ರೆಟರಿಯನ್ನಾಗಲೀ ಮನೆಯ ಚಪ್ರಾಸಿಯನ್ನಾಗಲೀ ಬರಹೇಳುತಿದ್ದೆ. ಕೆಲವೊಮ್ಮೆ ಡೇವಿಡ್ ಅಲ್ಲಿಗೆ ಬರುತ್ತಿದ್ದನಾದ ಕಾರಣ ಅವನು ಮನೆಗೆ ಬಿಟ್ಟುಹೋಗುತ್ತಿದ್ದ. ಆ ಮೂರು ವಾರಗಳೂ ನಿಮಿಷವೂ ಬಿಡುವಿಲ್ಲದಂತೆ ಉರುಳಿಹೋದುವು. ಎಷ್ಟೋ ಸಲಿ ಭಾಸ್ ನನಗಾಗಿ ಕಾಯುವ ಪ್ರಸಂಗವೂ ಬರುತಿತ್ತು. ಅಂತಹ ದಿನ ನಾನು ಭಾಸ್‌ನನ್ನು ಕುರಿತು “ನಿನಗೆ ತೊಂದರೆಯಾಯಿತೇನೋ. ಇಂದಿಗೆ ಕ್ಷಮಿಸು ;

ಇನ್ನು ಅರ್ಧ ಗಂಟೆ ಮುಂಚಿತವಾಗಿ ಬರಲು ಪ್ರಯತ್ನಿಸುವೆ. “ಎಂದಾಗ ಅವನು ಆರ್ದ್ರಸ್ಮಿತವನ್ನು ಸೂಸಿ “ಪರವಾಯಿಲ್ಲ, ಜಾನಕೀ!” ಎನ್ನುತಿದ್ದ.

ಆದರೆ ಇದರಲ್ಲಿ ಮೂಡಿದ ಇನ್ನೊಂದು ಸಮಸ್ಯೆ ಎಂದರೆ ಭಾಸ್ ಡೇವಿಡ್‌ನನ್ನು ಕಾಣತೊಡಗಿದ್ದು ತೀವ್ರ ಸಂಶಯ ದೃಷ್ಟಿಯಿಂದ. ಮುಗ್ಧ ಹೃದಯಿಯಾದ ಅವನಿಗದು ಅರ್ಥವಾಗಿರಲಿಲ್ಲ. ಯಥೋಚಿತವಾಗಿ ದಿನ ಗಳು ಕಳೆದುವು. ನನ್ನ ಮನಸ್ಸು ಆಧ್ಯಾತ್ಮಿಕ ಪಥವನ್ನು ಹಿಡಿಯುವುದ ರಲ್ಲಿ ತೊಳಲಿ ಬಳಲುವಾಗ ಈ ಲೋಕದೊಡನೆ ಯಾವ ಸಂಪ್ರವವೂ ಇಲ್ಲ ವೇನೋ ಎಂಬಂತೆ ಒಮ್ಮೊಮ್ಮೆ ಮಂಕಾಗಿ ಕುಳಿತುಕೊಳ್ಳುತಿದ್ದೆ. ಹಿಡಿದ ಗ್ರಂಥ ಕೈಯ್ಯಲ್ಲಿ. ಮನಃಬುದ್ಧಿಗಳು ಇನ್ನೆಲ್ಲೋ. ಶಾಲಾ ಕಾರ್ಯಕ್ರಮ ಗಳಲ್ಲಿ ತೊಡಗಿರುವಂದು ಹೊತ್ತು ಸರಾಗವಾಗಿ ಉರುಳಿತ್ತಿತ್ತು. ಮನೆಗೆ ಬಂದು ಏಕಾಂಗಿಯಾಗಿ ಕುಳಿತೆನೆಂದರೆ ಚಿಂತೆಯಲೆಗಳು ಧುಮುಧುಮಿಸಿ ವಿಚಾರ ಮಂಥನಲ್ಲಿ ಮಾನಸಿಕ ತುಮುಲ ಮಿತಿಮೀರಿ ಬುದ್ಧಿ ಹದಗೆಟ್ಟಂತೆ ತೊಡಕಿನ ಜಾಲದಲ್ಲಿ ಸಿಕ್ಕಿ ತತ್ತರಿಸಿದ ಹೃದಯ ಮೌನವಾಗಿ ರೋದಿಸುತ್ತದೆ. ನಾನು ಆಹತಳಾಗಿ ಸುಮ್ಮನೆ ಕುಳಿತುಕೊಳ್ಳುವೆ. ಕಥೆ ಕಾದಂಬರಿಗಳಾ ಗಲೀ ಮ್ಯಾಗಜಿನ್‌ಗಳಾಗಲೀ ಮನಸ್ಸಿಗೆ ಇಷ್ಟವಾಗುತ್ತಲೇ ಇರಲಿಲ್ಲ. ಇತ್ತ ಇದೂ ಹಿಡಿಸುವುದಿಲ್ಲ; ಅತ್ತ ಅದೂ ಅರ್ಥವಾಗುತ್ತಿಲ್ಲ. ನನ್ನ ಏಕಾಂತ ಸಮಯವೆಲ್ಲಾ ಆಂತರಿಕ ತುಮುಲದಲ್ಲಿಯೇ ಕಳೆಯುತಿತ್ತು. ಈ ಜೀವನ ನಿಸ್ಸಾರ; ನಾನು ಇದರಲ್ಲೇ ಏಕೆ ತೊಳಲಬೇಕು? ಈ ಭೋಗ ಜೀವನ ನಿಜಕ್ಕೂ ಅಸಹ್ಯ-ಹೃದಯ ಹೀನತೆ, ಲೋಭ-ಮೋಹಗಳಿಂದ ಕೂಡಿದ್ದು ಎಂದು ಮುಂತಾದ ಯೋಚನೆಯಿಂದ ತೊಳಲುವುದು ಅನಿವಾರ್ಯ.

— ೦ —

# ಅಧ್ಯಾಯ

## ೯

ಸದ್ದಿನ ಸೊಲ್ಲಿಲ್ಲದ ಸಂಧ್ಯಾ ಸಮಯದಲ್ಲಿ ಶೀತಲ ಶಾಂತಿಯ ಅವತರಣ.

ಭಾಸ್ ಮನೆಗೆ ಬಂದಾಗ ಸತ್ಯಭಾಮ ಮನೆಯಲ್ಲಿರಲಿಲ್ಲ. ಮನೆಯಲ್ಲಿ ನಿಶ್ಶಬ್ಧ ವ್ಯಾಪಕವಾಗಿ ಹರಡಿತ್ತು. ನಾನು ದುಂಡು ಮೇಜಿನ ಬಳಿ ವಿವೇಕಾನಂದರ ಗ್ರಂಥವನ್ನು ಕೈಕೊಂಡು ಅದರಲ್ಲಿಯೇ ಸಂಪೂರ್ಣ ತಲ್ಲೀನಳಾಗಿದ್ದುದರಿಂದ ಭಾಸ್ ಮನೆಗೆ ಬಂದುದು ತಿಳಿಯಲೇ ಇಲ್ಲ, ಅವನು ಒಳಹೋಗಿ ಮುಖಮಜ್ಜನ ಮಾಡಿ ಇಲ್ಲಿಗೆ ಬಂದಾಗಲೇ ಇತ್ತ ಗಮನ. ಗ್ರಂಥವನ್ನು ಮುಚ್ಚಿ, ತುಟಿಗಳಲ್ಲಿ ಎಳೆ ನಗುವನ್ನು ಸೂಸಿ ಅಂದೆ "ಓ ! ಕಾರು ಬಂದುದೇ ಕೇಳಿಸಲಿಲ್ಲ!"

"ನೀನು ಈ ಲೋಕದಲ್ಲಿ ಇದ್ದರಷ್ಟೆ ?" ಮುಖ ಭಾವದಲ್ಲಿ ಪ್ರಸನ್ನತೆ ಇರಲಿಲ್ಲ.

ಆ ಮಾತನ್ನು ಹೇಗಾದರೂ ಅರ್ಥೈಸಬಹುದು. ಆದರೆ ನಾನು ಅಪಾರ್ಥ ಮಾಡಿಕೊಳ್ಳಲಿಲ್ಲ. ಅವನ ಹಿಂದೆಯೇ ಒಳಬಂದೆ. ಅವನು ಸೋಫಾದ ಮೇಲೆ ಕುಳಿತುಕೊಂಡು ಅಂದ,

"ನೀನು ಈಚೀಚೆಗೆ ಏನೋ ಒಂದು ಒಗಟಾಗಿ ತೋರುತಿದ್ದಿ...." ಕಟುವಾಗಿ ಹೊರಬಿತ್ತು ದನಿ.

"ಅಂದರೆ ?"

ಅವನು ಆಲೋಚನಾ ಪರವಶನಾದಂತೆ ಸ್ವಲ್ಪ ಹೊತ್ತು ಸುಮ್ಮನಾದ. ಅದೇ ವೇಳೆಗೆ ಡೇವಿಡ್ ಸತ್ಯಭಾಮೆಯೊಂದಿಗೆ ಒಳಬಂದ. ಅವಳು ಓಡಿ ಬಂದು ತಂದೆಯ ಕೊರಳನ್ನು ತಬ್ಬಿ ಬಳಿಯಲ್ಲಿ ಕುಳಿತುಕೊಂಡು ಮಾತಿನ ಮಳೆಗರೆಯತೊಡಗಿದಳು. ಡೇವಿಡ್ ನನ್ನ ಪಕ್ಕದ ಕುರ್ಚಿಯಲ್ಲಿ ಕುಳಿತು

ಅಂದ "ಸತ್ಯ ಸಿನೆಮಾ ನೋಡಿ ತುಂಬ ಸಂತಸಪಟ್ಟಳು. ಇದು ಮಕ್ಕಳ ಚಿತ್ರವಾದರೂ ದೊಡ್ಡವರಿಗೂ ಸಮ್ಮತವಾಗಿದೆ. ನೀನೂ ಬರಬಹು ದಾಗಿತ್ತು. ಇನ್ನೂ ಒಂದುವಾರ ನಡೆಯುಬಹುದು. ಹೋಗಿ ನೋಡು. ಅಂಜನಾ ಮಕ್ಕಳು ಹೋಗುವ ವಿಚಾರವಿರಬಹುದೇನೋ ಕೇಳಿಕೋ."

ನಾನು ಒಂದು ಗಳಿಗೆ ಯೋಚಿಸಿ 'ಹೂಂ' ಎಂದೆ.

ಅವನು ಮುಂದುವರಿದ "ಕೆಲಸಮಾಡಿ ಬೇಸತ್ತವರು ಹೋಗಿ ನೋಡಿದರೆ ನಕ್ಕು ನಕ್ಕು ನಲಿದು ಮನಸ್ಸಿನ ಭಾರ ಇಳಿಸಿಕೊಳ್ಳ ಬಹುದು."

ನಾನು ಸುಮ್ಮನೆ ಸಹಜವಾಗಿ ತಲೆದೂಗಿದೆ.

ಅನಂತರ ಅವನು ಎದ್ದು ಹೊರಡುತ್ತ "ಓ.ಕೆ. ಗುಡ್‌ನೈಟ್ !" ಎಂದ.

ನಾವು ಪ್ರತಿವಂದಿಸಿದೆವು. ಸತ್ಯಭಾಮ ತಂದೆಯ ಕೊರಳನ್ನು ಕಟ್ಟಿ ಕೊಂಡೇ "ಗುಡ್‌ನೈಟ್" ಎಂದಳು. ಅವನು ಹೊಸ್ತಿಲು ದಾಟುತ್ತ ಮುಗುಳುನಗೆ ಸೂಸಿ ಹೊರಟ.

ವಾತಾವರಣ ಅತ್ಯಂತ ಪ್ರಶಾಂತವಾಗಿತ್ತು. ಪೂರ್ಣಚಂದ್ರಮ ನೀಲ ಭಿತ್ತಿಯನ್ನೇರಿದ್ದ. ಇಳೆಯ ಮೇಲೆಲ್ಲಾ ಹಾಲು ಹೊಯ್ದಂತೆ ಹರಡಿತ್ತು ಬೆಳುದಿಂಗಳ ಹೊನಲು. ವರಾಂಡದ ಸಿಟ್‌ಔಟ್‌ನಲ್ಲಿ ಮೂವರೂ ಕುಳಿ ತಿದ್ದೇವೆ. ಸತ್ಯಭಾಮಳ ಮನಸ್ಸೆಲ್ಲ ಅಂದಿನ ಸಿನೆಮದ ಮೇಲೆ. ಕಥೆ ಯನ್ನು ಬಣ್ಣಿಸುತ್ತ ಬಾರಿಬಾರಿಗೂ ನಗೆಯ ಹೊಸಲನ್ನು ಹರಿಸುತಿದ್ದರೆ ಭಾಸ್ ಪ್ರಾಸಂಗಿಕವಾಗಿ 'ಹೂಂ' ಎನ್ನುತಿದ್ದ. ನೀರಸದನಿ ಯಾಂತ್ರಿಕ ವಾಗಿ ಹೊಮ್ಮುತಿತ್ತು. ಅದೇನೇರಕ್ಕೆ ನನ್ನ ಮನಃಚಿತ್ತಗಳೂ ಜೀವನ ಶಾಂತಿಯನ್ನು ಯಾವರೀತಿ ಸಂಪಾದಿಸಿಕೊಳ್ಳಬೇಕು ಎಂಬ ಚಿಂತನೆಯಲ್ಲಿ ಮುಳುಗಿದ್ದುದರಿಂದ ಅವಳ ಸಂತಸದಲ್ಲಿ ಪಾಲ್ಗೊಳ್ಳಲಾಗಲಿಲ್ಲ. ಅಂತೂ ಆ ಮುಹೂರ್ತ ನೀರಸದಾಯಕವಾಯಿತು. ಎಡಗೈಹಸ್ತದ ಮೇಲೆ ಶಿರೋ ಭಾರವನ್ನಿಳುಹಿ ಚಿಂತಾಮೌನಭಾರದಿಂದ ಹಾಗೇ ಕುಳಿತಿದ್ದೆ. ನನ್ನ ಬಾಯಿ

ಯಿಂದ ಒಂದು ಮಾತೂ ಹೊರಡಲಿಲ್ಲ. ನಾನು ಬಯಸಿದ್ದೇನು? ಆಗ್ತು ತ್ತಿರುವುದೇನು? ಸ್ವಾಮಿ ನನ್ನನ್ನು ಏಕೆ ಅಗ್ನಿಪರೀಕ್ಷೆಗೆ ಒಳಪಡಿಸು ತಿದ್ದಾನೆ? ಇದರ ಅರ್ಥವೇನು? ಅಪಾರವಾದ ಜೀವನ ಶ್ರದ್ಧೆಯ ಪ್ರಮಾಣದಲ್ಲಿ ವಿಷಕ್ರಿಮಿಗಳು ಹೇಗೆ ಪ್ರವೇಶಿಸುತ್ತವೆ? ಎಂಬ ಚಿಂತೆಯ ಒತ್ತಡದಿಂದ...ಹೃದಯ ಕರಂಡ ದೀರ್ಣವಿದೀರ್ಣವಾದಂತೆ ಉದ್ಭಾಸ ವಾಯಿತು. ನಾನು ಆಂತರಂಗಿಕ ಕ್ಷೋಭೆಯನ್ನು ಯಾವರೀತಿಯಲ್ಲಿ ಸಹಿಸಿ ಕೊಂಡೆನೋ ದೇವರಿಗೇ ಗೊತ್ತು.

ಮಾರುದಿನ ಅಂಜನಾ ಬಂದಾಗ "ಏಕೆ ಸಪ್ಪಗಿದ್ದೀಯಲ್ಲ?" ಎಂದಳು ಆಶ್ಚರ್ಯವಿಸ್ತೃತ ನಯನಗಳಿಂದ ನೋಡುತ್ತ.

"ಏನಿಲ್ಲವಲ್ಲಾ."

"ಹಾಗಾದರೆ ನಿನಗೆ ಅರ್ಥವೇ ಆಗಿಲ್ಲ. ಏನೋ ಇದೆ. ಆರೋಗ್ಯ ಕೆಟ್ಟಿದೆಯೇ? ಅಥವಾ ಇನ್ನೇನಾದರೂ ತೊಂದರೆಯೇ? ಇಲ್ಲವೇ ಮಾನ ಸಿಕ ಅಶಾಂತಿಯೇ? ಏನಿದ್ದರೂ ಹೇಳು ಮುಚ್ಚುಮರೆಯೇಕೆ? ಭಾವನೆ ಗಳು ಎಷ್ಟು ತೀವ್ರವಾಗಿದ್ದರೂ ಅವನ್ನು ಹೊರಹರಿಯಬಿಟ್ಟರೇನೇ ಮನಸ್ಸು ಹಗುರವಾಗಬೇಕಾದರೆ."

ಅವಳ ವ್ಯಾಖ್ಯಾನ ಅಂತರಂಗವನ್ನು ಮುಟ್ಟಿತು. ಆದರೂ ನಾನು ಆವಿಷ್ಟಳಂತೆ ಅಭಿಭೂತಳಂತೆ ಸುಮ್ಮನೇ ಇದ್ದೆ; ಏನೋ ಒಂದು ರೀತಿಯ ಉದ್ಭ್ರಾಂತತೆಯ ಮಂಪರದಲ್ಲಿ. ಅವಳು ನನ್ನನ್ನೇ ನೋಡು ತಿದ್ದ ಕಣ್ಣುಗಳಲ್ಲಿ ಸ್ವಾಭಾವಿಕವಾದ ಗುರುತ್ವವಿತ್ತು. ನಾನು ಒಂದು ಗಳಿಗೆಯಲ್ಲಿ ಸಾವರಿಸಿಕೊಂಡು ಸಹಜಭಾವದಿಂದ ಅಂದೆ "ಯಾವುದಾದ ರೊಂದು ವಿಷಯ ತಲೆಗೆ ಹೊಕ್ಕಿತು ಅಂದರೆ ಅದರ ಸಮಸ್ಯೆಯಲ್ಲೇ ಮುಳುಗಿಬಿಡುವೆ. ಆಗ ಏನೋ ಒಂದು ತರಹ ಕಾಣಿಸುತ್ತೇನೆ ಬಹುಶಃ"

"ಅಷ್ಟೊಂದು ಆಳವಾಗಿ ಮುಳುಗುವುದೇಕೆ ? ಯಾವುದನ್ನೂ ಲಲಿತವಾಗಿ ತೆಗೆದುಕೊಳ್ಳುವುದರಲ್ಲೇ ಸುಲಭ ಸಾಧ್ಯತೆಯಿದೆ. ನಿನ್ನ ಮನಸ್ಸು ವಾಲಿರುವುದು ಆಧ್ಯಾತ್ಮದ ಕಡೆ ಎಂಬುದು ನನಗೊತ್ತು. ಅದರ ಸೋಪಾನವನ್ನು ಹಂತಹಂತವಾಗಿ ಏರಬೇಕೇ ವಿನಾ ಒಮ್ಮೆಗೇ ಏರುವುದು ಸಾಧ್ಯವಿಲ್ಲ. ಆದ್ದರಿಂದ ಅಷ್ಟೊಂದು ತಲೆಕೆಡಿಸಿಕೊಳ್ಳಬೇಡ."

ಅವಳ ಸಲಹೆ ನನ್ನಂತರಂಗವನ್ನು ಮುಟ್ಟಿತು. ನನ್ನ ಮೇಲೆ ಅವಳಿಗಿರುವ ಅಪಾರವಾದ ಶ್ರದ್ಧೆ-ಪ್ರೀತಿಗಳ ಪ್ರಮಾಣ ಎಷ್ಟೆಂಬುದು ನನಗೆ ಗೊತ್ತೇ ಇದೆ. ಆದರೆ...ಭಾಸ್ ಇದನ್ನು ಅರ್ಥಮಾಡಿಕೊಳ್ಳದಿರುವುದು ಬಹಳ ಆಶ್ಚರ್ಯ ! ನಾವು ಗೃಹಸ್ಥರಾದ ಉದ್ದೇಶವೇನು ? ರಾಗಾನುರಾಗಗಳ ಆಳ...ಎಷ್ಟು ? ಅಂದಮೇಲೆ ಇವನೇಕೆ ಇಷ್ಟೊಂದು ಸಂಶಯಗ್ರಸ್ಥನಾಗಿದ್ದಾನೆ ಎಂಬುದು ಅರ್ಥೈಸಲಾಗದ ಸಮಸ್ಯೆ. ಇದನ್ನು ಪರಮಾತ್ಮ ಮಾತ್ರ ಬಗೆಹರಿಸಬಲ್ಲ....ಎಂದು ನನ್ನಲ್ಲೇ ನಾನು ಯೋಚಿಸಿದೆ. ನರನರಗಳೂ ಮರ್ಮರ ಮರಗುವಂತೆ ಮಿಡಿದುವು. ಹೃದಯತಲದಲ್ಲಿ ಸಂಜನಿಸಿದ ಕಣ್ಣೀರು ಹೃತ್‌ಗಾಯವನ್ನು ಪ್ರಕ್ಷಾಲನೆ ಮಾಡುತ್ತಲೇ ಇರುತ್ತದೆ. ಆಂತರಂಗಿಕ ತುಮುಲವನ್ನು ಕೇವಲ ಪ್ರೇಕ್ಷಕಳಂತೆ ಸುಮ್ಮನೆ ಗಮನಿಸುವುದು ಮಾತ್ರ ನನ್ನಿಂದ ಸಾಧ್ಯ. ಆದರೆ...

ಂ ಂ ಂ ಂ

ಡೇವಿಡ್ !

ನಿನಗೆ ಈ ದೇಶದಿಂದ ಬೇರೆ ದೇಶಕ್ಕೆ ವರ್ಗವಾಗಿದ್ದರೆ ನಿಜವಾಗಿಯೂ ನನಗೆ ದೊಡ್ಡಹೊರೆ ಇಳಿಸಿದಂತಾಗುತ್ತದೆ. ಆದರೆ ಅದೇ ಸಾಧ್ಯವಾಗದ ಪ್ರಶ್ನೆ. ನಾನಿದನ್ನು ಸತ್ಯಭಾಮೆಗಾಗಲೀ ನಿನಗಾಗಲೀ ಹೇಳಲಾರದೆ ತಳಮಳಿಸುತ್ತಿರುವೆ. ನಿಮ್ಮಿಬ್ಬರ ಸ್ನೇಹ ನನ್ನ ರಕ್ತದ ಕಣಕಣಗಳನ್ನೂ ಹಿಂಸಿಸುತ್ತಿದೆ. ಹೇಳಲಾರೆ; ಅನುಭವಿಸಲಾರೆ. ದುಃಖದುಗುಡಗಳ ತಾಪಾನುತಾಪಗಳಿಂದ ಮನಃಪ್ರಾಣಗಳು ಗಾಣಕ್ಕೆ ಕೊಟ್ಟ ಎಣ್ಣೆಯ ಬೀಜದಂತೆ

ಜಜ್ಜರಿತವಾಗುತ್ತಿವೆ. ನೀನು ಇದನ್ನು ಅರಿತುಕೊಳ್ಳುವುದಾದರೂ ಹೇಗೆ? ಸದಾ ನಿನ್ನ ತುಟಿಗಳಲ್ಲಿ ಮಿನುಗುತ್ತಿರುವ ಎಳೆನಗು, ಕಣ್ಣುಗಳಲ್ಲಿನ ಆಶಾ ಜ್ಯೋತಿಗಳೇ ನನ್ನ ಜೀವನಪಥದಲ್ಲಿ ಮುಳ್ಳು !

ಹೇಗೆ ಇದನ್ನು ಸಹಿಸಲಿ ? ಹೇಗೆ ಇದರ ನಿವಾರಣೆ ?

ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು. ಉತ್ತರ ಮಾತ್ರ ದೊರೆಯಲಿಲ್ಲ.

ನಾನು ಈಗೀಗ ಅವನು ಬಂದಾಗಲೆಲ್ಲಾ ಉದ್ಯಾನವನದಲ್ಲೇ ಕಾಲ ಕಳೆಯುವೆ. ಉದ್ಯಾನದ ಕಾಮಗಾರಿಯನ್ನು ಸ್ವತಃ ಮಾಡುವುದರಲ್ಲಿ ಇಷ್ಟ. ಗಿಡಗಳ ಕೃಷಿ, ಕಳೆ, ಹಣ್ಣೆಲೆ ಇವುಗಳ ಕಡೆ ಲಕ್ಷ್ಯ ಕೊಡುವೆ. ಹೂವು ಗಳ ಒಣತೊಟ್ಟುಗಳನ್ನು ಮುರಿದು ಹೊಸ ಚಿಗುರೊಡೆಯಲು ಅವಕಾಶ ಮಾಡಿಕೊಡುವುದು ಇಂತಿಂತಹ ಕೆಲಸಗಳಲ್ಲಿ ಈಚೆಗೆ ಬಹಳಷ್ಟು ನುರಿ ತಿರುವೆ. ಹೀಗೆ, ಇದರಲ್ಲೇ ತಲ್ಲೀನಳಾಗುತ್ತಿದ್ದರಿಂದ ಡೇವಿಡ್ ಮಕ್ಕ ಳೊಂದಿಗೆ ಅಲ್ಲಿಯೇ ಆಟ ಆಡುತಿದ್ದ. ಆದರೂ ಅದು ಎಷ್ಟೋ ಹಿತ, ಸಂಶಯಕ್ಕೆ ದೂರ.

ಈ ಕಳಂಕದಿಂದ ನನ್ನನ್ನು ಪಾರುಮಾಡು ಎಂದು ಭಗವಂತನನ್ನು ಮನದಲ್ಲೇ ಪ್ರಾರ್ಥಿಸಿಕೊಳ್ಳುವುದು ನಿತ್ಯಕ್ರಮವಾಯಿತು.

ಶ್ರೀ ಶಾರದಾನಂದ ಸ್ವಾಮಿಗಳ ವ್ಯಾಖ್ಯಾನ ಯಾವಾಗಲೂ ಕರ್ಣ ದೇಶಗಳಲ್ಲಿ ಮೊಳಗುತ್ತಲೇ ಇರುತ್ತದೆ. ನಮ್ಮದು ಎಂತಹ ದುರ್ಬಲತೆ? ಇದು ದೈವೀಕವೋ ಮಾನವಿಕವೋ ಅರ್ಥವಾಗದಲ್ಲಾ ಎಂದು ಚಡಪಡಿ ಸುತ್ತದೆ ಮನಸ್ಸು. ನಾನು ನಿರ್ವಿಕಲ್ಪ ಸಮಾಧಿಯಲ್ಲಿ ಮುಳುಗುತಿದ್ದೆ.

ಚಳಿ ವಿಪರೀತವಾಗಿದ್ದುದರಿಂದ ಹೊರಹೋಗುವುದೇ ಬೇಡವಾಗಿತ್ತು. ಭಗವಾನ್ ಭಾಸ್ಕರ ಮಟುಳುಗಿ ಅರ್ಧ ತಾಸು ಕಳೆದಿತ್ತೇನೋ. ಡೇವಿಡ್ ಸತ್ಯಭಾಮ ಮತ್ತು ಅವಳ ಗೆಳತಿಯರು ಒಳಗಡೆ ಪಿಂಗ್‌ಪಾಂಗ್ ಆಟ ದಲ್ಲಿ ತಲ್ಲೀನರಾಗಿದ್ದಾರೆ. ಮಂಜು ಹಿಮವತ್ತಾಗಿ ಕಿಟಕಿ ಬಾಗಿಲುಗಳಲ್ಲಿ

ನುಗ್ಗುತಿದ್ದುದರಿಂದ ಕಿಟಕಿ, ಬಾಗಿಲುಗಳನ್ನು ಮುಚ್ಚಿ ಉಣ್ಣೆಯ ಬಟ್ಟೆ ಧರಿಸಿ ಮಕ್ಕಳ ಆಟವನ್ನು ಗಮನಿಸುತಿದ್ದೆ. ನನಗೂ ಪಿಂಗ್‌ಪಾಂಗ್ ಆಟ ಇಷ್ಟವೇ. ಆದರೆ ಡೇವಿಡ್‌ನೊಂದಿಗೆ ಆಡುವುದು ಇನ್ನಷ್ಟು ಅಪಾರ್ಥಕ್ಕೆ ಕಾರಣವಾಗಬಹುದು ಎಂಬ ಚಿಂತೆಯಿಂದ ಹಿಂಜರಿದೆ.

"ನೀನೂ ಬರಬಾರದೇ ಜನೀ!" ಎಂದು ಒತ್ತಾಯಪೂರ್ವಕವಾಗಿ ಕರೆದ ಡೇವಿಡ್.

"ಅಮ್ಮ ಆಡುತ್ತಾರೆ. ಅಮ್ಮನಿಗೂ ಇದು ಇಷ್ಟ!" ಎಂದಳು ಸತ್ಯಭಾಮ.

"ಹಾಗಾದರೆ ಕೂಡು!"

"ಒಮ್ಮೊಮ್ಮೆ ಆಡುವೆ. ಯಾವಾಗಲೂ ಆಡುವುದು ಅಷ್ಟೇನೂ ಇಷ್ಟವಿಲ್ಲ" ಎಂದು ಡೇವಿಡ್ಡನ ಕರೆಗೆ ಉತ್ತರಿಸಿ ಅಲ್ಲಿಯೇ ನಿಂತು ನೋಡತೊಡಗಿದೆ. ಅದು ಸ್ವಲ್ಪಹೊತ್ತು ಮಾತ್ರ. ಅನಂತರ ಅದೂ ಬೇಸರವೆನಿಸಿ ಒಳ ಹೋಗಿ ಗ್ರಂಥಪಠಣ ಕೈಕೊಂಡೆ. ಯಾಕೋ ಮನಸ್ಸಿಗೆ ಶಾಂತಿ ಯಿಲ್ಲದೆ ಅದರಲ್ಲೂ ಮನಸ್ಸು ನೆಲೆನಿಲ್ಲಲಿಲ್ಲ. ಸ್ವಲ್ಪಹೊತ್ತು ಹಾಗೇ ಕುಳಿತಿದ್ದು, ದೇವರ ದೀಪದ ಬತ್ತಿಯನ್ನು ಎತ್ತರಿಸಿ ಕುಡಿಯನ್ನು ಕೆಡವಿ ಉಜ್ವಲಗೊಳಿಸಲು ಒಳಹೋದೆ.

ವಿಜಯದ ಹಾದಿಯಲ್ಲಿದ್ದ ಸತ್ಯಭಾಮ ಕೇಕೆ ಹಾಕಿ ನಗುತ್ತ "ಅಮ್ಮಾ! ಡೇವಿಡ್ ಸೋಲುವುದು ಖಚಿತ! ಸ್ವಲ್ಪ ಸಮಯದಲ್ಲೇ ಇದ್ದು ನೋಡಿ!" ಎಂದು ಒತ್ತಾಯಿಸಿದಳು.

ನಾನು ಅಲ್ಲಿಯೇ ನಿಂತೆ.

ಆಟ ಹುರುಪಿನಿಂದ ಸಾಗಿತ್ತು. ನಗೆ ಮಾತುಗಳ ಹೊನಲು ಹುಚ್ಚೆದ್ದು ಹರಿಯುತಿತ್ತು. ನೋಡುತ್ತ ಅದರಲ್ಲೇ ತಲ್ಲೀನಳಾದೆ.

ಭಾಸ್ ಆಫೀಸಿನಿಂದ ಹಿಂದಿರುಗಿದವನೇ ನೇರವಾಗಿ ಕೋಠಡಿಗೆ ಹೋದ. ಅವನು ಎಂದಿನಂತೆ ಇಲ್ಲಿ ಕುಳಿತುಕೊಳ್ಳಲಿಲ್ಲವಾದ್ದರಿಂದ ಸತ್ಯ

ಭಾಮ ಕೂಗಿ ಕರೆದಳು "ಅಪ್ಪಾ! ನಾನು ಗೆದ್ದೆ! ಇಲ್ಲಿ ಬಂದು ನೋಡಿ!"

"......."

ಒಳಗಡೆ ಸತ್ಯಳ ಮಂಚದಮೇಲೆ ಡೇವಿಡ್ಡನೊಡನೆ ತೆಗೆಸಿಕೊಂಡ ಅವಳ ನಾಲ್ಕಾರು ಫೋಟೋಗಳು ಬಿದ್ದಿದ್ದುವು. ಭಾಸ್ ಅತ್ತ ಕಣ್ಣು ಹೊರಳಿಸಿ ಹಾಸಿಗೆಯ ಮೇಲೆ ಅಡ್ಡಾದ. ಮುಖದಲ್ಲಿ ಸ್ವಲ್ಪವೂ ಸಮಾಧಾನವಿರಲಿಲ್ಲ. ನಾನು ಶಯ್ಯಾಪ್ರಾಂತದಲ್ಲಿ ಕುಳಿತು ಕೇಳಿದೆ "ಏಕೆ ಸಪ್ಪಗಿದ್ದಿ? ಮೈಯಲ್ಲಿ ಚೆನ್ನಾಗಿಲ್ಲವೇ?"

ಅವನು ಮಾತಾಡದೆ ಕೈಗೊಂದು ಪುಸ್ತಕವನ್ನು ತೆಗೆದುಕೊಂಡ. ನಾನದನ್ನು ಹಿಂತೆಗೆದುಕೊಂಡು "ಒಂದಿಷ್ಟು ನೆಮ್ಮದಿಯಿಂದ ಮಾತಾಡಬಾರದೇ? ಈಚೀಚೆಗೆ ನಿನ್ನ ವರ್ತನೆಯೇ ಅರ್ಥವಾಗುವುದಿಲ್ಲ. ಹಿಂದಿನ ಸ್ನೇಹ–ಪ್ರೀತಿ–ವಿಶ್ವಾಸಗಳೆಲ್ಲಾ ಎಲ್ಲಿ ಮಾಯವಾದುವು?" ಎಂದೆ ಕಳಕಳಿಯಿಂದ.

"ನೀನು ದಿನದಿನಕ್ಕೂ ನನ್ನ ಎದೆಗೆ ಕಿಚ್ಚು ಹಚ್ಚುತಿದ್ದಿ! ಇನ್ನೆಲ್ಲಿಯ ನೆಮ್ಮದಿ?"

"ಛೀ! ಛೀ! ಎಲ್ಲಿಯ ಮಾತು? ನೀನು ವಿಜ್ಞಾನಕ್ಷೇತ್ರದಲ್ಲಿ-ಆಧ್ಯಾತ್ಮಿಕ ಕ್ಷೇತ್ರದಲ್ಲಿ ನಿಷ್ಣಾತ ವ್ಯಕ್ತಿ! ಇಂಥ ಅರ್ಥಹೀನ ವ್ಯವಹಾರದಲ್ಲಿ ತೊಡಗುವುದು ಆಶ್ಚರ್ಯ!"

ಅವನು ದೀರ್ಘವಾದ ನಿಟ್ಟುಸಿರು ಬಿಟ್ಟ. ಮಾತಾಡದೆ ಮುಖಮುದ್ರೆಯಲ್ಲಿ ಕಹಿಭಾವನೆಯೊರೆದಿತ್ತು. ಅವನಿಗೆ ಯಾವ ರೀತಿಯಲ್ಲಿ ಮನದಟ್ಟು ಮಾಡಬೇಕೆಂಬುದೇ ಅರ್ಥವಾಗಲಿಲ್ಲ. ನನಗೆ ನಿಜವಾಗಿಯೂ ದುಃಖವಾಯಿತು. ನನ್ನಲ್ಲೇ ನೋವನ್ನು ನುಂಗಿಕೊಂಡೆ. ಕಲ್ಲಿನಂತೆ ಭಾರಾತಿಭಾರವಾದ ಹೃದಯವನ್ನು ಹೊತ್ತು ಹೇಳಲಾರದೇ ಹೇಳಿದೆ "ಪಾಪ–ಪುಣ್ಯಗಳನ್ನು ನೋಡುವ ಕರ್ತನೊಬ್ಬನಿದ್ದಾನಷ್ಟೆ?"

"......."

ನಾನು ಕಿಟಿಕಿಯಲ್ಲಿ ಮೊಗವಿಟ್ಟು ಆಕಾಶದತ್ತ ನಿಟ್ಟಿಸಿದೆ. ಲಕ್ಷ ಲಕ್ಷ ನಕ್ಷತ್ರನಯನಗಳಿಂದ ನಿಟ್ಟಿಸುತ್ತಿದ್ದಾಳೆ ಪ್ರಕೃತಿದೇವಿ ಈ ಜಗಸಮಸ್ತದ ಧರ್ಮಾದರ್ಮಗಳನ್ನು. ಅಂದ ಮೇಲೆ....

ಡೇವಿಡ್ಡನನ್ನು ಬೀಳ್ಕೊಟ್ಟ ಸತ್ಯಭಾಮ "ಗುಡ್‌ನೈಟ್ !" ಎಂದುದು ಕಿವಿಗೆ ಬಿತ್ತು.

"ಗುಡ್‌ನೈಟ್ !"

ಸತ್ಯಭಾಮ ಒಳಬರುತ್ತಲೂ ಭಾಸ್ ಅಂದ "ಸತ್ಯಾ ! ನೀನು ನಿನ್ನ ಓರಗೆಯ ಮಕ್ಕಳೊಂದಿಗೆ ಆಡುವುದೇ ಚೆನ್ನ ! ಡೇವಿಡ್ಡನನ್ನು ಬರಮಾಡಿ ಕೊಳ್ಳುವುದೇಕೆ ?"

"ನಿನಗೊತ್ತಿಲ್ಲ ಅಪ್ಪಾ ! ಅವನು ಬಲೂ ಒಳ್ಳೆಯವನು ! ಅವನಷ್ಟು ಸಂತೋಷ ನೀಡುವವರು ಇನ್ನಾರಿದ್ದಾರೆ ?"

"........"

ಅದೇ ವೇಳೆಗೆ ವಿಠ್ಠಲರಾವ್ ಊಟಕ್ಕೆ ಅಣಿಮಾಡಿ ಕರೆದ.

ಊಟಕ್ಕೆ ಕುಳಿತಮೇಲೆ ಸತ್ಯಾ ಕೇಳಿದಳು "ಡೇವಿಡ್ ಬಂದರೆ ನಿನಗೇಕೆ ಇಷ್ಟವಿಲ್ಲ ಅಪ್ಪಾ ?"

"ಇಷ್ಟವಿಲ್ಲ ಎಂದೇನಿಲ್ಲ...ಪರಕೀಯರೊಡನೆ ಅಷ್ಟೇಕೆ ಸಂಪರ್ಕ ? ಎಷ್ಟು ಬೇಕೋ ಅಷ್ಟರಲ್ಲೇ ಇದ್ದರೆ ಒಳ್ಳಿತು !" ದನಿ ಸ್ವಲ್ಪ ನಿಷ್ಠುರ ವಾಗಿಯೇ ಹರಿದು ಬಂತು.

"ಅವನು ಸಾಯಂಕಾಲ ಸ್ವಲ್ಪ ಹೊತ್ತು ಬರುತ್ತಾನಷ್ಟೆ ? ನನಗೆ ಯಾರಾದರೊಬ್ಬ ಗೆಳೆಯ ಬೇಕೇಬೇಕು. ಒಬ್ಬಳೇ ಹೇಗೆ ಆಡಲಿ ?"

ಭಾಸ್ ನಿರುತ್ತರನಾದ.

ಅವಳು ತೊಟ್ಟು ಕಳಚಿದಂತೆ ನುಡಿದಳು "ನಿಮಗೆ ಬರೀ ಹೊಟ್ಟೆ ಉರಿ!"

ಎಲ್ಲರ ಮುಖದಲ್ಲೂ ನಗು ಉಕ್ಕಿತು.

ಈ ಜಗತ್ತಿನ ಕಟುತ್ವದ ಅರಿವು ಲವಲೇಶವೂ ಇಲ್ಲದ ಅವಳ ದನಿ ಸರಳರೀತಿಯಲ್ಲಿ ಹೊರಬಿದ್ದಿತ್ತು. ಆದರೆ ಕಣ್ಣುಗಳಲ್ಲಿ ಬೆಳಗಿದ್ದು ವಿಚಿತ್ರ ಜ್ಯೋತಿ.

ನನ್ನ ಎದೆಯಿಂದ ನೀಳವಾದ ನಿಟ್ಟುಸಿರೊಂದು ಹೊರತಪ್ಪಿಸಿ ಕೊಂಡಿತು. ನಾನು ಯೋಚಿಸಿದೆ.

ನಾನು ದೇಶಾಂತರ ಹೊಂದಿದ್ದು ಆತ್ಮನಿವೇದನ ಮಾಡಿಕೊಳ್ಳು ವುದಕ್ಕೆ. ನನಗಾಗಿ ನಾನು ಏನನ್ನೂ ಪಡೆಯಲಿಚ್ಛಿಸುವುದಿಲ್ಲ. ಅಂದಮೇಲೆ ಅಧರ್ಮದ ಹಾದಿಯನ್ನು ನಾನೇಕೆ ಹಿಡಿಯಲಿ? ಡೇವಿಡ್ನನ್ನು ಬಾಲ್ಯ ದಾರಭ್ಯ ಕಂಡವಳು. ಅವನಲ್ಲಿ ಭಾತೃತ್ವಭಾವವಿದೆಯೇ ಹೊರತು ಮತ್ತೇನಿಲ್ಲ. ನಾನು ಭಾಸ್ವಾನನ್ನು ಒಲಿದಿದ್ದು ಆತನ ಸಂಸ್ಕೃತಿಗಾಗಿ. ವಿದ್ಯಾವಿಶೇಷ ಕ್ಕಾಗಿ. ಅವನು ನನ್ನ ಭಾಗಕ್ಕೆ ದೈವಸಮಾನ. ಆದರೂ ಅವನಲ್ಲಿ ಇಂತಹ ದುರ್ಭಾವನೆ ಬೆಳೆಯಲು ಕಾರಣವೇನು? ನನಗೆ ಅದೇ ಅರ್ಥ ವಾಗದ ವಿಷಯ. ಹೃದಯವನ್ನು ಹಿಂಡುವ ಗಾಣ.

ಇದೇನು ದೈವೀ ದುರ್ವಿಲಾಸವೇ ಅಥವಾ....

ಸತ್ಯಭಾಮ ಕೇಳಿದಳು "ಅಮ್ಮಾ! ನಿನಗೆ ಡೇವಿಡ್ ಕೆಟ್ಟವನು ಎನಿಸುತ್ತದೆಯೇ?"

"ಇಲ್ಲಮ್ಮಾ! ಅವನು ಬಹಳ ಸಭ್ಯ. ಅವನಲ್ಲಿ ಯಾವ ಕೆಟ್ಟ ಭಾವನೆಯನ್ನೂ ನಾನು ಕಾಣಲಿಲ್ಲ."

ಭಾಸ್ ಆಲೋಚನಾಪರನಾಗಿ ಕುಳಿತಿದ್ದ. ಅವನು ಮಾತಾಡಲಿಲ್ಲ.

ಗಗನಪ್ರಾಂತ್ಯದಲ್ಲಿ ವಿಮಾನವೊಂದು ಹಾರುತ್ತಿತ್ತು. ಅದರ ಸುತ್ತು ಮುತ್ತಿನ ದೀಪಗಳು ಕೆಂಪಗೆ ರಕ್ತವರ್ಣರಂಜಿತವಾಗಿ ಬೆಳಗುತಿದ್ದುವು. ನನ್ನ ನೋಟ ಅದನ್ನು ಹಿಂಬಾಲಿಸಿತು.

ಹಾಗೆಯೇ ಗಗನಮಾರ್ಗವಾಗಿ ಸ್ವರ್ಗವನ್ನು ಏರಬಲ್ಲೆನಾದರೆ....?

o o o o

...ಸಂಧ್ಯಾ ಸ್ಫೂರ್ತಿಯನ್ನು ಮೂಡಿಸುವಂತಹ ಸುಂದರವಾದ ಸಾಯಂಸಮಯ.

...ದಿಗ್ದೇಶವೆಲ್ಲಾ ಕೆಮ್ಮನೆ ಕೆಂಪಾಗಿ ವಿವಿಧ ವರ್ಣವರ್ಣಗಳನ್ನಾಂತು ವೈಭವೀಕರಿಸಿತ್ತು ಸುಮನೋಹರವಾಗಿ. ಎಲ್ಲಿಂದ ಎಲ್ಲಿಯುವರೆಗೂ ಹರಡಿ ಬಿಟ್ಟದೆ ಸಂಧ್ಯಾಶಾಂತಿ ಹೆಪ್ಪುಗಟ್ಟಿದಂತೆ.

ಆದರೆ...

ನನ್ನ ಮನಸ್ಸಿನ ಆತಂಕ ದೇವರಿಗೇ ಗೊತ್ತು. ದಿನವೂ ಐದು ಗಂಟೆಗೇ ಬರಬೇಕಾಗಿದ್ದ ಭಾಸ್ಕ್ವಾನ್ ಇನ್ನೂ ಮನೆಗೆ ಬರಲಿಲ್ಲ. ಗಂಟೆ ಆರೂವರೆಯ ಅಂಕಿಯನ್ನು ದಾಟಿ ಮುಂದೆ ಹೋಗಿದೆ. ಆಫೀಸಿನಲ್ಲಿ ವಿಚಾರಿಸಿದರೆ 'ಇಂದು ಆಫೀಸಿಗೆ ಬರಲಿಲ್ಲ' ಎಂಬ ಪ್ರತ್ಯುತ್ತರ. ಇದು ತೀರಾ ವಿಚಿತ್ರ. ಹಾಗಾದರೆ ಹೋಗಿರುವುದಾದರೂ ಎಲ್ಲಿಗೆ ? ಮಾನಸಿಕ ತಳಮಳ ಹೇಳತೀರದು. ಹೃದಯ ಡವಡವಿಸುತ್ತಿದೆ. ಈಗಲೇ ಅಂಜನಾಗೆ ಕರೆಕೊಡುವ ತವಕ. ಆದರೂ ಸ್ವಲ್ಪಹೊತ್ತು ನೋಡೋಣ ಎಂಬ ಭರವಸೆಯೂ ಸಹ. ದ್ವೈವೀಭಾವಗಳ ಹೊಯ್ದಾಟ ತಲೆ ಕೆಡಿಸುತ್ತದೆ. ಒಳಹೊರಗೆ ಪದಚಾರಣ ಮಾಡಿದೆ ನಿಂತಲ್ಲಿ ನಿಲ್ಲದೆ. ಸತ್ಯ ಗೆಳತಿಯ ಹುಟ್ಟು ಹಬ್ಬಕ್ಕೆ ಹೋದವಳು ಇನ್ನೂ ಬಂದಿಲ್ಲ. ರಾಂಮಿಲಾನಿಗೆ ಕರೆಕೊಟ್ಟು ಕೇಳಿದೆ.

"ನಾನಿಂದು ಅವನನ್ನು ನೋಡಲಿಲ್ಲ. ಇನ್ನೂ ಸಾಕಷ್ಟು ಸಮಯ ವಿದೆ; ಚಿಂತೆಯೇಕೆ ಬಂದೇಬರುತ್ತಾನೆ"

ಅಲ್ಲಿಗೆ ಟೆಲಿಫೋನಿನ ಸಂಪರ್ಕ ತುಂಡುಗಡಿಸಿದೆ. ಸಾಯಂಸಮಯ ದಲ್ಲಿ ಭಾಸ್ವಾನನಿಗಾಗಿ ಟೆಲಿಫೋನಿನ ಕರೆಗಳು ಬರುತ್ತಲೇ ಇರುತ್ತವೆ. ಪ್ರತಿಕರೆಯಲ್ಲೂ ಭಾಸ್ ಮಾತಾಡಬಹುದು ಎಂಬ ಆಸೆಯಿಂದ ಕಿವಿ ಗೊಟ್ಟರೆ ಬೇರೆ ಯಾರಯಾರದೋ ಕರೆ ಭಾಸ್ವಾನನಿಗಾಗಿ.

ನಾನು ಇನ್ನು ತಾಳಲಾರದೆ ಅಂಜನಾಗೆ ಕರೆಕೊಟ್ಟು ತಿಳಿಸಿದೆ. ಅದಕ್ಕೆ ಅವಳು ಲಘುವಾಗಿ ಹಾಸ್ಯಮಯವಾಗಿ ಮಾತಾಡುತ್ತ "ಛೆಃ !

ಅವನೇನು ಚಿಕ್ಕವನೇ ಕಳೆದುಹೋಗುವುದಕ್ಕೆ ಬಂದೇ ಬರುತ್ತಾನೆ ಯೋಚಿಸಬೇಡ." ಎಂದಳು.

ನಾನು ಎಷ್ಟೆಷ್ಟು ಧೈರ್ಯ ತಂದುಕೊಂಡರೂ ಮನಸ್ಸು ಕುದಿಯುತ್ತಲೇ ಇತ್ತು. ಚಂಚಲ ಮನ, ಚಂಚಲಮತಿಗತಿ. ಬಾರಿಬಾರಿಗೂ ಕಣ್ಣುಗಳು ರಸ್ತೆಯ ಕಡೆಗೆ ಹೊರಳಿ ನಿರಾಸೆಯ ಬೆಂಕಿಯಲ್ಲಿ ಬೇಯುತ್ತದೆ ಹೃದಯ. ವಿಠ್ಠಲ್‌ದಾಸ್ ಬಂದು ಕೇಳಿದ "ಏಕಮ್ಮಾ ಬರಲೇ ಇಲ್ಲ, ಟೆಲಿಫೋನ್ ಮಾಡಿದ್ದರೆ ಭಾಸ್ ?"

ಮಾಲಿ ವಿಷಣ್ಣಭಾವದಿಂದ ಕೇಳಿದ "ಏಕೆ ಚಿಕ್ಕಮ್ಮಾವ್ರು ಬರಲಿಲ್ಲ. ಸಾಹೇಬರೂ ಬರಲಿಲ್ಲ. ಏಕೆ ಇಷ್ಟು ತಡ ?"

ಕೆಲಸದ ಭಾರತಿಯೂ ಎದುರು ನಿಂತು ಕೇಳಿದಳು "ಈವೊತ್ತು ಮನೆಯೆಲ್ಲಾ ಬಣಬಣ ಎನ್ನುತ್ತಿದೆ. ಆಫೀಸಿಗೆ ಟೆಲಿಫೋನ್ ಮಾಡಿ ಕೇಳಿದಿರಾ ? ಸಾಹೇಬರು ಇನ್ನೂ ಏಕೆ ಬರಲಿಲ್ಲ."

ಅವರಿಗೆಲ್ಲಾ ಏನುತ್ತರ ಹೇಳಲಿ ? ಕ್ಷಣಕ್ಷಣಗಳು ಕ್ಷಯಿಸುತ್ತಿವೆ. ಗಳಿಗೆಗಳಿಗೆಗಳು ಉರುಳುತ್ತಿವೆ. ಮುಸ್ಸಂಜೆ ಅಳಿಯಿತು. ನಿಶಿ ಹೆಜ್ಜೆಯಿಡುತ್ತಿದೆ. "ಭಾಸ್ವಾನನ ಸುದ್ದಿ ಏನೂ ತಿಳಿಯಲಿಲ್ಲ. ರಾಂಮಿಲಾನಿ ಟೆಲಿಫೋನಿನಲ್ಲಿ ಕರೆ ನೀಡಿ ಕೇಳಿದ "ಭಾಸ್ವಾನ್ ಬಂದನೇ ?"

"ಇನ್ನೂ ಇಲ್ಲ"

"ಸಿನಿಮಾಗೆ ಹೋಗಿರಲಿಕ್ಕಿಲ್ಲ ಅಲ್ಲವೇ ?"

"ಇಲ್ಲ, ಇಲ್ಲ...ಅವನಿಗೆ ಅದರ ಮೇಲೆ ಅಷ್ಟು ಅಭಿರುಚಿ ಇಲ್ಲವೇ ಇಲ್ಲ."

"ನೋಡೋಣ ರಾತ್ರಿ ಬಂದಾನು..."

ಅಷ್ಟರಲ್ಲೇ ಅಂಜೂ ಟೆಲಿಫೋನ್ ಮಾಡಿ ಕೇಳಿದಳು "ಬಂದಿದ್ದಾನೆಯೇ ?"

ಎಲ್ಲರಿಗೂ 'ಇಲ್ಲ....ಇಲ್ಲ' ಎಂದು ಉತ್ತರಿಸಿ ಸಾಕಾಯ್ತು. ಕಂಬನಿಯ ಕಡಲು ಕೋಡಿ ಹರಿಯತೊಡಗಿತು. ನನ್ನನ್ನು ನಾನೇ ಸಾವರಿಸಿಕೊಂಡೆ. ಶೌಚಾಲಯಕ್ಕೆ ಹೋಗಿ ಮುಖಮಜ್ಜನ ಮಾಡಿ ಹೊರಬಂದಾಗಲೇ ಸತ್ಯಭಾಮಾ ಬಂದಿಳಿದಳು ಕಾರಿನಲ್ಲಿ. ಮೆಟ್ಟಿಲು ಹತ್ತಿ ಒಳಬಂದಮೇಲೆ ಮುಂಬಾಗಿಲು ಮುಚ್ಚಿದೆ. ಮಾಲಿ ಮತ್ತು ಭಾರತಿಯರಿಗೆ ಮನೆಯ ಹಿಂಭಾಗದಲ್ಲಿ ಪುಟ್ಟಮನೆಗಳ ಬಿಡದಿ. ವಿಠ್ಠಲರಾವ್ ಹೊರಗಡೆಯಿಂದ ಬರುತ್ತಾನೆ. ಅವನಿಗೂ ಮನೆ ಕಟ್ಟಿಕೊಡುವಷ್ಟು ಸ್ಥಳ ಇರುವುದರಿಂದ ಅವನೂ ಬಿಡದಿಗಾಗಿ ಒತ್ತಾಯಿಸುತ್ತಿದ್ದಾನೆ. ಅದರ ಪರಿಶೀಲನೆಯೂ ನಡೆದಿದೆ. ಇಂದು ಭಾಸ್ ಇನ್ನೂ ಹಿಂದಿರುಗಿಲ್ಲವಾದುದರಿಂದ ವಿಠ್ಠಲರಾವ್ ಮನೆಗೆ ಹಿಂದಿರುಗದೆ ಕಾದಿದ್ದ. ಸತ್ಯಾ ತುಂಬಾ ಬಳಲಿದ್ದುದರಿಂದಲೋ ಏನೋ ಬೇಗನೆ ನಿದ್ದೆಹೋದಳು.

ದಿನಗಳ ಗಾಲಿ ಉರುಳುತ್ತಲೇ ಇವೆ. ಭಾಸ್ ಸುದ್ದಿಯೇ ತಿಳಿದು ಬರಲಿಲ್ಲ. ರಾಂ ಮಿಲಾನಿ ನನ್ನನ್ನು ಬೆಂಬಲಿಸಿ ನಿಂತು ಹುಡುಕುವುದರಲ್ಲಿ ಮುಂದಾಗಿದ್ದ. ಎಷ್ಟೆಷ್ಟು ಪ್ರಯತ್ನಿಸಿದರೂ ಸುಳಿವು ಸಿಕ್ಕಲಿಲ್ಲ. ಅಂಜೂ ದಿನವೂ ಬರುತ್ತಾಳೆ ರಾಘವ ಮತ್ತು ಮಕ್ಕಳೊಡನೆ. ಎಲ್ಲರಿಗೂ ಅತೀವ ಕಳವಳ, ದುಃಖ, ದುಗುಡ ತುಂಬಿದೆ. ಇನ್ನು ಪೋಲೀಸಿಗೆ ದೂರು ಕೊಡದೆ ವಿಧಿಯಿಲ್ಲವಾಯ್ತು. ರಾಘವ ರಾಂ ಮಿಲಾನಿಯೊಡನೆ ಹೋಗಿ ಪೋಲೀಸಿಗೆ ದೂರುಕೊಟ್ಟು ಬಂದರು. ಸತ್ಯಾ ಶಾಲೆಗೆ ಹೋಗದೆ ಮನೆಯಲ್ಲೇ ಉಳಿದಳು. ಅವಳ ಗೋಳಂತೂ ಗಗನಸದೃಶ. ಒಮ್ಮೆ ಅಳು ಇನ್ನೊಮ್ಮೆ ತೀವ್ರ ಚಿಂತೆ ಅವಳಲ್ಲಿ. ಪೋಲೀಸ್ ವಲಯದಲ್ಲೂ ಅತೀವ ಚಟುವಟಿಕೆ.

ಸುದ್ದಿ ತಿಳಿದು ಶಾಂತಿಪ್ರಸಾದ್ ಓಡಿಬಂದರು ಬೆಂಗಳೂರಿಂದ. ಎಲ್ಲರೂ ದುಃಖಕಾತರತೆಯಲ್ಲಿ ಉಸಿರಾಡಿದರು. ನನ್ನ ಒಡಲು ದುಃಖ ಭಯಭೀತಿಯಿಂದ ತುಂಬಿಹೋಯಿತು. ಕ್ಷಣಕ್ಷಣಗಳೂ ಖಡ್ಗದಲುಗಿನ ಮೇಲೆ ಉರುಳುತ್ತವೆ.

ಮಧ್ಯರಾತ್ರಿ ! ಒಂಭತ್ತನೆಯ ದಿನದ ಮಧ್ಯರಾತ್ರಿ !

ಟೆಲಿಫೋನಿನ ಕರೆ ಟ್ರಣ್, ಟ್ರಣ್...

ಆ ಕಡೆಯಿಂದ ಪೋಲೀಸ್ ಕಮೀಷನರ ಧ್ವನಿ "ನಿಮಗೊಂದು ಶುಭ ಸಮಾಚಾರ ತಿಳಿಸುತ್ತಿರುವೆ !"

ನಿದ್ದೆಯಿಲ್ಲದೆ ಕರ್ಕಶ ಕ್ಷಣಗಳನ್ನು ಕಳೆಯುತ್ತ ಟೆಲಿಫೋನಿನ ಬಳಿಯಲ್ಲೇ ಕುಳಿತಿದ್ದ ನನ್ನ ಕಿವಿಗಳಿಗೆ ಅದೆಷ್ಟು ಆಪ್ಯಾಯಮಾನವೊ ದೇವರಿಗೇ ಗೊತ್ತು. ಆ ಕ್ಷಣದಲ್ಲೇ ಕೇಳಿದೆ,

"ಹೇಳಿ ! ಭಾಸ್ವಾನ್ ಸಿಕ್ಕಿದನೇ ?"

"ಹೌದು ಡಾರ್ಜಿಲಿಂಗ್‌ನಲ್ಲಿದ್ದಾರೆ. ನಾನು ಡಾರ್ಜಿಲಿಂಗ್‌ನಿಂದ ಮಾತಾಡುತ್ತಿರುವೆ. ನಾಳೆ ನಾನು ಅವರನ್ನು ಕರೆತರುವೆ."

ಆದರೇನು ? ಭಾಸ್ವಾನ್ ಮಾತಾಡಲಿಲ್ಲ. ಅಲ್ಲಿಗೇ ಟೆಲಿಫೋನಿನ ಕರೆ ತುಂಡುಗಡಿಯಿತು.

ಹಾ ! ಆ ನಾಳೆ ಈಗಲೇ ಬರಬಾರದೇ ? ಒಡನೆಯೇ ಅಂಜನಾಗೆ ಟೆಲಿಫೋನಿನ ಕರೆಕೊಟ್ಟೆ. ಮಧ್ಯರಾತ್ರಿ ಎಂಬುದೂ ಮರೆತುಹೋಯಿತು ! ಅಂಜನಾ ನವಿಲಿನ ಕ್ರೇಂಕಾರದಂತೆ ಕೇಕೆ ಹಾಕಿದಳು "ಓ ಮೈ ಲಾರ್ಡ್ ! ಎಂತಹ ಅಮೋಘವಾದ ಸುದ್ದಿ !"

ನಾನು ಮಂಜುಳೆಗೂ ಸುದ್ದಿ ಮುಟ್ಟಿಸಿದೆ. ಅಲ್ಲಿಯೂ ಹರ್ಷಸೂಚಕ ಧ್ವನಿ !

ಶಾಂತಿಪ್ರಸಾದರನ್ನು ಎಬ್ಬಿಸುವ ಧೈರ್ಯ ಮೂಡಲಿಲ್ಲ. ಅವರಿಗೆ ಸುದ್ದಿಮುಟ್ಟಿದ್ದು ಬೆಳಗಾದ ಮೇಲೆ. ಪುಟ್ಟಭವನ ಸಂತೋಷಸಾಗರದಲ್ಲಿ ತೇಲಿ ಓಲಾಡಿತು. ಸತ್ಯಾ ಕುಣಿದಾಡಿದಳು ತಕಥೈ ! ತಕಥೈ ! ಬೆಳಗ್ಗೆಯಿಂದ ನಾನು ಮತ್ತು ಶಾಂತಿಪ್ರಸಾದ್ ವರಾಂಡದಲ್ಲೇ ಕಾದಿದ್ದೆವು. ಕುತೂಹಲತೃಷಿಕ ದೃಷ್ಟಿಗಳು ಪ್ರಾಕಾರದ ಗೇಟಿನ ಕಡೆಗೆ ನೆಟ್ಟಿವೆ.

ಪ್ರಾತಃಸಮಯ ಕಳೆದು ಮಧ್ಯಾಹ್ನ ಅಡರುತ್ತಿದೆ. ನಡುನೆತ್ತಿಯ ಮೇಲೆ ಪ್ರೌಢಾರುಣ ಜಗಜಗಿಸುತ್ತಿದ್ದಾನೆ. ಗಿಡುಮರಗಳ ನೆರಳಿನಾಶ್ರಯ

ಪಡೆದ ಹಕ್ಕಿಗಳು ತಣ್ಣಗೆ ಬಾಯಿ ಬಿಗಿದುಕೊಂಡಿವೆ. ವಾಹನಾದಿಗಳ ಸದ್ದುಗದ್ದಲವಿನ್ನೂ ಕೇಳಿಸುತ್ತಲೇ ಇದೆ. ಊಟದ ಬಿಡುವಿಗೂ ನಿಲು ಗಡೆಯಿಲ್ಲದ ಹುರುಪು. ಅಂತರಂಗ ಕೂಗಿ ಹೇಳಿತು. ಹಿ ದಟ್‌ವಾಜ್ ಓನ್ಲಿ ತಾಟ್ ಬೈ ಹಿಮ್‌ಸೆಲ್ಫ್ ಹ್ಯಾಡ್ ಎ ಫೂಲ್ ಟು ಹಿಸ್ ಲೈಫ್ ಪಾರ್ಟ್‌ನರ್.

ನಾನು ಚಿಂತಾಮಗ್ನಳಾದೆ. ಊಟದ ಬಿಡುವಿನಲ್ಲಿ ಸತ್ಯಾ ಟೆಲಿ ಫೋನಿನ ಕರೆಕೊಟ್ಟಳು.

"ಅಪ್ಪಾ ಬಂದರೇ ?"

"ಇನ್ನೂ ಇಲ್ಲವಮ್ಮಾ..."

"ಮತ್ತೇನಾದರೂ ಸುದ್ದಿ ಬಂತೆ ?"

"ಇನ್ನೂ ಇಲ್ಲ. ಕಾಯುತ್ತಿದ್ದೇವೆ."

"ನಾನೀಗ ಬಂದುಬಿಡಲೇ ?"

"ಅಗತ್ಯವಿಲ್ಲ. ಶಾಲೆಮುಗಿಸಿಕೊಂಡೇ ಬಾ."

ಮಧ್ಯಾಹ್ನದ ರಣಬಿಸಿಲು ಇಳಿಯಿತು. ಸಾಯಂಸೊಂಪು ಹರಡು ತ್ತಿದೆ. ಆಫೀಸಿನವರನೇಕರು ಬಂದುಹೋದರು ಭಾಸ್ವಾನನ ಸುದ್ದಿಗಾಗಿ. ಪೋಲೀಸ್ ಕಮಿಷನರು ಹಿಂದಿರುಗಿಲ್ಲವಾದುದರಿಂದ ಭಾಸ್ವಾನನ ಸುಳಿವೂ ಇಲ್ಲ. ಗೋಡೆಯ ಮೇಲಿನ ಬಿಗ್‌ಬೆನ್ ಗಡಿಯಾರಕ್ಕೂ ಮನಸ್ಸಿಗೂ ನಡೆವ ಹೊಯ್ದಾಟ ಅಸಹನೀಯ. ನೋಟ ಬಾಗಿಲ ಕಡೆಗೆ ಹರಿದು ಹಿಮ್ಮರಳು ವುದರೊಳಗಾಗಿ ನಾಲ್ಕಾರು ನಿಮಿಷ ಮುಂದೆ ಓಡಿರುತ್ತದೆ ಮುಳ್ಳು. ಹಾಗೆ ಎಷ್ಟು ಹೊತ್ತು ಉರುಳಿತೋ...ರಾತ್ರಿ ಹತ್ತು ಗಂಟೆಯ ಸಮ ಯಕ್ಕೆ ಪೋಲೀಸ್ ಕಮಿಷನರ ಕಾರು ಬಂದು ಪೋರ್ಟಿಕೋದಲ್ಲಿ ನಿಂತಿತು. ಪೋಲೀಸ್ ಕಮಿಷನರೊಂದಿಗೆ ಭಾಸ್ವಾನ್ ಸಹ ಇಳಿದ. ನೋಡಿದರೆ ಮುಖದಲ್ಲಿ ಏನೋ ಒಂದು ಬಗೆಯ ಪ್ರಶಾಂತ ಛಾಯೆ. ಸ್ವಭಾವಜನ್ಯವಾದ ದಿವ್ಯಕಲಾಚೇತನಕ್ಕೆ ಪುಟವಿಟ್ಟಂತೆ ವಿನೂತನ ಕಳೆ

ಮುಖಬಿಂಬದಲ್ಲಿ. ಅವನು ಒಂದೂ ಮಾತಾಡಲಿಲ್ಲ. ಸುಮ್ಮನೆ ಸಹಜ ರೀತಿಯಲ್ಲಿ ಬಂದು ಸೋಫಾದ ಮೇಲೆ ಮಂಡಿಸಿದ.

"ಇದೇನಪ್ಪಾ ಹೇಳದೆ ಕೇಳದೆ ಹೋಗಿ ನಮಗೆಲ್ಲಾ ಭಯಭೀತಿ ಹುಟ್ಟಿಸಿ ಬಿಟ್ಟೆ....? ಹೇಳಿ ಹೋಗಬಾರದಿತ್ತೇ ? ಛೀಃ ! ಛೀಃ ! ಹೀಗೆ ಮಾಡ ಬಾರದಿತ್ತು. ಕಾಗದವೂ ಇಲ್ಲ, ಟೆಲಿಫೋನೂ ಇಲ್ಲ. ಇದೇನು ಸಮಾ ಚಾರ ?" ಎಂದರು ಶಾಂತಿಪ್ರಸಾದ್ ಕಳಕಳಿಯ ದನಿಯಲ್ಲಿ. ಭಾಸ್ ಎದ್ದು ನಿಂತು ಅವರ ಕೈಗಳನ್ನು ಹಿಡಿದುಕೊಂಡು "ಮನಸ್ಥಿತಿ ಹಾಗಿತ್ತು...." ಎಂದ ವಿನಮ್ರತೆಯಿಂದ.

ನಾನು ಅವನ ಕಾಲಬಳಿ ಕುಳಿತು ತೊಡೆಯ ಮೇಲೆ ತಲೆಯನ್ನಿಟ್ಟು ಗಳ ಗಳನೆ ಅತ್ತುಬಿಟ್ಟೆ. ಮತ್ತೇನನ್ನೂ ಹೇಳಲಾಗಲಿಲ್ಲ. ಸತ್ಯಾ ಹಾಸಿಗೆಯಿಂದ ಎದ್ದು ಓಡಿಬಂದಳು. ಅವಳ ನಳಿದೋಳಿನ ಬಿಗಿತ ಕೊರಳನ್ನು ಸುತ್ತು ವರಿಯಿತು.ಭಾಸ್ ಅವಳನ್ನು ಮುದ್ದಿಟ್ಟು ಎಡಗೈಲಿ ತಬ್ಬಿ, ನನ್ನ ಬೆನ್ನನ್ನು ನೇವರಿಸುತ್ತ "ಏನೂ ಆಗಿಲ್ಲ." ಚಿಂತಿಸಬೇಡ ಎಂದ.

ಪೋಲೀಸ್ ಕಮಿಷನರು ನಮ್ಮ ಸುಖದುಃಖಗಳ ಸತ್ಯಚಿತ್ರವನ್ನು ನೋಡುತ್ತ ಕುಳಿತಿದ್ದರು, ಪ್ರಸನ್ನ ಮುಖದಿಂದ-

ಶಾಂತಿಪ್ರಸಾದ್ ಸಾವಧಾನದಿಂದ ನುಡಿದರು "ನೀನೊಂದು ಟೆಲಿ ಫೋನ್ ಕರೆ ನೀಡಿದ್ದರೆ ಚಿಂತೆಯಿರಲಿಲ್ಲ. ಮಂಜುಳೆಯ ಜೀವನೆಲ್ಲಾ ಇಲ್ಲಿಯೇ ಇದೆ. ಅಂಜನಾ ರಾಘವ ಅವರಿಗೂ ಅಷ್ಟೆ, ಎಲ್ಲರಿಗೂ ಎಷ್ಟು ಗೋಳಾಯ್ತು ಗೊತ್ತೇ ? ಜಾನಕೀ ಅರ್ಧ ಸತ್ತೇಹೋಗಿದ್ದಾಳೆ... ಪೋಲೀಸ್ ಕಮಿಷನರ್ ಫೋನ್ ಮಾಡಿದಾಗಲೇ ಎಲ್ಲರಿಗೂ ಶುಭ ಸಮಾ ಚಾರ ತಿಳಿಸಿದ್ದೆ. ಈಗ ನೀನು ಹಿಂದಿರುಗಿ ಬಂದ ವಿಷಯ ತಿಳಿಸಿಬಿಡುವೆ."

ತಕ್ಷಣವೇ ಅವರಿಬ್ಬರಿಗೂ ಶುಭ ಸುದ್ದಿ ಮುಟ್ಟಿತು. ಅವ ರಿಬ್ಬರೂ ಟೆಲಿಫೋನಿಗೆ ಕರೆದು ಭಾಸ್ಕರನನೊಂದಿಗೆ ಮಾತಾಡಿ ಕ್ಷೇಮ ಸಮಾಚಾರ ತಿಳಿದುಕೊಂಡು ಹರ್ಷಿತರಾದರು.

ಭಾಸ್ ಏನೋ ಒಂದು ಬಗೆಯಲ್ಲಿ ಗಂಭೀರವಾಗಿಯೇ ಇದ್ದ. ಮನಃಕಲ್ಪದಲ್ಲಿ ಯಾವ ಬಗೆಯ ಕಾರ್ಯಭಾರವೋ ಊಹಿಸುವುದು ಕಷ್ಟ. ಅವನು ತೆಗೆದುಕೊಂಡುದುದು ದ್ರವಾಹಾರ ಮಾತ್ರ. ಹಣ್ಣುಗಳನ್ನು ತೆಗೆದುಕೊಳ್ಳಲಿಲ್ಲ. ಊಟವಾದನಂತರ ಶಾಂತಿಪ್ರಸಾದರೊಡನೆ ಸ್ವಲ್ಪ ಹೊತ್ತು ಮಾತಾಡಿದ. ಶಾಂತಿಪ್ರಸಾದ್ ಬೆಳಿಗ್ಗೆ ಹೊರಡುವುದಾಗಿ ಹೇಳಿದಾಗ ಟಿಕೆಟ್ಟಿಗಾಗಿ ವಿಮಾನದ ಆಫೀಸಿಗೆ ಟೆಲಿಫೋನಿನ ಕರೆಕೊಟ್ಟು ಟಿಕೆಟ್ಟು ಮೀಸಲಿರಿಸುವಂತೆ ಮಾಡಿದ. ಅನಂತರ ಶಾಂತಿ ಪ್ರಸಾದ್ 'ಗುಡ್‌ನೈಟ್' ಹೇಳಿ ಮಲಗಲು ಹೋದಾಗ ಹನ್ನೊಂದು ಗಂಟೆ ಹೊಡೆದಿತ್ತು. ನನ್ನ ಮನವೆಲ್ಲಾ ಮುಜಗರ. ಭಾಸ್–ನ ರೀತಿಯಲ್ಲಿ ಅವನು ಸಂತಸವಾಗಿದ್ದಾನೆಂದು ಊಹಿಸುವುದು ಕಷ್ಟವೇ. ಏನೋ ಒಂದು ಬಗೆಯ ಅಸ್ತವ್ಯಸ್ತವಾದ ಮಾನಸಿಕ ತುಮುಲ ಕಂಡುಬರುತಿತ್ತು ಅವನಲ್ಲಿ. ಮಾತಾಡುವುದೋ ಬೇಡವೋ ಎಂಬಷ್ಟು ಗಹನ ಅವನ ಮುಖಬಿಂಬ. ನಗೆಯಿಲ್ಲ, ಮಾತಿಲ್ಲ. ಸ್ವಲ್ಪಹೊತ್ತು ಪತ್ರಿಕಾವಲೋಕನ ನಡೆಯಿತು. ಅನಂತರ ಎದ್ದು ಹಾಸಿಗೆ ಸೇರಿದ. ಆಗಲೇ ಹನ್ನೆರಡು ಗಂಟೆ ಹೊಡೆಯಿತು. ನಾನವನ ಮಗ್ಗುಲು ಸೇರಿ ಹೊದ್ದಿಕೆಯನ್ನು ಅವನಿಗೆ ಹೊದಿಸಿದ ನಂತರ ನನ್ನ ಮೈಮೇಲೆಳೆದುಕೊಂಡೆ. ಜೀವ ಸಮಾಧಾನದಿಂದ ಉಸಿರಾಡಿದರೂ ದುಃಖರಾಗದಿಂದ ಮಿಡಿಯಿತು, ಹೃದಯ.

"ಭಾಸ್ ನಿನ್ನ ಮನೋವೇದನೆಗೆ ಏನು ಕಾರಣವೋ ತಿಳಿಯದಾದೆ. ಈಚೀಚೆಗೆ ನಿನ್ನ ಆಚರಣೆಯೇ ಹದಗೆಟ್ಟಿದೆ. ಏನೆಂಬುದೇ ಅರ್ಥವಾಗುತ್ತಿಲ್ಲ. ನಿನ್ನನ್ನು ನೆರಳಿನಂತೆ ಅನುಸರಿಸಿಯೂ ನಿನ್ನನ್ನು ಅರ್ಥೈಸಲಾರದೇ ತತ್ತರಿಸುತ್ತಿರುವೆ. ನೀನು ಹಿಂದೆ ಇದ್ದಂತೆ ಈಗ ಇಲ್ಲವೇ ಇಲ್ಲ. ಅದೇ ನನಗೆ ತುಂಬಾ ಚಿಂತೆಗೆ ಕಾರಣ...ದಯವಿಟ್ಟು ಮನವನ್ನು ಬಿಚ್ಚಿ ಹೇಳು. ನೀನು ಹೊಳೆಯಲ್ಲಿ ಮುಳುಗು ಎಂದರೂ ಮುಳಗುವೆ. ವಿಷ ಕುಡಿ ಎಂದರೂ ಸರಿಯೆ ಅದಕ್ಕೂ ಸಿದ್ಧ. ದಯವಿಟ್ಟು ಪ್ರಸನ್ನನಾಗು.... ಖಂಡಿತ ನನ್ನನ್ನು ನೋಯಿಸಬೇಡ. ಲಾರ್ಡ್ ಕೃಷ್ಣನನ್ನು ನಿನಗಾಗಿ ಪ್ರಾರ್ಥಿಸುವೆ...."

"ಜಾನಕೀ, ನನ್ನ ಮನಸ್ಸಿಗೆ ದುಃಖವಾಗಲೀ ಸುಖವಾಗಲೀ ತುಂಬಿಲ್ಲ. ನಾನೊಬ್ಬ ಚಿಂತನಾವೇಶದ ವ್ಯಕ್ತಿ. ಆವೇಶಭರಿತನಾದೆ ಎಂದರೆ ತೀರಿತು. ಸಂಪೂರ್ಣ ಅದರಲ್ಲೇ ನಿಮಗ್ನನಾಗಿ ಈ ಜಗತ್ತನ್ನೇ ಮರೆತುಬಿಡುವೆ. ನೀನು ಭಾರತ ಸಂಸ್ಕೃತಿಯ ಹುರುಳನ್ನೇ ಇನ್ನೂ ಅರಿತುಕೊಳ್ಳಲಿಲ್ಲ ಅದೇ ಆಶ್ಚರ್ಯ. ನೀನು ನನ್ನ ಎದೆಗೆ ದಿನದಿನಕ್ಕೂ ಕಿಚ್ಚುಹಚ್ಚುತಿದ್ದಿ. ಪ್ರೇಮಾ ಮೃತದ ಕರಂಡಕ್ಕೆ ತೊಟ್ಟು ಹುಳಿಯನ್ನು ಹಿಂಡಿರುವೆ. ಇನ್ನೆಲ್ಲಿಯ ಸಂಜೀವನ ಶಾಂತಿ ? ನನ್ನ ಮನಸ್ಸಿಗೆ ಒಂದೆರಡು ಬಗೆಯ ವಿಷಪ್ರಾಶನ ಆಗಿಲ್ಲ. ನಿನ್ನಲ್ಲಿ ಹರಿಯುತ್ತಿರುವುದು ಐರೋಪ್ಯ ರಕ್ತ. ಅದಕ್ಕೇ ಹೀಗೆ..."

ನಾನು ಅವನ ಎದೆಯಮೇಲೆ ತಲೆಯನ್ನಿಟ್ಟು ಎರಡೂ ಕೈಗಳಿಂದ ಅಪ್ಪಿ ದುಃಖಸಂಕಟಗಳ ವಶೀಭೂತಳಾಗಿ ನುಡಿದೆ "ಭಾಸ್ವಾನ್ ! ನನ್ನ ಪ್ರೀತಿಯ ಭಾಸ್ವಾನ್ ! ನೀನು ಖಂಡಿತಾ ತಪ್ಪು ತಿಳಿದಿದ್ದಿ ಮಾತ್ರವಲ್ಲ. ನನ್ನನ್ನು ಕಡುಸಂಕಟದ ಗಾಣಕ್ಕೆ ಕೊಡುತಿದ್ದಿ. ಅದು ನಿನಗೆ ಅರ್ಥವೇ ಆಗಿಲ್ಲ ! ನಿನ್ನದು ಅಪಾರ್ಥ ! ಡೇವಿಡ್ ನನಗೆ ತಮ್ಮ...ಅವನಿಗೆ ತನ್ನವರಾರೂ ಇಲ್ಲದ ಪ್ರಯುಕ್ತ ನನ್ನಲ್ಲಿಗೆ ಬರುತ್ತಾನೆ ಅಷ್ಟೇ. ಇನ್ನೇನೂ ಇಲ್ಲ. ನನ್ನನ್ನು ನಂಬು ಡಿಯರ್. ನಿನಗಾಗಿ, ನಿನ್ನ ಹೃದಯದ ಪ್ರೇಮಾಮೃತಕ್ಕಾಗಿ ನಾನು ದೇಶಕೋಶವನ್ನು ಬಿಟ್ಟು ಬಂದವಳು. ನಿಮ್ಮವರಲ್ಲದೆ ನನಗಿಲ್ಲಿ ನಮ್ಮವರಾಗಿ ಯಾರೂ ಇಲ್ಲ. ಒಬ್ಬನೇ ಒಬ್ಬ ತಮ್ಮ ಬರುತ್ತಾನೆ, ನನಗಾಗಿ, ನನ್ನ ಮಗಳಿಗಾಗಿ. ಅವನು ಬರಬಾರದೇ ಇಲ್ಲಿಗೆ ? ನಾನು ಯಾರ ಬಳಿ ನನ್ನ ಕಷ್ಟ–ಸುಖ ಹಂಚಿಕೊಳ್ಳಲಿ ? ನೀನೇ ಮನದಲ್ಲಿ ಯೋಚಿಸಿನೋಡು..." ಆ ಮಾತಿಗೆ ಒಪ್ಪಿ ಹೃದಯದಾಳದಿಂದ ನಿಟ್ಟುಸಿರೊಂದನ್ನು ಹೊರಹಾಕಿ ಗಾಢಾಲಿಂಗನ ಮಾಡಿಕೊಂಡು ನನ್ನನ್ನು ಮುದ್ದಿಟ್ಟುಕೊಂಡ. ಆಗ ನನ್ನ ಹೃದಯಕ್ಕೆ ಹಿಡಿಸಲಾರದಷ್ಟು ಆನಂದರಸ ತುಂಬಿ ಒಡೆಯುವಂತಾಯಿತು, ನನ್ನ ಕಂಬನಿಯಿಂದ ಅವನ ಎದೆ ತೊಯ್ದುಹೋಗಿತ್ತು. ಅವನು "ಮೈ ಡಿಯರ್ ಡಾರ್ಲಿಂಗ್ ನಿನ್ನನ್ನು ತುಂಬಾ ನೋಯಿಸಿಬಿಟ್ಟೆ. ದಯವಿಟ್ಟು ಕ್ಷಮಿಸಿಬಿಡು. ಇದನ್ನೇ ಮನದಲ್ಲಿಟ್ಟುಕೊಂಡು ಕೊರಗಬೇಡ." ಎಂದ, ಮನಃಪೂರ್ವಕವಾಗಿ.

ಅಂತೂ ಅಂದಿನ ಸಮಸ್ಯೆಯೊಂದು ಬಗೆಹರಿಯಿತು ಎಂದರೂ ಭಾಸ್ಕರ್ ಅಂತಹ ಸಂತುಷ್ಟನೇನೂ ಆಗಿರಲಿಲ್ಲ. ಏನೋ ಒಂದು ಬಗೆಯ ಜಟಿಲತೆಯನ್ನು ಎದುರಿಸುತ್ತಿರುವವನಂತೆ ತೋರಿಬರುತ್ತಾನೆ. ಮನೋ ಮಂದಿರದ ದುಗುಡವನ್ನು ತನ್ನಲ್ಲೇ ನುಂಗಿಕೊಳ್ಳುತ್ತಿರುವುದು ಅರ್ಥವಾಗುತ್ತದೆ. ಕೇಳಿದರೆ ಬೇಸರವಾಗಬಹುದೇನೋ ಎಂಬ ತಳಮಳ, ಕಸಿವಿಸಿ.

ಊಟ ತಿಂಡಿಯಲ್ಲೂ ಅಲಕ್ಷ್ಯ. ಕರೆತಂದು ಉಣ್ಣಿಸಬೇಕು. ಅದಕ್ಕೂ ಸಮಯವಿಲ್ಲ. ಅವಸರ–ಗಡಿಬಿಡಿ. ನನಗೀಗ ಅವನೊಂದು ಸಮಸ್ಯೆಯ ಸಂಪುಟವಾಗಿ ತೋರುತಿದ್ದಾನೆ. ಮಾತುಕತೆ ಎಂದರೆ ಸತ್ಯಳ ಬಳಿಮಾತ್ರ. ನನ್ನ ಬಳಿ ಗಾಂಭೀರ್ಯವೆ...ನಾನೂ ಯೋಚಿಸಿ ಯೋಚಿಸಿ ಚಿಂತಾಕ್ರಾಂತತೆಯಲ್ಲಿ ಹಣ್ಣಾಗಿ ಹೋದೆ. ಅವನ ಸಮಯವೆಲ್ಲಾ ಆಫೀಸಿನಲ್ಲೇ ಕಳೆಯುತ್ತೆ. ಬೆಳಿಗ್ಗೆ–ಸಂಜೆಯ ಸಮಯದಲ್ಲಿ ಸ್ವಲ್ಪ ಹೊತ್ತಿದ್ದರೂ ಅವನ ಚಿಂತನೆಯೇ ಬೇರೆ. ದೇಹ ಇಲ್ಲಿದ್ದರೆ ಮನಃಪ್ರಾಣ ಇನ್ನೆಲ್ಲೋ...ತುಂಬಾ ಒಗಟಿನಂತೆ ತೋರುತ್ತಿದ್ದಾನೆ. ನನಗೆ ಇದೊಂದು ನುಂಗಲಾರದ ತುತ್ತಿನಂತಾಯಿತು. ಅಂತರಂಗ ಕರುಣ ಕಾತರದಿಂದ ಚೀರಿತು...ಲೈಫ್ ಈಸ್ ಎ ಲಾಂಗ್ ಹೆಡ್‌ಏಕ್ ವಿತ್ ಎ ಸ್ಪೈಯಿಂಟೆಸ್ಟ್. ಅದೇ ನುಡಿಗಳು ಮತ್ತೆ ಮತ್ತೆ ಕಿವಿಯಲ್ಲಿ ಮೊರೆಯುತಿದ್ದುವು. ಮನಃಪ್ರಾಣಗಳು ಉದ್ವಿಗ್ನವಾಗಿದ್ದುವು. ಶಾಂತಿ ಎಂಬ ದ್ರವ್ಯ ಈ ಬಳಿಯಲ್ಲಿ ಸುಳಿಯದು. ಹೇಗಿದ್ದರೂ, ಏನು ಮಾಡಿದರೂ ಚಿಂತೆಯ ಕೀಟ ಭೈರಿಗೆಯಂತೆ ಒಂದೇ ಸಮನೆ ಹೃದಯವನ್ನು ಕೊರೆಯುತ್ತಿದೆ. ಲಾರ್ಡ್ ಕೃಷ್ಣ ನನಗೇಕೆ ಈ ಚಿಂತೆಯನ್ನು ಕೊಟ್ಟ ಎಂಬುದೇ ಅರ್ಥವಾಗುತ್ತಿಲ್ಲ. ಚಿಂತಾಕ್ರಾಂತತೆಯಲ್ಲಿ ಕೊಚ್ಚಿಹೋಗುತ್ತಿರುವಂತೆ ಭಾಸವಾಯಿತು.

ಬಹಳ ಸಂಕಟದಿಂದ ಕಾಲಹರಣ ಮಾಡುವ ಪ್ರಸಂಗ ಬಂತು. ಎಲ್ಲರೆದುರಿಗೆ ಸಂತಸದ ಪ್ರದರ್ಶನ ಮಾಡುತ್ತ ಕೆಲಸಕಾರ್ಯ ನಿರ್ವಹಿಸುವೆ. ಕೆಲವು ದಿನಗಳಿಂದ ಶಾಲೆಯ ಕಡೆಗೆ ಹೋಗಲಿಲ್ಲ. ಇಂದು. ಹೋಗಿಬರುವ ತಯಾರಿ ನಡೆಸಿದೆ. ನೀಲಾ ಇಲ್ಲಿಗೇ ಬರುವುದಾಗಿ ಹೇಳಿದ್ದಾಳೆ. ಇದು

ವರೆವಿಗೆ ಅಂಜನಾ ನೋಡಿಕೊಳ್ಳುತಿದ್ದುದ್ದರಿಂದ ಅವಳಿಗೆ ವಿಶ್ರಾಂತಿ ತೆಗೆದುಕೊ ಎಂದೆ.

೦ ೦ ೦ ೦

ಬೆಳಗಿನ ಚಟುವಟಿಕೆ ಅದೇ ತಾನೇ ಮುಗಿದಿತ್ತು. ಗಡಿಯಾರ ಹತ್ತು ಗಂಟೆ ಬಾರಿಸಿದಾಗಲೇ ತಲೆಬಾಗಿಲಿನ ಕರೆಗಂಟೆ ಕರೆನೀಡಿತು. ಟ್ರಿಣ್, ಟ್ರಿಣ್....

ನಾನು ಮುಂಬಾಗಿಲನ್ನು ತೆರೆದು ನೋಡಿದರೆ ಎಂತಹ ಆಶ್ಚರ್ಯವೋ...! "ಓ ಮೈ ಲಾರ್ಡ್ ! ಎಷ್ಟು ವರ್ಷಗಳ ಮೇಲೆ ನಿನ್ನ ಸಂದರ್ಶನ ?" ಎನ್ನುತ್ತ ಸುಮನಾಳನ್ನು ಬಿಗಿದಪ್ಪಿಕೊಂಡೆ ! ಅವಳೂ ನನ್ನನ್ನು ಅಷ್ಟೇ ಪ್ರೀತಿ–ವಿಶ್ವಾಸಗಳಿಂದ ಬಿಗಿದಪ್ಪಿದಳು. ಸುಮಾರು ಹತ್ತು ಹನ್ನೆರಡು ವರ್ಷಗಳ ನಂತರ ಅವಳು ಬೆಳೆದ ರೀತಿ ಗಳಿಸಿದ ಮಾನವೀಯತೆ ನಿಜವಾಗಿಯೂ ನನ್ನನ್ನು ಮಂತ್ರಮುಗ್ಧಳನ್ನಾಗಿ ಮಾಡಿತು. ಅವಳನ್ನು ಪ್ರೀತ್ಯಾದರಗಳಿಂದ ಬರ ಮಾಡಿಕೊಂಡಾಗ ಅವಳು ತನ್ನ ಪತಿ ರಘುರಾಂನನ್ನೂ ಮಕ್ಕಳು ಶ್ರೀಕಾಂತ್ ಸೂರ್ಯಕಾಂತ್‌ರನ್ನೂ ಪರಿಚಯ ಮಾಡಿಕೊಟ್ಟಳು. ಎಲ್ಲರನ್ನೂ ಕರೆದು ಕೂಡಿಸಿಕೊಂಡು "ಯಾವಾಗ ಬಂದಿರಿ ? ಈಗ ಎಲ್ಲಿದ್ದೀರಿ ?"

ಸುಮನಾ ನನ್ನ ಕೈಯನ್ನು ಅದುಮಿ ಹಿಡಿದುಕೊಂಡು ನಲ್ಮೆಯಿಂದ ಉತ್ತರಿಸಿದಳು,

"ನಾವಿರುವುದು ಆಸ್ಟ್ರೇಲಿಯಾದಲ್ಲಿ. ರಘುರಾಂ ಅಲ್ಲಿನ ರಾಯಭಾರಿ. ನಾವು ಭಾರತಕ್ಕೆ ಬಾರದೆ ಆರು ವರ್ಷಗಳ ಮೇಲಾಯಿತು. ನಿನ್ನೆ ಇಲ್ಲಿಗೆ ಬಂದೆವು. ನೀನಿಲ್ಲಿರುವುದು ಆಕಸ್ಮಿಕವಾಗಿ ಸಂಧಿಸಿದ ಡೇವಿಡ್ಡನಿಂದ ತಿಳಿಯಿತು. ಓಡಿ ಬಂದೆ !" ಎನ್ನುತ್ತ ಮಾಡುಮುಟ್ಟುವಂತೆ ಕಿಲಕಿಲನೆ ನಕ್ಕಳು. ಅವಳ ಹೃದಯ ಹಾಲ್ಗಡಲಾಗಿತ್ತು. "ಬಹಳ ಸಂತೋಷ !" ಅವಳ ಕೈಯನ್ನು ಅದುಮಿ ಹಿಡಿದು ಪುನಃ "ನೀವು ಎಷ್ಟು ದಿನ ಇಲ್ಲಿರುತ್ತೀರಿ ?" ಎಂದೆ, ಹೃದಯ-ಅತ್ಯಾನಂದದಿಂದ ಕುಡಿಯುತಿತ್ತು.

"ಒಂದು ವಾರ" ಎಂದರು ರಘುರಾಂ.

ಆಕ್ಷಣವೇ ನಾನೆಂದೆ "ನೀವು ಇಳಿದಿರುವುದೆಲ್ಲಿ ?"

"ತ್ರೀಸ್ಟಾರ್ ಹೋಟೆಲ್ !"

"ದಯವಿಟ್ಟು ನೀವು ಕೊಠಡಿಯನ್ನು ಖಾಲಿ ಮಾಡಿ ಇಲ್ಲಿಗೇ ಬರಬೇಕು" ಎರಡೂ ಕೈಗಳನ್ನು ಜೋಡಿಸಿಕೊಂಡು ವಿನಂತಿಸಿಕೊಂಡೆ. ಅವರಿಬ್ಬರೂ ಮೊದಮೊದಲು ಒಪ್ಪಲಿಲ್ಲವಾದರೂ ನಾನು ಬಿಡಲಿಲ್ಲ. ಚಹ ನೀಡಿದ ನಂತರ ರಘುರಾಂ ಮಕ್ಕಳೊಂದಿಗೆ ಹೋಗಿ, ರೂಂ ಖಾಲಿ ಮಾಡಿ ಬರುವುದಾಗಿ ಹೇಳಿಹೋದರು. ನಾನು ಪಾಂಚಾಲಿ ವರ್ಮಾಳಿಗೆ ಟೆಲಿಫೋನಿನಲ್ಲಿ ಕರೆಕೊಟ್ಟು "ನೀನು ಇಲ್ಲಿಗೆ ಬಾ. ಸುಮನಾ ಬಂದಿದ್ದಾಳೆ. ನಿಮ್ಮನ್ನು ಪರಿಚಯಿಸುವೆ" ಎಂದೆ.

ನಂತರ ಸುಮನಾಳೊಂದಿಗೆ ಅದೆಷ್ಟು ಸುಖದುಃಖಗಳು ಕಳೆದುವೋ. ಅಂದಂದಿನ ಜೀವನಸಾರವೆಲ್ಲಾ ಹರಿಯಿತು. ಅನಂತರ ಅವಳು ಕೇಳಿದಳು "ನೀನು 'ನನ್' ಆಗುವುದಾಗಿ ಬಣ್ಣಿಸುತ್ತಿದ್ದೆ? ಈಗ ನೋಡಿದರೆ ಸಂಸಾರಿ!" ಕಿಲಕಿಲ ನಗುವನ್ನು ಹರಿಸಿದಳು.

"ಇದಕ್ಕೆ ಉತ್ತರವನ್ನು ನಿಜವಾಗಿಯೂ ಹೇಳುವುದೆಂದರೆ ಬಹಳಮಟ್ಟಿಗೆ ನೀನೇ ಕಾರಣ !"

"ನಾನು ?" ಅತ್ಯಾಶ್ಚರ್ಯದಿಂದ ಕೇಳಿದಳು ಅವಳು. ಅರಳುಗಣ್ಣುಗಳು ಇನ್ನಷ್ಟು ಅರಳಿದುವು.

"ಹೌದು ಎಂದರೆ ಖಂಡಿತ ತಪ್ಪಾಗಲಾರದು. ಕಾರಣ, ನಾನು ಸದಾ ನಿನ್ನ ಜೊತೆಯಲ್ಲಿ ಬೆರೆಯುತಿದ್ದು, ಭಾರತ ಸಂಸ್ಕೃತಿಯನ್ನು ಮನದಟ್ಟು ಮಾಡಿಕೊಂಡಿದ್ದುದರಿಂದ ಭಾರತೀಯನನ್ನು ಕೈಹಿಡಿದು ಸಂಸಾರಿಯಾಗಲು ಕಾತರಿಸಿತು ಹೃದಯ. ಇಲ್ಲದಿದ್ದಲ್ಲಿ ನಾನು 'ನನ್' ಆಗಿ ಜನಸೇವೆ ಸಲ್ಲಿಸುತಿದ್ದುದು ಖಂಡಿತ. ಈಗಲೂ ಎಷ್ಟೋ ಸಲಿ ಕ್ರಿಸ್ತ ಸನ್ಯಾಸಿನಿಯರನ್ನು ಕಂಡಾಗಲೆಲ್ಲಾ 'ಐ ಮಿಸ್ಡ್ ದಟ್ ಛಾನ್ಸ್ !" ಎಂದು ನನಗೆ ನಾನೇ ಹೇಳಿ

ಕೊಳ್ಳುವುದುಂಟು. ಆದರೂ, ನಾನು ಈಗ ಇನ್ನೊಂದು ರೀತಿಯಲ್ಲಿ ಮಾನವ ಸೇವೆಯನ್ನು ಸಲ್ಲಿಸುತ್ತಿರುವೆ" ಎಂದು ನಮ್ಮ ದಿನಚರಿಯನ್ನು ಮುಂದಿಟ್ಟು, "ಇದನ್ನೇ ಉತ್ತಮ ರೀತಿಯಲ್ಲಿ ಮುಂದುವರಿಸಬೇಕು ಎಂಬ ವಿಚಾರವಿದೆ" ಎಂದೆ.

ಅಷ್ಟರಲ್ಲಿ ಪಾಂಚಾಲಿ ಬಂದಿಳಿದಳು. ನಾನು ಅವರಿಬ್ಬರನ್ನೂ ಪರಸ್ಪರ ಪರಿಚಯ ಮಾಡಿಕೊಟ್ಟೆ. ಆ ಮಧ್ಯಾಹ್ನ ಎಲ್ಲರೂ ಊಟ ಮಾಡಿದ್ದು ಇಲ್ಲೇ. ಭಾಸ್ ಈ ಕುಟುಂಬದೊಂದಿಗೆ ಸಂತಸದಿಂದ, ಸ್ನೇಹಾಚಾರದಿಂದ ಕಾಲಹರಣ ಮಾಡಿದ. ಸಾಯಂಕಾಲ ಸತ್ಯಾ ಬಂದಾಗ ಅವಳನ್ನು ಅಪ್ಪಿ ಹಿಡಿದುಕೊಂಡು ಮುದ್ದಿಸುತ್ತಾ ಸುಮನಾ ಅಂದಳು.

"ಇವಳೇ ನನ್ನ ಸೊಸೆ !"

ಆದರೆ ಸತ್ಯಳಿಗೆ ಅರ್ಥವಾಗದೆ ಮಿಕಿಮಿಕಿ ನೋಡಿದಳು.

"ಓ ! ಆಗಬಹುದು !" ಎಂದು ಭಾಸ್ ಹುಬ್ಬೇರಿಸಿದ. ಎಲ್ಲರೂ ನಕ್ಕುಬಿಟ್ಟರು.

...ಪ್ರಾತಃಕಾಲೀನ ಪರಿಶುಭ್ರ ವಾತಾವರಣದಲ್ಲಿ ಶಾಂತಿಪ್ರಶಾಂತಿಗಳು ಹೆಪ್ಪುಗಟ್ಟಿದಷ್ಟು ಹಿತ.

ಹೊತ್ತು ಇನ್ನೂ ಹನ್ನೊಂದರ ಅಂಕಿಯನ್ನು ಮುಟ್ಟಿರಲಿಲ್ಲವೇನೋ... ನಸುದೂರದಲ್ಲಿ ಭಾಸ್ವಾನನ ಕಾರಿನ ಹಾರನ್ ಕೂಗಿದ ಶಬ್ದ. ನನಗೆ ಸ್ವಲ್ಪ ಆಶ್ಚರ್ಯವೇ ಆಯಿತು. ಆಫೀಸಿಗೆ ಬೆಳಿಗ್ಗೆ ಒಂಭತ್ತುವರೆಗೇ ಹೋಗುವುದು ರೂಢಿ. ಹೊತ್ತಿಗೆ ಮುಂಚೆಯೇ ಶುರುವಾಗುತ್ತೆ ಅವನ ಚಟುವಟಿಕೆ. ಅಂದಮೇಲೆ ಇಷ್ಟು ಬೇಗನೇ ಹಿಂದಿರುಗುವ ಕಾರಣವಾದರೂ ಏನು ? ಪ್ರಶ್ನೆ ಥುತ್ತೆಂದು ಎದುರು ನಿಂತಿತು. ಆಶ್ಚರ್ಯಚಕಿತ ದೃಷ್ಟಿ ಬಾಗಿಲ ಕಡೆ ಹರಿಯುವುದರೊಳಗಾಗಿ ಮಾಲಿ ಆಗಲೇ ಧಾವಿಸಿದ್ದಾನೆ ಪ್ರಾಕಾರದ ಬಾಗಿಲಿಗೆ. ಮರುಕ್ಷಣದಲ್ಲೇ ಬಾಗಿಲನ್ನು ಹರವಾಗಿ ತೆರೆದು ಕಾರನ್ನು ಒಳಬರಮಾಡಿಕೊಂಡನಂತರ ಹಿಂದೆಯೇ ಕದ ಮುಚ್ಚಿ

ಕೊಂಡ ಮಾಲಿ. ಕಾರು ನೇರವಾಗಿ ಪೋರ್ಟಿಕೊದ ನೆರಳಿಗೆ ಬಂದು ನಿಂತಿತು. ಕಾರು ನಡೆಸಿದವನು ಸಹ ವಿಜ್ಞಾನಿ ಮಿತ್ರ ರಾಂ ಮಿಲಾನಿ. ಅವನು ಭಾಸ್‌ನೊಂದಿಗೆ ಕೂಡಿ ಸಂಶೋಧನೆ ನಡೆಸುವ ಸಹವಿಜ್ಞಾನಿ ಮಾತ್ರ ವಲ್ಲ, ಪ್ರೀತಿಯ ಗೆಳೆಯನೂ ಹೌದು. ಇಬ್ಬರೂ ಒಳಗಡೆ ಬರಲಿಲ್ಲ. ಉದ್ಯಾನದ ಹಚ್ಚನೆಯ ಹಸುರು ಹಾಸಿನ ಅಂಚಿನಲ್ಲಿದ್ದ ಕಲ್ಲುಬೆಂಚಿನ ಮೇಲೆ ಕುಳಿತುಕೊಂಡರು. ಇಬ್ಬರ ಮುಖದಲ್ಲೂ ಗಂಭೀರ ವಿಚಾರ ಮುದ್ರೆಯ ಹರವು. ನಾನು ಜಗುಲಿಯ ಮೇಲೆಯೇ ನಿಂತು ಅವರ ಮುಖ ಚರ್ಯೆಯನ್ನು ಸ್ವಲ್ಪಹೊತ್ತು ಅವಲೋಕಿಸಿದೆ. ಸ್ವಲ್ಪ ದೂರದಲ್ಲಿದ್ದುದ ರಿಂದ ಸಂಭಾಷಣೆ ಕೇಳಿಸುತ್ತಿರಲಿಲ್ಲ. ಯಾವುದೋ ಗಹನವಾದ ವಿಚಾರ ನಡೆದಿದೆ ಎಂಬುದು ಸುವ್ಯಕ್ತ. ಅವರಿಗೆ ಚಹ ಅಥವಾ ಶರಬತ್ತು ಏನಾ ದರೂ ಬೇಕೋ ಎನಿಸಿ ಅವರ ಬಳಿಗೆ ಹೋಗಿ ಕೇಳಿದೆ "ಚಹಬೇಕೇ ?" ಎಂದು. ರಾಂ ಮಿಲಾನಿ "ಈಗೇಕೆ...ತೊಂದರೆ ?" ಎಂದ ಪ್ರಾಸಂಗಿಕವಾಗಿ.

"ಇದೆಂತಹ ತೊಂದರೆ...? ಚಹವೇ ಆದೀತು." ಎಂದ ಭಾಸ್ವಾನ್.

ನಾನು ಹಿಂದಿರುಗಿ ಬಂದೆ. ಸತ್ಯಭಾಮಾ ಶಾಲೆಗೆ ಹೋಗಿರುವುದ ರಿಂದ ಮನೆಯೆಲ್ಲಾ ಬಣಬಣ. ಹೇಗೂ ಮನೆಗೆ ಹಿಂದಿರುಗಿ ಬಂದಿದ್ದಾರೆ... ಒಳಬಂದು ಕುಳಿತುಕೊಳ್ಳಬಾರದೇ ? ಎಂದು ಚೀರಿತು ಅಂತರಂಗದ ಹಕ್ಕಿ. ಒಳಹೋದೆ. ವಿಠಲ್‌ರಾವ್ ತರಕಾರಿ ಹಚ್ಚುತಿದ್ದ. ನಾನೇ ಚಹ ತಯಾರಿಸಿ ತೆಗೆದುಕೊಂಡು ಹೋದೆ. ಇಬ್ಬರೂ 'ಥ್ಯಾಂಕ್ಯೂ' ಎನ್ನುತ್ತ ಚಹ ತೆಗೆದುಕೊಂಡರು. ಅವರ ಗಂಭೀರ ವಿಚಾರಧೋಹನ ನನ್ನನ್ನು ಚರ್ಚೆಯಲ್ಲಿ ಭಾಗವಹಿಸಲು ಆಹ್ವಾನಿಸಲಿಲ್ಲ. ಆದ್ದರಿಂದ ನಾನು ಹಿಂದಿ ರುಗಿ ಬಂದೆ. ಸ್ವಲ್ಪ ಹೊತ್ತಿನನಂತರ ಚಹದ ಖಾಲಿ ಬಸಿಯನ್ನು ತಂದವನು ವಿಠ್ಠಲ್‌ರಾವ್.

ಇಂದು. ಮನೆಯಲ್ಲಿ ವಿಶೇಷ ಅಡುಗೆ ಏನೂ ಇರಲಿಲ್ಲ. ಹುಳಿ, ಪಲ್ಯ ಇಷ್ಟೆ. ಅವರ ಚರ್ಚೆ ಒಂದು ಗಂಟೆಯವರೆವಿಗೂ ನಡೆಯಿತು. ರಾಂ ಮಿಲಾನಿ ಇಲ್ಲಿಗೇ ಊಟಕ್ಕೆ ಬಂದ. ಅತಿಥಿಗೆ ಊಟ ತೀರಾ ಸಿಂಪಲ್

ಎನಿಸಿತು ನನಗೆ. ಹಪ್ಪಳ ಸಂಡಿಗೆ ಕರಿಯಲು ಹೇಳಿದೆ. ವಿಠ್ಠಲ್‌ರಾವ್ ಹಪ್ಪಳ ಸಂಡಿಗೆಯ ಸಹಿತ ಊಟವನ್ನು ತಂದಿಟ್ಟ. ಮೂವರೂ ಒಂದಿಗೇ ಊಟಮಾಡಿದೆವು. ಅವರ ಚರ್ಚಿತ ಗಂಭೀರ ವಿಷಯ ಬಹಿರಂಗಗೊಳ್ಳಲಿಲ್ಲ. ಇಬ್ಬರ ಮುಖದಲ್ಲೂ ಚಿಂತನಾವೇಶದ ಭಾವಮುದ್ರೆಯೊತ್ತಿತ್ತು. ಚರ್ಚಿತ ವಿಷಯವನ್ನು ಕುರಿತು ಇಬ್ಬರೂ ಚಕಾರವೆತ್ತಲಿಲ್ಲ. ಗೆಲುವಿನ ನಗುಮುಖ ವಿರಲಿಲ್ಲ. ವಿಷಯ ನನಗೆ ಗಹನವಾಗಿಯೇ ತೋರಿದುದರಿಂದ ನಾನೂ ಅದನ್ನು ಕುರಿತು ಪ್ರಸ್ತಾಪಿಸಲಿಲ್ಲ. ಊಟ ಸ್ವಲ್ಪ ಅವಸರವಾಗಿಯೇ ಮುಗಿಯಿ ತೇನೋ. ಕೊನೆಯದಾಗಿ ನೀರು ಕುಡಿದು ಹೊರಟೇಬಿಟ್ಟರು.

ರಾಂ ಮಿಲಾನ್ ಆತ್ಮೀಯ ಗೆಳೆಯ ಭಾಸ್–ಗೆ. ಒಂದು ಕಾಲದಲ್ಲಿ ಇಬ್ಬರೂ ಒಂದೇ ಕಡೆ ಓದಿದವರು ಕೂಡ. ಭಾಸ್ ಲಂಡನ್‌ಗೆ ಹೊರಟ ನಂತರ ರಾಂ ಮಿಲಾನ್ ಇಲ್ಲಿಯೇ ಉಳಿದು ವಿಜ್ಞಾನಿಯಾಗಿ ಕೆಲಸ ಮಾಡಿ ದವ. ಭಾಸ್ ಲಂಡನ್–ನಲ್ಲಿ ಕೆಲಸ ಮಾಡಿ ವಿಶೇಷ ಜ್ಞಾನ ಪಡೆದು ಬಂದ ಮೇಲೆ ಪುನಃ ಇಬ್ಬರೂ ಒಂದುಗೂಡಿದವರು.

ಎರಡು ಮೂರು ದಿನ ಕಳೆದುವು. ಭಾಸ್–ನ ಸಮಸ್ಯೆ ಬಗೆಹರಿದಂತೆ ಕಾಣಲಿಲ್ಲ. ಆ ವಿಷಯವಾಗಿ ಏನೂ ಹೇಳಲಿಲ್ಲವಾದುದರಿಂದ ನಾನೂ ಸಹ ಏನೆಂದು ಕೇಳಿ ತಿಳಿಯಲು ಮುಂದಾಗಲಿಲ್ಲ. ನಾನು ಕಲ್ಲಿಗಿಂತ ಕಲ್ಲಾಗಿ ಸಹಿಸಿಕೊಂಡೆ. ಅದಿನ್ನೊಂದು ಸಾಹಸ ಎಂದರೂ ಎನ್ನಬಹುದು. ರಾತ್ರಿ ಯೂಟ ಬೇಕೋ ಬೇಡವೋ ಎಂಬಂತೆ ನಡೆಸಿ ಹಾಸಿಗೆ ಸೇರಿದಾಗ ಮೈಮೇಲೆ ಹೊದ್ದಿಕೆಯೆಳೆದುಕೊಳ್ಳುತ್ತ ಭಾಸ್ ಅಂದ... "ಈ ಪ್ರಪಂಚ ದುರಾಸೆ–ದುಮ್ಮಾನಗಳ ಗಣಿ. ಸರ್ವತ್ರ ಮುಂದಿರುವವರನ್ನು ಹಿಂದೆಳೆದು ತುಳಿದು ಮುನ್ನುಗ್ಗುವ ದುರಾಸೆ. ಮನುಷ್ಯ ಎನ್ನುವ ಪ್ರಾಣಿಯಲ್ಲಿ ತುಂಬಿರುವ ದುರ್ವ್ಯವಹಾರ ಸಾಮಾನ್ಯವಲ್ಲ. ಈ ವಿಜ್ಞಾನ ಕ್ಷೇತ್ರದಲ್ಲಿ ನನ್ನ ಸೇರ್ಪಡೆ ಯಾದಾಗನಿಂದ ಹೊಟ್ಟೆಕಿಚ್ಚಿನಿಂದ ಕುದಿಯುವವರು ಕಡಿಮೆಯಿಲ್ಲ. ಮತ್ತೆ ಎಲ್ಲರೂ ವಿದ್ಯಾವಂತರು. ವಿಜ್ಞಾನ ಸಂಪದದಿಂದ ತುಂಬಿದವರು. ವಿಶಾಲ ಜಗತ್ತನ್ನು ಕಣ್ತುಂಬ ಕಂಡವರು. ತಂತಮ್ಮ ಶಕ್ತಿಯಿಂದ ಸ್ಥಾನಮಾನ

ಪಡೆಯುವುದು ಸುವಿಧಾನ. ಆದರೆ, ಸಣ್ಣ ಮನಸ್ಸಿನ ಕೋಳಕುವಂಡಲ ವಾಗಿದೆ ವಿಜ್ಞಾನ ಕ್ಷೇತ್ರ. ನನಗೆ ಅದೇ ಎಲ್ಲಿಲ್ಲದ ಆಶ್ಚರ್ಯ. ಒಮ್ಮೊಮ್ಮೆ ಅಮೆರಿಕಾಕ್ಕೆ ಹೋಗಿಬಿಡಲೇ ಎನ್ನಿಸುತ್ತಿದೆ. ಆದರೂ, ನಮ್ಮ ದೇಶ ಪ್ರಗತಿ ಪಥದಲ್ಲಿರುವಾಗ ಬಿಟ್ಟುಹೋಗಲು ಮನಸ್ಸು ಬರುವುದಿಲ್ಲ. ಇವರನ್ನೆಲ್ಲಾ ಮೆಟ್ಟಿ ಜಾಲಾಡಿ ಮುಂಬರಿಯಲೇ ಅಥವಾ ದೇಶಬಿಟ್ಟು ಹೋಗಲೇ ಎಂಬುದು ನನ್ನ ಮುಂದಿನ ಪ್ರಶ್ನೆ. ಘರ್ಷಣೆ ಸಾಧುವಲ್ಲ. ಭಾರತದ ಪುಣ್ಯಭೂಮಿಯನ್ನು ನೆನಸಿಕೊಂಡರೆ ಬಿಟ್ಟುಹೋಗಲು ಮನಸ್ಸು ಬಾರದು. ಇಲ್ಲೇ ಉಳಿಯುವು ದೆಂದರೆ ಮಾನಸಿಕ ಘರ್ಷಣೆ. ಸುತರಾಂ ಮಾನಸಿಕ ಹಿಂಸೆ, ಆತ್ಮಿಕ ಹಿಂಸೆ, ಪ್ರಾಣಹಿಂಸೆಗಳ ರಣಗೋಳು ! ಕುತ್ಸಿತ ಮನೋಭಾವದ ಕ್ಷುಲ್ಲಕ ಆರೋಪ ಗಳ ಖಡ್ಗ ಬೆನ್ನಹಿಂದೆ ಸದಾ ಬೀಸುತ್ತಿರುವ ಸನ್ನಿವೇಶದಲ್ಲಿ ಕೆಲಸಮಾಡು ವುದೂ ಕಷ್ಟವೇ. ಈಗ ಮುಂದೇನು ? ಎಂಬುದು ಅಗಾಧವಾದ ಪ್ರಶ್ನೆ." ಅತ್ಯಂತ ವಿಷಾದಪೂರ್ವಕವಾಗಿ ಹರಿದುಬಿಂತು ಧ್ವನಿ.

"ಛೀ ! ಛೀ ! ತುಂಬ ಅನ್ಯಾಯ !" ನುಡಿಯಲಾರದೆ ನುಡಿದೆ ನಾನು.

ಅವನು ಮುಂದುವರಿದ "ಜಾನಕೀ, ನಾನು ಬಂದುದು ತಾಯ್ನಾಡು, ನಮ್ಮ ಜನ ಎಂಬ ಅಮಿತೋತ್ಸಾಹದಿಂದ. ನಮ್ಮ ಸೇವೆ ದೇಶಕ್ಕೆ ಸಲ್ಲಲೇ ಬೇಕೆಂಬ ಆಸೆ, ಆಕಾಂಕ್ಷೆಗಳು ಬೇರೆ. ಆದರೆ ಈಗಿನವರು ಏಕೆ ಹೀಗಿದ್ದಾರೆ, ಅದೇ ಆಶ್ಚರ್ಯ ! ಹೀಗಾದರೆ ಕೆಲಸಮಾಡುವುದೇ ದುಸ್ತರ. ಏನು ಮಾಡಲಿ ? ....ಹೇಗೆ ಇದರ ಪರಿಹಾರ ? ಲಂಡನ್ ಸೇರುವುದು ಇಷ್ಟವಿಲ್ಲ....ಅಮೆರಿಕದ ಗೆಳೆಯರಿಗೆ ಸಧ್ಯಕ್ಕೆ ಆಗುವುದಿಲ್ಲ ಎಂದು ಹೇಳಿರುವೆ....ಅಂದರೂ ಅಲ್ಲಿಗೆ ಹೋಗ ಬಾರದು ಎಂದೇನಿಲ್ಲ. ಹೃದಯದಾಳದಲ್ಲಿ ಅಂತರ್ವಾಣಿ ನೀನು ಹೆದರಬೇಕಾ ಗಿಲ್ಲ ಎಂದು ಕೂಗಿ ಭರವಸೆ ನೀಡುತ್ತಲೇ ಇದೆ. ಅಂತಲೇ ಸಧ್ಯ ಕೆಲಸ ಮುಂದುವರಿಸುತ್ತಿರುವೆ. ದೇವರೇ ಮುಂದೆ ದಾರಿತೋರಿಸಬೇಕು... ಭಾರ ವಾದ ದನಿಯಲ್ಲಿ ವಿಷಯ ಹೊರಬಿತ್ತು.

ಹೊತ್ತು ಉರುಳುತ್ತಲೇ ಇತ್ತು. ಗಡಿಯಾರದ ಟಿಕ್‌ಟಾಕ್ ಸದ್ದು ಕೇಳಿಸುತ್ತಲೇ ಇದೆ. ಎಲ್ಲಿಂದ ಎಲ್ಲಿಯವರೆಗೂ ನಿಶ್ಶಬ್ದ-ನೀರವ-ನಿರಾತಂಕ.

ಆದರೆ....ಈ ಜೀವನ ಆದರ್ಶಮಯ ಜಾಜಿ ಅರಳುವುದೇ ಮುಳ್ಳುಗಳ ಬೀಡಿನಲ್ಲಿ; ಸ್ವಲ್ಪ ಆಶ್ರಿತ್ತಲುಗಿದರೂ ಮುಳ್ಳುಗಳ ಆಘಾತ ತಪ್ಪಿದ್ದಲ್ಲ. ಆ ವಿಷಯ ನೆನವರಿಕೆಯಾದಾಗ ಹೃದಯ ಭಾರಭಾರವಾಯಿತು. ಪ್ರಯತ್ನಿಸಿದರೂ ನಿದ್ದೆಬಾರದು. ಜೀವ ಕರುಣಕಾತರದಿಂದ ತುಡಿಯುತ್ತಿದೆ.

ಭಾಸ್ ದೀರ್ಘವಾದ ನಿಟ್ಟುಸಿರುಬಿಟ್ಟು ಮುಂದುವರಿದ "ನನ್ನೊಂದಿಗೆ ಕೆಲಸ ಮಾಡುವವರು ನಾಲ್ಕು ಮಂದಿ. ಅವರಲ್ಲಿ ಮುರುಳಿ ಎಂಬುವವನು ಬಲೂ ಕಿತಾಪತಿಯ ಮನುಷ್ಯ. ಅವನು ಅಂತಹ ಬುದ್ಧಿವಂತನೂ ಅಲ್ಲ. ಅವನು ವಿಜ್ಞಾನದ ತುತ್ತತುದಿಗೆ ಏರುವವನೂ ಅಲ್ಲ. ಹಾಗಿದ್ದುಕೊಂಡು ಎಲ್ಲಿಲ್ಲದ ದುರ್ವ್ಯಹಾರದಲ್ಲಿ ತೊಡಗಿದ್ದಾನೆ. ಹೊಟ್ಟೆ ಉರಿಯಿಂದ. ಅವನು ನನ್ನ ಏಳ್ಗೆಯನ್ನು ಸಹಿಸಲಾರ. ಅಂತಹ ದುಷ್ಟಬುದ್ಧಿಗೆ ಹಿಂಬಾಲಕರೂ ಇದ್ದಾರೆ ನೋಡು ! ಅವರೆಲ್ಲರ ಗುಲ್ಮಾಲ್ ಹೇಳತೀರದು. ಕೆಲಸ ಮಾಡುವುದೇ ಬೇಸರ. ಮಾಡಲಾರೆ, ಬಿಡಲಾರೆ. ಹೀಗಾಗಿದೆ ಪರಿಸ್ಥಿತಿ. ಅಷ್ಟಲ್ಲದೆ ನಮ್ಮ ಬಾಸ್ ಬಹಳ ಒಳ್ಳೆಯ ವ್ಯಕ್ತಿ. ನನ್ನಲ್ಲಿ ಬಲೂ ಪ್ರೀತಿ ಅವರಿಗೆ. 'ಮೈಬಾಯ್' ಎಂತಲೇ ಕರೆಯುತ್ತಾರೆ. ಅವರು ಹಾಗೆ. ಇವರು ಹೀಗೆ. ಇಕ್ಕಳದ ಮಧ್ಯೆ ನಾನು...!"

"ನೀನೇಕೆ ಬಾಸ್–ಗೆ ತಿಳಿಸಬಾರದು ?"

"ಅದರಿಂದ ಅವರ ಮನಸ್ಸು ಕೆಡಿಸಲು ಇಷ್ಟವಾಗುವುದಿಲ್ಲ ಬಿಡು. ನೋಡೋಣ. ಏನಾಗುತ್ತೋ, ನನ್ನ ಮನಸ್ಸಿಗಂತೂ ಬಲೂ ನೋವಾಗಿದೆ...."

"ಅದನ್ನಿಷ್ಟು ಮನಸ್ಸಿಗೆ ಹಚ್ಚಿಕೊಳ್ಳದಿದ್ದರಾಯಿತು. ಅಂದು ಶಾರದಾನಂದಸ್ವಾಮಿಗಳು ಹೇಳಿದ ಮಾತು ನನಗೆ ಆಗಾಗ ನೆನಪಿಗೆ ಬರುತ್ತದೆ, ಧರ್ಮ ಯಾವುದು ಗೊತ್ತಿದೆ, ಅದನ್ನು ಹಿಡಿಯಲಾರೆ. ಯಾವುದು ಅಧರ್ಮ ಗೊತ್ತಿದೆ; ಅದನ್ನು ಬಿಡಲಾರೆ. ಎಂಬುದನ್ನು ಯೋಚಿಸಿದರೆ ಪ್ರಪಂಚದ ಪರಿಸ್ಥಿತಿ ಅರ್ಥವಾಗುತ್ತದೆ. ಆದ್ದರಿಂದ ಸಧ್ಯ ಪರಿಸ್ಥಿತಿಗೆ ಹೊಂದಿಕೊಳ್ಳು

ವುದರಲ್ಲೇ ಸ್ವಾಸ್ಥ್ಯವಿದೆ ಎನಿಸುತ್ತೆ ನನಗೆ. ನೀನು ಯೋಚಿಸಿ ನೋಡು. ಖಂಡಿತ ಆತುರದ ಕ್ರಮಕ್ಕೆ ಕೈಹಾಕಬೇಡ. ಇದು ನನ್ನ ಬೇಡಿಕೆ....”

ಭಾಸ್ ಮಾತಾಡದೆ ಮೌನಧಾರಣೆ ಮಾಡಿದ. ಮನಸ್ಸು ತೂಗು ಯ್ಯಾಲೆ ಏರಿತ್ತು.

ಭಾಸ್ ಆಫೀಸಿಗೆ ಹೋಗುತ್ತಿದ್ದರೂ ಆಂತರಿಕವಾಗಿ ಪೂರಾ ಅಸುಖಿ. ಹೆಚ್ಚು ಮಾತುಕತೆಯಿಲ್ಲ. ನಿರಾಶಾಭಾವ. ಅವನ ಮನೋಮಂಡಲದ ಚಿಂತನಾವಾಹಿ ಮುದ್ರೆಯೊತ್ತುತ್ತದೆ ಮುಖಮಂಡಲದ ಮೇಲೆ. ಅವನ ಮಾನಸಿಕವಾದ ಪ್ರಗಾಢ ಚಿಂತೆ ನನ್ನ ಹೃದಯವನ್ನು ಕಾಣದ ಕೈಗಳಿಂದ ಹಿಸುಕುತ್ತದೆ, ಜೀವ ತಳಮಳಿಸುವಂತೆ. ಸಹಿಸಲಾರೆ. ತೊಡೆಯಲಾರೆ.

ಭಾಸ್ ಭಾವವಿಭಾವಗಳ ವಿಕಾರದಲ್ಲಿ ಸಿಕ್ಕಿ ನರಳುತ್ತ ಉಸಿರಾಡು ವುದನ್ನು ನೋಡಿದರೆ ಒಡಲೆಲ್ಲ ಸಂಕಟ. ಮನಸ್ಸೆಲ್ಲ ಮುಜುಗರ. ಯಾವ ರೀತಿಯಲ್ಲಿ ಇದಕ್ಕೆ ಪರಿಹಾರ ಎಂಬುದೇ ಅರ್ಥವಾಗುತ್ತಿಲ್ಲ. ಎಷ್ಟೆಷ್ಟು ಮಂದಿ ಬುದ್ಧಿಮಾನ್ಯರು ವಿಜ್ಞಾನವೇತ್ತರು ಧೃವ ನಕ್ಷತ್ರಗಳಂತೆ ಬೆಳಗಿ ಉಜ್ವಲಿಸು ತಿದ್ದಾರೆ. ದಿ ಸ್ಕಾರ್ಸ್ ಆಫ್ ಎಲ್ಡರ್ಸ್ ಶುಡ್ ಟೀಚ್ ಅಜ್ ಕಾಶನ್. ಆದರೆ ಇಂದಿನ ವಿಪರೀತಕ್ಕೇನೆನ್ನೋಣ ? ಇತರರ ಕರ್ಮಕಾಂಡದಿಂದ ನಾವು ಬಳಲಬೇಕಲ್ಲ, ಆದೇ ಅನುಭವಿಸಲಾಗದ ದುಃಖಸಂಕಟ, ಎಂದು ಮನಃಪ್ರಾಣ ಗಳು ಛೀಳಿಡುತಿದ್ದುವು.

ನಾನು ಶತಪಥ ತಿರುಗಿದೆ. ಹಾಗೆಯೇ ಅದೆಷ್ಟು ಹೊತ್ತು ನಡೆಯಿತೋ ಪದಚಾರಣ. ಕಾಲುಗಳು ಬತ್ತಿದಮೇಲೆ ಒಳಹೋಗಿ ಹಾಸಿಗೆಯಮೇಲೆ ಬಿದ್ದುಕೊಂಡೆ. ಭಗವಂತ ಏಕೆ ಇಂತಿಂತಹ ಪರಿತಾಪ ಕೊಡುತ್ತಾನೆ ? ಒಂದರ ಮೇಲೊಂದು ಬರುತ್ತಲೇ ಇವೆ. ಏನು ಕಾರಣ ? ಇದು ನಮ್ಮ ಪಾಪದ ಫಲವೇ ? ಅಥವಾ ಭಗವಂತನಿತ್ತ ಅಗ್ನಿಪರೀಕ್ಷೆಯೇ ? ಹಾ, ಏನಾದರಿರಲಿ, ಸೂಕ್ತ ಪರಿಹಾರ ಮಾರ್ಗವನ್ನು ತೋರಬಾರದೇ ? ಇಂದು ಶಾಲೆಗೆ ರಜೆ ಯಿದ್ದುದರಿಂದ ಮನೆಯಲ್ಲೇ ಕಾಲಹರಣ. ಶಾಲೆಯಿದ್ದಿದ್ದರೆ ಹೊತ್ತು ಹೇಗೋ

ಕಳೆಯುತ್ತಿತ್ತು, ಎನಿಸಿ ನಿರಾಶಳಾದೆ. ಸುಮ್ಮನೆ ವಿಶ್ರಮಿಸಿಕೊಳ್ಳಲಾಗಲಿಲ್ಲ. ಒಳಹೋಗಿ ವಿಠ್ಠಲ್‌ರಾವ್‌ನೊಂದಿಗೆ ಕೂಡಿ ಒಳಗಿನ ಕೆಲಸವನ್ನು ಲಗುಬಗೆಯಿಂದ ಪೂರೈಸಿದೆ. ಅದೆಷ್ಟೋ ಹಿತವಾಯಿತು ನನಗೆ. ಅನಂತರ ಗೃಹಾಲಂಕಾರದಲ್ಲಿ ಮನವಿಟ್ಟೆ. ಹೂದಾನಿಗಳ ನೀರು ಬದಲಿಸಿ ಹೊಸಹೂಗಳನ್ನಿಟ್ಟು ಒಪ್ಪಓರಣವನ್ನು ಪೂರೈಸಿದೆ.

ಅದೇ ವೇಳೆಗೆ ಭಾಸ್ ದಡದಡನೆ ಮೆಟ್ಟಿಲು ಹತ್ತಿ ಬಂದ. ಅಪ್ರಸನ್ನ ಮುಖಬಿಂಬದಲ್ಲಿ ಹೂನಗೆಯು ಹೊನಲಿಲ್ಲ. ಗಂಭೀರಭಾವ. ಗಂಭೀರ ನಡಿಗೆ. ನಾನು ಎದ್ದು ನಿಂತು ಕೇಳಿದೆ "ಇಂದೇನು ? ಬೇಗನೇ ಬಂದಿದ್ದೀ ? ಆಫೀಸು ಮುಗಿಯಿತೇ ?"

"ಒಂದು ಮೀಟಿಂಗ್–ಗೆ ಹೋಗಬೇಕು. ಹೀಗೆಯೇ ಬಂದೆ." ಆ ಧ್ವನಿಯಲ್ಲಿ ಎಂದಿನ ಕ್ಷೇಮಮಾಧುರ್ಯವಿರಲಿಲ್ಲ. ನೀರಸಭಾವ, ನೀರಸದನಿ. ಬೇಕೋ ಬೇಡವೋ ಎಂಬಷ್ಟು ಅಹಿತವಾದ ಮಾತು.

ಚಹ ತರಲೇ ?

"ಬೇಡ" ಎಂಬಂತೆ ತಲೆಯಾಡಿಸಿ ಹಾಸಿಗೆಯ ಮೇಲೆ ಬೋರಲಾಗಿ ಮಲಗಿದ. ನಾನು ಬಳಿಗೆ ಹೋಗಿ ಶಯ್ಯಾಪ್ರಾಂತದಲ್ಲಿ ಮೌನವಾಗಿ ಮಂಡಿಸಿದೆ. ಭಾಸ್ ಮಾತಾಡಲಿಲ್ಲ. ಮೌನವಾಗಿ ಉಸಿರಾಡಿದ. ಬೆನ್ನನ್ನು ನೇವರಿಸುತ್ತ "ಭಾಸ್ ಡಿಯರ್...." ಎಂದೆ. ಒಡಲಾಳದ ನೋವೆಲ್ಲಾ ಹರಿದು ಬಂತು ನನ್ನ ದನಿಯಲ್ಲಿ. ಅವನು ಸ್ವಲ್ಪ ಹೊತ್ತು ಮಾತಾಡಲಿಲ್ಲ. ತಲೆಯ ಮೇಲೆ ತಲೆಯನ್ನಿಟ್ಟು ಪ್ರೇಮಭಾವದಿಂದ ಕೇಳಿದೆ "ಭಾಸ್ ಯಾವ ಚಿಂತೆಯನ್ನೂ ಹಚ್ಚಿಕೊಳ್ಳಬೇಡ. ಎಂದೂ ಧರ್ಮಕ್ಕೆ ಚ್ಯುತಿಯಿಲ್ಲ. ಇಂತಹ ಸಂದರ್ಭದಲ್ಲಿ ಎದೆಗೆಡಬಾರದು. ದೇವರಿದ್ದಾನೆ. ಖಂಡಿತ ಚಿಂತಿಸಬೇಡ. ಸ್ವರ್ಗ–ನರಕಗಳೆರಡರಲ್ಲೂ ನಾನು ನಿನ್ನ ಸಂಗಾತಿಯೆ....ಚಿಂತಿಸಬೇಡ."

ಅವನು ಮಿಸುಕಾಡಲಿಲ್ಲ. ಅವನ ಬೆನ್ನಿಗೇ ಆತುಕೊಂಡು ತಲೆಯನ್ನು ನೇವರಿಸಿ ಲಲ್ಲೆಗೈಯುತ್ತ ಮೃದುಭಾವದಿಂದ ನುಡಿದೆ. ಅದಕ್ಕೂ ಅವನು

ಮಣಿಯಲಿಲ್ಲ. ಸ್ವಲ್ಪಹೊತ್ತಿನ ವಿಶ್ರಾಂತಿನಂತರ ಹೊರಟೇಬಿಟ್ಟ ವಿಸಿಟಿಂಗ್ ಸಲುವಾಗಿ. ಒಂದೂ ಮಾತಾಡಲಿಲ್ಲ. ನಾನು ಚಿಂತಾಕ್ರಾಂತಳಾದೆ. ಸ್ವಲ್ಪ ಹೊತ್ತು ಗಂಭೀರವಾಗಿ ಉರುಳಿಹೋಯಿತು. ಅನಂತರ ರಾಂ ವಿಲಾನಿಯ ಮಡದಿ ಶ್ಯಾಮಲಾ-ಗೆ ಟೆಲಿಫೋನಿನಲ್ಲಿ ಕರೆಕೊಟ್ಟೆ.

"ಹಲೋ...."

"ಹಲೋ ಜಾನಕೀ ಏನು ಸಮಾಚಾರ ?"

"ನಿನ್ನೊಂದಿಗೆ ಮಾತಾಡಬೇಕಿತ್ತು. ಫೋನಿಗಿಂತ ಮುಖಾಮುಖೀ ಮಾತಾಡುವುದು ಲೇಸು. ಸ್ವಲ್ಪ ಹೊತ್ತು ನಮ್ಮಲ್ಲಿಗೆ ಬಂದರೆ ಒಳಿತು."

"ಆಗಲಿ...."

ಅವರ ವಾಸ ಬಹಳ ದೂರದಲ್ಲಿ. ಬಸ್ಸುಗಳು ಸದಾಭರ್ತಿಯಿರುವುದರಿಂದ ಅವಳು ಟ್ಯಾಕ್ಸಿ ಹಿಡಿಯಬೇಕು. ರಾಂ ವಿಲಾನಿ ಕಾರು ತೆಗೆದುಕೊಂಡು ಹೋಗಿರುತ್ತಾರಾದ್ದರಿಂದ ಬೇರೆ ಗತಿಯಿಲ್ಲ. ಮುಂದಿನ ವರಾಂಡದಲ್ಲಿ ಅವಳಿಗಾಗಿ ಕಾದು ನಿಂತೆ. ದಿವ್ಯ ಗಂಭೀರಗತಿಯಲ್ಲಿ ಕ್ಷಣ ಕ್ಷಣಗಳು ಉರುಳಿದುವು; ಗಳಿಗೆಗಳಿಗೆಗಳು ಕಳೆದುವು. ದೃಷ್ಟಿ ಬಾರಿಬಾರಿಗೂ ಗಡಿಯಾರದ ಮೇಲೆ, ಹರಿಯುತ್ತದೆ.

ಆದರೆ...

ಟೆಲಿಫೋನ್ ಕರೆ ನೀಡಿತು ಟ್ರಿಣ್, ಟ್ರಿಣ್....

ಒಳಹೋಗಿ ರಿಸೀವರ್ ಕೈಗೆತ್ತಿಕೊಂಡೆ

"ಹಲೋ...."

"ಶ್ಯಾಮಲಾ ಮಾತಾಡುತ್ತಿರುವೆ. ಇದೀಗ ತುಂಬಾಜನ ಅತಿಥಿಗಳು ಬಂದುದರಿಂದ ನನಗೀಗ ಬರುವಂತಿಲ್ಲ. ಇನ್ನೊಮ್ಮೆ ಮಾತಾಡೋಣ."

"ಆಗಲಿ, ಥ್ಯಾಂಕ್ಯೂ...."

"ಈ ಜೀವನ ಎಷ್ಟು ಘೋರ...ಆತಂಕಿತ ?"

— ೦ —

# ಅಧ್ಯಾಯ

## ೧೦

ಭಾಸ್ ಬರೋಡಾ ಮತ್ತು ಬಾಂಬೇ ಯೂನಿವರ್ಸಿಟಿಯ ಕರೆಮೇರೆಗೆ ಹೊರಡುವಾಗ ಅಲ್ಲಿಂದ ಹೋಗಿ ಹಾಗೇ ಬೆಂಗಳೂರು, ಮದರಾಸ್ ಮಾರ್ಗವಾಗಿ ಬರುವುದೆಂದು ತೀರ್ಮಾನಿಸಿದ್ದುದು ಸರ್ವಾನುಕೂಲವಾಗಿತ್ತು. ಸುಮಾರು ಎರಡು ವಾರಗಳ ಪ್ರವಾಸ. ಬಾಂಬೆಯಲ್ಲಿದ್ದಾಗ ಅಜಂತಾ ಎಲ್ಲೋರ ಗುಹಾಂತರ್ದೇವಾಲಯಗಳನ್ನು ನೋಡುವ ಅಭಿಲಾಷೆಯಿತ್ತು. ಮಕ್ಕಳೂ ಉತ್ಸುಕರಾಗಿದ್ದರು. ಅವರ ಸಾಂಗತ್ಯದಿಂದ ಭಾಸ್ ಹರ್ಷಿತನಾದ. ದಹಲಿ ಬಿಟ್ಟಾಗಲೇ ಅವನ ಮುಖಬಿಂಬದಲ್ಲಿ ಕಂಡುಬಂದ ಮುಗುಳು ನಗೆಯಿಂದ ನನ್ನ ಎದೆಯ ಭಾರ ಇಳಿಯಿತು.

ಪಯಣದ ಹಾದಿಯಲ್ಲಿ ಸಿಗುವ ಹಳ್ಳಿಗಳು ಊರುಗಳು ಅಂದಿಂದಿಗೂ ಸುಧಾರಿಸಿಕೊಂಡಂತೆ ಕಂಡುಬಂದುದನ್ನು ಭಾಸ್ ಗಮನಕ್ಕೆ ತಂದಾಗ ಅವನೆಂದ "ಅದು ಇನಾಂದಾರಿ ರದ್ದಿಯಾತಿಯಿಂದ. ಒಂದಾನೊಂದು ಕಾಲದಲ್ಲಿ ಯಾವುಯಾವುದಕ್ಕೋ ಇನಾಂದಾರಿ ಜಮೀನನ್ನು ಪಡೆದುಕೊಂಡು ರೈತರಿಗೆ ಗೇಣಿಗೆ ಕೊಟ್ಟು, ಅದರ ಸಾರಸರ್ವಸ್ವವನ್ನೂ ಹಿಂಡಿ ಹೀರಿ ತಾವು ನಗರ ಪ್ರದೇಶದಲ್ಲಿ ಆರಾಮವಾಗಿ ಕಾಲಕಳೆದು ಆಮೋದ ಪ್ರಮೋದಗಳಲ್ಲಿ ಮೈ ಮರೆಯುತಿದ್ದರು ಜಮೀನಿನ ಒಡೆಯರು. ಇನಾಂದಾರಿ ಪದ್ಧತಿಯ ರದ್ದಿಯಾತಿಯಿಂದಬಡರೈತರು ಬದುಕಿದರು. ಮುಂದೆ ಪ್ರಗತಿಪಥವನ್ನು ಹಿಡಿಯುವುದರಲ್ಲಿ ಅನುಮಾನವಿಲ್ಲ. ಗ್ರಾಮಗಳ ಪ್ರಗತಿಯೇ ರಾಷ್ಟ್ರದ ಪ್ರಗತಿ. ಗ್ರಾಮಜೀವನದ ಕಡೆ ಹೆಚ್ಚಿನ ಗಮನಕೊಡಬೇಕು ಸರಕಾರ. ಈಚೀಚೆಗೆ ಬಹಳಷ್ಟು ಸುಧಾರಣೆಗಾಗಿ ಹಣ ವ್ಯಯಮಾಡುತಿದ್ದಾರೆ. ಈವರೆಗೆ ಆಗಿರುವುದು ಅಲ್ಪ. ಮುಂದೆ ಆಗಬೇಕಾದುದು ಅಗಾಧ...."

ಆಗ ಶ್ರೀವತ್ಸ "ಮಾಮಾ...." ಎಂದವನು ಅಷ್ಟಕ್ಕೆ ಸುಮ್ಮನಾದ. ಬಹುಶಃ ಮತ್ತೊಬ್ಬರ ಮಾತುಕತೆಯ ಮಧ್ಯೆ ಪ್ರವೇಶಿಸಿ ಶಿಷ್ಟಾಚಾರದ

ಸಭ್ಯತೆಯನ್ನು ಉಲ್ಲಂಘಿಸಿದೆನೋ ಎಂಬ ಅನುಮಾನದಿಂದ ಸುಮ್ಮನಾದಂತೆ ಕಂಡುಬಂದ.

"ಏನಪ್ಪಾ, ಅರ್ಧಕ್ಕೆ ಮಾತು ನಿಲ್ಲಿಸಿದೆ ?" ಎಂದೆ ನಾನು.

"ನೀವೇನಾದರೂ ಹೇಳಬಹುದು ಎನಿಸಿತು. ಸುಮ್ಮನಾದೆ" ಎಂದು ಪುನಃ "ಇನಾಂದಾರಿ ರದ್ದಿಯಾತಿಯನಂತರ ಜಮೀನ್ದಾರಿ ರದ್ದಿಯಾತಿಯ ಕೂಗೆದ್ದಿದೆ. ಇದಕ್ಕೆ ಜಮೀನ್ದಾರರ ಅನೀತಿ-ಅನ್ಯಾಯಗಳಿರಬಹುದು; ಜನ ಪ್ರಚೋದನೆಯಿರಬಹುದು; ಅಥವಾ ಯುಗಧರ್ಮವಾಗಿರಬಹುದು. ಏನೇ ಇರಲಿ, ಜಮೀನ್ದಾರಿ ಪದ್ಧತಿಯೂ ರದ್ದಾಗುವುದರಲ್ಲಿ ಸಂಶಯವಿಲ್ಲ. ಆದರೂ ಸಹ, ಏನೋ ಒಂದುರೀತಿಯ ಆಕ್ರೋಶ ಹಿಂಸ್ರಪಶುತ್ವ ಎಲ್ಲೆಲ್ಲೂ ಕಾಣಿಸುತ್ತದೆ. ಗೌರವಾದರಗಳು ಎಂದೋ ಮಾಯವಾಗಿವೆ."

"ಇದರ ಹಿಂದೆ 'ಕಮ್ಯುನಿಸಂ ಪ್ರೊಪಗಾಂಡ' ಕೆಲಸಮಾಡುತ್ತಿದೆ. ಜನ ಈಗಲೇ ಕಾನೂನು ಕಟ್ಟಳೆಗಳನ್ನು ಪೂರ್ತಿ ತಿಳಿದಿದ್ದಾರೆ ಎನ್ನುವಂತಿಲ್ಲ. ಪ್ರಪಂಚಜ್ಞಾನವನ್ನು ಅರಿತು, ತಮ್ಮ ಜೀವನವನ್ನು ಒರೆಹಚ್ಚಿ ನೋಡುವ ಸಮರ್ಥತೆ ಇನ್ನೂ ಮೂಡಿಲ್ಲ. ಕಮ್ಯುನಿಸಂ ಪ್ರಭಾವ ಎಲ್ಲರನ್ನೂ ಹುರಿದುಂಬಿಸುತ್ತಿದೆ ಅಷ್ಟೆ. ಅಂತೂ ಇದರಿಂದಾಗಿ ಬೇಗನೆ ಎಚ್ಚತ್ತುಕೊಳ್ಳುತ್ತಾರೆ. ನಿಜವಾಗಿಯೂ ಪ್ರಜೆಗಳ ಹಕ್ಕುಬಾಧ್ಯತೆಗಳನ್ನು ಯೋಚಿಸಿನೋಡಿದರೆ ಇನ್ನೂ ಮಹತ್ತರ ಬದಲಾವಣೆಗಳು ಉಂಟಾಗಲೇಬೇಕು. ಅದು ಬದ್ಧ; ಅದು ಪ್ರಕೃತ; ಕಾಲ ಬದಲಾದಂತೆ ಲೋಕವೂ ಬದಲಾಗಬೇಕು !"

"ನಿಜ..."

"ಈ ಕತೆ ಒತ್ತಟ್ಟಿಗಿರಲಿ. ಬ್ರಿಟಿಷರ ಗುಲಾಮರಾಗಿದ್ದುಕೊಂಡು ನಮ್ಮ ರಾಜಮಹಾರಾಜರುಗಳೇನು ಸಾಮಾನ್ಯ ಮಜ ಮಾಡಿದ್ದಾರೆಯೇ ? ಅವರ ವೈಭವೋಪೇತವಾದ ಜೀವನವೇನು ? ಫಾರಿನ್ ಟ್ರಿಪ್‌ಗಳೇನು ? ಒಂದು ಹೊತ್ತಿನ ಗಂಜಿಗೂ ಗತಿಯಿಲ್ಲದೆ ನರಳುತ್ತಿದ್ದ ಬಡಜನತೆಯನ್ನು ಕಿಂಚಿತ್ತಾದರೂ ಲಕ್ಷಿಸುತಿದ್ದರೇ ? ಎಲ್ಲೆಲ್ಲಿ ರಾಜಮಾರ್ಗಗಳೋ ಅಲ್ಲಲ್ಲಿ

ಮಾತ್ರ ದುಃಸ್ಥಿತಿ. ಹಳ್ಳಿಹಳ್ಳಿಗಳಿಗೆ ರಸ್ತೆಯೂ ಇಲ್ಲ; ಮತ್ತಾವ ಸೌಕರ್ಯವೂ ಇಲ್ಲ. ನಾನಾ ಬಗೆಯ ಸಾಂಕ್ರಾಮಿಕ ಕಾಹಿಲೆಗಳಿಂದ ಜನ ನೊಣಗಳಂತೆ ಕ್ರಿಮಿಕೀಟಗಳಂತೆ ಸತ್ತರೂ ಸ್ವಲ್ಪವಾದರೂ ಲಕ್ಷಿಸಿದರೆ ? ರಾಜಶಾಹಿ ಇನ್ನೂ ಉಳಿದುಕೊಂಡಿದ್ದರೆ ಅದೇ ಪರಿಸ್ಥಿತಿ ಇರುತಿತ್ತು ಈ ದೇಶದಲ್ಲಿ."

"ಎಂತಹ ಬೀಭತ್ಸ !"

"ಇದನ್ನು ಅನುಭವಿಸಿದವರಿಗೇ ಗೊತ್ತು !"

"ಬ್ರಿಟಿಷರ ಕಾಲದಲ್ಲಿ ಏನೇನೂ ಅಭಿವೃದ್ಧಿಯಾಗಲಿಲ್ಲವೇ ?" ನನ್ನ ಪ್ರಶ್ನೆಯನ್ನು ಮುಂದಿಟ್ಟೆ.

"ಆಗುವಷ್ಟು ಆಗಿದೆ. ಬಿಗಿಯಾದ ಆಡಳಿತ ಜಾರಿಗೆ ಬಂತು. ಅನೇಕ ಬಗೆಯ ಉತ್ಪನ್ನಗಳ ಘಟಕಗಳನ್ನು ಸ್ಥಾಪಿಸಿ ಹಾಕಿದರು. ವಿಶ್ವವಿದ್ಯಾಲಯ ಗಳನ್ನು ತೆರೆದರು. ಮೇಲಾಗಿ, ರಾಜಮಹಾರಾಜರುಗಳ ಬೆನ್ನು ತಟ್ಟಿ ಕುರಿ ಗಳನ್ನು ಕಾಯುವ ಕುರುಬರನ್ನಾಗಿಸಿದರು ! ತಮ್ಮ ಪ್ರಭುತ್ವದ ಸೂರ್ಯ ಎಂದೆಂದೂ ಮುಳುಗುವುದಿಲ್ಲ ಎಂಬ ದಿಟ್ಟತನ ತೋರಿದರು !"

ಆಗ ಎಲ್ಲರ ಮುಖದಲ್ಲೂ ಎಳೆನಗುವಿನ ಲಹರಿ ಉಕ್ಕಿ ಹರಿಯಿತು.

ನಾವು ಬರೋಡಾದಲ್ಲಿ ತಂಗಿದಾಗ ಅಂದಿನ ರಾಜಮಹಾರಾಜರುಗಳ ವಿವಿಧ ವಿನ್ಯಾಸಗಳ ಅರಮನೆಗಳನ್ನೂ ನಾನಾ ಘಟಕಗಳ ಉಳಿಕೆ ಪಳಿಕೆ ಗಳನ್ನೂ ಮತ್ತು ನಗರಗಳಲ್ಲಿನ ಪ್ರೇಕ್ಷಣೀಯ ಸ್ಥಳಗಳನ್ನೂ ತೋರಿಸಲು ಯೂನಿವರ್ಸಿಟಿಯ ವಿದ್ಯಾರ್ಥಿಗಳು ನಮ್ಮೊಂದಿಗಿದ್ದು ಎಲ್ಲದರ ವಿವರಣೆ ಯನ್ನೂ ನೀಡಿ ತಿಳಿಯಹೇಳಿದರು. ಅಲ್ಲಿಂದ ಬೊಂಬಾಯಿಗೆ ಪಯಣ. ಮಕ್ಕ ಳೆಲ್ಲರೂ ತುಂಬಾ ಉತ್ಸುಕರಾಗಿದ್ದರು. ಆನಂದಭೋಗದಿಂದ ತನುಮನಗಳು ಪುಟಿಪುಟಿಯುತಿದ್ದುವು. ಭಾಸ್ ಮೀಟಿಂಗ್ ಮುಗಿಸುವವರೆಗೆ ನಗರದಲ್ಲಿನ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರಲ್ಲಿ ನಮ್ಮ ಹೊತ್ತು ಉರುಳಿತು. ಎಡೆಬಿಡದೆ ಸುತ್ತಿದರೂ ಮಕ್ಕಳು ಆಯಾಸಗೊಳ್ಳಲಿಲ್ಲ. ಮರು ದಿನವೂ ಬೊಂಬಾಯಿಯಲ್ಲೇ ಕಳೆಯಿತು.

ಅನಂತರ ಬೆಳಿಗ್ಗೆ ಹೊತ್ತಿಗೆ ಮುಂಜೆಯೇ ಔರಂಗಾಬಾದಿಗೆ ಪಯಣಿಸಿ, ಅಲ್ಲಿಂದ ಅಜಂತಾ ಗುಹಾಂತರ್ದೇವಾಲಯುಗಳನ್ನು ನೋಡುವ ಸಲುವಾಗಿ ಹೊರಟೆದ್ದು ಟ್ಯಾಕ್ಸಿಯಲ್ಲಿ. ದೂರ ನೋಟಕ್ಕೆ ಕಂಡುಬರುವ ಆ ದೃಶ್ಯಮಾನ ಸೌಂದರ್ಯ ಮನವನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಮೆಟ್ಟಿಲುಗಳನ್ನು ಹತ್ತಿ ಮೇಲಕ್ಕೆ ಹೋಗಿ ನೋಡಿದರೆ ಹೇಳುವುದೇನು ? ಬುದ್ಧದೇವನ ಸುಂದರ ಸುಮನೋಹರವಾದ ವಿಗ್ರಹ ಮತ್ತು ಆತನ ಜೀವನಕ್ಕೆ ಸಂಬಂಧಿಸಿದ ಕಥಾ ಲಹರಿ ಬಣ್ಣಬಣ್ಣವಾಗಿ ವರ್ಣರಂಜಿತವಾಗಿ ಚಿತ್ರವಿಚಿತ್ರವಾಗಿ ಚಿತ್ತಾಕರ್ಷಣೀಯ ಚಿತ್ತಾರಗಳಾಗಿ ಮೂಡಿವೆ. ನೋಡಿದಷ್ಟೂ ಮುಗಿಯದು ಭಾವಿಸಿದಷ್ಟೂ ತಣಿಯದು ಕಣ್ಮನಗಳಿಗೆ. ಆ ದಿನವೆಲ್ಲಾ ಅಲ್ಲಿ ಸುತ್ತಾಡಿ ಕಾಲುಗಳು ದಣಿದರೂ ನೋಟ ಮುಗಿಯಲಿಲ್ಲ. ಮೆಟ್ಟಿಲು ಹತ್ತಿ ಒಂದೊಂದು ಅಂತಸ್ತುಗಳಿಂದ ನೋಡಿದರೆ ಒದೊಂದು ವಿಶೇಷ ಕಂಗೊಳಿಸುತ್ತದೆ ಬುದ್ಧ ಮೂರ್ತಿಯಲ್ಲಿ.

ಶತಶತಶತಮಾನಗಳ ಕೆಳಗೆ ಸಾರಿಗೆ ಸೌಕರ್ಯವಿಲ್ಲದ ಕಾಲದಲ್ಲಿ, ಉತ್ತಮ ಸಲಕರಣೆಗಳು ಮೂಡಿರದ ಕಾಲದಲ್ಲಿ, ಜನ ಸಂಚಾರಕ್ಕೆ ದೂರವಾದ ತಾಣದಲ್ಲಿ, ದಟ್ಟಕಾನನಾಂತರದ ದೃಷ್ಟಮೃಗಗಳ ವಾಸಸ್ಥಾನದಲ್ಲಿ ನೆಲಸಿ ಇಂತಹ ಅಮೋಘವಾದ ಕೃತಿಗಳನ್ನು ಮೂಡಿಸಿರಬೇಕಾದರೆ ಎಷ್ಟು ಧೈರ್ಯ, ಎಷ್ಟು ಶಾಂತಿ, ಎಷ್ಟೆಷ್ಟು ಸಂಯಮ ತೆಗೆದುಕೊಂಡಿರಬಹುದು ಆ ಅಜ್ಞಾತ ಕೃತಿಕಾರರು...? ಇದಂತೂ ಯೋಜನಾತೀತವಾದುದು. ಆ ಕಾಲದಲ್ಲಿ ದೀಪಗಳಿಗಾಗಿ ಏನು ಮಾಡಿದ್ದರು ? ಬಹುಶಃ ತೈಲಾಂಜನಗಳೇ ಬೆಳಕು ತೋರಿರಬಹುದೇ ? ಆದರೂ ಮಹದಾಶ್ಚರ್ಯ ! ಆ ಕತ್ತಲೆ ಗವಿಗಳಲ್ಲಿ ಅಂತಹ ಅಮೋಘವಾದ ಕೃತಿಗಳನ್ನು ಸೃಷ್ಟಿಸಿರಬೇಕಾದರೆ ಆ ಮಂದ ಮಂದ ಬೆಳಕು ಸಹಾಯ ಮಾಡಿತೇ ? ಅಥವಾ ಸೃಷ್ಟಾರರ ಕಣ್ಜ್ಯೋತಿಯೇ ನೆರವು ನೀಡಿತೇ ? ಎಂಬ ಪ್ರಶ್ನೆ ಬುದ್ಧಿವಂತರಲ್ಲಿ ಎದ್ದೇ ತೀರುತ್ತದೆ. ಆ ಸೃಷ್ಟಾರರನ್ನೂ ದ್ರಷ್ಟಾರರನ್ನೂ ಎಷ್ಟು ಪರಿಯಿಂದ ಸ್ಮರಿಸಿದರೂ ಅಲ್ಪವೇ ! ಒಂದೊಂದು ಕೃತಿಯನ್ನೂ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ಹೋದರೆ ಎರಡು ಮೂರು ದಿನಗಳಾದರೂ ಬೇಕಾಗಬಹುದು. ನಾವು ನೋಡಿದ್ದು ಸ್ವಲ್ಪ

ಅವಸರದಲ್ಲಿ. ಸಮಯ ಕಡಿಮೆಯಿದ್ದುದರಿಂದ ನಮಗೆ ಹೆಚ್ಚು ಕಾಲಾವಕಾಶ ಒದಗಿಸಿಕೊಳ್ಳಲಾಗಲಿಲ್ಲ.

ಮರುದಿನ ಎಲ್ಲೋರಕ್ಕೆ ಪ್ರಯಾಣ.

ಅಲ್ಲಿನ ಕೈಲಾಸ ದೇವಾಲಯ, ಗ್ರಿಷ್ಣೇಶ್ವರ ದೇವಾಲಯ, ದೌಲತಾಬಾದ್ ಕೋಟೆ, ಬೀಬಿ–ಕಾ–ಮಕ್ಬಾರ, ಪಂಚಕ್ಕಿ, ಔರಂಗಾಬಾದ್ ಗುಹೆಗಳು ಮುಂತಾದುವನ್ನು ನೋಡುವಲ್ಲಿ....ಕಣ್ಮನಗಳು ದಣಿಯದಿದ್ದರೂ ದೇಹ ಸೋತು ಬಳಲಿತ್ತು. ಕೈಲಾಸ ದೇವಾಲಯದ ಗಾತ್ರ ವಿಸ್ತಾರಗಳನ್ನು ಕಣ್ಣಿಂದ ಕಂಡಾಗ ನಿಜವಾಗಿಯೂ ದಂಗಾಗಿ ಆಶ್ಚರ್ಯವಿಮೂಕರಾಗಿಬಿಡುವುದು ಸಹಜ. ಐವತ್ತು ಮೀಟರ್ ಉದ್ದ, ಮುವತ್ತು ಮೂರು ಮೀಟರ್ ಅಗಲ ಮತ್ತು ಮೂವತ್ತು ಮೂರು ಮೀಟರ್ ಎತ್ತರವಿದ್ದು; ಅದರಲ್ಲಿ ಸಭಾಭವನ, ಮೊಗಸಾಲೆ, ಹಜಾರ, ಒಳಮಂಟಪ, ಅಲಂಕಾರ ಮಂಟಪ, ಅಂಗಣ ಮುಂತಾದುವುಗಳಿಂದ ಕೂಡಿ ಗೋಪುರವನ್ನು ಹೊಂದಿರುವ ಅದ್ಭುತ ವಲಯ ಒಂದೇ ಕಲ್ಲಿನಿಂದ ಕಡೆಯಲ್ಪಟ್ಟಿದೆ ಎಂದರೆ ಎಂತಹ ಆಶ್ಚರ್ಯ ?! ಎಪಿಕ. ಶೈಲಿಯ ಕಲೆಯಲ್ಲಿ ಚಿತ್ತಾರಗಳು ಬಹಳ ರಮ್ಯವಾಗಿ ಮೂಡಿಬಂದಿವೆ ಯಾರೋ ದುರಾತ್ಮರು ಹಲ ಕೆಲವು ವಿಗ್ರಹಗಳ ಅಂಗಭಂಗವನ್ನೂ ಮಾಡಿದ್ದಾರೆ. ಅವುಗಳನ್ನು ನೋಡಿದಾಗ ಕರುಳು ಅತೀವ ಸಂಕಟದಿಂದ ಮಿಡಿಯುತ್ತದೆ. ಕಣ್ಣುಗಳು ಮತ್ತೆ ಮತ್ತೆ ತೊಯ್ಯುತ್ತವೆ.

ಬೀಬಿಕಾ-ಮಕ್ಬಾರ ವಿಚಾರವನ್ನು ಹೇಳುವುದಾದರೆ ಟಾಜ್ ಮಹಲ್ ಮಾದರಿಯಲ್ಲಿ ರೂಪುಗೊಂಡಿದೆ. ಅದಕ್ಕಿಂತ ಚಿಕ್ಕದಾದರೂ ಚೊಕ್ಕವಾಗಿ ಉತ್ತಮ ಶೈಲಿಯಲ್ಲಿ ಉದ್ಭೂತವಾಗಿದೆ. ಹಿಂದೂ, ಜೈನ, ಬೌದ್ಧರ ಕೃತಿಗಳಂತೆಯೇ ಈ ಮೊಗಲರ ಕೃತಿಯೂ ಸುಂದರವಾಗಿದೆ.

ನಾವು ನಮ್ಮಿಂದ ಸಾಧ್ಯವಾದಷ್ಟು ಸುತ್ತಿ ಸುತ್ತಾಡಿ ಎಲ್ಲವನ್ನೂ ಕಣ್ದಣಿಯೇ ನೋಡಿ, ಮನದಣಿಯೇ ಭಾವಿಸಿ, ವನದೇಶದ ತಂಪುಂಡು, ಪ್ರಕೃತಿಯ ಸೌಂದರ್ಯವನ್ನು ಸವಿದು ಬೊಂಬಾಯಿಗೆ ಹಿಂದಿರುಗಿದಾಗ ಮಧ್ಯರಾತ್ರಿ.

ಗಗನತಲವೆಲ್ಲಾ ನಕ್ಷತ್ರಗಳಿಂದ ಕೂಡಿ ಜಗಜಗಾಯಮಾನವಾಗಿದೆ. ತಣ್ಣನೆಯ ವಾತಾವರಣ. ತಣ್ಣನೆಯ ರಾತ್ರಿಗಳನ್ನು ನೋಡಿದರೆ ಮುಂಬೈ ಯಾವತ್ತೂ ಹೀಗೇ ಇರುವುದಾದರೆ ಎಷ್ಟು ಚೆನ್ನ ಎನಿಸದಿರಲಿಲ್ಲ. ಭೋರ್ಗರೆವ ಸಮುದ್ರದ ಮೊರೆತವನ್ನು ಬಿಟ್ಟರೆ ಆಗಾಗ ನಾಯಿಗಳ ಬೊಗಳುವಿಕೆ ಮಾತ್ರ ಕೇಳಿಸುತ್ತದೆ; ಆಗೊಮ್ಮೆ ಈಗೊಮ್ಮೆ ಬೀಟ್ ಪೋಲೀಸಿನವರ ಶಿಳ್ಳೆಯ ಕರ್ಕಶದನಿಯೂ ಕೇಳಿಸುವುದುಂಟು. ಎಲ್ಲಿಂದ ಎಲ್ಲಿಯವರೆಗೂ ವಿದ್ಯುತ್ ದೀಪಗಳು ಕಣ್ಣು ಕುಕ್ಕುವಂತೆ ಬೆಳಗುತ್ತಿವೆ, ನಕ್ಷತ್ರ ಲೋಕಕ್ಕೆ ಪ್ರತಿದ್ವಂದ್ವಿಯಾಗಿ.

ಯೂನಿವರ್ಸಿಟಿ ಕ್ವಾರ್ಟರ್ಸ್ ಬಾಗಿಲನ್ನು ಹರವಾಗಿ ತೆರೆದು ನಮ್ಮನ್ನು ಸ್ವಾಗತಿಸಿತು. ಕೈಕಾಲು ತೊಳೆದು ಹಾಸಿಗೆ ಸೇರಿದೊಡನೆಯೇ ನಿದ್ದೆಗೆ ಶರಣಾಯಿತು ದಣಿದು ಬಳಲಿದ ಮೈ. ಬೆಳಗ್ಗೆ ಎಂಟು ಗಂಟೆಯಾದರೂ ಏಳುವ ಮನಸ್ಸಾಗಲಿಲ್ಲ. ಅನಂತರ ಎದ್ದು ಪ್ರಾತಃ ವಿಧಿಗಳನ್ನು ಮುಗಿಸಿ ಮುಂದಿನ ಪಯಣಕ್ಕೆ ಅಣಿಯಾದೆವು. ಎಲ್ಲರ ಬಟ್ಟೆ ಬರೆಗಳನ್ನು ತುಂಬಿದ ಸೂಟ್‌ಕೇಸ್‌ಗಳನ್ನು ಹೊರಗಿಡುತ್ತ ಶ್ರೀವತ್ಸ ಅಂದ "ಪ್ರವಾಸ ಬಲೂ ಸೊಗಸಾಗಿತ್ತು."

"ನೀವೆಲ್ಲರೂ ಇದ್ದುದರಿಂದ ಪ್ರವಾಸಕ್ಕೆ ಕಳೆಗೂಡಿತು" ಎಂದ ಭಾಸ್ ಪ್ರಸನ್ನತೆಯಿಂದ.

"ಹೌದಪ್ಪಾ ಮಕ್ಕಳ ಕೂಟ. ನೀವೆಲ್ಲಾ ಚಿಗರಿಗಳಂತೆ ಓಡಾಡುತ್ತ ನಗೆ ಮಾತು ಆಡುತ್ತಿದ್ದರೆ ನಮಗೆ ಎಷ್ಟೊಂದು ಸ್ಫೂರ್ತಿ ಗೊತ್ತೋ ?" ಎಂದೆ ನಾನು.

"ನನ್ನ ಕಾಲುಗಳೆಲ್ಲಾ ನೋವು !" ಎಂದ ತಾರಿಣಿಗೆ "ನಿನ್ನ ಕಾಲಿಗೆ ಔಷಧಿ ಉಜ್ಜಬೇಕೆ ? ಬಹಳ ನೋಯುತ್ತಿದೆಯೇ ?" ಎಂದಳು ಶಾಂತಲಾ.

"ಇಲ್ಲ...ಇಲ್ಲ." ಎಂದ ತಾರಿಣಿ ಪುನಃ "ಅಷ್ಟೇನೂ ಇಲ್ಲ. ಔಷಧಿ ಅನಗತ್ಯ."

ಆಗ ಸತ್ಯಾ "ನಾನು ಎಲ್ಲರಿಗಿಂತ ಚಿಕ್ಕವಳು. ನನಗೆ ನೋವು ಇಲ್ಲವೇ ಇಲ್ಲ !" ಎಂದಳು ಹುಬ್ಬೇರಿಸಿ.

ರಾಗಿಣಿ ನಗುನಗುತ್ತ "ನಿನ್ನೆ ನೀನು ಎಲ್ಲರಿಗಿಂತ ಮುಂದೆ ಓಡುತ್ತಿದ್ದೆ! ಅದಕ್ಕೇ ಹಾಗಾಗಿದ್ದು !" ಎಂದಳು ತಾರಿಣಿಗೆ.

ನಾವು ನಾಲ್ಕೈದು ದಿನಗಳ ಬಾಂಬೆ ಟ್ರಿಪ್ಪನ್ನು ಮುಗಿಸಿ ಬೆಂಗಳೂರನ್ನು ತಲುಪಿದಾಗ ಸೂರ್ಯ ನೆತ್ತಿಯ ಮೇಲೆ ಥಳಥಳಿಸುತ್ತಿದ್ದ. ರೈಲು ನಿಲ್ದಾಣಕ್ಕೆ ಶಾಂತಿಪ್ರಸಾದರ ಕಾರು ಬಂದಿತ್ತು. ಡ್ರೈವರ್ ಪ್ಲಾಟ್‌ಫಾರಂ ಮೇಲೆ ನಮಗಾಗಿ ಕಾದಿದ್ದ. ಅಲ್ಲಿಂದ ಮನೆಗೆ ಹದಿನೈದು ನಿಮಿಷಗಳ ಪಯಣ ಮಾತ್ರ. ಕಾರು ಪೋರ್ಟಿಕೋದಲ್ಲಿ ನಿಂತಾಗಲೇ ಮಂಜುಳ ಒಳಗಿಂದ ಹೊರ ಬಂದಳು. ಮಕ್ಕಳು ಐವರನ್ನೂ ನೋಡಿದಾಗ ಅವಳಿಗಾದ ಸಂತಸ ಅಷ್ಟಿಷ್ಟಲ್ಲ. ಎಲ್ಲರನ್ನೂ ಆತ್ಮೀಯತೆಯಿಂದ ಬರಮಾಡಿಕೊಳ್ಳುತ್ತ "ಪಯಣ ಸುಖಕರ ವಾಗಿತ್ತೇ ?" ಎಂದಳು, ಎಲ್ಲಾ ಹಲ್ಲುಗಳನ್ನೂ ಪ್ರದರ್ಶಿಸಿ.

"ಚೆನ್ನಾಗಿತ್ತು !" ನಾನೆಂದೆ ಅತ್ಯಾನಂದವನ್ನು ಸೂಸಿ.

ಮಕ್ಕಳೂ ಬಾಯಿತುಂಬ ಬಣ್ಣಿಸಿದರು, ತಾವು ಕಣ್ತುಂಬ ನೋಡಿ ಆನಂದಿಸಿದುದನ್ನೆಲ್ಲಾ.

ಭಾಸ್ ಅವಳ ಭುಜದ ಮೇಲೆ ಕೈ ಹಾಕಿ ನಲ್ಮೆಯಿಂದ ಕೇಳಿದ "ಶಾಂತಿ ಪ್ರಸಾದರಿನ್ನೂ ಬಂದಿಲ್ಲವೇ ? ಮಕ್ಕಳಿಲ್ಲದೆ ಬೇಸರವಾಗಿತ್ತೇ ? ಹೇಗೆ ಕಾಲ ಹರಣ ಮಾಡಿದೆ ?"

ಪ್ರಶ್ನೆಗಳ ಮೇಲೆ ಪ್ರಶ್ನೆಗಳು ಹೊರಬಿದ್ದಾಗ ಅವಳು ನಗುತ್ತ "ಬೇಸರ ಪಟ್ಟುಕೊಂಡರೆ ಆಗುತ್ಯೆ ? ಈ ಮಕ್ಕಳು ಎಷ್ಟು ದಿನ ನಮ್ಮ ಬಳಿಯಿದ್ದಾರು?" ಎಂದಳು ಪ್ರತ್ಯುತ್ತರವಾಗಿ.

ಮಕ್ಕಳು ಐವರೂ ಮುಖಮಜ್ಜನ ಮಾಡಿ ಬರುವಷ್ಟರಲ್ಲಿ ಶೇಷಮ್ಮ-ಕಮಲ ತಲೆ ಹಾಕಿದರು. ಅಡಿಗೆಯಾಗಿ ಊಟದ ಟೇಬಲ್ಲನ್ನು ಅಣಿಗೊಳಿಸು

ತ್ತಿದ್ದ ಕಮಲ "ತಣ್ಣನೆಯ ಪಾನೀಯ ಏನಾದರೂ ಬೇಕೆ?" ಎಂದು ಕೇಳಿದ್ದಳು; ಗೌರವಾದರಗಳಿಂದ. ಮುಖಬಿಂಬ ಅರಳಿತ್ತು.

"ಚೆನ್ನಾಗಿದ್ದೀಯಾ ಕಮಲ? ಚೆನ್ನಾಗಿದ್ದೀಯಾ ಶೇಷಮ್ಮಾ?" ನಾನು ಕುಶಲ ಪ್ರಶ್ನೆ ಮಾಡಿದೆ.

ಭಾಸ್ ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ತಣ್ಣನೆಯ ನೀರನ್ನು ಕೇಳಿದ.

ಮಂಜುಳ ಮೇಜಿನ ಮೇಲಿದ್ದ ನೀರನ್ನು ನೀಡಿ ರಾಗಮಯಿಯನ್ನು ಜ್ಞಾಪಿಸಿಕೊಳ್ಳುತ್ತ ನಿಟ್ಟುಸಿರುಬಿಟ್ಟು ಹೇಳಿದಳು "ಪಾಪ! ಅವಳ ಗೋಳು ದೇವರಿಗೆ ಪ್ರೀತಿ. ಬಹಳ ಅನ್ಯಾಯವಾಯಿತು. ದೇವರು ಇಷ್ಟು ನಿಷ್ಕರುಣಿ ಯಾಗಬಾರದು."

ಅಷ್ಟರಲ್ಲಿ ಶಾಂತಿಪ್ರಸಾದ್ ಆಗಮಿಸಿದರು.

ಅನಂತರ ಮತ್ತೊಮ್ಮೆ ಉಭಯಕುಶಲೋಪರಿ ವಿಜೃಂಭಿಸಿತು ತಾನೇ ತಾನಾಗಿ.

"ರಾಗಮಯಿಯ ಗಂಡನ ತಿಥಿ-ವೈಕುಂಠ ಸಮಾರಾಧನೆ ಗುರುವಾರ. ಇಂದು ಕಾರ್ಡ್ ಬಂದಿದೆ" ಎಂದಳು ಮಂಜುಳಾ. ಮುಖಭಾವದಲ್ಲಿ ವ್ಯಸನದ ಕಪ್ಪುಛಾಯೆ ಸ್ಪಷ್ಟವಾಗಿ ಮೂಡಿತು.

"ನಾವು ಹೋಗುವಾಗ ಮದರಾಸ್ ಮಾರ್ಗವಾಗಿ ಹೋದರೆ ಅದನ್ನಿಷ್ಟು ಮುಗಿಸಿಯೇ ಹೋಗಬಹುದು. ರಾಗಮಯಿಯನ್ನೂ ನೋಡಿದಂತಾಗುತ್ತೆ," ಭಾಸ್ ತುಸು ಯೋಚಿಸಿ ಹಾಗೆಂದ.

"ಹಾಗಾದರೆ ನಾವೂ ನೀವೂ ಕೂಡಿಯೇ ಹೋಗೋಣ" ಎಂದರು ಶಾಂತಿ ಪ್ರಸಾದ್.

ಆ ಮುಂದಿನ ನಾಲ್ಕು ದಿನಗಳು ಸರಾಗವಾಗಿ ಹೇಳಹೆಸರಿಲ್ಲದೆ ಕರಗಿ ದುವು. ಹೊರಡುವ ದಿನವೂ ಬಳಿಸಾರಿ ಬಂತು. ಕಮಲ, ಶೇಷಮ್ಮ, ಭಗ

ವಾನ್ ಇವರೊಂದಿಗೆ ಶ್ರೀವತ್ಸ ಶಾಂತಲ ಇಲ್ಲೇ ಉಳಿಯುವುದೆಂಬ ತೀರ್ಮಾನವಾಯಿತು. ಭಗವಾನ್ ಅಂದಿಂದಿಗೂ ಮಾನಸಿಕವಾಗಿ ಏನೇನೂ ಬದಲಾಗಿರಲಿಲ್ಲ. ನಮ್ಮನ್ನು ನೋಡಿ ಅವನು ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಲಿಲ್ಲ. ಸಾಧಾರಣವಾಗಿ ಮೈತುಂಬಿಕೊಂಡ ಅವನು ಸುಂದರ ಪುರುಷನೇ ಹೌದು. ನಾನೇ ಮಾತಾಡಿಸಿ ತಲೆಯನ್ನ ನೇವರಿಸಿದೆ. ಅದಕ್ಕೂ ಅವನು 'ಹೂಂ' ಎಂದು ಮಾತ್ರ ಉತ್ತರಿಸಿ. ಭಾಸ್ ಮಾತಾಡಿಸಿದಾಗಲೂ ಅಷ್ಟೆ. ಒಮ್ಮೊಮ್ಮೆ ತುಟಿಗಳಲ್ಲಿ ಕಿರುನಗೆ ಸೂಸುತ್ತದೆ. ಇಲ್ಲವಾದರೆ ಗಾಂಭೀರ್ಯವೇ ಅವನಿಗೆ ಭೂಷಣ. ಅಂತೂ ಈ ಸಲಿ ಇಲ್ಲಿ ಕಳೆದ ಕಾಲ ಮೋದಪ್ರದವಾಗಿತ್ತು. ಸತ್ಯಭಾಮೆ ಸಹಪಾಠಿಗಳ ನಾಲ್ವರೊಂದಿಗೆ ದಿನವೂ ಹೊರಹೋಗಿ ಸುತ್ತಾಡಿ ಬರುತಿದ್ದಳು. ನನಗದರ ಅಷ್ಟು ಆಸ್ಥೆ ಇರಲಿಲ್ಲವಾದುದರಿಂದ ಹೋಗಲಿಲ್ಲ. ಮರುದಿನ ಮುಂಜಾನೆಯ ರೈಲಿಗೆ ಮುಂದಿನ ಪಯಣ. ಮಂಜೂ ಶಾಂತಿಪ್ರಸಾದರೂ ನಮ್ಮೊಂದಿಗೆ ಹೊರಟರು. ರಾಗಿಣಿ- ತಾರಿಣಿಯರಿಗೆ ಇಂದಿನಿಂದೇ ಶಾಲೆ. ಸತ್ಯಭಾಮೆಗೆ ಇನ್ನೂ ಎರಡು ದಿನಗಳ ಅವಧಿಯಿತ್ತು.

ರಾಗಿಣಿ–ತಾರಿಣಿಯರಿಗೆ "ಇದು ಮಿಡ್ಲ್ ಟರ್ಮ್ ಎಕ್ಸಾಮ್" ಆದುದರಿಂದ ಚಿಂತೆಬೇಡ. ಸಮಯಕ್ಕೆ ಸರಿಯಾಗಿ ನಾವು ದೆಹಲಿಯಲ್ಲಿರುತ್ತೇವೆ" ಎಂದು ಸಮಾಧಾನಪಡಿಸಿದೆ. ನನ್ನ ಕರುಳಕುಡಿ ರಾಗಮಯಿಗಾಗಿ ನೊಂದು ನೀರಾಗಿತ್ತು. ನಾವು ನಿಲ್ದಾಣದಿಂದ ಅವಳ ಮನೆಗೆ ಹೋದಾಗ ನೆತ್ತಿಸುಡುವಂತಹ ಸುಡುಬಿಸಿಲು. ಅವಳ ಮನೆಯಲ್ಲಿ ಹೋಮ ಮುಗಿದಿತ್ತು. ಜನ ಊಟ ಮಾಡುತಿದ್ದರು. ಮನೆ ಚಿಕ್ಕದು. ಸೇರಿದ್ದ ಜನ ಅಪಾರ. ನನಗೆ ರಾಗಮಯಿಯ ಬಳಿಗೆ ಹೋಗಲು ಸಾಧ್ಯವಾಗದೆ ಹಿಂದುಳಿದೆ. ಅಂಜನಾ ನನ್ನ ಅಸಹಾಯಕ ಸ್ಥಿತಿಯನ್ನು ನೋಡಿ ಜನರ ಮಧ್ಯೆ ಬಲುಪ್ರಯಾಸದಿಂದ ಕರೆದುಕೊಂಡು ಹೋದಳು ರಾಗಮಯಿಯ ಬಳಿಗೆ. ಅವಳು ನನ್ನನ್ನು ಎರಡೂ ಕೈಗಳಿಂದ ಬಿಗಿದಪ್ಪಿ ಗಳಗಳನೆ ಅಳತೊಡಗಿದಳು. ನಾನು ಸಂತೈಸುತ್ತ. ಸಮಯೋಚಿತವಾಗಿ ಅವಳೊಂದಿಗೆ ನಾಲ್ಕು ಮಾತಾಡಿ ಹಿತವಚನಗಳನ್ನು

ಧೈರ್ಯವನ್ನೂ ಹೇಳಿ "ನಿನಗೆ ದೇವರು ಧೈರ್ಯಕೊಡಲಿ !" ಎಂದೆ, ಪ್ರೀತಿ ಕರುಣೆಗಳನ್ನು ಸೂಸಿ.

"ಇನ್ನು ಧೈರ್ಯ ಕೊಟ್ಟರೇನು ? ಆಗುವುದೆಲ್ಲಾ ಆಗಿಹೋಗಿದೆ. ಮುಖ್ಯವಾಗಿ ದೇವರಿಗೇ ನನ್ನ ಮೇಲೆ ದಯವಿಲ್ಲ" ಎಂದಳು ಆ ದುಃಖಿನಿ ನಿಟ್ಟುಸಿರುಬಿಡುತ್ತ.

ಅವಳ ಕಣ್ಣುಗಳಲ್ಲಿ ಕಂಬನಿ ಆರಿರಲಿಲ್ಲ. ಅತ್ತೂ ಅತ್ತೂ ಸೊರಗಿ ಬಾಡಿ ಬೆಂಡಾಗಿದ್ದಾಳೆ. ಒಣಗಿದ ತುಟಿಗಳನ್ನು ನಾಲಿಗೆಯಿಂದ ಒರಿಸಿ ಕೊಳ್ಳುತ್ತ "ನನಗೀ ಗತಿ ಬಂದುದು ಯಾವ ತಪ್ಪಿತಕ್ಕಾಗಿ ?"

ಅವಳ ಪ್ರಶ್ನೆಗೆ ಉತ್ತರ ನನ್ನ ಬಳಿಯಲ್ಲಿರಲಿಲ್ಲ. ನಾನು ನಿಟ್ಟುಸಿರು ಬಿಟ್ಟು ನುಡಿದೆ "ಕಾಲ ಇಲ್ಲಿಗೇ ಮುಗಿಯಲಿಲ್ಲ. ದಯವಿಟ್ಟು ಚಿಂತಿಸಬೇಡ. ದೇವರಿದ್ದಾನೆ."

ನಾವು ಅಂದೇ ರಾತ್ರಿಯ ರೈಲಿಗೆ ಹೊರಡುವುದಿತ್ತು. ಮಂಜುಳಾ ಪ್ರಸಾದರೂ ಅಷ್ಟೆ. ನಾವು ಬೆಂಗಳೂರನ್ನು ಬಿಟ್ಟದ್ದು ಪ್ರಸಾದರ ಕಾರಿನಲ್ಲಿ. ಅವರು ಊಟವಾದನಂತರ ಕಾರಿನಲ್ಲಿ ಬೆಂಗಳೂರಿಗೆ ಹಿಂದಿರುಗಿದರು. ನಾವು ಹೋಟೆಲಿಗೆ ಬಂದು ಉಳಿದು ಅಂದೇ ರಾತ್ರಿಯ ಗಾಡಿಗೆ ಹೊರಟೆವು ರಾಗಿಣಿ ತಾರಿಣಿ ಸತ್ಯಭಾಮೆಯರೊಂದಿಗೆ. ಅಂಜೂ ರಾಘವರವರು ಮರುದಿನ ರಾಗ ಮಯಿಯೊಂದಿಗೆ ದೆಹಲಿಗೆ ಬರುವವರಿದ್ದರು. ನಾವು ಗ್ವಾಲಿಯರ್‌ನಲ್ಲಿ ಅರ್ಧ ದಿನ ತಂಗಿದ್ದು ಆನಂದ್ ಇಳಾರವರ ಬಯಕೆಯನ್ನು ಈಡೇರಿಸಿ ದೆಹಲಿಗೆ ಪಯಣ ಹೂಡಿದ್ದು ಪುನಃ ರಾತ್ರಿಯ ರೈಲಿಗೆ. ಪಯಣ ಸುಖಕರವಾಗಿದ್ದರೂ ರಾಗಮಯಿಯ ದುಃಖ ಮನವನ್ನು ಗಾಣಕ್ಕೆ ಕೊಟ್ಟಂತೆ ಹಿಂಡುತಿತ್ತು.

ಅಂಜೂ ದೆಹಲಿಗೆ ಬಂದಮೇಲೆ ನಾನು ಅವಳ ಮನೆಗೆ ಹೋಗಿ ರಾಗ ಮಯಿಯ ಬಳಿಯಲ್ಲಿ ಒಂದೆರಡು ಗಂಟೆ ಕಳೆದೆ. ಆದರೂ, ಅವಳ ದುಃಖ ಅಸಹನೀಯವಾಗಿತ್ತು. ಭಾಸ್ ಒಂದು ವಾರ ಕೇಂಬ್ರಿಡ್ಜಿಗೆ ಮೀಟಿಂಗ್ ಪ್ರಯುಕ್ತ ಹೊರಡಲಿದ್ದ. ಆ ಸಮಯದಲ್ಲಿ ಅವಳನ್ನು ನನ್ನ ಬಳಿಯಲ್ಲಿ ಇರು ಎಂದು ಆದರಪೂರ್ವಕವಾದ ಆಹ್ವಾನ ನೀಡಿ ಹಿಂದಿರುಗಿದೆ.

ಇಂದು ಡೇವಿಡ್ ಮನೆಗೆ ಬಂದಾಗ ನಮ್ಮ ಬರೋಡಾ ಬಾಂಬೆಗಳ ಯಾತ್ರೆಯನ್ನೂ ಹಿಂದಿರುಗುವ ಹಾದಿಯಲ್ಲಿ ಬೆಂಗಳೂರು ಮದರಾಸುಗಳ ಭೇಟಿಯನ್ನೂ ರಾಗಮಯಿಯ ಕರುಣಾಜನಕ ಸ್ಥಿತಿಯನ್ನೂ ವಿವರಿಸಿದಾಗ ರಾಗಮಯಿಗಾದ ಅಪಾರ ದುಃಖವನ್ನು ತಿಳಿದು ಬಹಳ ನೊಂದುಕೊಂಡ. ಸತ್ಯಭಾಮೆಯೊಂದಿಗೆ ಆಟದಲ್ಲಿ ನಿರತನಾದಾಗಲೂ ರಾಗಮಯಿಗಾಗಿ ಮರು ಗುತ್ತಲೇ ಇದ್ದ. ಅನಂತರ ಒಳಬಂದು ಅವಳಿಗಾದ ಅನ್ಯಾಯವನ್ನು ಕುರಿತು "ಅವಳಿಗೆ ಒದಗಿದ ದುಃಖ ನನಗೇ ಒದಗಿದಷ್ಟು ಸಂಕಟ. ಅವಳನ್ನು ಇನ್ನಾವ ಪರಿಯಿಂದಲೂ ಸರಿಪಡಿಸುವಂತಿಲ್ಲವೇ ?" ಎಂದು ಕೇಳಿದ.

"ಸರಿಪಡಿಸದೆ ಏನು ? ಎಲ್ಲ ಅವರವರ ಇಷ್ಟ."

"ಒಮ್ಮೆ ಅವಳನ್ನು ಭೇಟಿಮಾಡುವುದು ಸಾಧ್ಯವಾದರೆ ನಾನವಳಿಗೆ ತಿಳಿಯಹೇಳುವೆ."

"ಭಾಸ್ ಕೇಂಬ್ರಿಡ್ಜಿಗೆ ಹೋದಾಗ ನನ್ನೊಂದಿಗಿರು ಎಂದಿದ್ದೇನೆ. ಅವಳು ಏನು ಮಾಡುತ್ತಾಳೋ ನೋಡಬೇಕು. ಪಾಪ, ಬಹಳ ಬುದ್ಧಿವಂತೆ ಕೂಡ. ಹೀಗಾಗಬಾರದಿತ್ತು."

ಅವನು ಅಲ್ಲಿಂದಲ್ಲೇ ಪದಚಾರಣ ಮಾಡಿದ. ಮನಃಪ್ರಾಣಗಳು ಅದೇ ವಿಚಾರದಲ್ಲಿ ಸಿಕ್ಕಿ ಚಡಪಡಿಸುತಿದ್ದುವು. ಸತ್ಯಭಾಮಳನ್ನು ಮರೆತುದು ಮಾತ್ರವಲ್ಲ; ಜಗತ್ತನ್ನೇ ಮರೆತುಬಿಟ್ಟಿದ್ದ.

o o o o

ಭಾಸ್ ಕೇಂಬ್ರಿಜ್ಜಿಗೆ ಹೊರಟ ಮೇಲೆ ನಾನು ಅಂಜೂಮನೆಯಿಂದ ರಾಗಮಯಿಯನ್ನು ಕರೆತಂದೆ. ನೀನು ನನ್ನೊಂದಿಗೆ ದಿನವೂ ಶಾಲೆಗೆ ಬಾ ಜಗತ್ತಿನ ದಾರುಣ ಚಿತ್ರವನ್ನಾದರೂ ನೋಡುವೆ. ನಮಗೇ ಕಷ್ಟ ಎಂದರೆ

ನಮಗಿಂತಲೂ ಹತ್ತರಷ್ಟು ಕಷ್ಟದಲ್ಲಿರುವವರನ್ನು ಕಾಣುತ್ತೇವೆ. ಹಾಗೆ ಕಂಡಾಗಲೇ ನಾವು ನಮ್ಮ ಸಂಕಷ್ಟವನ್ನು ತೀರ ಅಲ್ಪವಾಗಿ ಭಾವಿಸಬೇಕಾದರೆ ಇಲ್ಲದಿದ್ದಲ್ಲಿ ನಮ್ಮದೇ ನಮಗೆ ಬ್ರಹ್ಮಾಂಡವಾಗುತ್ತದೆ."

ದೇವರು ಯಾವುದೋ ಉದ್ದೇಶಕ್ಕಾಗಿ ಭಂಗಬವಣೆಗಳನ್ನು ಕೊಡುತ್ತಾನೆ. ಈವರೆಗೆ ಕೊಟ್ಟ ಸುಖವನ್ನು ದೂರವಾಡದೆ ಮೈದುಂಬಿಕೊಳ್ಳಲಿಲ್ಲವೇ ? ಹಾಗೆಯೇ ಇದು. ನೀನು ನೊಂದುಕೊಳ್ಳುತ್ತಲೇ ಇದ್ದರೆ ಅದರಿಂದ ದೈವದ ಕೃತಿಯನ್ನೇ ಹಳಿದಂತಾಗುತ್ತದೆ."

"........"

"ದೈವಸಂಕಲ್ಪಕ್ಕೆ ಯಾರೂ ಹೊಣೆಯಲ್ಲ. ಅದನ್ನು ಅರಿತುಕೊಂಡು ಕಾರ್ಯತತ್ಪರಳಾಗು. ದೇವರು ನಿನಗೆ ಧೈರ್ಯಕೊಡುವುದು ಮಾತ್ರವಲ್ಲ; ಸಹಾಯವನ್ನೂ ಮಾಡುತ್ತಾನೆ."

ಮನಸ್ಸು ನನ್ನೆಡೆಗೇ ತಿರುಗಿ ನುಡಿಯಿತು. ಇನ್ನೊಬ್ಬರಿಗೆ ತಿಳಿಯ ಹೇಳುವುದು ಸುಲಭ. ನಿನ್ನನ್ನು ಮಾತ್ರ ನೀನು ಹತೋಟಿಯಲ್ಲಿಟ್ಟುಕೊಳ್ಳಲಾರೆ..."ನನಗಾಗ ನಿಜವಾಗಿಯೂ ನಗು ಬಂತು.

ನಾನು ಅವಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಒಳ್ನುಡಿಯಿಂದ ಸಂತೈಸುತ್ತ ಹೇಳಿದೆ "ನಾನು ಮದುವೆಗೆ ಮುನ್ನ 'ನನ್' ಅಥವಾ 'ನರ್ಸ್' ಆಗಿ ಜನಸೇವೆ ಸಲ್ಲಿಸಬೇಕೆಂಬ ಇಚ್ಛೆಯಿತ್ತು. ಅನಂತರ ಭಾಸ್ ಪರಿಚಯವಾಗಿ ಆತನಲ್ಲಿ ಸ್ನೇಹಪ್ರೇಮಗಳು ಬೆಳೆದಮೇಲೆ ಮನಸ್ಸು ಬದಲಾಯಿಸಿದೆ. ಅವನೂ ಕೂಡ ನನ್ನನ್ನು ತಕ್ಷಣವೇನೂ ಪರಿಗ್ರಹಿಸಲಿಲ್ಲ. ನಾನು ಸಂಪೂರ್ಣವಾಗಿ ಭಾರತೀಯತ್ವವನ್ನು ಒಪ್ಪಿಕೊಂಡಮೇಲೆ ನನ್ನ ಪಾಣಿಗ್ರಹಣ ಮಾಡಿದ್ದು. ನೀನು ಜನಸೇವೆ ಸಲ್ಲಿಸುವುದಾದರೆ ಕೆಲವು ಕಾಲ ನನ್ನೊಂದಿಗೆ ಕೆಲಸ ಮಾಡಿ ಅನುಭವ ಪಡೆದುಕೊ. ಒಂದು ವೇಳೆ ನಿನಗದು ಹಿಡಿಸದೇ ಹೋದಲ್ಲಿ ಪುನಃ ಮದುವೆಮಾಡಿಕೊಳ್ಳಬಹುದು. ಈಗಲೇ ನಿರ್ಧರಿಸುವುದು ಕಷ್ಟ. ಮಿಂಚಿದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ."

ಅವಳು ಏನೂ ಮಾತಾಡದೆ ಮೌನಧಾರವಹಿಸಿದಳು.

ಈ ಸಲ ಶಾಲೆಯ ದುರಸ್ತಿ ಮೂರು ನಾಲ್ಕು ತಿಂಗಳ ಕಾಲ ತೆಗೆದು ಕೊಂಡಿತು. ಅಲ್ಲಿಯವರೆಗೆ ಶಾಲೆಯ ಕಡೆಗೆ ಹೋಗಿ ಬರುವುದೇನೂ ತಪ್ಪ ಲಿಲ್ಲ. ನಾನೇ ಆಗಲೀ ಅಂಜೂ ಆಗಲೀ, ಆ ಕಡೆ ಹೋದಾಗ ರಾಗಮಯಿ ಯನ್ನು ತಪ್ಪದೆ ಕರೆದೊಯ್ಯುತಿದ್ದೆವು. ಅಲ್ಲಿಯ ಒಂದೊಂದೇ ಕೆಲಸವನ್ನು ಅವಳಿಗೆ ಅಂಟಿಸುತ್ತಿದ್ದುದರಿಂದ ಅವಳ ಮನಸ್ಸು ಚಿಂತೆಯಿಂದ ಬೇಗನೆ ವಿಮುಖವಾಗಲು ಸಾಧ್ಯವಾಯಿತು.

ಈ ಮಧ್ಯೆ, ಡೇವಿಡ್ ಅವಳನ್ನು ಅನೇಕ ಬಾರಿ ನಮ್ಮ ಮನೆಯಲ್ಲೇ ಭೇಟಿಯಾಗಿದ್ದ. ಅವನಿಗೆ ಅವಳನ್ನು ಮದುವೆಯಾಗುವ ಬಯಕೆ. ಆದರೆ ಅದನ್ನು ಅವಳ ಮುಂದೆ ವ್ಯಕ್ತಪಡಿಸಿರಲಿಲ್ಲ. ದಿನವೂ ನನ್ನೊಂದಿಗೆ "ಅವಳಿಗೆ ನೀನೇ ತಿಳಿಯಹೇಳು" ಎಂದು ಬೇಡಿಕೊಳ್ಳುತ್ತಿದ್ದ.

"ಸ್ವಲ್ಪ ತಾಳು. ಅವಳು ಆ ಪೆಟ್ಟಿನಿಂದ ಇನ್ನೂ ಚೇತರಿಸಿಕೊಂಡಿಲ್ಲ" ಎಂದು ಹೇಳುತಿದ್ದೆ ನಾನು.

ಇಂದು ಅಂಜೂ ಬಂದಾಗ ರಾಗಮಯಿ ಬಳಿಯಲಿಲ್ಲದ ಸಮಯವನ್ನು ನೋಡಿಕೊಂಡು ವಿಷಯವನ್ನು ಪ್ರಸ್ತಾಪಿಸಿದೆ. ಅವಳು ತಲೆದೂಗಿ "ಒಳ್ಳೆಯ ಹುಡುಗ. ರಾಗೂ ಒಪ್ಪಿದರೆ ಆಗಬಹುದು. ತಾಯಿ ತಂದೆಯಿಲ್ಲದ ಹುಡುಗಿ. ನಾವಲ್ಲದೆ ತನ್ನವರಿಲ್ಲ. ಇನ್ನೊಮ್ಮೆ ಮದುವೆ ಎಂದರೆ ಜೀವನ ಸುಖವಾಗಿರ ಬೇಕು. ಅದನ್ನೆಲ್ಲಾ ದೃಷ್ಟಿಯಲ್ಲಿಟ್ಟುಕೊಂಡು ನಾವು ಅವಳ ಜೀವನವನ್ನು ರೂಪಿಸಬೇಕು. ಆದ್ದರಿಂದ ಅವಸರ ಮಾಡಬಾರದು. ನಿಧಾನವಾಗಿ ಆಗಲಿ" ಎಂದಳು. ಮುಖಬಿಂಬದಲ್ಲಿ ಭಾವುಕತೆ ಉಕ್ಕುತಿತ್ತು. ಅವಳು ಸ್ವಲ್ಪಹೊತ್ತು ಆಲೋಚನಾ ಪರವಶಳಾದಳು. ನನ್ನ ಅಂತರಂಗವೂ 'ಹೌದು' ಎಂದು ಒಪ್ಪಿಕೊಂಡಿತು.

ಅಷ್ಟರಲ್ಲಿ ರಾಗಮಯಿ ಒಳಗೆ ಬಂದಳು. ಮುಖ ಬಿಂಬ ಬಾಡಿದ್ದರೂ ಇನ್ನೊಮ್ಮೆ ನೋಡೋಣವೆನ್ನುವಷ್ಟು ಸುಂದರ ರೂಪು- ಅವಳು ಕುಳಿತು ಕೊಳ್ಳುತ್ತ ಹೇಳಿದಳು "ನಾನು ಎಂ.ಎ.ಗೆ ಸೇರುವ ಯೋಚನೆ ಮಾಡಿರುವೆ"

"ಆಗಬಹುದು. ಅದು ಒಳ್ಳೆಯದೇ" ಎಂದಳು ಅಂಜನಾ.

ನಾನೂ ಅದನ್ನು ಸಮರ್ಥಿಸಿದೆ. ಕಾಲೇಜಿಗೆ ಸೇರಲು ಅದು ಸೂಕ್ತ ಸಮಯವಾಗಿದ್ದುದರಿಂದ ಅವಳು ಕ್ರಮವತ್ತಾಗಿ ಅಪ್ಲಿಕೇಶನ್ ಹಾಕಲು ಮುಂದಾದಳು.

ಈ ದಿನ ಸತ್ಯಭಾಮ ಶಾಲೆಯಿಂದ ಬಂದವಳೇ ಅಂದಳು "ಅಮ್ಮಾ, ನಮ್ಮ ಶಾಲೆಯಿಂದ ಕಾಶ್ಮೀರ ನೇಪಾಳಗಳಿಗೆ ಇಪ್ಪತ್ತೇಳು ದಿನಗಳ ಪ್ರವಾಸ ಹೊರಡಿಸುತ್ತಾರೆ. ಅಮೃತಸರ ಡಾರ್ಜಲಿಂಗ್ ಎಲ್ಲಾ ಸೇರುತ್ತವೆ. ನಾನೂ ಅದರಲ್ಲಿ ಭಾಗವಹಿಸುವೆ!" ಅಂದಳು ಅತ್ಯುತ್ಸಾಹದಿಂದ. ಮನಸ್ಸು ಗರಿ ಗೆದರಿತ್ತು, ಹಕ್ಕಿಯಂತೆ.

"ಆಗಬಹುದು; ಹೋಗಿ ಬಾ ಮಗಳೇ!"

"ಅಮ್ಮಾ! ನೀನೆಷ್ಟು ಒಳ್ಳೆಯವಳು ?" ಎನ್ನುತ್ತ ನನ್ನನ್ನು ಎರಡೂ ಕೈಗಳಿಂದ ಅಪ್ಪಿಕೊಂಡಳು ಸತ್ಯಭಾಮ. ಅವಳ ಉತ್ಸಾಹವನ್ನು ನೋಡಿ ಎಲ್ಲರ ಮುಖದಲ್ಲೂ ಹೂನಗೆ ಅರಳಿತು. ಅಂಜೂ ಅವಳ ತಲೆಯನ್ನು ನೇವರಿಸಿ ಮುದ್ದಿಸುತ್ತ "ಅಷ್ಟು ದಿನಗಳ ಕಾಲ ಅಪ್ಪಅಮ್ಮ ನನ್ನು ಬಿಟ್ಟಿರುತ್ತೀ ತಾನೇ ?"

"ಓ....! ಅದಕ್ಕೇನಂತೆ ?" ಹುಬ್ಬೇರಿಸಿದಳು ಸತ್ಯಾ.

ಆ ಮಾತು ಕೇಳಿ ಸಖೇದಾಶ್ಚರ್ಯದಿಂದ ಅವಳತ್ತ ನಿಟ್ಟಿಸಿದೆ. ಆಗ ಅಂಜೂ ನೋಟವನ್ನು ನನ್ನೆಡೆಗೆ ಹರಿಸಿ "ನೋಡಿದೆಯಾ ಎಷ್ಟು ಧೈರ್ಯವಂತೆ ಯಾಗಿದ್ದಾಳೆ ?" ಎಂದಳು. ಸತ್ಯಳ ಮುಖಾರವಿಂದ ಹೂವಿನಂತೆ ಅರಳಿತು. ಅವಳ ಹಣೆಯ ಮೇಲೆ ಹರಿದ ಮುಂಗುರುಳು, ನೇರ ಹಾದಿಯಂತಿದ್ದ ಬೈತಲೆ, ಸುಂದರ ನಯನಗಳಲ್ಲಿನ ಜೀವಜ್ಯೋತಿ, ಚೆಂಡುಮಲ್ಲಿಗೆಯಂತೆ ದುಂಡುಮುಖ ರೂಪಲಕ್ಷ್ಮಿಗೆ ಉಪಮಾನವಾಗುವಂತಿದೆ. ಸತ್ಯಭಾಮ ಬಹಳಮಟ್ಟಿಗೆ ಅಂಜು ವನ್ನು ಹೋಲುತ್ತಾಳೆ ಕೂಡ. ಹಾಗೇ ಯೋಚಿಸಿ "ಅಂಜೂ! ಅವಳು

ಎಲ್ಲಾ ರೀತಿಯಲ್ಲೂ ನಿನ್ನಂತೆಯೇ ! ಅಂಟಿಕೊಳ್ಳುವುದರಲ್ಲೂ ಜಾಣೆ ! ಚಟುವಟಿಕೆಯಲ್ಲೂ ಜಾಣೆ !" ಎಂದೆ ನಾನು.

ಆಗ ಕಣ್ಣು ಮಿಟುಕಿಸಿ ಸತ್ಯಭಾಮೆಗೆ ಏನೋ ಸೂಚನೆ ಕೊಟ್ಟು ಕೇಳಿದಳು ಅಂಜೂ "ಎಲ್ಲರೂ ನೀನು ನಾನೂ ಒಂದೇ ಎನ್ನುತ್ತಾರೆ ! ನೀನೇನ್ನುತ್ತಿ ಸತ್ಯ ?"

"ಹೌದು. ಯಾವುದನ್ನ ಕ್ರಿಯೇಟ್ ಮಾಡುತ್ತೇವೋ ಅದನ್ನು ಸಾಲ್ವ ಸಹ ಮಾಡಬೇಕಲ್ಲವೇ ?"

"ನಿಜ....ಬಲು ಜಾಣೆ ?" ಎಂದಳು ರಾಗಮಯಿ.

ಅಂಜನಾ ಅವಳ ಬೆನ್ನು ತಟ್ಟಿ "ಶಹಬ್ಬಾಸ್" ಎಂದಳು.

ನಾನು ನಕ್ಕುಬಿಟ್ಟೆ.

o o o o

ಈಚೀಚೆಗೆ ರಾಗಮಯಿಯ ಹುರುಪು ಗಗನ ಮುಟ್ಟಿದೆ. ಎಂ.ಎ., ಓದುತ್ತಿರುವುದರೊಂದಿಗೆ ನಮ್ಮ ಶಾಲಾ ಕಾರ್ಯಕ್ರಮಗಳಲ್ಲೂ ಭಾಗವಹಿಸುತ್ತಾಳೆ. ಉಜ್ವಲ ಭವಿಷ್ಯದಲ್ಲಿ ಅಪಾರ ನಂಬಿಕೆಯಿಟ್ಟುಕೊಂಡಿದ್ದಾಳೆ. ಡೇವಿಡ್ಡನ ಒತ್ತಾಯ ದಿನೇದಿನೇ ಹೆಚ್ಚುತಿದ್ದುದರಿಂದ ನಾನೊಮ್ಮೆ ವಿಷಯವನ್ನು ಅವಳ ಮುಂದಿಟ್ಟೆ "ರಾಗೂ ! ನಾನೊಂದು ವಿಷಯವನ್ನು ಮುಂದಿಟ್ಟರೆ ನೀನು ಕೋಪ ಅಥವಾ ಬೇಸರಪಟ್ಟುಕೊಳ್ಳುವುದಿಲ್ಲೆಂದು ನಂಬಬಹುದೇ ?"

"ಪರವಾಯಿಲ್ಲ ಹೇಳು."

"ಖಂಡಿತ ಬೇಸರಪಟ್ಟುಕೊಳ್ಳಬೇಡ. ಇನ್ನೊಬ್ಬರ ಒತ್ತಾಯಕ್ಕೆ ಕಟ್ಟುಬಿದ್ದು ನಿನ್ನ ಮುಂದೆ ಈ ವಿಷಯವನ್ನು ಇಡುತ್ತಿರುವೆ....ನೀನು ಒಪ್ಪಿದರೆ ಡೇವಿಡ್ ನಿನ್ನನ್ನು ಮದುವೆಯಾಗುವುದಾಗಿ ಕೇಳಿದ್ದಾನೆ. ನೀನು ಏನು

ಹೇಳುತ್ತಿ ? ನಿನ್ನನ್ನೇ ನೇರವಾಗಿ ಕೇಳಲು ಅವನಿಗೆ ಸಂಕೋಚವಾಗಿರುವುದರಿಂದ ನನ್ನನ್ನು ಕೇಳಲು ತುಂಬಾ ಕೇಳಿಕೊಂಡಿದ್ದಾನೆ...."

ಅವಳ ಮುಖಭಾವವನ್ನು ಗಮನಿಸುತ್ತ "ಏನು ಹೇಳುತ್ತಿ ?" ಎಂದೆ ಪುನಃ.

ಅವಳು ಸ್ವಲ್ಪಹೊತ್ತು ಸುಮ್ಮನಿದ್ದು ದೀರ್ಘವಾದ ನಿಟ್ಟುಸಿರುಬಿಟ್ಟು ಉತ್ತರಿಸಿದಳು "ಜಾನಕೀ, ನಾನು ಎಂ.ಎ., ಓದಿ ಮುಗಿಸುವವರೆಗೆ ಇನ್ನೊಂದು ಯೋಚನೆ ಮಾಡಲಾರೆ. ತದನಂತರ ಮುಂದಿನ ಯೋಚನೆ." ಎಂದಳು.

"ಒಂದುವೇಳೆ ಅವನು ಕಾಯುತ್ತೇನೆಂದರೆ...?"

"ಅಷ್ಟು ಸಹನೆ ಇದ್ದರೆ..." ಎಂದು ಅಷ್ಟಕ್ಕೆ ಸುಮ್ಮನಾದಳು. ರಾಗಮಯಿ.

"ಅಷ್ಟು ಸಹನೆ ಇದ್ದರೆ ಆಗಬಹುದು ಎಂದು ಅರ್ಥವೇ ?" ನಾನು ನಗುಮುಖದಿಂದ ಕೇಳಿದೆ.

"ಅಷ್ಟು ದೀರ್ಘಕಾಲ ಕಾಯುವಂತಹ ಸಹನೆ ಇರುವುದು ಅನುಮಾನವೇ. ಅಲ್ಲಿಯವರೆಗೂ ಕಾದು, ನನ್ನ ಮನಸ್ಸೂ ಒಪ್ಪಿದರೆ ನೋಡೋಣ." ಎಂದಳು ನಗುಮುಖದಿಂದ.

ಅವಳ ಮುಖಬಿಂಬದಲ್ಲಿ ಏನೋ ಒಂದು ಬಗೆಯ ವಿಷಣ್ಣ ಮುದ್ರೆಯಿತ್ತು. ಭೂತಕಾಲದ ವಿಶಾದರೂಪಕ ಚಿತ್ರಭಿತ್ತಿಯಲ್ಲಿ ಸಾಗಿಹೋಯಿತೋ ಏನೋ.

"ನಿನಗೆ ಸಮ್ಮತಿಯಿದ್ದರೆ ನೀವೇ ಒಮ್ಮೆ ಕೂಡಿ ಮಾತಾಡಿ. ಇದನ್ನು ಅಂಜೂವಿಗೆ ತಿಳಿಸುವೆ."

ಅವಳು ಏನೂ ಹೇಳದೆ ಮೌನಭಾರ ತಾಳಿದ್ದು ನಂತರ ಹೇಳಿದಳು "ಆಗಲೇ ಹೇಳಿದೆನಲ್ಲ, ಎಂ,ಎ., ಆಗಲಿ ಎಂದು."

ತುಟಿಗಳಲ್ಲಿ ಮುಗುಳುನಗೆ ಮೂಡಿ ಮಾಯವಾಯಿತು.

ಅವಳು ಅಂಜನಾ ಜೊತೆ ಹೊರಟಳು. ಪ್ರಸನ್ನ ಭಾವ ತುಂಬಿದ ಪ್ರಸನ್ನ ಮುಖದಲ್ಲಿ ಬಲು ಸುಂದರವಾಗಿ ತೋರಿಬಂದಳು ಅವಳು.

ಅಂದೇ ಸಾಯಂಕಾಲ ಡೇವಿಡ್ ಬಂದಾಗ ವಿಷಯವನ್ನು ಮುಂದಿಟ್ಟೆ. ಅವನಿಗಾದ ಪರಮಾನಂದ ಬಣ್ಣಿಸಿ ಪೂರೈಸದು. ಅವನು ಎದ್ದು ಬಂದು ನನ್ನ ಎರಡೂ ಕೈಗಳನ್ನು ಅದುಮಿ ಹಿಡಿದುಕೊಂಡು "ನಿಜವಾಗಿಯೂ ಈದಿನ ಸುದಿನ....!" ಎಂದ.

"ದೇವರು ನಿನಗೆ ಸಹಾಯ ಮಾಡಲಿ !"

ಆದರೆ, ಆ ದೇವರು ಎಂಬ ವ್ಯಕ್ತಿ ಎಲ್ಲರನ್ನೂ ಪರೀಕ್ಷೆ ಮಾಡು ತ್ತಾನೋ ಏನೋ. ಅದೇ ವೇಳೆಗೆ ಭಾಸ್ ಒಳಹೆಜ್ಜೆ ಇಡಬೇಕೇ ? ಅವನು ಕಣ್ಣುಗಳಲ್ಲಿ ಕಿಡಿಕಾರುತ್ತ ಹಾಗೇ ಹಿಂದಿರುಗಿದ.

ಹಾ, ಶ್ರೀಕೃಷ್ಣ !

ನನಗೆ ಒಮ್ಮೆಗೇ ಎದೆ ಬಿರಿಯುವಂತಾಯಿತು. ಒಂದು ಗಳಿಗೆ ಕಣ್ಮುಚ್ಚಿ ಭಗವಂತನಿಗೆ ಆತ್ಮ ನಿವೇದನೆ ಮಾಡಿಕೊಂಡೆ. ಕಣ್ಣುಗಳು ತುಂಬಿ ಬಂದುವು.

ಡೇವಿಡ್ ನನ್ನ ಕ್ಷಮಾಪಣೆ ಕೇಳಿ ಹೊರಟುಹೋದ. ನಾನು ಈ ಜೀವನಕ್ಕೆ ಕಾಲಿಡದೆ ಹೋಗಿದ್ದರೆ ನನ್ ಆಗಿ ನಿಷ್ಕಳಂಕ ಜೀವನ ನಡೆಸಬಹು ದಾಗಿತ್ತು ಎಂಬ ಪ್ರಶ್ನೆ ಮನದಲ್ಲಿ ನಿಮಿರಿ ನಿಂತಿತು.

ಆದರೆ...ವಿಧಿ ಯಾವತ್ತೂ ಸುಂದರವಾದ ಮಾರ್ಗದರ್ಶನ ಮಾಡುವು ದಿಲ್ಲವೇನೋ....ಮುಳ್ಳುಕಲ್ಲುಗಳ ಹಾದಿಯಲ್ಲಿ ಏಳುಬೀಳುತ್ತಲೇ ಮುನ್ನಡೆಯ ಬೇಕು. ಅದೇ ಜೀವನ ಸ್ವಾರಸ್ಯ.

ಶಾಲೆಯ ಕಾರ್ಯಕ್ರಮವನ್ನು ಸ್ವಲ್ಪ ಬದಲಾಯಿಸುವ ಅಗತ್ಯ ತೋರಿ ದುದರಿಂದ ನಮ್ಮ ಮನೆಗೆ ಮಹಿಳಾಮಂಡಳಿಯನ್ನು ಮೀಟಿಂಗ್‌ಗಾಗಿ ಕರೆದೆ. ಎಲ್ಲರಿಗಿಂತ ಸ್ವಲ್ಪ ಮುಂಚಿತವಾಗಿ ಬಂದವರು ಅಂಜೂ ಮತ್ತು ರಾಗಮಯಿ.

ದುಂಡುಮೇಜಿನ ಮೇಲೆ ಸರಿಯಾದ ವ್ಯವಸ್ಥೆಯಿದೆಯೇ ? ಕುಡಿಯುವ ನೀರು ಕಾಗದ, ಲೇಖನಿಗಳನ್ನು ಇಡುವುದರಲ್ಲಿ ಕ್ರಮ ತಪ್ಪಿದ್ದಾರೆಯೇ ? ಎಂಬುದರಲ್ಲೇ ಮೊದಲಗ ಮನ ಅವರಿಗೆ. ಒಳ ಹೋಗಿ ಚಹ ಹೇಗಿದೆ ? ಬಸಿಬಟ್ಟಲು ಜೋಡಿಸಿದ್ದಾರೆಯೇ ? ಎಂದೆಲ್ಲಾ ನೋಡಿಕೊಂಡು ಬಂದಮೇಲೆ ಅಂಜೂ ಅಂದಳು "ಕೆಲಮಕ್ಕಳಂತೂ ಬಲೂ ದೊಡ್ಡವರು. ನಾಲ್ಕು–ಐದನೆ ತರಗತಿಯಲ್ಲಿರಬೇಕಾದವರು ಕಿಂಡರ್‌ಗಾರ್ಟನ್‌ನಲ್ಲಿರುವುದು ನೋಟಕ್ಕೆ ಹಿತವಲ್ಲ. ಅಕ್ಷರ ಜ್ಞಾನವಿಲ್ಲದೆ ದೊಡ್ಡ ಕ್ಲಾಸುಗಳಿಗೆ ಸೇರಿಸುವಂತೆಯೂ ಇಲ್ಲ. ಇದೊಂದು ಸಮಸ್ಯೆ."

"ನಿಜ" ನಾನೆಂದೆ.

ರಾಗಮಯಿ "ದೊಡ್ಡಮಕ್ಕಳನ್ನು ಒಂದು ಸೆಕ್ಷನ್, ಚಿಕ್ಕಮಕ್ಕಳನ್ನು ಒಂದು ಸೆಕ್ಷನ್, ಮಾಡಿದರೆ ಒಳ್ಳೆಯದು."

"ಅಜೆಂಡಾದಲ್ಲಿ ಅದೂ ಸೇರಿದೆ. ಶಾಲಾಸಮಯದಲ್ಲಿ ಸೂಕ್ತ ಬದಲಾವಣೆ ಆಗಬೇಕಾಗಿದೆ."

ಅಷ್ಟರಲ್ಲಿ ನೀಲರಾಂ ಆಗಮಿಸಿದಳು ಉಳಿದವರೂ ಬರುತ್ತಿರುವುದು ಕಾಣಿಸುತ್ತಿದೆ. ನೀಲಾರಾಂ ಒಳಹೆಜ್ಜೆಯಿಡುತ್ತ "ಈಚೆಗೆ ರಾಗಮಯಿ ಉಲ್ಲಾಸದಿಂದಾಳೆ. ಅದೇ ಸಂತೋಷ !" ಎಂದಳು.

"ಮನಸ್ಸೆಲ್ಲಾ ಓದಿನ ಮೇಲೆ...." ಎಂದಳು ರಾಗಮಯಿ.

ನಾನು ಅವಳ ಮುಖವನ್ನು ನೋಡಿ ಮುಗುಳು ನಕ್ಕೆ, ಅರ್ಥ ಸೂಚಕವಾಗಿ.

ಸಮಯಕ್ಕೆ ಸರಿಯಾಗಿ ಎಲ್ಲ ಸದಸ್ಯರೂ ಆಗಮಿಸಿದರು. ಚರ್ಚೆ ಅರ್ಧ ಗಂಟೆಯ ಮೇಲೆಯೇ ನಡೆಯಿತು. ಅಜೆಂಡಾದಲ್ಲಿದ್ದ ವಿಷಯ ಒಂದು ಇತ್ಯರ್ಥಕ್ಕೆ ಬಂದ ಮೇಲೆ ಸೂಕ್ತಬದಲಾವಣೆಗಳನ್ನು ಒಂದು ಸುವ್ಯವಸ್ಥೆಯ ಚೌಕಟ್ಟಿಗೆ ಅಳವಡಿಸಿದನಂತರ ಎಲ್ಲರೂ ಸಹಿ ಹಾಕಿದರು. ಚಹ ವಿತರಣೆಯಾದ

ಮೇಲೆ ಸಭೆ ವಿಸರ್ಜನೆ, ಯಾವುದೇ ತಕರಾರಿಲ್ಲದೆ ಬದಲಾವಣೆಯಾದುದು ಮನಸ್ಸನ್ನು ಹಗುರ ಮಾಡಿತು.

೦ ೦ ೦ ೦

ಇಂದು ಮುಂಜಾನೆ ತಿಳಿದು ಬಂದ ದಾರುಣವಾರ್ತೆಯೊಂದು ಮನವನ್ನು ಗಾಣಕ್ಕೆ ಕೊಟ್ಟಂತೆ ಹಿಂಡತೊಡಗಿತು. ಭಾಸ್ ವಾಕಿಂಗ್ ಹೋಗಿ ಬರುವಾಗ ಮೂರ್ತಿಯ ಮನೆಯಲ್ಲಿ ನಡೆಯುತ್ತಿದ್ದ ಗಡಿಬಿಡಿಯನ್ನು ಕಂಡು ಏನೆಂದು ವಿಚಾರಿಸಲಾಗಿ ಅವನ ಮಡದಿ ಲಲಿತ ಆತ್ಮಹತ್ಯೆ ಮಾಡಿಕೊಂಡಿರುವುದಾಗಿ ತಿಳಿಯಿತಂತೆ! ತನ್ನ ಮರಣಕ್ಕೆ ಯಾರೂ ಕಾರಣವಲ್ಲವೆಂದೂ ಜೀವನ ಜಿಗುಪ್ಸೆಯಿಂದ ಆತ್ಮಹತ್ಯೆ ಮಾಡಿಕೊಂಡಿರುವುದಾಗಿಯೂ ಬರೆದಿಟ್ಟು ಹೋಗಿದ್ದಾಳಂತೆ! ವಿಷಯ ತಿಳಿದಾಗಿನಿಂದ ಒಡಲ ಬಳ್ಳಿ ಸುಲಿಯಹತ್ತಿತು. ಆವಳ ಜೀವನ ಸಂಪುಟದ ಪುಟಪುಟದ ಮೇಲೂ ಹರಿದಾಡಿತು ಮನಸ್ಸು. "ನಿಜವಾಗಿಯೂ ಆಕೆ ದಿಟ್ಟ ಮಾನಿನಿ! ಇಷ್ಟೊಂದು ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದರೂ ಕೂಡ ಗುಟ್ಟು ಬಿಡಲಿಲ್ಲ...ಛೀ, ಪಾಪ! ಪಾಪ! ತುಂಬ ಅನ್ಯಾಯ!" ಎಂದು ಬಾರಿಬಾರಿಗೂ ಹೇಳಿಕೊಂಡೆ. ಅಲ್ಲಿಗೆ ಹೋಗಿ ಪುಷ್ಪಾರ್ಚನೆ ಮಾಡಲೂ ಕೂಡ ಮನಸ್ಸಾಗಲಿಲ್ಲ. ಆದರೆ, ವಿಷಯ ತಿಳಿದೊಡನೆ ರಾಗಮಯಿ ತನ್ನ ಗೆಳತಿಯ ದುರ್ಮರಣದಿಂದ ವ್ಯಸನಪಡುತ್ತ, ಅವಳೂ ನಾನೂ ಕಾಲೇಜ್‌ಮೇಟ್ಸ್. ನನಗಿಂತ ಸೀನಿಯರ್ ಆಗಿದ್ದರೂ ಚಿಕ್ಕವರೊಂದಿಗೆ ಚಿಕ್ಕವರಂತೆಯೇ ಬೆರೆಯುತಿದ್ದ ಅವಳು ಬಹಳ ಒಳ್ಳೆಯ ಸ್ವಭಾವದವಳು. ಅವಳಿಗೆ ಹೀಗಾದುದು ತುಂಬಾ ದುಃಖಕರ" ಎಂದಳು ಕಣ್ಣುಗಳಲ್ಲಿ ನೀರಾಡಿಸುತ್ತ. ಮುಖಬಿಂಬ ಸಪ್ಪೆಯಾಗಿತ್ತು.

ಅನಂತರ ನಾವು ಮೂವರೂ ಹೋಗಿ ಅಂತ್ಯದರ್ಶನ ಮಾಡಿ ಹೂಹಾರ ಹಾಕಿ ಬಂದಾಗ ಪತ್ರಿಕಾವಲೋಕನದಲ್ಲಿ ನಿಮಗ್ನನಾಗಿದ್ದ ಭಾಸ್. ಹಿಂದಿನ ಪ್ರಕರಣದಿಂದ ಅವನ ಮಾನಸಿಕ ಆಶಂಕೆಯನ್ನು ಪರಿಹರಿಸುವ ನಾನು 'ಡೇವಿಡ್ ನನ್ನ ಕೈಹಿಡಿದು ಅಭಿನಂದಿಸಿದುದೇಕೆ ಗೊತ್ತೇ?'

ಭಾಸ್ ನನ್ನತ್ತ ನೋಡಿದರೂ ನಿರುತ್ತರನಾದ.

ರಾಗಮಯಿ 'ಹೇಳಬೇಡ' ಎಂಬಂತೆ ಕಣ್ಣು ಮಿಟುಕಿಸುತ್ತ ಹೌಹಾರಿದಾಗ ಅಂಜು ಅರ್ಥಪೂರ್ಣವಾದ ಮುಗುಳುನಗೆ ನಕ್ಕಳು. ಭಾಸ್ ಅವರಿಬ್ಬರ ಮನಃಸ್ಥಿತಿಯನ್ನು ನೋಡಿ 'ಏನು ?' ಎಂಬಂತೆ ಎಲ್ಲರ ಕಡೆಗೂ ಮಿಕಿಮಿಕಿ ನೋಡಿದ ನೋಟ ಪ್ರಶ್ನಾರ್ಥಕವಾಗಿತ್ತು.

"ಡೇವಿಡ್ ರಾಗಮಯಿಯನ್ನು ಮದುವೆಯಾಗಲು ಮುಂದೆ ಬಂದಿದ್ದಾನೆ !"

"ನಿಜವಾಗಿ !" ಸಂತಸದಿಂದ ಕೇಳಿದ ಭಾಸ್.

"ಹೌದು, ಅವಳನ್ನು ತಿಳಿದುಹೇಳು ಎಂದಿದ್ದ. ನಾನವರ ಒಪ್ಪಿಗೆಯನ್ನು ಮುಟ್ಟಿಸಿದಾಗಲೇ ಅವನು ಆನಂದಪರವಶನಾಗಿ ನನ್ನ ಕೈಗಳನ್ನು ಹಿಡಿದು ಅಭಿನಂದಿಸಿದ್ದು !"

ಆಗ ಭಾಸ್ ಮುಗುಳುನಗುತ್ತ ರಾಗಮಯಿಯನ್ನು ಕುರಿತು "ಯಾವಾಗ ಸಿಹಿ ?" ಎಂದ.

"ಓ ! ಈಗಲ್ಲಪ್ಪ ನನ್ನ ಎಂ.ಎ.,ಆಗಲಿ. ಆನಂತರ ಮುಂದಿನ ವಿಚಾರ ಎಂದಿದ್ದೆ. ಅಷ್ಟೆ."

"ಅದಕ್ಕೇ ಅಷ್ಟೊಂದು ಉತ್ಸಾಹ ಡೇವಿಡ್ಡನಿಗೆ. ಅವನು ಎರಡೇಕೆ ? ಎಷ್ಟು ವರ್ಷ ಬೇಕಾದರೂ ಕಾಯಲು ಸಿದ್ಧನಾಗಿದ್ದಾನೆ !" ಎಂದೆ ನಾನು ಉತ್ಸಾಹಪೂರ್ಣವಾದ ದನಿಯಲ್ಲಿ.

ವಿಷಯ ಹೊರಬಿದ್ದಾಗ ಎಲ್ಲರ ಮುಖಬಿಂಬದಲ್ಲೂ ಮುಗುಳು ನಗೆ ಅರಳಿ ಹೂವಾಯಿತು. ಭಾಸ್ ನಿರಾಳವಾಗಿ ಉಸಿರಾಡಿದ್ದು ಮಾತ್ರವಲ್ಲ; ನನ್ನ ಮೇಲಿನ ಕಳಂಕದ ಹೊರೆಯೂ ಇಳಿಯಿತು !

"ಇದೆಲ್ಲಾ ಇರುಳುಗನಸಿನ ಮಾತು. ಈಗಲೇ ಏಕೆ ಅದರ ವಿಚಾರ ?" ಎನ್ನುತ್ತ ರಾಗಮಯಿ ಚಂದನ ಅರೆದು ಪೂಸಿದಂತೆ ಕೆಂಪು ಕೆಂಪಾಗಿ ಅಲ್ಲಿಂದ ಜಾರಿಕೊಂಡಳು.

ಮತ್ತೊಮ್ಮೆ ನಗುವಿನ ಲಹರಿ ಉಕ್ಕಿಹರಿಯಿತು.

ನಾಡಿದ್ದು ಸತ್ಯಭಾಮ ಪ್ರವಾಸ ಹೊರಡಲಿದ್ದಾಳೆ. ಅವಳ ಬಟ್ಟೆಗಳನ್ನು ಜೋಡಿಸಿ ತುಂಬುವುದರೊಂದಿಗೆ ನಾಳೆ ಓರಗೆಯ ಮಕ್ಕಳಿಗೆ ಒಂದು ಸಣ್ಣ ಟೀಪಾರ್ಟಿ ಕೂಡ ಇದೆ. ಆದ್ದರಿಂದ ಬೆಳಗ್ಗೆ ಶಾಲೆ ಮುಗಿಸಿ ಶಾಲೆಯಿಂದ ಬಂದವಳೇ ನಿಗಿನಿಗಿ ನಲಿಯುತ್ತ "ನನ್ನ ಬಟ್ಟೆಗಳೆಲ್ಲಾ ಇಸ್ತ್ರಿಯಾಗಿದೆಯೇನಮ್ಮಾ ?" ಎಂದಳು. ಅನಂತರ ಅಂಜೂ ಕಡೆ ತಿರುಗಿ "ನಾಳೆ ಸಂಜೆ. ನನ್ನ ಗೆಳತಿಯರಿಗೊಂದು ಪುಟ್ಟ ಪಾರ್ಟಿ ಇದೆ ರಾಗಿಣಿ–ತಾರಿಣಿಯರನ್ನು ತಪ್ಪದೆ ಕಳುಹಿಸಿ ಆಂಟೀ !" ಎಂದಳು.

"ಅವರಿಬ್ಬರೇನೇ ? ನಾವು ಬೇಡವೇ ?"

"ಬನ್ನೀ ! ನೀವು ಬಂದೇ ಬರುತ್ತೀರಿ ನನಗ್ಗೊತ್ತು ! ನಾನು ಕರೆ ನೀಡಬೇಕಾಗಿಲ್ಲ."

"ನಾನು ?" ಕೇಳಿದಳು ರಾಗಮಯಿ ಕಣ್ಣರಳಿಸಿ.

"ಖಂಡಿತ ! ನಿಮ್ಮನ್ನೆಲ್ಲ ಕರೆಯಬೇಕಾಗಿಲ್ಲ. ನೀವೇ ಬರಬೇಕು ತಿಳಿಯಿತೇ ?"

ಭಾಸ್ ಮೀಟಿಂಗ್ ಪ್ರಯುಕ್ತ ಹೊರಡಲಿದ್ದ. ಅವನೊಂದಿಗೆ ಹೋಗಿ ತಮ್ಮ ಮನೆಯಲ್ಲಿಳಿಯಲಿದ್ದರು ಅಂಜೂ ಮತ್ತು ರಾಗಮಯಿ. ಭಾಸ್ ತಯಾರಾಗಿ ತಂಗಿಯನ್ನು ಕೇಳಿದ "ಹೊರಡೋಣವೇ ?"

"ಆಗಲಿ" ಎನ್ನುತ್ತ ಎದ್ದಳು ಅಂಜೂ.

ಅವರು ಮೂವರೂ ಹೊರಟ ಮೇಲೆ ನಾನು ಗಾರ್ಡನ್ ಕಡೆ ಹೋದೆ. ಮುಖಮಜ್ಜನ ಮಾಡುತ್ತಿದ್ದ ಸತ್ಯಭಾಮ ಇನ್ನೂ ಹೊರಬಂದಿರಲಿಲ್ಲ ಉದ್ಯಾನದಲ್ಲಿ ಕಳೆಕಿತ್ತು ಮುಗಿಸಿ ಮನೆಗೆ ಹೊರಡುತಿದ್ದ ಮಾಲಿ ನನ್ನನ್ನು ನೋಡಿ ಇತ್ತಲೇ ಬಂದು ಅಂದ "ಮೇಮ್ ಸಾಬ್ ! ನಿನ್ನೆ ನೆರೆಮನೆಗೆ ಒಳ್ಳೆಯ ಕೆಮ್ಮಣ್ಣು ಬಂದಿದೆ. ನಮಗೂ ಅದನ್ನೇ ತಂದುಕೊಡಲು ಹೇಳಿರುವೆ."

ಅವನ ದನಿ ಒಳ್ಳೆ ಮೆಹನತ್ತಿನಿಂದ ಹೊರಬಿತ್ತು. ನಾನು ನನ್ನೊಳಗೇ ನಕ್ಕು ಸುಮ್ಮನಾದೆ. ಅವನು ಮುಂದುವರಿದ "ಹೋದ ಸಲಿ ಕೆಮ್ಮಣ್ಣು ಮಿಶ್ರಣ ಸರಿಯಾಗಿ ಆಗದೆ ಗಿಡಗಳು ಸೊಂಪಾಗಿ ಬೆಳೆಯಲಿಲ್ಲ. ಈಸಲಿ ಮೊದಲೇ ಎಚ್ಚರ ವಹಿಸಿರುವೆ. ಚಿಕ್ಕ ಮೇಮ್ ಸಾಬ್ "ಹೂಗಳು ಚೆನ್ನಾಗಿ ಬೆಳೆಯುತ್ತಿಲ್ಲ" ಎಂದು ಅನೇಕ ಬಾರಿ ಹೇಳಿದ್ದಾರೆ. ನನಗೂ ಬೇಸರವಾಗಿದೆ."

ಅವನು ಈಚೆಗೆ ಹಿಂದಿಯನ್ನು ಚೆನ್ನಾಗಿ ಮಾತಾಡುತ್ತಿದ್ದುದರಿಂದ ವ್ಯವಹಾರಕ್ಕೆ ತೊಂದರೆ ಇರುತ್ತಿರಲಿಲ್ಲ. ಸತ್ಯಭಾಮಾ ಒಳಗಿನಿಂದ ಬರ ಬರುತ್ತಲೇ ಮಾಲಿಯನ್ನು ಕುರಿತು ಹೇಳಿದಳು "ಮಾಲಿ ! ನಾಡಿದ್ದು ನಾನು ಪಯಣಹೋಗುವುದುಂಟು. ನಾಳೆ ನನ್ನ ಗೆಳತಿಯರಿಗೆ ಪಾರ್ಟಿ ! ಅಂಗಳ ಚೊಕ್ಕಟವಾಗಿಟ್ಟಿರಬೇಕು ತಿಳಿಯಿತೇ ?"

"ಆಗಬಹುದು."

"ನಿನಗೂ ಪಾರ್ಟಿ ಉಂಟು !"

ಅವನು ಮೂವತ್ತೆರಡು ಹಲ್ಲುಗಳನ್ನು ಪ್ರದರ್ಶಿಸಿ "ತುಂಬ ವಂದನೆ ಗಳು ತಾಯಿ !"

ಪಶ್ಚಿಮ ದಿಗ್ದೇಶದಲ್ಲಿ ಅರ್ಧಚಂದ್ರನು ಮೂಡಿ ಬಾನೇರಿ ಬಂದ. ನಕ್ಷತ್ರಗಳ ಕೂಟದಿಂದ ಗಗನ ಭಿತ್ತಿ ಜಗಜಗಿಸುತಿತ್ತು. ನೀಲಮೇಘ ಗಳು ಭಾರಭಾರವಾಗಿ ಚಲಿಸುತ್ತಿದ್ದುವು. ನೋಡಿದರೆ ಇಂದೋ ನಾಳೆಯೋ ಮಳೆ ಬೀಳಬಹುದು ಎಂಬ ಭಾವನೆ ಬಲಿಯುತ್ತದೆ. ಬೀಸುಗಾಳಿ ತಣ್ಣಗೆ ಮುಖ ಮೈಗಳನ್ನು ಮುದ್ದಿಸುವಾಗ ಹಾಯೆನಿಸುತಿತ್ತು.

ಆಗಲೇ ಭಾಸ್ ವಿಸಿಟಿಂಗ್ ಮುಗಿಸಿ ಹಿಂದಿರುಗಿ ಬಂದವನು 'ಸಿಟ್ ಔಟ್'ನಲ್ಲಿ ಮಂಡಿಸಿದ್ದ. ಒಂದೆರಡು ಪತ್ರಿಕೆಗಳನ್ನು ತಿರುವಿಹಾಕಿ, ಹಾಗೇ ತಣ್ಣಗೆ ಹೂದೋಟದಲ್ಲಿ ಅಡ್ಡಾಡುವ ಸಲುವಾಗಿ ಪತ್ರಿಕೆಯನ್ನು ಮೇಜಿನಮೇಲಿಟ್ಟು ಅಂಗಳಕ್ಕಿಳಿದ.

"ಇಂದಿನ ಪ್ರಕೃತಿ ಸೌಂದರ್ಯ ಎಷ್ಟು ಮಧುರವಾಗಿದೆ ? ಕಲೆಗಾರನ ಚಿತ್ರಕ್ಕಾಗಿ ವೈಯ್ಯಾಂತು ನಿಂತಂತೆ ಒಂದೊಂದೂ ಸೌಂದರ್ಯಶೀಲವಾಗಿದೆ ! ಎಷ್ಟೊಂದು ಸೊಗಸು !" ಎಂದೆ ನಾನು ಆನಂದಪರವಶಳಾಗಿ.

ಅವನು ಓದಿದ್ದು ವಿಜ್ಞಾನಶಾಸ್ತ್ರ. ಸೌಂದರ್ಯ–ಸಾಹಿತ್ಯ–ಸಂಗೀತ–ಕಲೆ ಇದೆಂತಹ ಸೃಜನಾತ್ಮಕವಾದ ವಿಚಾರಗಳ ಬಗ್ಗೆ ಅಷ್ಟೇನೂ ಪರಿಚಯವಿಲ್ಲವೆಂದು ಧಾರಾಳವಾಗಿ ಹೇಳಬಹುದು. ಆದರೆ ಕವಿಶ್ರೇಷ್ಠರು ಪ್ರಕೃತಿಯನ್ನು 'ದೇವಿ' ಎಂದು ಕರೆದಿರುವ ಬಗ್ಗೆ, ಸ್ತ್ರೀಯನ್ನು 'ಮರಾಳಗಾಮಿನಿ' ಎಂದು ಕರೆದಿರುವ ಬಗ್ಗೆ ಯೋಚಿಸಿದರೆ ಅದೆಷ್ಟು ಸಹಜ ಎನಿಸುತ್ತದೆ ಎಂದು ಅನೇಕಬಾರಿ ಹೇಳಿದ್ದ. ಭಾಸ್ ಹಾಗೇ ಯೋಚಿಸುತ್ತ ಪ್ರಸನ್ನಭಾವದಿಂದ ನುಡಿದ "ನಿಜಕ್ಕೂ ಹೇಳುವುದಾದರೆ ಇದನ್ನೆಲ್ಲಾ ಗಮನಿಸುವಷ್ಟು ಸಮಯ–ಸಹನೆ ನನ್ನಲ್ಲಿಲ್ಲವೇನೋ ಎನಿಸುತ್ತೆ. ಕೆಲಸ–ಕೆಲಸ. ಯಾವಾಗಲೂ ಕೆಲಸದ ಮೇಲೆ ಗಮನ. ಒಮ್ಮೆ ಗುರಿಯನ್ನು ಮುಟ್ಟಿದೆನೆಂದರೆ ಆರಾಮವಾಗಿ ಪ್ರಕೃತಿ ಸೌಂದರ್ಯವನ್ನು ಸವಿಯಬಹುದು. ಅದುವರೆಗೆ ಪ್ರಯತ್ನಿಸಿದರೂ ಗಮನ ಅತ್ತ ಹರಿಯುವುದು ಕಷ್ಟ. ಬಹುಶಃ ನಮ್ಮ ಜೀವಮಾನವೇ ಹೀಗೋ ಏನೋ. ನಾನು ಲಂಡನ್‌ನಲ್ಲಿದ್ದಾಗ ಒಮ್ಮೆ ಯೂರೋಪ್ ಪ್ರವಾಸ ಮಾಡಬಹುದಿತ್ತು. ಆಗಲೂ ಪ್ರಯೋಗಶೀಲತೆಯಿಂದ ಬಿಡುವು ಮಾಡಿಕೊಳ್ಳಲಿಲ್ಲ. ಈಗಲೂ ಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನೋಡೋಣ ಮುಂದೇನಾಗುತ್ತೋ."

ತಿಳಿಗಾಳಿಗೆ ಹಾರಾಡುತ್ತಿದ್ದ ಗುಂಗುರು ಮುಂಗುರುಳು ಹಣೆಯ ಮೇಲಿಳಿದು ಮುಖದಂದಕ್ಕೆ ವಿನೂತನ ಶೋಭೆಯನ್ನುಂಟು ಮಾಡಿತ್ತು. ಎಡಗೈ ಹಸ್ತದ ಮೇಲೆ ಶಿರೋಭಾಗವನ್ನಿಳುಹಿ ಕುಳಿತಿದ್ದ ಅವನ ಮುಖದಂದವನ್ನು ನೋಡುತ್ತ ನಾನೆಂದೆ "ಕೆಲವು ದಿನಗಳಿಂದ ನನಗೆ ಹೊಸ ಆಲೋಚನೆಯೊಂದು ಮೂಡುತ್ತಿದೆ. ಯಾವಾಗಲೂ ಹೀಗೇ ಆದರೆ ಈ ಜೀವನಕ್ಕೇನಾದರೂ ಬೆಲೆ ಸಿಗುತ್ತದೆಯೇ ? ಯಾವುದಾದರೂ ದೂರ

ಪ್ರದೇಶಕ್ಕೆ ಹೋಗಿ ಪ್ರಶಾಂತತೆಯಿಂದ ಕಾಲಕಳೆದು ನಿಜವಾದ 'ಶಾಂತಿ' ಎಂದರೆ ಏನೆಂದು ಅರಿತುಕೊಳ್ಳಬೇಕು....ಅಲ್ಲದೆ ಜೀವನಮಾರ್ಗಯೋಗ ಏಕೆ ಹೀಗೆ ಹಿಗ್ಗಾಮುಗ್ಗಾ ಎಳೆದಾಡುತ್ತಿದೆಯೋ ಎಂದೆಲ್ಲಾ ಯೋಚಿಸಿ ದರೆ ಉತ್ತರ ದೊರಕಿಸಿಕೊಳ್ಳುವುದೇ ಕಷ್ಟ ಎನಿಸುತ್ತೆ ಎಂದರೆ ನೀನೇನು ಹೇಳುತ್ತಿ ?"

ಭಾಸ್ ಆಲೋಚನಾ ಭಂಗಿಯಲ್ಲಿ ನುಡಿದ "ಇಂದಿನ ರೀತಿನೀತಿಗ ಳೆ ಬೇರೆ. ವಿದ್ಯಾವಂತ ಯುವಕರು ಅರ್ಥಸ್ವಾಮ್ಯವನ್ನು ಹೊಂದುವೇ ಧ್ಯೇಯೋದ್ದೇಶವೊಂದೇ ಹೊಂದಿದ್ದು ಅದರ ಗುರಿಯಲ್ಲೇ ಮುನ್ನಡೆಯು ವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ದೇಶಕ್ಕಾಗಿ–ವಿಜ್ಞಾನಕ್ಕಾಗಿ ಬೇರೊಂದು ಧ್ಯೇಯವೇ ಇಲ್ಲ. ಯಾವತ್ತೂ ತಮ್ಮ ಉಜ್ವಲ ಭವಿಷ್ಯತ್ತು ಅಡಗಿರುವುದೇ ಅರ್ಥದಲ್ಲಿ ಎಂದು ತಿಳಿದುಕೊಂಡವರಿಗೆ ಹೇಳುವುದಾದರೂ ಏನು ? ಅಲ್ಲಿಗೆ ಸಹಾವಲೋಕನ–ಸಹ ಯೋಜನೆಗೆ ಅವಕಾಶವೇ ಇಲ್ಲ..."

ಇನ್ನೂ ಏನೇನು ಹೇಳಲಿದ್ದನೋ ಅಷ್ಟರಲ್ಲಿ ವಿಠ್ಠಲರಾವ್ ಊಟಕ್ಕೆ ಕರೆನೀಡಿದ.

"ಎಷ್ಟಯ್ಯಾ ಗಂಟೆ ?"

"ಎಂಟು."

ಬಹಳ ಅಪರೂಪಕ್ಕೆ ಸಿನಿಮಾಕ್ಕೆ ಟಿಕೆಟ್ ತರಿಸಿದ್ದ ಭಾಸ್. ಅದಕ್ಕೆಂದೇ ವಿಠ್ಠಲರಾವ್ ಮುಂಚಿತವಾಗಿ ಕರೆನೀಡಿದ್ದು. ನಾವು ಮೂವರೂ ಊಟಕ್ಕೆ ಕುಳಿತಾಗ ಭಾಸ್ ಅಂದ "ನಮ್ಮ ರಾಜ್ಯಾಂಗವೇ ಸರಿಯಿಲ್ಲ. ಅಮೆರಿಕಾ ದೇಶದಲ್ಲಿದ್ದಂತೆ ನಮ್ಮ ರಾಜ್ಯಾಂಗವನ್ನು ರೂಪಿಸಿಕೊಂಡಲ್ಲಿ ಆಡಳಿತ ವಿಧಾನ ಸುಧಾರಿಸುತ್ತದೆ. ಈಗ ನೋಡು ಎಲ್ಲೆಂದರಲ್ಲಿ ಈ ರಾಜಕಾರಣಿಗಳು ನುಗ್ಗುತ್ತಾರೆ. ಯಾವೊಂದು ಕೆಲಸವನ್ನೂ ಹದವರಿತು ಮಾಡುವಂತಿಲ್ಲ. ಲಜ್ಜಾಹೀನ ಕೊಳಕು ಮನದ ಕೊಳಕು ಜೀವಿಗಳ ಉಪಟಳ ದಿನದಿನಕ್ಕೂ ಮೇರೆ ಮೀರುತ್ತಿದೆ. ಯಾವ ಧ್ಯೇಯೋದ್ದೇಶವೂ ಇಲ್ಲದ ಮಾನಹೀನ

ರಿಗೆ ಅಪಾರ ಐಶ್ವರ್ಯ ಹೊಂದುವುದೇ ಒಂದು ಮಹಾನ್ ಗುರಿ. ಆದ್ದರಿಂದ ಎಲ್ಲೆಡೆಯೂ ಹಸ್ತಕ್ಷೇಪ. ಅನೀತಿಯ ವ್ಯವಹಾರ. ಅಧಿಕಾರ ದಾಹದಿಂದ ಇತರರಿಗೆ ಕಿರುಕುಳ. ಸಾತ್ವಿಕರ ಮಾರಣಹೋಮ. ಆಲೋಚನಾ ಶಕ್ತಿಯಿದ್ದೂ. ಧರ್ಮಾಧರ್ಮಗಳ ಪರಿಜ್ಞಾನವಿದ್ದು ವರ್ತಿಸುವ ರೀತಿ ಹೇಯಕರ. ಅಂತಹವರ ವರ್ತನೆಯಿಂದ ನಮಗೇ ನಾಚಿಕೆಯೆನಿಸಬೇಕು. ಅಷ್ಟೆ. ಇಂದಿನ ಪರಿಸ್ಥಿತಿ ಹಾಗಿದೆ. ಮ್ಯಾನ್ ಈಸ್ ಎ ಬ್ಯಾಡ್ ಕ್ರೀಚರ್ ಆಫ್ ದಿ ಯೂನಿವರ್ಸ್ !"

ಅಂದ ಮೇಲೆ...

ತೀವ್ರ ಮಾನಸಿಕಾಂದೋಳನಕ್ಕೆ ಒಳಗಾದ ಸತ್ಯಭಾಮ ಮುಗ್ಧ ದುಗ್ಧ ಮುಖಭಾವದಲ್ಲಿ ಕಣ್ಣಾಲಿಗಳನ್ನು ಅರಳಿಸಿ ಅತ್ಯಾಸಕ್ತಿಯಿಂದ ಕೇಳಿದಳು,

"ಅಪ್ಪಾಜಿ, ಹಾಗಾದರೆ ಇದಕ್ಕೇನು ಪರಿಹಾರ ? ಹೇಗೆ ಸರಿಪಡಿಸಬೇಕು ?....ಯಾರು ಸರಿಪಡಿಸಬೇಕು ? ಪ್ರತಿಯೊಂದಕ್ಕೂ ಒಂದಲ್ಲ, ಒಂದು ರೀತಿಯ ಪರಿಹಾರ ಇದ್ದೇ ಇರುತ್ತಲ್ಲ, ಯೋಚಿಸಿ ನೋಡಿ, ಇದಕ್ಕೇನೂ ಇಲ್ಲವೇ ಪರಿಹಾರ ?"

ಭಾಸ್ ಅವಳ ಮುದ್ದುಗಲ್ಲವನ್ನು ಮುದ್ದಿಸಿ ಹೇಳಿದ "ನೀವು.... ಸರಿಪಡಿಸಬೇಕಾದವರು ನೀವು ! ಇಂದಿನ ಪೀಳಿಗೆಯವರಾದ ನೀವು ! ಸಂಜೀವನ ಮಾರ್ಗವನ್ನು ಕಂಡುಕೊಳ್ಳುವ ನೀವು ! ವಿಶಾಲ ಮನೋಭಾವ ಬೆಳೆಯದೆಯೆ ಈ ಜನಜೀವನ ಉದ್ಧಾರವಾಗದು. ಇದೆಲ್ಲಾ ಆಳವಾಗಿ ಚಿಂತಿಸಬೇಕಾದ ವಿಚಾರ. ವೈಚಾರಿಕ ಪ್ರಜ್ಞೆಯಿಲ್ಲದವರು ಈ ರೀತಿಯ ದುರ್ವ್ಯವಹಾರದಲ್ಲಿ ತೊಡಗುತ್ತಾರೆ. ಇದು ತಪ್ಪು–ಪ್ರಮಾದ ಎಂಬುದನ್ನು ಪ್ರಪಂಚಕ್ಕೇ ತಿಳಿಸಿಕೊಡುವ ಎದೆಗಾರಿಕೆ ತಂದುಕೊಳ್ಳಬೇಕಾದವರು ನೀವು ! ನದಿ–ಹೊಳೆಗಳಂತೆಯೇ ಈ ಜನಸಾಗರ ಮುಂದೆ ಮುಂದೆ ಹರಿಯುತ್ತಲೇ ಇರುತ್ತದೆ. ಹರಿಯುವಲ್ಲಿ ಯದ್ವಾತದ್ವಾ ಹರಿದರೆ ಆಗುವುದು ಹೀಗೆಯೇ....ಎಂಬುದನ್ನು ಅರಿತುಕೊಳ್ಳಿ."

"ಅಪ್ಪಾಜೀ ! ಈಗ ನಿಮ್ಮ ವಿಚಾರಧೋರಣೆಯಲ್ಲೇ ಮುಂದು ವರಿಯೋಣ...ಇದನ್ನು ಈ ಕರಾಳಛಾಯೆಯನ್ನು ನೀವೇ ಏಕೆ ಅಳಿಸ ಬಾರದು ?"

"ಇದೀಗ ಸರಿಯಾದ ಪ್ರಶ್ನೆ....ನಾನು ಯಾರನ್ನು ಕುರಿತು ಹೇಳು ತ್ತಿದ್ದೇನೋ ಅವರೆಲ್ಲ ಬೆಳೆದು ಹೆಮ್ಮರವಾದವರು. ಅವರು ಪಾಠಕಲಿಯ ಬೇಕಾದರೆ ಅಂತಹ ದಿವ್ಯ ಘಟನಾವಳಿಯೇ ಬರಬೇಕು. ನಾನು ನಿಮಗೆ ಹೇಳುವುದೇನೆಂದರೆ ಇಂದಿನಿಂದಲೇ ಅಂದರೆ–ಚಿಕ್ಕಂದಿನಿಂದೇ ಪ್ರೀತಿಸ್ನೇಹ ಗಳಿಂದ ಕೂಡಿದ ಭ್ರಾತೃಭಾವ ಬೆಳೆಸಿಕೊಳ್ಳಿ. ಅಸೂಯೆ, ಅನಾಚಾರಗಳು ನಿಮ್ಮ ಬಳಿಯಲ್ಲಿ ಸುಳಿಯ.ದಿರಲಿ ಎಂದು. ಇವರು ಚಿಕ್ಕಂದಿನಿಂದಲೇ ಮಿಜಿಮಿಜಿ ಮನವನ್ನು ಬೆಳೆಸಿಕೊಂಡವರು. ಈಗಲೂ ಅದರಿಂದ ಹೊರ ತಾಗಿಲ್ಲ. ಅಂತಲೇ ಅವರು ನಮ್ಮನ್ನು ಅಳೆಯುವುದು ಸಣ್ಣ ಮನಸ್ಸಿ ನಿಂದಲೇ. ಆದ್ದರಿಂದ, ನೀವು ರಾಷ್ಟ್ರಕ್ಕೆ ಸಲ್ಲಿಸಲೇ ಬೇಕಾದ ಮಾತೃ ಋಣ ತುಂಬಾ ಇದೆ...."

ಸತ್ಯಭಾಮಾ ನಡುವೆ ಬಾಯಿಹಾಕಿದಳು "ನೀವೂ ಸಹ ಕೆಲ ವೊಮ್ಮೆ ಈ ಈರ್ಷ್ಯೆಗೆ ಒಳಗಾಗುತ್ತೀರಿ ಎನಿಸುತ್ತೆ ನನಗೆ."

ಭಾಸ್ಕ್ವಾನ್ ನಗುತ್ತ ಅಂದ "ಮನುಷ್ಯಕುಲವೇ ಹಾಗೆ. ಆದರೆ ನಾವದರ ಎಲ್ಲೆಕಟ್ಟನ್ನು ಮೀರದಿರೋಣ . . . ಮಾನವೀಯತೆ ವಿಜೃಂಭಿ ಸಿದರೇನೇ ಮಾನವಜನ್ಮ ಸಾರ್ಥಕ."

"ನಿಜ, ಅಪ್ಪಾಜೀ !"

ನಾನು ತಂದೆ ಮಕ್ಕಳ ಸಂಭಾಷಣೆಯನ್ನು ಆಲೈಸುತ್ತ ಸ್ವಲ್ಪ ಹೊತ್ತು ಯೋಚಿಸಿದೆ "ಈ ಈರ್ಷ್ಯೆ ಎಂಬುದು ಯಾರನ್ನೂ ಬಿಟ್ಟಿಲ್ಲ. ಲೋಕವೇ ಹಾಗೆ" ಎನಿಸಿದಾಗ ಮನಸ್ಸು ಸಂಕಟದಿಂದ ಉಸಿರಾಡಿತು. ಚಿಂತಾಸಮುದ್ರದಲ್ಲಿ ಮುಳುಗಿ ಲೀನವಾಯಿತು ಚಿತ್ತ.

ನಾವು ಅಪರೂಪಕ್ಕೆ ನೋಡಲುಹೋದ ಸಿನೆಮಾ ಏನೇನೂ ಚೆನ್ನಾಗಿರಲಿಲ್ಲ. ಅರ್ಧ ನೋಡಿ ಬೇಸರ ಹುಟ್ಟಿ ಎದ್ದು ಬಂದಿದ್ದೆವು. ಯಾರೋ ಅದನ್ನು ತುಂಬಾ ಚೆನ್ನಾಗಿದೆಯೆಂದು ವರ್ಣಿಸಿದ್ದರು ಕೂಡ ಈ ಪ್ರಸಂಗವೇ ಸಾಕು ಉದಾಹರಣೆಗೆ ಅಥವಾ ಈ ಜನಪದ ಹೇಗೇಗೆ ಇರುತ್ತೆ ಎಂಬುದಕ್ಕೆ.

ಶಾಲೆಯಿಂದ ಸತ್ಯಳ ಪಯಣಕ್ಕೆ ಅಗತ್ಯವಾದ ಬಟ್ಟೆಗಳ ಲಿಸ್ಟಿನ ಪ್ರಕಾರ ಹದಿನೈದು ಜೋಡಿ ಬಟ್ಟೆಗಳನ್ನು ತುಂಬಬೇಕು. 'ಅಷ್ಟೊಂದು ಬೇಡ, ನಾನು ಸಂಭಾಳಿಸಲಾರೆ' ಎಂದು ಸತ್ಯಾ. ಆದರೆ, ಶಾಲೆಯಿಂದ ಬಂದ ನಿರೂಪ "ಅಷ್ಟೂ ಬೇಕು. ನಮಗೆ ಒಗೆಸುವುದು ಸಾಧ್ಯವಿಲ್ಲ" ಎಂದು. ಆ ಭರ್ತಿ ಸೂಟ್ ಕೇಸನ್ನು ನೋಡಿದರೆ ಎತ್ತುವುದು ಹೇಗೆ ? ಅಮುಕಿ ಮುಚ್ಚಳ ಹಾಕುವುದು ಹೇಗೆ ? ಎಂಬ ಚಿಂತೆ ಮಗಳಿಗೆ.

"ನಿನ್ನೊಂದಿಗೆ ಹಿರಿಯ ಹುಡುಗಿಯರೂ ಸಿಸ್ಟರುಗಳೂ ಇರುತ್ತಾ ರಷ್ಟೆ ಯಾರಾದರೂ ಸಹಾಯ ಮಾಡುತ್ತಾರೆ ಚಿಂತೆಬೇಡ" ನಾನೆಂದೆ. ಅವಳು ಮುಖಹಿಂಡುತ್ತಲೇ ಸೂಟ್‌ಕೇಸನ್ನು ಎತ್ತಿ ನೋಡಿದಳು. ಅವಳಿಗೆ ಅದನ್ನು ಎಳೆದುಕೊಂಡು ಹೋಗುವುದೂ ಕಷ್ಟವೇ. ಆದರೂ ಒಪ್ಪಿ ಕೊಳ್ಳದೆ ವಿಧಿಯಿಲ್ಲ.

ಸಾಯಂಸಮಯದಲ್ಲಿ ಒಂದು ಸುಂದರವೂ ಪುಷ್ಕಳವೂ ಆದ ಟೀ ಪಾರ್ಟಿ. ಸಣ್ಣ–ದೊಡ್ಡ ಹುಡುಗಿಯರು, ಶಿಕ್ಷಕಿಯರು, ಮಿತ್ರವೃಂದ ದವರು ಮತ್ತು ನಮ್ಮ ಬಂಧುಬಳಗವೂ ಕೂಡಿದಂತೆ ಗಿಜಿಗಿಜಿ ತುಂಬಿತು ಗೃಹವಲಯ. ಡೇವಿಡ್ ಸಹ ಆಹ್ವಾನಿತ. ಡೇವಿಡ್ಡನಿಗೆ ಮೊದಲೇ ಮಕ್ಕಳೆಂದರೆ ಪಂಚಪ್ರಾಣ; ಇನ್ನು ಮಕ್ಕಳಕೂಟವೆಂದರೆ ಕೇಳಬೇಕೆ ? ಮಕ್ಕಳೊಂದಿಗೆ ಆಟ, ರಾಗಮಯಿಯೊಂದಿಗೆ ಮಾತುಕತೆ; ಅವನ ಸಂತೋಷ, ಮಕ್ಕಳ ಆಮೋದ ಪ್ರಮೋದಗಳು ಎಲ್ಲರಿಗೂ ಒಳ್ಳೆಯ ಮನರಂಜನೆಯನ್ನು ನೀಡಿ ಸಂತಸರಸಾನ್ನ ಉಣಿಸಿದುವು. ಕಿಲಕಿಲ ನಗೆಯ

ಹೊನಲು ಹರಿಸಿ. ಮಕ್ಕಳೂ ಅತಿಥಿಗಳೂ ಒಬ್ಬೊಬ್ಬರಾಗಿ ಹೊರಟರು. ಮನೆ ಖಾಲಿಯಾಯ್ತು. ಇನ್ನು ಶುಚಿತ್ವ ಉಳಿದಿತ್ತು. ಅದರಲ್ಲೂ ಪಾಲ್ಗೊಂಡ ಡೇವಿಡ್. ಅವನ ಕಾರ್ಯಕುಶಲತೆ ಎಂತಹವರ ಮನಸ್ಸನ್ನೂ ಸೆಳೆಯುವಂತಿತ್ತು. ರಾಗಮಯಿ ಸಂತಸದ ಹುಗ್ಗಿಯನ್ನುಂಡು ರಾಗಾನು ರಾಗದಿಂದ ತುಂಬಿ ತುಯ್ಯಲಾಡಿದಳು. ಅವಳ ಹೃದ್ಗಡಲಿನ ಹಾಲೋ ಗರವನ್ನುಂಡು ಡೇವಿಡ್ಡನೂ ಸಂತುಷ್ಟನಾದ. ದಾಸ್ಯಪ್ರಧಾನವಾದ ದನಿ ಯಲ್ಲಿ ರಾಗಮಯಿ ಅವನಿಗೆಂದಳು "ನಿನ್ನ ಸ್ನೇಹಾನುರಾಗ ನಿಜಕ್ಕೂ ಶ್ರೀಮಂತವೇ. ಆದರೆ, ಒಂದೇ ಒಂದು ಬೇಸರ....!" ಅವಳ ಮುಖ ಭಾವವನ್ನು ಗಮನಿಸಿದ ಡೇವಿಡ್ ನಗುನಗುತ್ತ ಕೇಳಿದ.

"ಹಾಗೆಂದರೆ...ಏನು ? ಏನಿದ್ದರೂ ಹೇಳಿಬಿಡು. ಈಗಲೇ ಸರಿ ಪಡಿಸಿಕೊಳ್ಳೋಣ. ಯಾವುದರಲ್ಲೂ ಮುಚ್ಚುಮರೆ ಬೇಡವೇಬೇಡ." ನಿಮಿರಿ ನಿಂತು ನೋಡಿದ ಅವನು.

"ನಿನ್ನ ಹೆಸರು 'ಡೇವಿಡ್' ಎಂಬುದೊಂದು, ಹಿತವಾಗುತ್ತಿಲ್ಲ." ಎಂದಳು, ರಾಗಮಯಿ.

ನಾನು ಅತ್ಯಾಶ್ಚರ್ಯದಿಂದ ಅವಳ ಕಡೆ ನಿಟ್ಟಿಸಿದೆ. ಅವಳ ಮಾತಿ ನಿಂದ ಕಿಂಚಿತ್ತೂ ವಿಚಲಿತನಾಗದೆ ಹುಬ್ಬೇರಿಸಿ ಅಂದ "ಹಾಗಾದರೆ 'ದೇವ ದಾನವ' ಎಂದು ಮಾರ್ಪಡಿಸಿಕೊಳ್ಳಲೇ.

ಒಡನೆ ಎಲ್ಲರ ಮುಖಮಂಡಲದಲ್ಲೂ ನಗುವಿನಲೆ ಉಕ್ಕಿಹರಿಯಿತು.

ದಿನಗಳು ಉರುಳಿದವು. ಸತ್ಯಾ ಇಲ್ಲದೆ ಮನೆಯಲ್ಲಿ ಕಳೆಯೇ ಇಲ್ಲ.

"ಹೇಗಪ್ಪಾ, ಕಾಲಹರಣ ಅವಳಿಲ್ಲದಿದ್ದರೆ ಬಲು ಬೇಸರ" ಎಂದು ನನ್ನೊಳಗೇ ಅಂದುಕೊಂಡಾಗಲೇ ವಿಠ್ಠಲರಾವ್ ಮತ್ತು ಚಪ್ರಾಸಿಗಳೂ ಚಿಕ್ಕಪ್ಪಾವರಿಲ್ಲದೇ ಹೋದರೆ ಈ ಮನೆಯಲ್ಲಿ ಕಳೆಯೇ ಇಲ್ಲ. ಬಲು

ಬೇಸರವಾಗುತ್ತೆ ಎಂದು ಮಾತಾಡಿಕೊಳ್ಳುತಿದ್ದುದು ನನ್ನ ಕಿವಿಗೂ ಬಿತ್ತು. ನಾನು ದಿನಚರಿಯನ್ನು ಮುಗಿಸಿ ಅಂಜೂ ಮತ್ತು ರಾಗಮಯಿಯರಿಗಾಗಿ ಕಾಯುತ್ತ ಪತ್ರಿಕಾವಲೋಕನದಲ್ಲಿ ಕಣ್ಣಾಡಿಸುತ್ತಿದ್ದೆ. ಗಡಿಯಾರದ ಮುಳ್ಳು ಒಂಭತ್ತರ ಅಂಚನ್ನು ಟಕಟಕನೆ ದಾಟಿತು. ಅವರು ಬಾರದುದರಿಂದ ಎದ್ದು ವರಾಂಡಕ್ಕೆ ಹೋದೆ. ಸುಳಿಗಾಳಿಯ ಹೊಡೆತಕ್ಕೆ ಸಿಕ್ಕಿ ಕೆಂಧೂಳು ಮೇಲೆಮೇಲೇರುತಿತ್ತು. ಹಾಗೇ ಕಣ್ಣೆತ್ತಿ ನೋಡಿದರೆ ಪುಟ್ಟಪುಟ್ಟ ತಾಲಚಂಚು ಪಕ್ಷಿಗಳ ತಂಡ ಧೂಳು ಮೋಡಗಳೊಡನೆ ಚಿನ್ನಾಟವಾಡುತ್ತ ಅಲ್ಲಲ್ಲೇ ಹಾರಾಡುತ್ತಿರುವ ಮನೋಹರ ದೃಶ್ಯ ದೃಷ್ಟಿಗೆ ಬಿತ್ತು. ಹಾಗೇ ಸ್ವಲ್ಪ ಹೊತ್ತು ಭಾವಪರವಶಳಾದೆ. ಬಿಸಿಲೇರಿದ್ದರೂ ವಾಯುಮಂಡಲದ ಶೀತಲಶೈತ್ಯ ಲವಲೇಶವೂ ಕಡಿಮೆಯಾಗಿರಲಿಲ್ಲ. ಬೆಚ್ಚನೆಯ ಬಿಸಿಲಲ್ಲಿ ಸ್ವಲ್ಪಹೊತ್ತು ಅಡ್ಡಾಡಿದೆ. ಪ್ರಚಂಡ ಸೂರ್ಯ ಕಿರಣಗಳ ಮಧ್ಯದಲ್ಲಿಯೂ ಶೀತಲತೆಯ ವಿಜಯಘೋಷ ಮಾಡುತಿದ್ದ ಶ್ರೀಮಂತ ಋತರಾಜ. ಗಿಡಮರಗಳಲ್ಲಿ ವಿವಿಧ ವರ್ಣದ ಪುಷ್ಪರಾಜಿಯು ಕಣ್ಮನಗಳನ್ನು ತಣಿಸುವಂತಿತ್ತು. ಬೆಳಗಿನ ಬೆಚ್ಚನೆ ಬಿಸಿಲು ಹಿತವಾಗಿದ್ದುದರಿಂದ ಅಲ್ಲೇ ನಿಂತೆ. ಅಷ್ಟರಲ್ಲಿ ಅಂಜೂ ಮತ್ತು ರಾಗಮಯಿ ಬಂದರು.

ಅಂಜು ಅಲ್ಲಿಂದಲೇ ಕೇಳಿದಳು "ನಮಗಾಗಿ ಕಾಯುತಿದ್ದೆಯಲ್ಲವೇ ?"

"ಹೌದು."

"ಬಸ್ಸುಗಳು ಭರ್ತಿಯಾಗಿದ್ದುದರಿಂದ ಒಂದಾದಮೇಲೊಂದರಂತೆ ಬಸ್ಸುಗಳಿಗಾಗಿ ಕಾದುಬರಬೇಕಾದರೆ ಇಷ್ಟೊತ್ತಾಯಿತು."

"ಪರವಾಯಿಲ್ಲ, ಆದರೂ ಸಮಯವಿದೆ."

ನಾವು ಬಿಸಿಬಿಸಿ ಚಹ ಹೀರಿ ಹೊರಟಾಗ ಸಮಯವೇನೂ ಮೀರಿರಲಿಲ್ಲ. ಬಿಸಿಲಿನ ಝಳ ಹೆಚ್ಚುತ್ತಿದ್ದರೂ ಚಳಿಗಾಳಿ ಅಷ್ಟೇನೂ ಕುಗ್ಗಿರಲಿಲ್ಲ. ನಾವು ಬಸ್ಸು ಹಿಡಿದು ಶಾಲೆಯನ್ನು ಮುಟ್ಟಿದಾಗ ಅಂಗಣದ

ತುಂಬೆಲ್ಲ ಮಕ್ಕಳ ಮೇಳನೇ ಮೇಳ. ಅಂಗಳಕ್ಕೆ ಕಾಲಿಟ್ಟೊಡನೆ ಶಾಲೆಯ ಗಂಟೆ ಬಾರಿಸಿತು. ಮಕ್ಕಳು ಒಂದೇ ಬಾರಿಗೆ ಒಳನುಗ್ಗಿದರು. ನಮ್ಮ ಹೊಸ ಕಾರ್ಯಕ್ರಮದ ಪ್ರಕಾರ ಹಲಕೆಲವು ಬದಲಾವಣೆಗಳು ನಡೆಯ ಲಿದ್ದುವು. ಅವುಗಳಲ್ಲೆಲ್ಲಾ ಸೂಕ್ತ ಬದಲಾವಣೆಗಳನ್ನು ಮಾಡಿ ಮುಗಿಸಿ ದಾಗ ಹೊತ್ತು ಹನ್ನೆರಡರ ಅಂಚನ್ನು ದಾಟುವುದರಲ್ಲಿತ್ತು.

ವಯಸ್ಕರ ಶಿಕ್ಷಣ ಕೇಂದ್ರಕ್ಕೆ ಮಹಿಳೆಯರು ಕಲಿಯಲು ಬರು ತಿದ್ದರೂ ಅವರಿಗೆ ನಯ-ನಾಜೋಕು ಏನೇನೂ ತಿಳಿಯದು. ಮನೆಯಲ್ಲಿ ಹೇಗೋ ಹಾಗೆಯೇ ಕೊಳಕು ಬಟ್ಟೆಯಲ್ಲಿ ಬರುತ್ತಾರೆ. ಅವರ ಸ್ಥಿತಿ ಗತಿಯನ್ನು ನೋಡಿದರೆ ಯಾರಿಗಾದರೂ 'ಅಯ್ಯೋ' ಎನಿಸುವಷ್ಟು ಕರುಣಾ ಜನಕ. ಅಂಜು ಅವರಿಗೆಲ್ಲಾ ನಾಜೋಕು ಏನೆಂಬುದನ್ನು ವಿವರಿಸಿ ಹೇಳಿ "ನೀವು ಇರುವ ಬಟ್ಟೆಯಲ್ಲೇ ಬನ್ನಿ. ಆದರೆ ಅರ್ಥಾತ್ ನಿತ್ಯವೂ ಶುಚಿಯಾಗಿರುವುದನ್ನು ಕಲಿಯಬೇಕು. ವಿದ್ಯೆಯನ್ನು ಕಲಿತು ಶುಚಿತ್ವ ಇಲ್ಲದಿ ದ್ದರೆ ಶೋಭೆಯೇ ಅಲ್ಲ. ಆದ್ದರಿಂದ ಅಡಿಯಿಂದ ಮುಡಿಯವರೆಗೆ ಶುಚಿರ್ಭೂತ ವಾಗಿರುವುದನ್ನು ಖಂಡಿತ ಕಲಿಯಬೇಕು. ವಿದ್ಯಾಭ್ಯಾಸದೊಂದಿಗೆ ವಿವಿಧ ಕಲೆ ಕೈಗಾರಿಕೆಗಳನ್ನು ಪರಿಚಯ ಮಾಡಿಕೊಡಲಾಗುತ್ತೆ. ನಿಮಗೆ ದಿನ ನಿತ್ಯದ ಆಹಾರದಲ್ಲಿ ಪೌಷ್ಟಿಕತೆಯ ಬಗ್ಗೆ ತಿಳುವಳಿಕೆ ನೀಡಲಾಗುತ್ತೆ. 'ಕಸದಿಂದ ರಸ' ಎಂಬ ಉಪನ್ಯಾಸವನ್ನೂ ಏರ್ಪಡಿಸಿ ಜೀವನಕ್ಕೆ ಸುಲಭ ದಾರಿಯನ್ನು ತೋರಿಸಿಕೊಡುವುದೂ ಉಂಟು. ನೀವೆಲ್ಲರೂ ನಮ್ಮ ಮಾತಿನಲ್ಲಿ ಶ್ರದ್ಧೆಯಿಡಬೇಕು. ಖಂಡಿತ ಉದಾಸೀನ ಮಾಡಬೇಡಿ. ಇದೆಲ್ಲಾ ನಿಮ್ಮ ಒಳ್ಳಿತಕ್ಕಾಗಿಯೇ ಇದೆ ಎಂದು ಪುಟ್ಟ ಉಪನ್ಯಾಸವನ್ನೇ ಮಾಡಿದಳು, ಅಂಜು.

ಆಗ ಅನೇಕರು "ಆಗಲಿ, ನಾವು ಇನ್ನು ಮುಂದೆ ನಾಜೋಕು ಕಲಿತುಕೊಂಡು ಶುಚಿಯಾಗಿ ಪಾಠಕ್ಕೆ ಬರುತ್ತೇವೆ" ಎಂದರು. ಆ ಮಾತನ್ನನುಸರಿಸಿ ಉಳಿದೆಲ್ಲ ಮಹಿಳೆಯರೂ "ಆಗಲಿ, ಆಗಲಿ. ನಾವು ಕಲಿತುಕೊಳ್ಳುತ್ತೇವೆ" ಎಂದು ಆಶ್ವಾಸನೆ ನೀಡಿದರು. ಆಗ ಸಂತಸದಿಂದ

ಮುಂದುವರಿದಳು ಅಂಜು "ನಿಮ್ಮಲ್ಲಿ ಅನೇಕರು ನಕಲಿ ಒಡವೆಗಳನ್ನು ಧರಿಸಿದ್ದೀರಿ. ಇದು ಒಡವೆಗಳ ಮೇಲಿನ ನಿಮ್ಮ ವ್ಯಾಮೋಹವನ್ನು ಸೂಚಿಸುತ್ತದೆ. ಇದೆಲ್ಲಾ ಕೂಡದು. ನಿರಾಭರಣ ಸೌಂದರ್ಯವೇ ನಿಜ ವಾದ ಸೌಂದರ್ಯ. ಇಷ್ಟೊಂದು ಬೇಕುಬೇಡದ ಒಡವೆಗಳನ್ನೆಲ್ಲಾ ತಗು ಲಿಸಿಕೊಂಡು ಅಸಹ್ಯವಾಗಿರುವುದಕ್ಕಿಂತ ಯಾವ ಶೃಂಖಲೆಯ ಗೋಳೂ ಇಲ್ಲದೆ ನಿರ್ಮಲವಾಗಿರುವುದು ನೂರಕ್ಕೆ ನೂರರಷ್ಟು ಒಳ್ಳೆಯದು" ಎಂದು ಮನಮುಟ್ಟುವಂತೆ ನಯವಾಗಿ ತಿಳಿಯ ಹೇಳಿದಳು ಮತ್ತೆ.

"ಆಗಲಿ, ಟೀಚರ್ ! ನೀವು ಹೇಳಿದಂತೆಯೇ ಕೇಳೋಣ."

ಅವರೆಲ್ಲರ ಹುರುಪು ಮತ್ತು ವಿಧೇಯತೆಗಳನ್ನು ನೋಡಿ ನನಗೆ ನಿಜವಾಗಿಯೂ ಆನಂದವೆನಿಸಿತು. ಅಂಜೂ ಪುನಃ ಮುಂದುವರಿದಳು, "ಒಡವೆ ವಸ್ತುಗಳೇ ನಮಗೆ ಶೃಂಖಲೆ. ಅವು ಏನೇನೂ ಇಲ್ಲದಿರುವುದೇ ತುಂಬ ಒಳ್ಳೆಯದು. ಶಾಸ್ತ್ರಗಳಲ್ಲಿ ಕುರುಡು ನಂಬಿಕೆ ಇರಲೇಕೂಡದು. ನಮ್ಮ ಆಚಾರ ವ್ಯವಹಾರಗಳಿಗನುಗುಣವಾಗಿ ಬದಲಾಗಲೇಬೇಕು. ಅದ ರಂತೆಯೇ ನೀವೂ ಬದಲಾಗುವ ಸಾಹಸ ಮಾಡಿರಿ..."

ಎಲ್ಲರೂ 'ಆಗಲಿ, ಆಗಲಿ' ಎಂದು ಒಪ್ಪಿಗೆ ಸೂಚಿಸಿದರು. ಟೀಚರ್ ರತ್ನಮಾಲ ಪಾಠಹೇಳಲು ಕಾದು ನಿಂತಿದ್ದಳು. ನಾವು ಅವಳಿಗೆ ಪಾಠ ಹೇಳಲು ಅವಕಾಶ ಕಲ್ಪಿಸುವ ಉದ್ದೇಶದಿಂದ ಅಲ್ಲಿಂದ ಹೊರಡಬೇಕಾ ಯಿತು. ನಾನು ನಮ್ಮ ಮನೆಯಕಡೆ ಹೊರಡುವ ಬಸ್ಸು ಹತ್ತಿದಾಗ ಅಂಜು ಮನೆಯ ಕಡೆ ಹೋಗುವ ಬಸ್ಸೂ ಬಂದಿತು. ಅವರೂ ಆ ಕೂಡಲೇ ಹತ್ತಿದರು. ನಾನು ಮನೆಯನ್ನು ಸೇರಿ ಊಟ ಮಾಡಿದ ನಂತರ ಪತ್ರಿಕೆಯೊಂದನ್ನು ತಿರುವಿಹಾಕುತ್ತ ಕುಳಿತೆ. ಅದರಲ್ಲಿ 'ಇಂದ್ರಾಣಿ' ಎಂಬ ಸ್ತ್ರೀ ಬರೆದ ಲೇಖನ ಮನವನ್ನು ಸೆಳೆಯಿತು. ಹಾಗೇ ಅದರ ಮೇಲೆ ಕಣ್ಣಾಡಿಸಿದೆ. ಅದು ಸ್ತ್ರೀ ಸ್ವಾತಂತ್ರ್ಯವನ್ನು ಕುರಿತದ್ದು. ಎಲ್ಲಾ ಕ್ಷೇತ್ರಗಳಲ್ಲೂ ಸ್ತ್ರೀಯರಿಗೆ ಸಮಾನಾವಕಾಶವಿರಬೇಕೆಂದೂ, ಸ್ತ್ರೀ ವಿದ್ಯಾಭ್ಯಾಸಕ್ಕೆ ಯಾವತ್ತೂ ಆದ್ಯತೆ ನೀಡಬೇಕೆಂದೂ ಈಗಲೂ ವಿದ್ಯಾ

ವಂತ ಮಹಿಳೆಯರಿಗೆ ವೈಯಕ್ತಿಕ, ಆರ್ಥಿಕ ಸ್ವಾತಂತ್ರ್ಯ ಇಲ್ಲದಿರುವುದು ಅತ್ಯಂತ ಶೋಚನೀಯ ಎಂದು ಮುಂತಾಗಿ ಒಡಲ ಸಂಕಟವನ್ನು ತೋಡಿ ಕೊಂಡಿದ್ದಳು. ಅದನ್ನು ಆದ್ಯಂತ ಓದಿದೆ. ಲಲಿತಮೂರ್ತಿ ಚಿತ್ರಭಿತ್ತಿ ಯಲ್ಲಿ ಮೂಡಿನಿಂತಳು. ಒಡನೆ ಯೋಚನೆಯಲೆಗಳು ಅಲ್ಲಿಂದಲ್ಲೇ ಸ್ತಬ್ಧ ವಾಗಿ ಮನಃಪಥದಲ್ಲಿ ಈ ವಿಚಾರಶೀಲರು ಬುದ್ಧಿವಂತರು ದೀನದಲಿತರು ಎನಿಸಿದ ದೇಶದ ಭಗಿನಿಯರು ಸಾಗಿಹೋದರು. ಹಾಗೇ ಯೋಚಿಸಿದರೆ ಬಹುತೇಕ ಮಹಿಳೆಯರು ನಾಲ್ಕು ಗೋಡೆಯೊಳಗೇ ಇರುವುದರಿಂದ ಆರ್ಥಿಕ–ವೈಯಕ್ತಿಕ ಸ್ವಾತಂತ್ರ್ಯವಿರುವುದಿಲ್ಲ ಎಂಬುದು ಕರತಲಾಮಲಕ. ಯಾರು ಸದಾ ಪತಿಯ ಹಿಂಬಾಲಕರಾಗಿ–ಭೋಗವಸ್ತುವಾಗಿ ಇರುತ್ತಾರೋ ಅಂತಹವರ ಕೈಯಲ್ಲಿ ನಾಲ್ಕು ಕಾಸು ಓಡಾಡುವುದು ದಿಟ. ಇದು ಒಂದನೆಯ ವರ್ಗವಾದರೆ ಎರಡನೆಯ ವರ್ಗ ಹೊರಹೋಗಿ ದುಡಿಯು ವವರದು. ಅವರಲ್ಲಿ ಅನೇಕರು ಒಬ್ಬರನ್ನೊಬ್ಬರು ಅರಿತು ಕಷ್ಟಸುಖಗಳಲ್ಲಿ ಸಮಭಾಗಿಗಳಾಗಿ ಅನ್ಯೋನ್ಯವಾಗಿರುತ್ತಾರೆ. ಉಳಿದವರಲ್ಲಿ ರೀತಿನೀತಿಗಳು ಬೇರೆ. ಹೆಂಡತಿಯ ದುಡಿಮೆ ಸಂಸಾರಕ್ಕಾದರೆ ಗಂಡನ ದುಡಿಮೆ ಹಾಳು ಹವ್ಯಾಸಗಳಿಗೆ ಮೀಸಲು. ಇನ್ನು ಬಡವರ್ಗದವರ ಗೋಳಂತೂ ಹೇಳು ವುದೇನು ? ಒಟ್ಟನಲ್ಲಿ ಹೆಣ್ಣೆಂಬುದು ಬಲೂ ಅಗ್ಗದ ಮಾಲು...ಜನ್ಮ ದಾರಭ್ಯ ಶೃಂಖಲಾಬದ್ಧ ಜೀವನವೇ ಅವಳಿಗೆ. ಬಾಳ್ಗುಡಿಯಲ್ಲಿ ನರಳಿ ಸತ್ತು ಮಣ್ಣಲ್ಲಿ ಮಣ್ಣಾಗಿ ಬೆರೆತಮೇಲೆಯೇ ಮುಕ್ತಿ. ಕಾರಣ ನಾರೀಶ್ರೀ ಹೃದಯಲ್ಲಿ ಅಬಲತೆ–ಅಮಾಯಕತೆ ತುಂಬಿಹೋಗಿದೆ. ಆಕೆ ಎಷ್ಟೇ ಧೀಮಂತಳಾದರೂ ಎಷ್ಟೇ ಉತ್ತುಂಗಕ್ಕೇರಿದರೂ ಸ್ನೇಹ–ಪ್ರೇಮ ಗಳ ಸುಳಿಯಲ್ಲಿ ಒಂದಲ್ಲ ಒಂದು ದಿನ ಭೂಮಿಗೆ ಕುಸಿದು ಬಿದ್ದು ಚೂರ್ಣೀ ಕೃತವಾಗುವುದು ಸಹಜ. ಎಷ್ಟೆಂದರೂ ಆಕೆ ಅಬಲೆ–ಪರಾಧೀನೆ.

ಭಾಸ್ ಪಾದರಕ್ಷೆಗಳ ಪಟಪಟ ಸದ್ದುಮಾಡುತ್ತ ಒಳಬಂದಾಗ ಆಲೋಚನಾ ಸರಣಿ ತಟ್ಟನೆ ತುಂಡುಗಡಿಯಿತು. ನಾನು ಎದ್ದು ಅಲ್ಲಿಗೆ ಹೋದೆ. ಅವನು "ಜಾನಕೀ ! ಈ ಸಲ ಜಿನೀವಾ ಸೈನ್ಸ್ ಕಾಂಗ್ರೆಸ್ ಸಮ್ಮೇಳನಕ್ಕೆ ಹೋಗಬೇಕಾಗಿದ್ದ ಡೈರೆಕ್ಟರ್ ಹೃದಯಾ ಘಾತವಾಗಿ

ಮಲಗಿದ್ದಾರೆ. ಅವರ ಸರದಿ ಈಗ ನನ್ನ ಪಾಲಿಗೆ ಬಂದಿದೆ. ಹೊರಡು ವುದು ನಾಳೆಯೇ. ಅಷ್ಟರೊಳಗಾಗಿ ನನ್ನ ಪ್ರಬಂಧ ತಯಾರಾಗಬೇಕು. ಈದಿನ ನಾನು ಮನೆಗೆ ಬರುವುದು ತಡವಾಗುತ್ತೆ. ಬೇಗನೆ ಚಹ ಕೊಡು" ಎಂದ ಅವಸರವಾಗಿ.

ಆಕ್ಷಣವೇ ಒಳಹೋಗಿ ಚಹ ತಯಾರಿಸಿ ಬಿಸ್ಕತ್ತುಗಳೊಡನೆ ತಂದೆ. ಭಾಸ್ ಚಹ ಸೇವಿಸಿ ತನಗೆ ಬೇಕುಬೇಕಾದ ಕೆಲವು ಫೈಲ್‌ಗಳು ಮತ್ತು ಕೆಲವು ಗ್ರಂಥಗಳು ಇನ್ನೂ ಏನೇನೋ ಲೇಖನಗಳನ್ನು ತೆಗೆದುಕೊಂಡು ಆಫೀಸಿಗೆ ಹೊರಟ. ನಾನು ಅವನೊಂದಿಗೆ ಹೋಗಿ ಅಂಜೂ ಮನೆಯಲ್ಲಿ ಇಳಿದೆ. ಸತ್ಯಭಾಮಾ ಇಲ್ಲದಿರುವುದರಿಂದ ಮನೆಯಲ್ಲಿ ಕಾಲಹರಣ ಕಷ್ಟ. ಅವನಿಗೆ ಮನೆಗೆ ಹೋಗುವಾಗ ಹೀಗೆಯೇ ಬಂದು ನನ್ನನ್ನು ಕರೆದು ಕೊಂಡು ಹೋಗು ಎಂದು ಹೇಳಿದ್ದರಿಂದ ಬಸ್ ಹಿಡಿಯುವ ತೊಂದರೆಯಿರಲಿಲ್ಲ. ನಾನು ಕರಗಂಟೆಯನ್ನು ಒತ್ತಿದೊಡನೆ ತನ್ನ ಮಕ್ಕಳು ಬಂದರೆಂದೇ ಅಂಜು ಬಾಗಿಲು ತೆರೆದು ನನ್ನನ್ನು ನೋಡಿ "ಅರೆ! ಈ ಹೊತ್ತಿನಲ್ಲಿ, ಏನಾಶ್ಚರ್ಯ ?" ಎಂದಳು.

"ಓ ! ನಿನಗೆ ಸತ್ಯಭಾಮಾ ಮನೆಯಲ್ಲಿಲ್ಲ ಎಂಬುದು ಮರೆತು ಹೋಗಿದೆಯೇ ?"

"ನಿಜ ಜಾನಕೀ ! ಒಬ್ಬಳೇ ಆಗಿದ್ದಿ, ಬಾ ಒಳಗೆ."

"ಈದಿನ ಭಾಸ್ ಸಹ ಇಲ್ಲ. ಬರುವುದು ರಾತ್ರಿಯಾಗುತ್ತೆ" ಎಂದ ನಾನು ಭಾಸ್ ಜಿನೀವಾ ಸಮ್ಮೇಳನಕ್ಕೆ ಹೋಗುವ ವಿಚಾರವನ್ನು ತಿಳಿಸಿದೆ. ಇನ್ನಷ್ಟು ಹೊತ್ತಿನೊಳಗಾಗಿ ರಾಗಿಣಿ–ತಾರಿಣಿಯರೂ ಮನೆಗೆ ಬಂದರು. ಎಲ್ಲರೂ ಕೂಡಿ ಚಹಾಪಾನ ಮಾಡಿದನಂತರ ನಾನೆಂದೆ "ಭಾಸ್ ಹಿಂದಿರುಗು ವುದು ನಾಲ್ಕೈದು ದಿವಸ, ಒಬ್ಬಳೇ ಆದುದರಿಂದ ಬೇಸರವಾಗುತ್ತೆ: ಭಾನು ವಾರ ಎಲ್ಲಾ ಅಲ್ಲೇ ಬಂದುಬಿಡಿ ಎಲ್ಲರೂ ಕೂಡಿ ಆನಂದವಾಗಿರೋಣ."

ಇಲ್ಲಿಗೇ ಬನ್ನಿ ಆಂಟೀ !" ಎಂದಳು ರಾಗಿಣಿ.

"ಅವರಿಲ್ಲಿಗೆ ಬರುವುದಕ್ಕಿಂತ ನಾವು ಹೋಗುವುದೇ ಉತ್ತಮ. ಅಲ್ಲಿ ಓಡಾಡಲು ಸ್ಥಳವಿದೆ. ಈ ಕಿಷ್ಕಿಂಧೆಯಲ್ಲಿ ಆಂಟಿ ಏನು ಮಾಡಿಯಾರು ?" ಎಂದಳು ತಾರಿಣಿ.

"ಬರಲು ನನ್ನದೇನೂ ಅಡ್ಡಿಯಿಲ್ಲ. ಮಕ್ಕಳು ಅಲ್ಲಿಗೆ ಬಂದರೆ ಓಡಾಡಲು ಅನುಕೂಲ. ತಾರಿಣಿ ಹೇಳಿದ್ದು ಸರಿ" ಎಂದೆ ನಾನು.

ಅಷ್ಟರಲ್ಲಿ ರಾಘವ ಆಫೀಸಿನಿಂದ ಆಗಮಿಸಿದರು. ಅವರು ನನ್ನನ್ನು ನೋಡುತ್ತಲೂ ನಗುಮುಖದಿಂದ "ಬಂದು ಎಷ್ಟು ಹೊತ್ತಾಯಿತು ? ಈಗ ಹೇಗಿದ್ದೀರಿ ?" ಎಂದರು ಸಂದರ್ಭೋಚಿತವಾಗಿ.

"ಈಗಷ್ಟೆ ಬಂದೆ."

"ಇಂದು ರಾಷ್ಟ್ರಪತಿಯವರ ಭವನದಲ್ಲಿ ಸುಬ್ಬಲಕ್ಷ್ಮಿಯವರ ಸಂಗೀತ ವಿದೆ. ಹೋಗಿಬರೋಣವೇ ?"

"ಆಗಬಹುದು."

"ಭಾಸ್ ಬರುತ್ತಾರೆಯೇ ?"

ಅವನು ಜಿನೀವಾಕ್ಕೆ ಹೋಗುತ್ತಿರುವ ವಿಷಯುವನ್ನು ತಿಳಿಸಿ "ಅವನು ಬರುವಂತಿಲ್ಲ. ಮನೆಗೆ ಬರುವುದೇ ರಾತ್ರಿ ಹತ್ತರಮೇಲಾಗಬಹುದು" ಎಂದೆ.

"ಹಾಗಾದರೆ ಎಲ್ಲರೂ ಹೊರಡಿ."

ಎಲ್ಲರೂ ಅವಸರವರವಾಗಿ ಹೊರಟರು. ಆ ಅಪೂರ್ವವಾದ ರಾಗ ಮಾಧುರ್ಯ ಕರ್ಣದೇಶದಲ್ಲಿ ಆಗಲೇ ಧುಮುಧುಮಿಸಹತ್ತಿದೆ. ಭಕ್ತಿರಸ ಜನ್ಯವಾದ ಸಂಗೀತ, ಚಿತ್ತಾಕರ್ಷಕವಾದ ಆಕೆಯ ಭಾವಭಂಗಿ ಕಣ್ಮುಂದೆ ನಲಿಯತೊಡಗಿದೆ. ಬಹಳ ಹಿಂದೊಮ್ಮೆ ಅವರ ಸಂಗೀತವನ್ನು ಕೇಳಿದ್ದುಂಟು ಈಚೆಗೆ ಕೇಳಿರಲಿಲ್ಲ. ಕಾರು ರಾಜಮಾರ್ಗದಲ್ಲಿ ಹರಿದು ರಾಷ್ಟ್ರಪತಿ ಭವನ ವನ್ನು ತಲುಪಿದಾಗಲೇ ಅತ್ಯಧಿಕ ಸಂಖ್ಯೆಯಲ್ಲಿ ಕಾರುಗಳು ನೆರೆದಿದ್ದುವು.

ಆ ಬೃಹತ್ ಕೊಠಡಿಯು ತುಂಬೆಲ್ಲ ಕಿಕ್ಕಿರಿ ತುಂಬಿತ್ತು ಜನಸಮುದಾಯ. ಸಂಗೀತ ಕಲಾಭಿಮಾನಿಗಳ ಸಮ್ಮೇಳನವನ್ನು ನೋಡಿದಾಗ ಈ ದಿನ 'ಎಂತಹ ಸುದಿನ !' ಎಂದುಕೊಂಡೆ ನಾನು.

ಕೆಲವೇ ನಿಮಿಷಗಳಲ್ಲಿ ಸಂಗೀತ ಆರಂಭವಾಯಿತು.

ಮನೋಜ್ಞವಾದ ಗೌಳರಾಗಾಲಾಪನೆ ಆರೋಹಣ-ಅವರೋಹಣಗಳ ಸಂಬದ್ಧತೆ–ಸಂಶೀಲತೆಗಳ ಮೆಟ್ಟಿಲೇರಿ ಮೃದುಮಧುರವಾಗಿ, ಭಕ್ತಿರಸ ಪೂರ್ಣವಾಗಿ ತಾಳ–ಲಯಬದ್ಧವಾಗಿ ಹೃತ್ಕುಂಡದಿಂದ ಹೊಮ್ಮಿ ಶ್ರೀಕಂಠ ಮಾಧುರ್ಯದೊಡನೆ ಹರಿಯುವ ಅಮೋಘವಾದ ರಾಗರಸಧಾರೆ ಮನಃ ಪ್ರಾಣಗಳನ್ನು ಮಂತ್ರಮುಗ್ಧಗೊಳಿಸುವುದು ಮಾತ್ರವಲ್ಲ ಸ್ವರ್ಗದ ಮೆಟ್ಟಿಲಿಗೂ ಒಯ್ಯುವಂತಹ ಅಪೂರ್ವ ಸನ್ನಿವೇಶ. ಒಮ್ಮೆ ನೋಟವನ್ನು ಸುತ್ತಲೂ ಹರಿಸಿದೆ. ಅಹ, ಸಹಸ್ರ ಕಣ್ಣಾಲಿಗಳು ಅತ್ತಲೇ ಕೇಂದ್ರೀಕೃತವಾಗಿವೆ. ಯಾರೊಬ್ಬರೂ ಸಂಗೀತಸುಧೆಯಿಂದ ವಿಮುಖರಾಗಿಲ್ಲ. ರಸಾರ್ದ್ರ ಹೃದಯಗಳ ಅಂತರಾಳದಿಂದ ಭಕ್ತಿಭಾವ ಹೊಮ್ಮಿ ಮುಖ ಬಿಂಬದಲ್ಲಿ ಭಾವೋತ್ಕರ್ಷೆಯನ್ನು ಉಕ್ಕಿಸುತ್ತಿರುವಂತೆ ಭಾಸವಾಯಿತು. ಅಂಜೂ ರಾಗೂ ಮಾತ್ರವಲ್ಲ ಮಕ್ಕಳೂ ಮೈಮರೆತು ಕೇಳುತ್ತಿದ್ದಾರೆ ! ನನ್ನ ನೋಟ ಪುನಃ ಗಾನಸರಸ್ವತಿಯತ್ತ ಹೊರಳಿತು. ದೃಷ್ಟಿ–ಬುದ್ಧಿ–ಭಾವ–ಮನಸ್ಸುಗಳು ಅಂತರ್ಮುಖಿಯಾಗಿದ್ದುವು. ಬಾಹ್ಯಪ್ರಜ್ಞೆಯ ಲಕ್ಷಣವೇ ಇರಲಿಲ್ಲ. ಬೇರೆ ಎಷ್ಟೋ ಸಂಗೀತ ಕಛೇರಿಗಳನ್ನು ನೋಡಿದ್ದೆ. ಆದರೆ ಎಲ್ಲಿಯೂ ಇಷ್ಟೊಂದು ಭಕ್ತಿಭಾವ ಘನೀಭೂತವಾಗಿರಲಿಲ್ಲವೇನೋ ಎನಿಸಿತು ನನಗೆ.

ಭಾಸ್ ಒಬ್ಬನೇ ಆಫೀಸಿನಲ್ಲಿ ಹೆಣಗುತ್ತಿದ್ದಾನೆ. ಬಿಡುವು ಇದ್ದಿದ್ದರೆ ಅವನೂ ಆನಂದದಿಂದ ಕೇಳಬಹುದಾಗಿತ್ತು ಎಂಬ ಯೋಚನೆ ಬಾರಿ ಬಾರಿಗೂ ಮೂಡಿತು. ನಾನು ನಿರಾಶೆಯ ನಿಟ್ಟುಸಿರುಬಿಟ್ಟೆ.

ಅಂಜೂ ಅದೇ ಸಮಯಕ್ಕೆ ಪಿಸುಮಾತಿನಲ್ಲಿ "ಭಾಸ್ ಇದ್ದಿದ್ದರೆ ಚೆನ್ನಾಗಿತ್ತು."

"ನಿಜವಾಗಿಯೂ ನನಗೂ ಅದೇ ಯೋಚನೆಯಾಗುತ್ತಿದೆ" ಅಷ್ಟೇ ಪಿಸುದನಿಯಲ್ಲಿ ನಿರಾಸೆಯಿಂದ ನುಡಿದೆ.

"ಬಿಡು, ಇನ್ನೊಮ್ಮೆ ಕೇಳಬಹುದು."

ಸಂಗೀತ ಕಛೇರಿ ಒಂಭತ್ತು ಗಂಟೆಯವರೆಗೂ ನಡೆಯಿತು. ಕೊನೆಯದಾಗಿ ಕಾಪಿರಾಗದಲ್ಲಿ 'ಆಡಿಸಿದಳೆಶೋದ ಜಗದೋದ್ಧಾರನಾ' ಎಂಬ ದಾಸರ ಪದ. ಆ ಸಂಗೀತ ಕೃತಿಗೂ ಭಾವರಸ ಹೊಂದಿ ಬಂದ ಭಕ್ತಿಯೋಗ ನಿಜವಾಗಿಯೂ ಒಂದು ವಿಶೇಷವೇ. ಸಂಗೀತ ಮುಗಿದಾಗ ಎದ್ದು ಹೋಗಿ ಶ್ರೀಮತಿ ಸಬ್ಬಲಕ್ಷ್ಮಿಯನ್ನು ಆತ್ಮ ಪೂರ್ವಕವಾಗಿ ಅಭಿನಂದಿಸಿ ಬಂದೆ. ಮನಃಪ್ರಾಣಗಳು ಆನಂದಾಬ್ಧಿ ಯಲ್ಲಿ ಮುಳುಗಿ ಬೆಂಡು ತೇಲಿದಂತೆ ತೇಲುತ್ತಿದ್ದುವು. ಕುರ್ಚಿಗಳನ್ನು ಬಿಟ್ಟೆದ್ದು ಹೊರಬರುತ್ತಿದ್ದ ಹರಿದ್ರಾಕುಂಕುಮ ಸುಶೋಭಿತರಾದ ಮಹಿಳಾ ವರ್ಗ ಇನ್ನೂ ಆ ಭಾವಸಮಾಧಿಯಲ್ಲಿ ಮುಳುಗಿ ತಲೆಯನ್ನು ತೂಗುಯು ತಿದ್ದುದನ್ನು ಕಂಡೆ. ಭಾವುಕತೆಯಲ್ಲಿ ತಮ್ಮ ತನ್ಮೊಳಗೇ ಹಾಡಿ ಹೊಗಳುತಿದ್ದ ಪುರುಷವರ್ಗವನ್ನೂ ಕಂಡೆ. ರಸಾರ್ದ್ರವವಾದ ನನ್ನ ಮನಃಪ್ರಾಣಗಳಲ್ಲಿ ಸಂಬದ್ಧವಾದಂತೆ...ಸಂಗೀತದ ಮಧುರರಾಗಾಲಾಪನೆ ಇನ್ನೂ ಪ್ರತಿಧ್ವನಿಸುತ್ತಲೇ ಇದೆ. ಇನ್ನಷ್ಟು ಹೊತ್ತು ಕೇಳಬಲ್ಲೆನಾಗಿ ದ್ದರೆ ಎಂದು ಹಾತೊರೆಯುತಿತ್ತು ಎದೆಯಬನದ ಹಕ್ಕಿ.

ನಾವು ಮುನೆಮುಟ್ಟಿ ಊಟಮುಗಿಸಿ ಎಷ್ಟೋ ಹೊತ್ತು ಕಾದ ಮೇಲೆ ಭಾಸ್ ಬಂದ. ಅಲ್ಲಿ ಹೆಚ್ಚು ಹೊತ್ತು ನಿಲ್ಲದೆ ತಾನು ಜಿನೀವಾ ಸಮ್ಮೇಳನಕ್ಕೆ ಹೋಗುತ್ತಿರುವ ವಿಚಾರವನ್ನು ಅರುಹಿದನಂತರ

"ಹೊರಡೋಣವೇ ಜಾನಕೀ ! ಹೊತ್ತಾಗಿದೆ" ಎಂದ ಆತುರದಿಂದ.

"ಅಚ್ಛಾ !"

ನಾವು ಎಲ್ಲರಿಗೂ 'ಗುಡ್‌ನೈಟ್' ಹೇಳಿಹೊರಟಾಗ ಹತ್ತೂವರೆ ಗಂಟೆ. "ಹಣ್ಣು-ಹಾಲು ಕೊಡು. ಇಂದು ಊಟ ಬೇಡ" ಎಂದ ಭಾಸ್ಕರ್ ದಾರಿಯಲ್ಲಿ.

ಅದರಂತೆಯೇ ಮನೆಗೆ ಹೋದಮೇಲೆ ಹಣ್ಣು ಹಾಲು ಮಾತ್ರ ಕೊಟ್ಟೆ. ಅನಂತರವೇ ಸಂಗೀತದ ರಸದೂಟವನ್ನು ಉಣಬಡಿಸಲು ಸಮಯದೊರಕಿದ್ದು. ಆದರೆ, ಅವನಿಗೆ ಕೇಳುವಷ್ಟು ಸಹನೆಯಾಗಲೀ ಸಮಯವಾಗಲೀ ಇರಲಿಲ್ಲವಾದ್ದರಿಂದ ನಾನು ತಿಳಿಯಹೇಳಿದ್ದೂ ಸಹ ಒಂದೆರಡು ಮಾತುಗಳಲ್ಲಿ.

ಅವನು ಹಾಸಿಗೆಯನ್ನು ಸೇರಿ ಮೈಮೇಲೆ ಹೊದ್ದಿಕೆಯನ್ನು ಎಳೆದು ಕೊಳ್ಳುತ್ತ ಅಂದ.

"ಹಿಂದೆ ಅವರ ಸಂಗೀತವನ್ನು ಅನೇಕ ಬಾರಿ ಕೇಳಿರುವೆ. ಈಗ ಕೇಳುವುದು ರೇಡಿಯೋಗಳಲ್ಲಿ ಮಾತ್ರ. ಸಭೆಗೆಹೋಗಿ ಕುಳಿತುಕೊಳ್ಳುವಷ್ಟು ಸಮಯವಾದರೂ ಎಲ್ಲಿದೆ ? ಇರಲಿ ಬಿಡು; ಮುಂದೆ ಇಂತಹ ಸಮಯ ಸಂದರ್ಭಗಳಲ್ಲಿ ಕಾಲಾವಕಾಶ ಒದಗಿಸಿಕೊಂಡು ರಸಜ್ಞತೆಯನ್ನು ಪಡೆದು ಕೊಳ್ಳಬೇಕು ಎಂಬ ಭಯಕೆ ತುಂಬಾ ಇದೆ; ನೋಡೋಣ ಕಾಲಗತಿ ಹೇಗೆ ಬರುತ್ತೆ..."

ನಾನು ಸ್ವಲ್ಪ ಆಲೋಚಿಸಿ ಅಂದೆ "ನಿನ್ನ ಮನಸ್ಸು ಸ್ವಲ್ಪ ಅತ್ತಿತ್ತ ಹರಿದರಲ್ಲವೇ ಹೊರಜಗತ್ತಿನ ಸಂಪರ್ಕ–ಅನುಭವ–ಅನುರಕ್ತಿಗಳ ಅನು ಬಂಧ ? ಮುಖ್ಯವಾಗಿ ಮನಸ್ಸು ಮಾಡಬೇಕು. ಆಗಲೇ ಸಮಯ ಸಿಗಬೇಕಾದರೆ."

"ಅದೂ ಹೌದು; ಜಾನಕೀ ! ಸಧ್ಯ ತಲೆ ತುಂಬಾ ಇರುವುದು ಸೈನ್ಸ್–ಸೈನ್ಸ್, ಮುಂದೆ ನೋಡೋಣ."

"ಹಾಗಾದರೆ ಇಂತಹ ರಾಗರಸಾತ್ಮಕವಾದ ಪ್ರಸಂಗಗಳು ಒದಗಿ ಬಂದಾಗಲೆಲ್ಲಾ ನಿನಗೆ ನೆನಪು ಮಾಡಿಕೊಡುವೆ. ನೀನು ದಯವಿಟ್ಟು ಬಿಡುವು ಮಾಡಿಕೋ."

"ಓ ! ಅದು ತುಂಬಾ ಕಷ್ಟದ ಮಾತು. ಯಾವಾಗಲಾದರೊಮ್ಮೆ ಅತ್ಯಂತ ಶ್ರೇಷ್ಠವಾದ ಸಂದರ್ಭಗಳಲ್ಲಿ ಬಿಡುವು ಮಾಡಿಕೊಳ್ಳಬಹುದು. ಆಗಲೂ ತಲೆಯುಲ್ಲಿ ಸೈನ್ಸ್ ತುಂಬಿರುತ್ತೆ."

"ಸರಿ...ನಿನ್ನ ಇಷ್ಟ. ಎಂದರೂ ಇಂತಹ ಸಂದರ್ಭಗಳನ್ನು ಕಳೆದು ಕೊಳ್ಳುವುದು ದುರದೃಷ್ಟಕರ."

"ಏನು ಮಾಡೋಣ. ಅವರಿಗೆ ಹೇಗೆ ಸಂಗೀತ ಪ್ರಧಾನವೋ ಹಾಗೆಯೇ ಸೈನ್ಸ್ ಪ್ರಧಾನ ನನಗೆ. ಅವರದು ರಾಗರಸಾಯನ: ನಮ್ಮದು ವಿಜ್ಞಾನ ರಸಾಯನ."

ನಾನು ಹಾಗೇ ಯೋಚಿಸಿದೆ....J. Franklin Dobi ಎಂಬ ಮಹ ನೀಯ ನುಡಿದ ಮಾತೊಂದು ನೆನಪಿಗೆ ಬಂತು,

"You have to take chances for peace, just as you have to take chances in war."

ನಾನು ಏನೊಂದನ್ನೂ ನುಡಿಯದೆ, ವಿಚಾರಾ ಸಕ್ತಿಯಲ್ಲಿ ಸುಮ್ಮನಾದೆ ಭಾಸ್ ಭಾವನಾಪೂರ್ವಕವಾಗಿ ಅಂದ,

"ನಾವು ಯೋಚಿಸುವುದೊಂದಾದರೆ ಆಗುವುದಿನ್ನೊಂದು. ನಾನು ಜಿನೀವಾಕ್ಕೆ ಹೋಗುವ ವಿಚಾರ ಕನಸಿನಲ್ಲೂ ಕಂಡಿರಲಿಲ್ಲ. ನಮ್ಮ ಪ್ರತಿ ಯೊಂದು ಕ್ಷಣವೂ ದೈವದತ್ತವಾದುದು ಎಂಬುದಕ್ಕೆ ಇದು ಸಾಕ್ಷಿ."

"ನಿಜ....ಭಾಸ್."

ಭಾಸ್ ಸ್ವಿಚ್ ಒತ್ತಿ ದೀಪ ನಂದಿಸಿದ.

— ೦ —

## ಅಧ್ಯಾಯ

## ೧೧

ಬೆಳಗಿನಿಂದ ಟೆಲಿಫೋನ್ ಸಂಪು ಹೂಡಿತ್ತು.

ಪಾಂಚಾಲಿವರ್ಮಳ ಮನೆಯಿಂದ ಟೆಲಿಫೋನ್ ಎಕ್ಸ್ ಚೇಂಜಿಗೆ ಟೆಲಿಫೋನ್ ಮಾಡಿ ತಿಳಿಸಿ ಬಂದಿದ್ದೆ. ಅದು ಇನ್ನೂ ದುರಸ್ತಿಯ ಹಂತದಲ್ಲಿ ಇದ್ದುದರಿಂದ ನಿಶ್ಶಬ್ದ–ನಿರಾಳ.

ಭಾಸ್ ಹೊರಟದ್ದು ಬೆಳಗ್ಗೆ ಒಂಭತ್ತು ಗಂಟೆಯ ಸಮಯದಲ್ಲಿ. ಅವನನ್ನು ಬೀಳ್ಕೊಡಲು ವಿಮಾನ ನಿಲ್ದಾಣಕ್ಕೆ ಹೋದವಳು ಹಾಗೇ ಡೈರೆಕ್ಟರ್ ಮನೆಗೆ ಹೋದೆ. ಒಳಹೋಗಿ ರೋಗಿಯನ್ನು ನೋಡುವುದು ನಿಷೇಧವಿದ್ದುದರಿಂದ ನಾನು ಅವರ ಮಡದಿಯೊಂದಿಗೆ ಮಾತಾಡಿದೆ. ಅವರು ಚೇತರಿಸಿಕೊಳ್ಳುತಿದ್ದುದು ತಿಳಿದುಬಂತು. ಸಂತಸದಿಂದ ಶುಭ ಹಾರೈಸಿ ಹೊರಟುಬಂದೆ. ಈದಿನ ಶಾಲೆಗೆ ಹೋಗಲಿಲ್ಲವಾದ್ದರಿಂದ ನನಗೆ ಪುಸ್ತಕ ಪತ್ರಿಕೆಗಳೇ ಸಂಗಾತಿ. ರಾಗಮಯಿಗೆ ಫೋನ್ ಮೂಲಕ 'ಇಲ್ಲಿಯೇ ನಾಲ್ಕುದಿನ ಇರು' ಎಂದು ಹೇಳುವ ಯೋಚನೆಯಿತ್ತು. ನಿನ್ನೆ ಸಂಗೀತದ ಅಮಲಿನಲ್ಲಿ ಅವಳಿಗೆ ಹೇಳುವುದನ್ನು ಮರೆತಿದ್ದೆ. ಈಗ ಪಾಂಚಾಲಿ ಮನೆಗೆ ಹೋಗಿ ಹೇಳುವೆನೆಂದರೂ ಅವಳು ಈ ವೇಳೆಯಲ್ಲಿ ಮನೆಯಲ್ಲಿರುವುದಿಲ್ಲ ಎಂದು ಯೋಚಿಸಿ ಸುಮ್ಮನಾದೆ. ಕಾಲುಗಳು ಯಾಂತ್ರಿಕವಾಗಿ ವರಾಂಡದ ಕಡೆ ನಡೆದುವು. ಭಾರವಾದ ಹೃದಯವನ್ನು ಹೊರಲಾರದೆ ಹೊತ್ತು ನಿಂತೆ. ಯಾಕೋ. ಏನೋ ಶುಕ ಸಾರಿಕೆಗಳ ಕೊರಳದನಿ ಅವಿರತವಾಗಿ ಕೇಳಿ ಬರುತ್ತಿದೆ ಲೋಕ ಲೋಕಾಂತರಗಳ ಸಂದೇಶದಂತೆ.

೦ ೦ ೦ ೦

ನಾನು ಕಿಟಕಿಯಲ್ಲಿ ಮೊಗವಿಟ್ಟಾಗ ನಮ್ಮ ಮನೆಯಕಡೆ ಪಾಂಚಾಲಿ ವರ್ಮ, ನೀಲಾರಾಂ ಆತುರಾತುರವಾಗಿ ಬರುತಿದ್ದುದು ಕಾಣಿಸಿತು. ಏಕೆ ಎಂಬುದು ಅರ್ಥವಾಗಲಿಲ್ಲ. ಇಂದು ಮೀಟಿಂಗ್ ಕರೆದಿದ್ದೇನೆಯೇ ಎಂಬ ಯೋಚನೆಯೂ ಬಂತು. ಅರೆ, ಎಲ್ಲಿಯ ಮೀಟಿಂಗ್ ? ನಾನು ಯಾರನ್ನೂ ಕರೆಯಲಿಲ್ಲ. ಸುಮ್ಮನೆ ಬಂದರೆ ಇಷ್ಟೊಂದು ಆತುರವೇಕೆ? ಪ್ರಶ್ನೆಗಳ ಮೇಲೆ ಪ್ರಶ್ನೆಗಳೆದ್ದುವು. ನಾನು ಹೊರಬಂದು ಅವರಿಗಾಗಿ ಕಾದು ನಿಂತೆ. ಅಷ್ಟರೊಳಗಾಗಿ ನಮ್ಮ ಆಫೀಸಿನ ವ್ಯಾನು ಸರ್ರನೆ ಬಂದು ಪೋರ್ಟಿಕೋ ದಲ್ಲಿ ನಿಂತಿತು. ಅದರಿಂದ ಭಾಸ್ವಾನನ ಸಹ ಅಧಿಕಾರಿಗಳು ಇಳಿದರು. ನೋಡಿದರೆ ಯಾರ ಮುಖದಲ್ಲೂ ಕಳೆಯೇ ಇಲ್ಲ. ಅವರು ಮೆಟ್ಟಿಲು ಹತ್ತುತ್ತಲೇ ಅಂದರು "ಕ್ಷಮಿಸಿ ಮೇಡಮ್ ! ನಮ್ಮ ವಿಮಾನವನ್ನು ಯಾರೋ ದುಷ್ಟರು ಹೈಜಾಕ್ ಮಾಡಿ ಜರ್ಮನಿಗೆ ಕೊಂಡೊಯ್ದಿದ್ದಾರಂತೆ !"

ವಿಷಯ ಕೇಳಿ ನನ್ನ ಹೃದಯಕುಂಡ ಸಿಡಿದೊಡೆಯಲಿರುವಂತೆ ವ್ಯಾಪ್ತಿಗೆ ಮೀರಿ ಮಿಡಿಯತೊಡಗಿತು. ನಾನು ತಲ್ಲಣಿಸಿ ಕುರ್ಚಿಯ ಮೇಲೆ ಕುಸಿದು ಕುಳಿತಾಗಲೇ ಪಾಂಚಾಲಿವರ್ಮ ಮತ್ತು ನೀಲಾರಾಂ ಬಳಿಗೆ ಬಂದರು.

ನಾನು ಎರಡು ಕೈಗಳನ್ನೂ ಜೋಡಿಸಿಕೊಂಡು ನಮ್ಮವರ ಜೀವಕ್ಕೆ ಯಾವ ಅಪಾಯವೂ ಒದಗದಿರಲಿ ಎಂದು ಲಾರ್ಡ್ ಕೃಷ್ಣನನ್ನು ಮನಃ ಪ್ರಾಣಪೂರ್ವಕವಾಗಿ ಬೇಡಿಕೊಂಡೆ. ಕಣ್ಣುಗಳಲ್ಲಿ ಕಂಬನಿ ಧಾರಾಕಾರ ವಾಗಿ ಇಳಿದು ಕೆನ್ನೆಯ ಮೇಲಿಳಿದು ದೇಹದಾದ್ಯಂತ ಚಿಲ್ಲನೆ ಚಳಿ ಮೂಡಿತು. ಆಗ ನೀಲಾರಾಂ ಪಾಂಚಾಲಿವರ್ಮ ನನ್ನನ್ನು ಸುತ್ತುವರಿದು "ನೀನೇನೂ ಧೈರ್ಯಗೆಡಬೇಡ. ದೇವರಿದ್ದಾನೆ !" ಎಂದು ನಾನಾರೀತಿಯ ಒತ್ತಾಸೆ ನೀಡಿದರು.

ಕೂಡಲೇ ಟೆಲಿಫೋನ್ ರಿಪೇರಿಗೆ ಕರೆ ಹೋಯಿತು. ಆತುರಕಾತುರ ಗಳಿಂದ.

ಆ ರುದ್ರಭೀಕರ ಸನ್ನಿವೇಶದಲ್ಲಿ ಒಂದೊಂದು ಕ್ಷಣವೂ ಅಗಾಧವಾದ ಚಿಂತೆಯ ಖಡ್ಗದಲುಗಿನ ಮೇಲೆ ಹರಿದಾಡುವಾಗ ಮೈ ಚಿಲ್ಲನೆ ನಡುಗಿ ರೋಮಾಂಚನವಾಗುತಿತ್ತು. ಜರ್ಮನಿ ಅಂಬಾಸಿಯ ಮೂಲಕ ಜರ್ಮನಿಗೆ ಮೇಲಿಂದಮೇಲೆ ಸಂಪರ್ಕ ಹೊಂದಿದರೂ ನಮಗೆ ದೊರೆತ ಸಮರ್ಪಕವಾದ ಉತ್ತರ ಇಷ್ಟೆ,

"ವಿಮಾನ ಇಲ್ಲಿ ಇಳಿದುದು ನಿಜ. ಅದು ಇನ್ನೂ ಆ ದುಷ್ಟ ಕೂಟದ ಹಿಡಿತದಲ್ಲಿಯೇ ಇದೆ. ಪ್ರಯಾಣಿಕರು ಅವರ ಹತೋಟಿಯಲ್ಲಿದ್ದಾರೆ. ಈವರೆಗೆ ಯಾರಿಗೂ ಪ್ರಾಣಾಪಾಯವಾಗಿಲ್ಲ."

ಅಂಜೂ, ರಾಘವ, ರಾಗಮಯಿಯರು ಸುದ್ದಿ ತಿಳಿದೊಡನೆಯೇ ಓಡಿಬಂದರು. ರಾಘವ ಅಂಬಾಸಿಗೂ ಹೋಗಿಬಂದರು. ಬೆಂಗಳೂರಿಗೆ ಸುದ್ದಿಮುಟ್ಟಿ ಮಂಜೂ ಶಾಂತಿಪ್ರಸಾದ್ ಧಾವಿಸಿ ಬಂದರು. ಯಾರು ಬಂದರೂ ಏನು ಮಾಡಿದರೂ ಪರಿಹಾರ ದೊರೆಯಲಿಲ್ಲ. ಉರುಳುವ ಒಂದೊಂದು ಕ್ಷಣವೂ ಭಯಾನಕವೇ. ಯಾವ ನಿಮಿಷದಲ್ಲಿ ಯಾವ ಸುದ್ದಿಯೋ ಎಂಬ ಆತಂಕ ಕಾಣದ ಕೈಗಳಿಂದ ಹೃದಯವನ್ನು ಹಿಂಡುತ್ತದೆ! ಸುಡುನೆತ್ತರಿನ ಝರಿ ನರನರಗಳೂ ಸೀಳಿಹೋಗುವಂತೆ ಹರಿದಾಡುತ್ತದೆ. ಹೃದಯ ತಂತುಗಳು ಕಟ್‌ಕಟ್ಟನೆ ತುಂಡು ಗರಿಯುವಂತೆ ಭಾಸವಾಗುತ್ತದೆ.

ಜನ....ಜನ. ಸುದ್ದಿ ತಿಳಿದ ಜನ ಜನ ಗೊತ್ತುಗುರಿಯಿಲ್ಲದಷ್ಟು ಮನೆಯಲ್ಲಿ ತುಂಬಿಹೋದರು. ಗಳಿಗೆ ಗಳಿಗೆಗೂ ಯಾರುಯಾರದೋ ಟೆಲಿಫೋನಿನ ಕರೆ! ಅದರ ಟಂಟಣಿ ನಾದವನ್ನು ಕೇಳಿದಾಗಲೆಲ್ಲ ಜರ್ಮನಿಯಿಂದ ಸುದ್ದಿ ಬಂತೇ? ಎಂಬ ಕಾತರ ನಮಗಾದರೆ ಕರೆ ನೀಡುವವರಿಗೂ ಅದೇ ಕಾತರತೆ. ಏನಾದರೂ ಸುದ್ದಿ ಬಂತೇ? ಬಂತೇ? ಎಂಬ ಪ್ರಶ್ನೆಯೇ ಎಲ್ಲರ ಬಾಯಲ್ಲೂ. ಕೊನೆಗೂ ಜರ್ಮನಿ ರಾಯಭಾರ ಕಛೇರಿಯಿಂದ ಸುದ್ದಿಬಂತು. ಭಯೋತ್ಪಾದಕರು ಅರ್ಧಕ್ಕಿಂತಲೂ ಹೆಚ್ಚುಮಂದಿ

ಯನ್ನು ಬಿಡುಗಡೆ ಮಾಡಿದ್ದು, ಉಳಿದ ಕೆಲವು ಮಂದಿಯನ್ನು ಒತ್ತೆಯಾಳಾಗಿ ಇಟ್ಟುಕೊಂಡು ಹಣಕ್ಕಾಗಿ ಒತ್ತಾಯಿಸಿದೆ ಎಂದು.

ಮರುದಿನವೂ ಇದೇ ಸುದ್ದಿ !

ಹಾಹಾಕಾರ !

ಕೊನೆಯ ಸುದ್ದಿ ಬಂದಾಗ ಭಯೋತ್ಪಾದಕರು ವಿಮಾನಕ್ಕೆ ಬೆಂಕಿ ಹಚ್ಚಿದರೆಂದೂ ಅದರಲ್ಲಿ ಒತ್ತೆಯಾಳಾಗಿ ಇಟ್ಟುಕೊಂಡಿದ್ದ ಕೆಲವು ಮಂದಿ ಭಸ್ಮೀಭೂತರಾದರೆಂದೂ ತಿಳಿದುಬಂತು ! ಭಾಸ್ ಬದುಕಿದ್ದಾನೆಯೇ ? ಇಲ್ಲವೇ ? ಎಂಬುದಕ್ಕೆ ದೃಢವಾದ ಮಾಹಿತಿಯೇನೂ ದೊರೆಯಲಿಲ್ಲ. ಇಲ್ಲಿಂದ ಶಾಂತಿಪ್ರಸಾದ್ ಆ ಕೂಡಲೇ ಜರ್ಮನಿಗೆ ಹೊರಟರು. ಏರ್ ಲೈನ್ಸಿನವರು ಅವರಿಗೆ ತತ್‌ಕ್ಷಣವೇ ಟಿಕೆಟ್ ದೊರಕಿಸಿಕೊಟ್ಟು ಉಪಕಾರ ಮಾಡಿದರು.

ಆದರೇನು ?

ಬಂಧಮುಕ್ತರಾದವರ ಪಟ್ಟಿಯಲ್ಲಿ ಭಾಸ್ ಹೆಸರು ಇರಲಿಲ್ಲವಾದ್ದರಿಂದ ಶಾಂತಿಪ್ರಸಾದ್ ಮೃತರ ಪಾರ್ಥಿವ ಶರೀರಗಳನ್ನು ನೋಡಲು 'ಕೋಲ್ಡ್ ಸ್ಟೋರೇಜ್'ಗೆ ಹೋದಾಗ ಅಲ್ಲಿಯ ಆ ಭೀಭತ್ಸ ದೃಶ್ಯವನ್ನು ನೋಡ ಲಾರದೆ ಅಲ್ಲೇ ಕುಸಿದುಬಿದ್ದು ಮೂರ್ಛೆಗೊಳಗಾದರಂತೆ. ಅನಂತರ ಅಲ್ಲಿಯ ಸಿಬ್ಬಂದಿ ವರ್ಗದವರಿಂದ ಶೈತ್ಯೋಪಚಾರ ಹೊಂದಿ ಎಚ್ಚರಾದ ಮೇಲೆ ಸುಟ್ಟು ಕರಿಕಲಾಗಿದ್ದ ಅನೇಕ ದೇಹಗಳಲ್ಲಿ ಒಂದರ ಕಾಲುಗಳನ್ನು ನೋಡಿ ಭಾಸ್ವಾನನೆಂದು ಗುರುತಿಸಿ ಶವವನ್ನು ಶವದಾನಿಯಲ್ಲಿಡಿಸಿ ಅದರೊಂದಿಗೆ ದೆಹಲಿಗೆ ಹಿಂದಿರುಗಿದರು.

ಅವರು ಅಲ್ಲಿಂದ ಯಾವ ಸಂದೇಶವನ್ನೂ ಕಳುಹಿಸಲಿಲ್ಲವಾದುದರಿಂದ ಅವರು ಶವದಾನಿಯ ಸಹಿತ ಮನೆಗೆ ಬಂದಮೇಲೆಯೇ ನಮಗೆ ತಿಳಿದದ್ದು ಆ ಘೋರ ದೃಶ್ಯ ಕಣ್ಣಿಗೆ ಬಿದ್ದಾಗ ನಾನು ಆ ಕ್ಷಣವೇ ಕುಸಿದು

ಬಿದ್ದೆ. ಅಂಜು ಮಂಜುರವರ ಅಳುದನಿ ಅಸ್ಪಷ್ಟವಾಗಿ ಕಿವಿಯಮೇಲೆ ಬಿದ್ದುದು ಸ್ವಲ್ಪಹೊತ್ತು ಮಾತ್ರ ತಿಳಿಯಿತು. ಅನಂತರ ಏನಾಯಿತೋ ದೇವರಿಗೇ ಗೊತ್ತು!

ನನಗೆ ಎಚ್ಚರವಾದಾಗ ಕೊಠಡಿಯು ತುಂಬೆಲ್ಲ ಜನ ತುಂಬಿದ್ದರು. ಎಲ್ಲೆಡೆಯೂ ಬಿಸುಸುಯ್ಲು ಹರಿದಾಡುತ್ತಿತ್ತು. ನಾನು ಕಣ್ಣುಗಳನ್ನು ಬಿಟ್ಟು ಬಿರಿಬಿರಿ ನೋಡಿದೆ. ಶಯ್ಯಾಪ್ರಾಂತದಲ್ಲಿ ಅಂಜು ಮಂಜುರವರು ಕುಳಿತಿದ್ದರು. ಎಲ್ಲರ ಕಣ್ಣುಗಳೂ ಅತ್ತೂ ಅತ್ತೂ ಕೆಂಪಾಗಿವೆ. ಮಹಿಳಾ ಮಂಡಳಿಯ ಸದಸ್ಯರೂ, ಶಾಲಾಮಕ್ಕಳೂ, ತಾಯಂದಿರೂ, ಭಾಸ್ ಆಫೀಸಿನ ಸಿಬ್ಬಂದಿಯೂ, ಗೆಳೆಯ ವರ್ಗದವರೂ, ಮಿತ್ರವರ್ಗದವರೂ ಮನೆಯಲ್ಲಿ–ಹೊರಾಂಗಣದಲ್ಲಿ ತುಂಬಿಹೋಗಿದ್ದಾರೆ. ನನಗೆ ಆಕ್ಷಣ ಏನೊಂದೂ ಅರ್ಥವಾಗಲಿಲ್ಲ. ನಿದ್ರಾಮಂದಿರವೋ ಸ್ವಪ್ನದ ಮೋಡಿಯೋ ಅಥವಾ ಇನ್ನಾವುದೋ ಮನಃಚಿತ್ತಗಳನ್ನು ಸಂಪೂರ್ಣ ಆವರಿಸಿಬಿಟ್ಟಿದೆ. ಹಾಗೇ ನಾನು ಎದ್ದು ಕೂಡುವುದರೊಳಗಾಗಿ ಅನೇಕ ಕೈಗಳು ನನ್ನ ಸಹಾಯಕ್ಕೆ ಬಂದುವು. ಕೆಲವು ಕ್ಷಣಗಳನಂತರ ಸ್ಥಿತಿಗತಿಯ ಅರಿವು ಸ್ಮರಣೆಯ ಮಂಡಲದಲ್ಲಿ ಸುಳಿದಳಿಯಿತು. ನಾನು ತಕ್ಷಣ ಮಂಚದಿಂದ ಇಳಿದು "ಭಾಸ್! ಭಾಸ್!" ಎನ್ನುತ್ತ ಧಾವಿಸಿ ಹೊರಬಂದೆ. ಸುತ್ತಮುತ್ತ ನಾಲ್ಕಾರು ಕೈಗಳು ಆಸರೆ ನೀಡಿದ್ದುದು ನನ್ನ ಅನುಭವಕ್ಕೆ ಬಂದಿತು. ಬಾಗಿಲ ಬಳಿಯಲ್ಲಿ ಗುಂಪು ಕೂಡಿದ್ದ ಜನ ಹಾದಿಬಿಟ್ಟು ಸರಿದು ನಿಂತರು. ಸುತ್ತುಮುತ್ತೂ ಸಂತಾಪದ ಬಿಸುಸುಯ್ಲು ಏರಿ ಇಳಿಯುತಿದ್ದುದು ಕಿವಿಗೆ ಕಾದರಸದಂತೆ ಬೀಳುತಿತ್ತು.

ದಿವಾನ್‌ಖಾನೆಯ ಮಧ್ಯೆ ಶವದಾನಿಯಿತ್ತು. ಮೇಲ್ದೆಶೆಯಲ್ಲಿ ಧೂಪ ದೀಪಗಳು ಉರಿಯುತಿದ್ದುವು. ಮೇಲೆ ಹೂವಿನ ರಾಶಿ. ಸುತ್ತಲೂ ಚಕ್ರಾಕಾರದ ಹೂದಂಡೆಗಳು. ಹೇಗೆ ಹೆಜ್ಜೆ ತೆಗೆದೆನೋ ನಾನರಿಯೆ. ಶವದಾನಿಯ ಮೇಲೆ ಕುಸಿದುಬಿದ್ದೆ. ಆಗಲೂ ಅನೇಕ ಕೈಗಳು ಸುಖಾಶ್ರಯ ನೀಡಿದುದು ನನ್ನ ಗಮನಕ್ಕೆ ಬಂದುದು ನಿಜ; ಅನಂತರ ಏನಾಯಿತೋ ತಿಳಿಯಲಿಲ್ಲ.

ನನಗೆ ಪುನಃ ಎಚ್ಚರವಾದಾಗ ಭಾಸ್‌ನ ಅಂತ್ಯಯಾತ್ರೆಗೆ ಅಣಿಯಾಗಿತ್ತು. ಸುತ್ತಮುತ್ತ "ಹರೇ ರಾಂ! ಹರೇ ಕೃಷ್ಣ!" ಧ್ವನಿ ಮೊರೆಯುತ್ತಿತ್ತು. ನನ್ನ ಪ್ರಾಣಪ್ರಿಯನ ಪಾರ್ಥಿವ ಶರೀರವನ್ನು ಹೊತ್ತ ಟ್ರಕ್ ಮೆಲ್ಲನೆ ಹೊರಟಿತು. ಅಕ್ಕಪಕ್ಕದಲ್ಲಿ ರಾಗು ಅಂಜು ಮಂಜು ಶಾಂತಿಪ್ರಸಾದ್ ರಾಘವ ಆನಂದ್ ಇಳಾ ಮುಂತಾದವರು ಮಂಡಿಸಿದ್ದರು. ನಾನು ಶಿರೋಭಾರವನ್ನು ಅಂಜನಾ ಭುಜದ ಮೇಲೆ ಇಳುಹಿದ್ದೆ. ಶವಯಾತ್ರೆ ನದಿಯ ಪ್ರವಾಹದಂತೆ ಪ್ರವಹಿಸಿತು. ಹೃದಯ ಈಗಲೀಗ ಸಿಡಿದೊಡೆಯಲಿರುವಂತೆ ವ್ಯಾಪ್ತಿಗೆ ಮೀರಿ ಮಿಡಿಯುತ್ತಿದೆ. ಹೇಗೆ ಈ ದುಃಖಸಂಕಟವನ್ನು ತಾಳಿಕೊಳ್ಳುವೆನೋ? ಹೇಗೆ ಈ ಘೋರ ವೃತ್ತಾಂತವನ್ನು ಸತ್ಯಭಾಮೆಗೆ ತಿಳಿಸುವುದೋ? ಎಂಬ ಪ್ರಶ್ನೆಗಳು ಹೃದಯಕರಂಡವನ್ನು ಗುಂಗೆ ಹುಳುವಿನಂತೆ ಕೊರೆಯುತ್ತಿದ್ದುವು. ಯಾವಾಗ ಶವಯಾತ್ರೆ ಮಸಣವನ್ನು ತಲ್ಪಿತೋ ಯಾವಾಗ ರವಿ ಬಾನ್ನೆತ್ತಿಯಿಂದ ಇಳಿದನೋ ಯಾವಾಗ ಶುಕ್ರ ಗ್ರಹದೇವತೆ ಮೂಡಿದಳೋ ದೇವರಿಗೇ ಗೊತ್ತು. ಟ್ರಕ್ಕು ಮುಂದುವರಿಯದೆ ನಿಂತಾಗಲೇ ಅದರ ಅರಿವು. ಡೇವಿಡ್ ಮತ್ತು ರಾಘವರವರು ಟ್ರಕ್ಕಿನಿಂದ ಕೆಳಕ್ಕೆ ಇಳಿಯಲು ನನಗೆ ಸಹಾಯಕರಾದರು.

ಟ್ರಕ್ಕಿನಿಂದ ಎಲ್ಲರೂ ಇಳಿದಮೇಲೆ ಶವದಾನಿಯನ್ನು ಇಳಿಸಿ ಅಂತ್ಯಪೂಜೆ ಸಲ್ಲಿಸಿ, ಕಟ್ಟಿಗೆಯ ರಾಶಿಯಮೇಲೆ ಎಣ್ಣೆ ತುಪ್ಪಮುಂತಾದ ತೈಲವನ್ನು ಸುರಿದು ಪ್ರದಕ್ಷಿಣೆ ನಮಸ್ಕಾರ ಮಾಡಿದನಂತರ ಶಾಂತಿಪ್ರಸಾದ್ ಜನರಾಶಿಯ ಮಧ್ಯೆ "ಹರೇರಾಂ! ಹರೇಕೃಷ್ಣ!" ಕಂಠಧ್ವನಿ ಮೊಳಗುತ್ತಿರುವಾಗ ಚಿತೆಗೆ ಅಗ್ನಿಸ್ಪರ್ಶ ಮಾಡಿದರು. ಅದನ್ನು ನೋಡಲಾರದೇ ನಾನು ಕಣ್ಣುಗಳನ್ನು ಮುಚ್ಚಿಕೊಂಡೆ. ಕಲ್ಲಿಗಿಂತ ಕಲ್ಲಾಯಿತು ಜೀವ. ಅಕ್ಕಪಕ್ಕದಲ್ಲಿ ಅಳುವವರು ಅಳುತ್ತಿದ್ದರು; ನಿಟ್ಟುಸಿರು ಬಿಡುವವರು ನಿಟ್ಟುಸಿರಿಡುತ್ತಿದ್ದರು. "ಹರೇರಾಂ! ಹರೇಕೃಷ್ಣ!" ಧ್ವನಿ ಇನ್ನೂ ಮೊಳಗುತ್ತಲೇ ಇತ್ತು. ಸತ್ಯಾ ಮನೆಗೆ ಬಂದು "ಅಪ್ಪ ಎಲ್ಲಿ?" ಎಂದು ಕೇಳಿದರೆ ಏನೆಂದು ಹೇಳಲಿ ಎಂಬ ಚಿಂತೆ ಪ್ರಾಣಗಳನ್ನು ಭೈರಿಗೆಯಂತೆ ಕೊರೆಯುತ್ತಿತ್ತು,

ಡೇವಿಡ್ ಜನರ ಗುಂಪಿನಲ್ಲಿ ದಾರಿಮಾಡಿಕೊಂಡು ನಮ್ಮನ್ನು ಹಿಂದಿರುಗಿ ಕಾರಿಗೆ ಕರೆದೊಯ್ದು ಮನೆಮುಟ್ಟಿಸಿದ. ಆಗ ಉರಿಸಿದ್ದ ಧೂಪದೀಪಗಳು ಇನ್ನೂ ಉರಿಯುತಿದ್ದುವು. ನಾನು ಒಳಹೋಗಿ ಹಾಸಿಗೆಯ ಮೇಲೆ ಬೋರಲಾಗಿ ಬಿದ್ದುಕೊಂಡೆ. ಅದುವರೆಗೆ ಸ್ವಲ್ಪ ಅದುಮಿ ಹಿಡಿದಿದ್ದ ದುಃಖದ ಕಟ್ಟೆಯೊಡೆದು ಕೋಡಿಹರಿಯತೊಡಗಿತು. ಅಕ್ಕಪಕ್ಕದಲ್ಲಿ ಅಂಜೂಮಂಜು ರಾಗುರವರು ನನ್ನನ್ನು ಸಂತೈಸುತಿದ್ದರು.

ಅಂತೆಯೇ ಡೇವಿಡ್ ನನ್ನ ದುಃಖದಲ್ಲಿ ಸಂಪೂರ್ಣ ಭಾಗಿಯಾಗಿದ್ದ.

ಮೂರು ದಿನಗಳಿಂದ ಊಟನಿದ್ರಾದಿಗಳು ಸರಿಯಾಗಿರಲಿಲ್ಲ. ರಾತ್ರಿ ಬಹಳ ಹೊತ್ತಿನ ಮೇಲೆ ಎಲ್ಲರೂ ಊಟದಶಾಸ್ತ್ರ ಮಾಡಿದರು. ಅವರೊಂದಿಗೆ ನಾನೂ ಮಾಡಿದೆ. ಎಲ್ಲರ ಅನುತಾಪಪೂರ್ಣವಾದ ಒತ್ತಾಯಪ್ರೀತಿಗಳ ಮಹಾಪ್ರೂರನೇ ನನ್ನೆಡೆಗೆ ಹರಿಯುತಿದ್ದರೂ ನನ್ನ ಅತ್ಯಮೂಲ್ಯವಾದ ಪಂಚಪ್ರಾಣವಸ್ತುವನ್ನು ಹಿಂದಿರುಗಿಸುವ ಸಾಮರ್ಥ್ಯ ಯಾರಿಗೂ ಇರಲಿಲ್ಲವಾಗಿ ಅನುಕಂಪ-ಬರೀ ಅನುಕಂಪ ಮಾತ್ರವೇ....ಗಂಭೀರಹೊಳೆಯಾಗಿ ಹೇದು ಬರುತಿತ್ತು

ಮರುದಿನ ಏನೇನೋ ಪೂಜೆಗಳು ನಡೆದುವು. ಆಗಲೂ ಬಹಳಷ್ಟು ಜನ ಬಂದು ನೆರೆದಿದ್ದರು. ಅವೊಂದೂ ನನಗೆ ಅರ್ಥವಾಗಲಿಲ್ಲ. ಕಾಷ್ಠಮೌನದಿಂದ ಎಲ್ಲವನ್ನೂ ನಿರ್ವಹಿಸಿದೆ. ಸದಾಕಾಲವೂ ಅಂಜು ಮಂಜು ರಾಗುರವರು ನನ್ನೊಂದಿಗಿದ್ದು ಸಹಾಯಹಸ್ತ ನೀಡುತಿದ್ದರೂ ದುಃಖಪರಿತಾಪಗಳಿಂದ ಹೊರತಾಗಿರಲಿಲ್ಲ.

ಮೇಜಿನ ಮೇಲೆ ಭಾಸ್ವಾನನ ದೊಡ್ಡ ಫೋಟೋ ಇಟ್ಟು ಅದರ ಮುಂದೆ ದಿನವೂ ತೈಲಾಂಜನ ಮತ್ತು ಊದುಬತ್ತಿಗಳನ್ನು ಹಚ್ಚಿಡುತಿದ್ದರು. ಅದಕ್ಕೆ ತೊಡಿಸಿದ ಗಂಧದಹಾರ ಘಮಘಮಿಸುತಿತ್ತು. ನನಗೆ ಅದನ್ನೆಲ್ಲಾ ನೋಡಿದಷ್ಟೂ ಒಡಲ ಸಂಕಟ ಹೆಚ್ಚುವುದು.

ಇಂದು ಸತ್ಯಭಾಮೆಯಿಂದ ನಮ್ಮಿಬ್ಬರಿಗೂ ಕಾಗದವಿತ್ತು...ಎಲ್ಲರ ಆರೋಗ್ಯ ಮತ್ತು ವಾತಾವರಣ ಹಿತಕರವಾಗಿರುವುದರಿಂದ ನೇಪಾಳದ ಟ್ರಿಪ್ ಕೈಬಿಡುವುದಿಲ್ಲವೆಂದು ಬರೆದಿದ್ದಾಳೆ. ಟ್ರಿಪ್ ಎಷ್ಟೇ ಹಿತಕರ ವಾಗಿದ್ದರೂ ನಮ್ಮ ಮನಸ್ಸಿರುವುದೆಲ್ಲಾ ನಿಮ್ಮ ಮೇಲೆಯೇ. ಎಂದಿಗೆ ನಿಮ್ಮನ್ನು ನೋಡುವೆನೋ ಎಂದು ಕಾತರಿಸುತ್ತಿದೆ ಜೀವ. ನಿಮ್ಮೆಲ್ಲರ ಕ್ಷೇಮವನ್ನು ಬಯಸುವೆ ಎಂದು ಬರೆದು ಪೂರೈಸಿದ್ದಳು ಅವಳು. ಹಾ! ದುರ್ವಿಧಿ !

ಅದನ್ನು ಓದಿದೊಡನೆಯೇ ಎಲ್ಲರ ಕಣ್ಣುಗಳೂ ಮತ್ತೊಮ್ಮೆ ತುಂಬಿ ಬಂದುವು.

ಬಂಧು ಬಳಗದ ಜನರೆಲ್ಲಾ ಹೊರಟುಹೋದನಂತರ ಉಳಿದವರು ಅಂಜೂ ಮಂಜೂ ರಾಗಮಯಿ ರಾಘವ ಶಾಂತಿಪ್ರಸಾದ್ ಮಾತ್ರ. ರಾಗ ಮಯಿಅಂಜು ಮಂಜುರವರೊಂದಿಗೆ ನನ್ನ ದುಃಖದಲ್ಲಿ ಸಮಭಾಗಿರುವುದನ್ನು ನೋಡಿದರೆ "ಇನ್ನೊಬ್ಬರ ಕಷ್ಟವನ್ನು ನೋಡಿ ನಮ್ಮ ಕಷ್ಟವನ್ನು ಮರೆಯಬೇಕು' ಎನ್ನುತ್ತದೆ ಅಂತರಾತ್ಮ. ಆದರೂ ಬೆಂಗಾಡಾದ ಹೃದಯ ಸಂಪುಟದ ರೀತಿಯೇ ಬೇರೆ. ಅದರ ತುಡಿತ ಅದರ ಸಂಕಟ ಪರಮಾತ್ಮ ಮಾತ್ರ ಬಲ್ಲನೇನೋ. ಆದರೂ, ಪರಿಜನರ ಹೃದಯಗಳಲ್ಲಿ ತುಂಬಿದ್ದ ಅನುಕಂಪ ನನ್ನ ಎದೆಯಲ್ಲಿ ಕೈಯಾಡಿಸುತಿತ್ತು. ನಾನು ಕಲ್ಲಿಗಿಂತಲೂ ಕಲ್ಲಾಗುತಿದ್ದೆ. ಬಿಸುಸುಯ್ಲು ಬಿಸಿಬಿಸಿಯಾಗಿ ಹರಿದಾಡುತಿತ್ತು.

ಶಾಂತಿಪ್ರಸಾದ್ ಒಂದು ತಿಂಗಳಪರ್ಯಂತ ಇಲ್ಲೇ ಇರಲು ಯೋಚಿ ಸಿದ್ದು ತಮ್ಮ ಮಕ್ಕಳೊಂದಿಗೆ ತಮ್ಮ ತಂಗಿಯನ್ನು ಇರಲು ಏರ್ಪಾಡು ಮಾಡಿದ್ದರು. ಅಂಜನಾ ತನ್ನ ಮನೆಗೆ ಬೀಗಹಾಕಿದ್ದಾಳೆ. ಎಲ್ಲರೂ ಇಲ್ಲೇ ಇರುವುದರಿಂದ ಮನಃಚಿತ್ತಗಳಿಗೆ ಸ್ವಲ್ಪ ಸಾಂತ್ವನ. ಆತ್ಮೀಯರು ಮಿತ್ರರೂ ಪರಿಚಿತರೂ ದಿನವೂ ಬಂದು ಅನುತಾಪ ವ್ಯಕ್ತಪಡಿಸುವವರೇ. ಒಂದೆರಡು ದಿನಗಳಿಂದ ಶಾಂತಿಪ್ರಸಾದ್ ತಾವೇ ಬಂದವರೊಡನೆ ಮಾತಾಡಿ ಕಳುಹಿಸುವುದರೊಂದಿಗೆ ಎಲ್ಲರೂ ಅದೇ ವಿಚಾರವನ್ನು ಬೆದಕಿ

ಜಿದಕಿ ಕಾಣದ ಕೈಗಳಿಂದ ಹೃದಯವನ್ನು ಸಾಸಿರಪಟ್ಟು ಹಿಸುಕುವ ಕ್ರಮ ತಪ್ಪಿತು. ನಾನು ಒಳಗೇ ಉಳಿಯತೊಡಗಿದೆ.

ಶಾಂತಿಪ್ರಸಾದ್ ಎದುರಿನ ಸೋಫಾದಮೇಲೆ ಕುಳಿತುಕೊಳ್ಳುತ್ತ ಹೇಳಿದರು "ಜೀವನ ಯಾವತ್ತೂ ಸುಖವನ್ನೇ ಪ್ರಾಸಾದಿಸುವುದಿಲ್ಲ. ಸುಖ ದುಃಖಗಳು ಒಂದಾಗಿಯೇ ಇರುತ್ತವೆ. ಅವನ್ನು ಸಮದೃಷ್ಟಿಯಿಂದಲೇ ಸ್ವೀಕರಿಸಬೇಕು. ಸುಖಬಂದಾಗ ಹಿಗ್ಗಿ ದುಃಖ ಬಂದಾಗ ಕುಗ್ಗುವುದು ಸಹಜವಾದರೂ ಅವನ್ನು ಸಮಭಾವನೆಯಿಂದ ನೋಡುವುದೇ ಸರಿಯಾದ ಕ್ರಮ. ಭಗವಂತ ನಮಗೆ ಈ ಕಷ್ಟ ಕೊಡಬಾರದಿತ್ತು; ಕೊಟ್ಟಿದ್ದಾನೆ. ಅದಕ್ಕೆ ಎದೆಗುಂದಬಾರದು. ಸತ್ಯಭಾಮಳಿಗೆ ಇದುವರೆಗೆ ನೀನು ತಾಯಿ ಮಾತ್ರ ಆಗಿದ್ದೆ. ಇನ್ನು ಮುಂದೆ ತಂದೆಯೂ ಆಗಬೇಕು. ನೀನು ಅವಳಿಗೆ ಉತ್ತೇಜನ ನೀಡದಿದ್ದರೆ ಅವಳ ಬಾಳು ಬೆಳಗುವುದಿಲ್ಲ; ಎಂಬುದನ್ನು ಎಂದೂ ಮರೆಯಬಾರದು ದೇವರ ಮೇಲೆ ಭಾರಹಾಕು; ಅವನು ನಿನಗೆ ಧೈರ್ಯ ಕೊಡುತ್ತಾನೆ" ಎಂದು ಸ್ವಲ್ಪ ತಡೆದು ಪುನಃ ಮುಂದುವರಿದರು "ಇದು ಗೌರ್ನಮೆಂಟ್ ಕ್ವಾರ್ಟರ್ಸ್. ಇನ್ನೊಂದು ತಿಂಗಳ ಒಳಗಾಗಿ ಬಿಟ್ಟುಕೊಡಬೇಕಾಗುತ್ತೆ. ನಿನ್ನ ಮುಂದಿನ ಜೀವನದ ಬಗ್ಗೆ ಏನು ಮಾಡುತ್ತಿ? ಯಾವರೀತಿ ರೂಪಿಸಿಕೊಳ್ಳಬೇಕೆಂದು ನಿನ್ನ ಇಚ್ಛೆ? ಇಲ್ಲೇ ಇರುವ ಬಯಕೆ ಇದ್ದರೆ ಒಬ್ಬಳೇ ಇರುವುದು ಕಷ್ಟ. ಸಧ್ಯರಾಘವನಿಗೆ ಇಲ್ಲಿಂದ ವರ್ಗವಾಗುವ ಸಂಭವವಿದೆ. ಅವನಿಗೆ ಬಹುತೇಕವಾಗಿ ಬೆಂಗಳೂರಿಗೇ ವರ್ಗವಾಗಬಹುದು. ನೀನು ಅಲ್ಲಿಗೆ ಬರುವುದಾದರೆ ನಿನಗಾಗಿ ಕಟ್ಟಿದ ಮನೆಯಿದೆ. ಮೇಲೆ ಬಾಡಿಗೆ ಬರುವುದರಿಂದ ಜೀವನಕ್ಕೆ ಕೊರತೆ ಇರುವುದಿಲ್ಲ. ನೀನು ಏನು ಹೇಳುತ್ತಿ? ನಿನ್ನ ಅಭಿಪ್ರಾಯವೇನು? ನೀನು ಹೇಗೆ ಹೇಳಿದರೆ ಹಾಗೆ. ನಿನ್ನ ಮೇಲೆ ಯಾರ ಒತ್ತಾಯವೂ ಇರುವುದಿಲ್ಲ..."

ಶಾಂತಿಪ್ರಸಾದ್ ದೂರದೃಷ್ಟಿಯುಳ್ಳವರು, ಸ್ನೇಹಪರರು. ಅವರ ಅನುಭೂತಿ ಉದಾತ್ತಮಯ ಅವರ ಸಮೀಕ್ಷೆ ಸಮತ್ವಮಯ, ಅವರ ಜೀವನ ಈ ಎಲ್ಲದರ ಸಾರಸರ್ವಸ್ವಮಯ. ಅವರ ಒಂದೊಂದು

ಹೆಜ್ಜೆಯೂ ಗಂಭೀರ. ಒಂದೊಂದು ನುಡಿಯೂ ಶ್ರೀಮಂತ. ಅವರ ಮುಂದೆ ನನ್ನ ಸ್ವಂತಿಕೆಯೆತ್ತ ?

ನಾನು ಕಣ್ಣುಗಳಂಚಿನಲ್ಲಿ ಸಣ್ಣಗೆ ನೀರಾಡಿಸುತ್ತ ಭಾರವಾದ ದನಿಯಲ್ಲಿ ನುಡಿಯಲಾರದೆ ನುಡಿದೆ "ನೀವು ಹೇಗೆ ಹೇಳಿದರೆ ಹಾಗೆ."

"ನೀನು ನಿನ್ನ ಜೀವನವನ್ನು ನಿರ್ವಹಿಸಲು ಶಕ್ತಳಿದ್ದಿ. ಯೋಚಿಸಿ ನೋಡು."

ನನ್ನ ನೀಳವಾದ ನಿಟ್ಟುಸಿರೇ ಉತ್ತರವಾಯ್ತು.

ಬಳಿಯಲ್ಲಿ ಕುಳಿತಿದ್ದ ಮಂಜು ನನ್ನ ಬೆನ್ನನ್ನು ನೇವರಿಸುತ್ತ "ಧೈರ್ಯ ಗೆಡಬೇಡ." ಎಂದಳು. ಮಾತು ಮುಗಿಯುವುದರೊಳಗಾಗಿ ಅವಳ ಮುಖವೇ ಖಿನ್ನವಾಗಿತ್ತು.

o o o o

ಇಂದು ಸತ್ಯ ಮನೆಗೆ ಬರುವವಳಿದ್ದುದರಿಂದ ಶಾಂತಿಪ್ರಸಾದ್ ಸ್ಟೇಷನ್ನಿಗೆ ಕಾರನ್ನು ತೆಗೆದುಕೊಂಡು ಹೋದರು. ಅವಳಿಗೆ ಹೇಗೆ ಈ ದುರ್ವಾರ್ತೆಯನ್ನು ಮನವರಿಕೆ ಮಾಡುವುದು ಎಂಬ ಭಯ-ಚಿಂತೆ-ಕಳ ವಳ ನನ್ನ ಮನಸ್ಸಿಗೆ. ಮಾತಾಡಿದರೆ ಕಣ್ಣುಗಳು ಹನಿಯುತ್ತವೆ. ಹೇಗೆ ದುಃಖಪೂರವನ್ನು ತಡೆಗಟ್ಟುವೆನೋ ಎಂಬ ಕೊರಗು ಮನಕ್ಕೆ. ಕಾರು ಹೋದಾಗಿನಿಂದ ಹೃದಯ ಒಂದೇ ಸಮನೆ ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು. ಎಷ್ಟೆಷ್ಟು ಪ್ರಯತ್ನಿಸಿದರೂ ನನ್ನನ್ನು ನಾನು ಹತೋಟಿ ಯಲ್ಲಿಟ್ಟುಕೊಳ್ಳಲು ಸಾಧ್ಯವಾಗದಿದ್ದುದರಿಂದ ಕೊಠಡಿಯಲ್ಲಿ ಅಳುವಷ್ಟು ಅತ್ತು ದುಃಖದ ಕೋಡಿಯನ್ನು ಹೊರಹರಿಯಬಿಟ್ಟು ಹೃದಯವನ್ನು ಹಗುರ ಮಾಡಿಕೊಂಡೆ. ಆದರೂ ಒಡಲೆಲ್ಲಾ ಸಂಕಟಮಯ. ಕ್ಷಣ ಕ್ಷಣಗಳೂ ಗಳಿಗೆ ಗಳಿಗೆಗಳೂ ಯಥೋಚಿತವಾಗಿ ಉರುಳುತ್ತಲೇ ಇವೆ. ಕಾಲಮಾನಕ್ಕೆ ದುಃಖವೂ ಇಲ್ಲ; ಸುಖವೂ ಇಲ್ಲ.

ಇನ್ನೇನು ಸತ್ಯಾ ಹಿಂದಿರುಗುವ ಹೊತ್ತು ಎಂದುಕೊಳ್ಳುತ್ತಿರುವಾಗಲೇ ಕಾರು ಒಂದು ಪೋರ್ಟಿಕೋದಲ್ಲಿ ನಿಂತಿತು. ತಟ್ಟನೆ ಹೃದಯ ವ್ಯಾಪ್ತಿಗೆ ಮೀರಿ

ಮಿಡಿಯುಹತ್ತಿತು, ಈಗಲೀಗ ಸಿಡಿದೊಡೆಯಲಿರುವಂತೆ. ಆದರೂ ನನ್ನನ್ನು ನಾನು ಹತೋಟಿಯಲ್ಲಿಟ್ಟುಕೊಳ್ಳಲು ಸರ್ವಸಹಸಾಪ್ರಯತ್ನಪಟ್ಟೆ. ಅಂಜು ಮಂಜುರವರು ನನ್ನೆಡೆಗೆ ಕಣ್ಣುಮಿಸುಕಿ 'ಅಳಬೇಡ' ಎಂದು ಸೂಚನೆ ಕೊಟ್ಟು ವರಾಂಡಕ್ಕೆ ಹೋದರು. ಅವಳು ಕಾರಿನಿಂದಿಳಿಯುತ್ತಲೂ "ಓ! ನಿಮುನ್ನು ಇಲ್ಲೇ ನೋಡಿದ್ದು ಎಷ್ಟು ಚೆನ್ನ ? ರಾಗಿಣಿ–ತಾರಿಣಿಯರೆಲ್ಲಿ ? ಶ್ರೀವತ್ಸ ಶಾಂತಲೆಯರೆಲ್ಲಿ ?"

ಕಿಲಕಿಲ ನಗುವಿನೊಂದಿಗೆ ಹರಿದ ಎಳೆಯದನಿ ಸಾರಸಗಳ ಕ್ರೆಂಕಾರ ದಂತೆ ಕೇಳಬಂತು. ನಾನು ಎರಡು ಹೆಜ್ಜೆ ಮುಂದಿಡುವುದರೊಳಗೆ ಅವಳು ಅವರಿಬ್ಬರಿಗೂ ಪ್ರೀತಿಯ ಆಲಿಂಗನ ನೀಡಿ ನನ್ನೆಡೆಗೆ ಧಾವಿಸಿಬಂದಳು. ನಾನು ಎರಡೂ ಕೈಗಳನ್ನು ಚಾಚಿ ಮಗುವನ್ನು ಅಪ್ಪಿಕೊಂಡೆ. ಏನಾದರೂ ಸಮಯೋಚಿತವಾಗಿ ಒಂದು ಮಾತಾಡೋಣವೆಂದರೂ ಗಂಟಲು ಗದ್ಗದಿತ ವಾಯಿತು. ಅಪ್ಪಿದ ಕೈಗಳನ್ನು ಸಡಲಿಸದೆ ಮೂಕಮೌನ ತಾಳಿದೆ. ಆಗ ಸತ್ಯಾ ನನ್ನ ಮುಖವನ್ನು ನೋಡಿ ಅತ್ಯಾಶ್ಚರ್ಯದಿಂದ "ಏನಾಯ್ತು ? ನೀನೇಕೆ ಹೀಗಿದ್ದಿ ? ಮೈಯಲ್ಲಿ ಆರೋಗ್ಯವಿಲ್ಲವೇ ?" ಎಂದಳು ಆತಂಕಿತ ಳಾಗಿ. ಒಂದೇ ಕ್ಷಣದಲ್ಲಿ ಏರಿಳಿತಗಳೆರಡೂ ಉಂಟಾದುವು, ಅವಳ ಎಳೆಯ ಹೃದಯದಲ್ಲಿ.

ಅವಳನ್ನು ಬಳಿಯಲ್ಲಿ ಎಳೆದು ಕೂರಿಸಿಕೊಂಡು "ಏನಿಲ್ಲ ಮಗೂ ! ಸ್ವಲ್ಪ ಅನಾರೋಗ್ಯ ಅಷ್ಟೆ," ಎಂದೆ.

ಶಾಂತಿಪ್ರಸಾದ್ ಅಂಜು ಮಂಜು ರಾಗಮಯಿ ಎಲ್ಲರೂ ಬಂದು ಸುತ್ತು ವರಿದರು. ಅವಳು ಎಲ್ಲರ ಕಡೆಗೂ ಮಿಕಿಮಿಕಿ ನೋಡಿ ಅತ್ಯಾಶ್ಚರ್ಯದಿಂದ ಮತ್ತೆ ಪ್ರಶ್ನಿಸಿದಳು "ಎಲ್ಲರೂ ಏನೋ ಒಂದು ರೀತಿ ಮಂಕುಬರಿದವರಂತಿ ದ್ದೀರಿ...ಏನೆಂದು ಕೇಳಬಹುದೇ ?"

ಶಾಂತಿಪ್ರಸಾದ್ ಮುಂದೆ ಬಂದು "ಏನಿಲ್ಲ...ಯೋಚಿಸಬೇಡ ಮಗೂ !"

ಅನಂತರ ಮಾತಿನ ಜಾರಿಕೆಗಾಗಿ "ಹೇಗಿತ್ತು ನಿನ್ನ ಪ್ರವಾಸ? ತೋರಿಸು ವುದನ್ನೆಲ್ಲಾ ಸರಿಯಾಗಿ ತೋರಿಸಿದಿರೆ? ಅಥವಾ ಅವಸರದಿಂದ ಅಡೆತಡೆ ಗಳುಂಟಾದುವೇ?" ಎಂದಳು ಮಂಜುಳಾ.

"ಅಂತಹ ತೊಂದರೆಯೇನೂ ಉಂಟಾಗಲಿಲ್ಲ. ಎಲ್ಲಾ ಕಡೆಯೂ ಚೆನ್ನಾಗಿ ತೋರಿಸಿದರು. ಪ್ರಯಾಣವೂ ಸುಖಕರವಾಗಿತ್ತು. ನಾವು ನಿಜ ವಾಗಿಯೂ ಸಮಯವನ್ನು ಆನಂದದಿಂದ ಕಳೆದೆವು."

ಅವಳು ನನ್ನ ಕಡೆ ತಿರುಗುವಾಗ ಆಕಸ್ಮಿಕವಾಗಿ ತಂದೆಯ ಚಿತ್ರಪಟದ ಕಡೆ ನೋಡಿ ಆಶ್ಚರ್ಯಚಕಿತಳಾಗಿ "ಇದೇನು ಹೊಸ ರೀತಿ?" ಎಂದಳು ಮತಿ ಭ್ರಾಂತಳಾಗಿ.

"ಸುಮ್ಮನೆ ಮಗೂ!" ಎಲ್ಲರ ಕಂಠಸ್ವರವೂ ಒಮ್ಮೆಗೇ ಹೊಮ್ಮಿತು.

"ಅಪ್ಪ ಆಫೀಸಿನಿಂದ ಬಂದಿಲ್ಲವೇ?"

"ಇಲ್ಲ...ಬಂ..."

"ಏನು ಸರಿಯಾಗಿ ಹೇಳಿ. ಅವರೇಕೆ ನಿಲ್ದಾಣಕ್ಕೆ ಬರಲಿಲ್ಲ?"

ಆಗ ಶಾಂತಿಪ್ರಸಾದ್ ನಾನು ಬಂದಮೇಲೆ ಅವರೇಕೆ? ಅದೆಲ್ಲ ಇರಲಿ, ದೀರ್ಘಪಯಣ...ಮೈಯೆಲ್ಲಾ ಉಗಿಮಸಿಯಿಂದ ಕೊಳಕಾಗಿದೆ. ಈಗ ಸ್ವಚ್ಛ ಸ್ನಾನಮಾಡಿ, ಲಘು ಫಲಾಹಾರ ತೆಗೆದುಕೊಂಡು ದಣಿವಾರಿಸಿಕೊ. ಅನಂತರ ಬಾಕಿ ವಿಚಾರ, ಏಳು ಮಗೂ!" ಎನ್ನುತ್ತ ಅವಳ ಕೈಹಿಡಿದು ಒಳಗಡೆ ಕರದೊಯ್ಯಲು ಪ್ರಯತ್ನಿಸಿದರು. ಆದರೆ ಅವಳು ಒಪ್ಪದೆ ತದೇಕಚಿತ್ತ ದಿಂದ ಆ ಚಿತ್ರಪಟವನ್ನೇ ನೋಡುತ್ತ "ಇದೇಕೆ ಪೂಜೆ ಮಾಡಿದ್ದೀರಿ? ಹಾರವೇಕೆ? ದೀಪಧೂಪಗಳೇಕೆ ಇದೆಂತಹ ವಿಚಿತ್ರ?" ಎಂದು ಪುನಃ ಪುನಃ ಕೇಳಿದಳು ಒತ್ತಾಯಪೂರ್ವಕವಾಗಿ. ದಿಗ್ಭ್ರಮೆಯಿಂದ ಅವಳ ಮುಖಬಿಂಬ ವಿವರ್ಣವಾಯಿತು. ಆ ಚಿತ್ರಪಟವನ್ನೇ ನಿಟ್ಟಿಸಿ ನೋಡ ತೊಡಗಿದಳು. ಇದುವರೆಗೆ ತಡೆಹಿಡಿದಿದ್ದ ತನ್ನ ದುಃಖದ ಕಟ್ಟೆಯ ಕಲ್ಲುಗಳು ಸಡಿಲವಾಗತೊಡಗಿವೆ. ಇನ್ನು ನಿಮಿಷಾರ್ಧದಲ್ಲಿಯೇ ಕಂಬನಿ

ಗಳುಕ್ಕುವುದು ಸಹಜ ಎಂಬುದರ ಅರಿವು ಮೂಡತೊಡಗಿತು. ಅವಳತ್ತ ತಿರುಗುವುದರೊಳಗಾಗಿ ಮುಖವನ್ನು ಕರವಸ್ತ್ರದಿಂದ ಒರಸಿಕೊಂಡೆ. ಅವಳಿಗೆ ವಿಷಯವನ್ನು ತಿಳಿಸಲು ಯಾರೂ ಮುಂದಾಗಲಿಲ್ಲ. ಅವಳು ಅಂಜುವನ್ನು ತಬ್ಬಿ ಹಿಡಿದುಕೊಂಡು "ಆಂಟೀ ! ಅಪ್ಪನಿಗೇಕೆ ಪೂಜೆ ! ಯಾರೂ ಏನೂ ಹೇಳುವುದೇ ಇಲ್ಲವಲ್ಲ ? ಏಕೆ ಎಂಬುದನ್ನು ಸ್ಪಷ್ಟವಾಗಿ ಹೇಳಿಬಿಡಿ. ಸುಮ್ಮನೆ ವಿಷಯವನ್ನು ಮುಚ್ಚಿಟ್ಟು ನನ್ನನ್ನು ಕೊಲ್ಲುತಿದ್ದೀರಿ !"

ಆಗ ಅಂಜನಾ ಮುಖಬಿಂಬ ಕೆಂಪು ತಳೆದು ಕಣ್ಣುಗಳಲ್ಲಿ ಕಂಬನಿಗಳುಕ್ಕಿದುವು. ಮಂಜೂ ಅವಳ ಸಹಾಯಕ್ಕೆ ಬರುತ್ತ 'ಮಗೂ ! ಈಗ ನೀನು ಒಂದಿಷ್ಟು ಸ್ನಾನಮಾಡಿದರೆ ಒಳ್ಳೆಯದು" ಎಂದು ಅವಳನ್ನು ಮೈದಡವುತ್ತ ಒತ್ತಾಯಿಸಿದಳು. ದನಿಯಲ್ಲಿ ಮೃದು ಮಧುರರಸ ಜಿನಿಯುತಿತ್ತು. ಆದರೂ, ಸತ್ಯಾ ದೃಢವಾದ ದನಿಯಲ್ಲಿ "ಏನೆಂಬುದನ್ನು ತಿಳಿಸದ ಹೊರತು ನಾನು ಸ್ನಾನಮಾಡುವುದಿಲ್ಲ !" ಎಂದಳು.

"ನೀನು ಹೀಗೆ ಹಠಹಿಡಿದರೆ ಹೇಗೆ ? ಏನಿದ್ದರೂ ಅನಂತರ ಹೇಳೋಣ. ಇದೆಲ್ಲಾ ದೊಡ್ಡವರ ವಿಷಯ. ಅಷ್ಟು ಒತ್ತಾಯ ಮಾಡಬಾರದು. ನನ್ನ ಮಾತು ಕೇಳು ಮಗೂ !" ಎಂದು ಮುದ್ದಿಸಿ ನುಡಿದಳು. ಮಂಜುಳಾ. ಆದರೂ ಮಗು ಮಣಿಯಲಿಲ್ಲ. ನನ್ನ ಕಾಲಬಳಿಯಲ್ಲಿ ಮಂಡಿಯೂರಿ ಕುಳಿತು ತಲೆಯನ್ನು ನನ್ನ ತೊಡೆಯಲ್ಲಿಟ್ಟು ಮುಖಮಡಿಯಾಗಿ ಮುಸುಮುಸು ಅಳ ಹತ್ತಿದಳು.

ನಾನು ಅವಳ ತಲೆ ಮೈಗಳನ್ನು ನಲ್ಮೆಯಿಂದ ನೇವರಿಸಿ ಮುದ್ದಿಸಿ ಹೇಳಲಾರದೆ ದುಃಖಪೂರ್ಣವಾದ ಗದ್ಗದ ದನಿಯಲ್ಲಿ ನುಡಿದೆ "ಅಷ್ಟೇಕೆ ಆತುರ ? ಸ್ವಲ್ಪಹೊತ್ತು ತಾಳಬಾರದೇ ? ಇನ್ನೂ ಸ್ನಾನ ಆಗಲಿಲ್ಲ. ಈ ಕೊಳಕು ಮೈಯಲ್ಲಿ ಹೊತ್ತು ಎಷ್ಟು ಇರಲು ಸಾಧ್ಯ ? ಏಳು ಮಗೂ ! ಮೊದಲು ಸ್ನಾನ ಮಾಡಿ ತಿಂಡಿ ತೆಗೆದುಕೊ. ನಿನ್ನನ್ನು ಬೇಡಿಕೊಳ್ಳುವೆ. ಹಠ ಹಿಡಿಯ ಬೇಡ."

ಆದರೆ ಅವಳು ಕೇಳಬೇಕಲ್ಲ ? ಹಿಡಿದ ಪಟ್ಟು ಬಿಡದೆ ನನ್ನ ಮೈಮೇಲೆ ಬಿದ್ದು ಹೊರಳಾಡುತ್ತ ಕಂಬನಿ ಮಿಡಿದಳು. ಅದುವರೆಗೂ ತಡೆಹಿಡಿದಿದ್ದ ದುಃಖದ ಕೋಡಿ ಕಟ್ಟೆಯೊಡೆದಂತೆ ಉಕ್ಕಿ ಹರಿಯಿತು. ಆಗ ಮತ್ತೊಮ್ಮೆ ದುಃಖದ ಮಹಾಪೂರ ಉಕ್ಕಿಹರಿಯಿತು. ಅಂಜು ಮಂಜು ರಾಗು ಆಳು ಕಾಳುಗಳು ಎಲ್ಲರೂ ಅಲ್ಲಲ್ಲಿ ಮೂಲೆಮೂಲೆಯಲ್ಲಿ ಮುಸುಮುಸು ಅತ್ತರು.

ಆಗ ಅವಳು ಒಬ್ಬರಿಂದ ಒಬ್ಬರಿಗೆ ಮರಿದುಂಬಿಯಂತೆ ಹಾರಿ ಎಲ್ಲರನ್ನೂ ಒಂದೇಸಮನೆ ಅಂಗಲಾಚತೊಡಗಿದಳು. ಮಂದಾರಪುಷ್ಪದಂತಹ ಅವಳ ಮುಖ ಆತಂಕ–ಕಳವಳ–ದುಃಖಗಳಿಂದ ಕಂದಿಕುಂದಿ ಬಾಡಿಹೋಯಿತು. ಅವಳು ಒಂದು ಗಳಿಗೆ ತನ್ನಲ್ಲೇ ಯೋಚಿಸಿ "ನೀವು ಯಾರು ಹೇಳದಿದ್ದರೂ ಸರಿಯೆ ನಾನು ಸೆಕ್ರೆಟರಿಯನ್ನು ಕೇಳುವೆ ! ಎಂದವಳೇ ಓಡಿಹೋಗಿ ಟೆಲಿಫೋನಿಗೆ ಕೈಹಚ್ಚಿದಳು.

"ಇಂದು ಆಫೀಸಿಗೆ ರಜ. ಸುಮ್ಮನೆ ಏಕೆ ಟೆಲಿಫೋನ್ ಮಾಡುತ್ತಿ ?" ಎಂದ ಶಾಂತಿಪ್ರಸಾದ್ ರಿಸೀವರನ್ನು ತಮ್ಮ ಕೈಯಲ್ಲಿಟ್ಟುಕೊಂಡು ಅವಳನ್ನು ಮುದ್ದಿಸಿ ಸಂತೈಸಿ ಎಷ್ಟೆಷ್ಟೋ ಸಮಾಧಾನ ಹೇಳಿದರು. ತಮ್ಮ ತೊಡೆಯ ಮೇಲೆ ಕೂರಿಸಿಕೊಂಡು ನಲ್ಮೆಯಿಂದ "ಮಗೂ ! ಜೀವನದಲ್ಲಿ ಎಲ್ಲರಿಗೂ ಕಷ್ಟಸುಖಗಳುಂಟು. ನೀನದನ್ನು ಸ್ವಲ್ಪವೂ ಮನಸ್ಸಿಗೆ ಹಚ್ಚಿಕೊಳ್ಳದೆ ಶಾಂತಿ ಯಿಂದಿರಬಲ್ಲೆಯಾದರೆ ಏನೆಂಬುದನ್ನು ತಿಳಿಯಹೇಳುವೆ."

ಅವಳನ್ನು ನೋಡುತ್ತ ನಾನು ಶಿಲಾಮೂರ್ತಿಯಂತೆ ಕುಳಿತೆ. ನನ್ನ ಬಾಯಿಂದ ಯಾವೊಂದು ಮಾತೂ ಹೊರಡಲಿಲ್ಲ. ಶಾಂತಿಪ್ರಸಾದ್ ನಯ ವಂತಿಕೆಯಿಂದ ಮುಂದುವರಿದರು "ನಾವೊಂದು ಬಯಸಿದರೆ ವಿಧಿ ಇನ್ನೊಂದು ಬಯಸುತ್ತದೆ. ನಾವು..."

ಸತ್ಯಾ ಅಲಕ್ಷ್ಯದಿಂದ ನಡುವೆ ಬಾಯಿ ಹಾಕಿದಳು "ಛಿಃ ! ಇವೊಂದೂ ನನಗೆ ಬೇಕಿಲ್ಲ. ಈಗ ಅಪ್ಪ ಎಲ್ಲಿದ್ದಾರೆ ಹೇಳಿ. ನಾನು ನೋಡಬೇಕು...!"

"ನೋಡು ಮಗೂ! ನೀನು ಹಟ್ಟುಹಿಡಿದರೆ ಕೇಳುವುದು ಕೆಟ್ಟ ವಿಷಯವನ್ನೆ. ದಯವಿಟ್ಟು ಸ್ವಲ್ಪ ನಿಧಾನಿಸು;" ಎಂದರು ಶಾಂತಿಪ್ರಸಾದ್ ತುದಿ ಬೆರಳುಗಳಿಂದ ಹಣೆಯನ್ನು ಒತ್ತಿಹಿಡಿದು.

"ನೀವು ನನಗೆ ಬೇರೇನೂ ಹೇಳಬೇಡಿ!"

ಶಾಂತಿಪ್ರಸಾದ್ ಬಾಯ್ದೆರೆಯಲೇಬೇಕಾಯಿತು. ಇದ್ದ ವಿಷಯವನ್ನು ತಿಳಿಸಿ "ನೀನಿದನ್ನು ಮನಸ್ಸಿಗೆ ಹಚ್ಚಿಕೊಳ್ಳಲೇಬಾರದು. ಯೂ ಮಸ್ಟ್ ಬಿ ಬ್ರೇವ್!" ಎಂದರು.

ಅವಳು ಆ ಮಾತು ಕೇಳಿ ಮತಿಭ್ರಾಂತಿಯಿಂದ ಮೂರ್ತಿಮತ್ತಾದಳು. ಅವಳ ತುಟಿಗಳು ಬಿರಿಯಲಿಲ್ಲ. ಶಾಂತಿಪ್ರಸಾದ್ ಅಲುಗಿಸಿ ಮಾತಾಡಿಸಲು ಪ್ರಯತ್ನಿಸಿದರು. ಅಂಜು ಮಂಜು ರಾಗು ಎಲ್ಲರೂ ಅವಳ ಗಮನವನ್ನು ಬೇರೆಡೆಗೆ ಸೆಳೆಯಲು ಪ್ರಯತ್ನಿಸಿದರು. ಒಮ್ಮೆಲೇ ಸಿಡಿಲೆರಗಿದಂತೆ ನಿಸ್ಸಂಜ್ಞಳಾಗಿ ನಿಃಸಾರವಾಗಿ ಮನಃಪ್ರಾಣಗಳು ಜಡವಾದಂತೆ ತೋರಿಬಂದಳು. ಸ್ವಲ್ಪ ಹೊತ್ತು ಕಲ್ಲಿಗಿಂತಲೂ ಕಲ್ಲಾಗಿ ಕುಳಿತಿದ್ದು ಅನಂತರ ಅವಳೇ ಕೇಳಿದಳು

"ಹೌದಾ ಅಮ್ಮಾ?"

ಆ ಪ್ರಶ್ನೆ ನನ್ನ ಕಿವಿಗಳಲ್ಲಿ ಪುನಃ ಮೊಳಗಿತು "ಹೌದಾ ಅಮ್ಮಾ?"

ನಾನು ನನ್ನನ್ನು ಹತೋಟಿಯಲ್ಲಿಟ್ಟುಕೊಳ್ಳಲಾರದೇ ಹೋದೆ. ಎಲ್ಲರ ಕಣ್ಣುಗಳಲ್ಲಿ ಉಕ್ಕಿದ ಕಂಬನಿ ಉತ್ತರ ಹೇಳಿದಾಗ ಆಕುಲಚಿತ್ತಳಾದ ಅವಳ ಕಣ್ಣುಗಳು ತಟ್ಟನೆ ತುಂಬಿಬಂದುವು. ಎರಡೂ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಗಳಗಳನೆ ಅತ್ತುಬಿಟ್ಟಳು. ಎಲ್ಲರೂ ಸುತ್ತುವರಿದು ಸಂತೈಸಿದ ಮೇಲೆ ಸಮಾಧಾನಪಟ್ಟಳೇನೋ ಹೌದು. ಆದರೆ ಅವಳ ಮುಖದಲ್ಲಿ ಕಳೆಯೇ ಇರಲಿಲ್ಲ. ಪಯಣದ ಆಯಾಸ ಮತ್ತು ಮಾನಸಿಕ ಆಘಾತಗಳಿಂದ ಬಳಲಿ ಬೆಂಡಾಗಿ ಹಾಸಿಗೆಯಮೇಲೆ ಉರುಳಿಕೊಂಡಳು. ಸ್ವಲ್ಪಹೊತ್ತಿನಲ್ಲಿ ಅಳುತ್ತಳುತ್ತಲೇ ನಿದ್ದೆ ಹೋದಳು. ಸಂಜೆ ಡೇವಿಡ್ ಬಂದು ಹೊರಗಡೆ ಕರೆದೊಯ್ದು ಸಮಾಧಾನ ಪಡಿಸಿ ಕರೆತಂದ. ಆದರೇನು? ನನ್ನ ಶ್ರದ್ಧಾಲಯ ಕುಸಿದು ಬಿದ್ದಿತ್ತು...

ಶಾಲೆಯ ಆಡಳಿತವನ್ನು ಪಾಂಚಾಲಿವರ್ಮ ವಹಿಸಿಕೊಂಡಿದ್ದರಿಂದ ನಮಗೆ ನಿರ್ಯೋಚನೆ. ನನ್ನ ಮನದಲ್ಲಿ ಮುಂದೇನು ಎಂಬ ಪ್ರಶ್ನೆ ಆಗಾಗ ತಲೆಯೆತ್ತಿ ನಿಲ್ಲುತಿತ್ತು. ಇನ್ನು ಮುಂದೆ ಯಾವ ರೀತಿ ಕಾಲಹರಣ ಮಾಡಲಿ? ಇಲ್ಲಿಯೇ ಇರಲೇ ? ಇಂಗ್ಲೆಂಡಿಗೆ ಹೋಗಲೇ ? ಹೋದರೆ ಅಲ್ಲಿ ನಮ್ಮನ್ನು ಸ್ವಾಗತಿಸುವವರಾರು ? ಓಹ್ ! ಬೇಡವೇಬೇಡ. ಇನ್ನಾದರೂ ಸಂನ್ಯಾಸಿನಿ ಯಾದರೆ...ಆದರೆ, ಗೃಹಸ್ಥೆಯಾದನಂತರ ಸಾಧ್ಯವಿಲ್ಲ. ಸತ್ಯಭಾಮೆಯ ಗತಿ ? ...ಸಾಕು...ಸಾಕು ! ದೇವರೇ ! ಈ ಜೀವನವೇ ಸಾಕು.

ಎರಡು ಕಣ್ಣುಗಳೂ ತಾವಾಗಿಯೇ ಮುಚ್ಚಿಕೊಂಡುವು. ಹಾಗೇ ಸೋಪಾದ ಬೆನ್ನಿಗೊರಗಿದೆ. ಒಡಲಬಳ್ಳಿ ಸಂಕಟದಿಂದ ತಳಮಳಿಸುತಿತ್ತು. ಚಿತ್ತಭಿತ್ತಿಯಲ್ಲಿ ಭಾಸ್ ಮೂಡಿ ನಿಂತಿದ್ದ. ನನ್ನನ್ನು ನಡುದಾರಿಯಲ್ಲಿ ಕೈ ಬಿಟ್ಟನೇ? ಹಾ! ಹೃದಯವನ್ನು ಕಾಣದ ಕೈಗಳಿಂದ ಹಿಂಡಿತು, ವಿಧಿ. ಮನಃ ಪ್ರಾಣಗಳು ಸೋತುಹೋದುವು. ಮಕ್ಕಳು ಶಾಲೆಗೆ ಹೋಗಿದ್ದುದರಿಂದ ಸದ್ದು ಗದ್ದಲಗಳಿರಲಿಲ್ಲ. ಅಂಜು ವೃತ್ತಪತ್ರಿಕೆಯಲ್ಲಿ ಮನವಿಟ್ಟಿದ್ದಳು. ಶಾಂತಿ ಪ್ರಸಾದ್ ಆಗತಾನೇ ಬಂದಿದ್ದ ಸುದ್ದಿಯನ್ನು ಬಿತ್ತರಿಸಿದರು.

"ಜಾನಕೀ ! ನೆಹರೂರವರ ಆಫೀಸಿನಿಂದ ಟೆಲಿಫೋನ್ ಬಂತು. ಪ್ರವಾಸ ಹೋಗಿದ್ದ ಪ್ರಧಾನಿಯವರು ಈಗ ಹಿಮ್ಮರಳಿದ್ದಾರಂತೆ. ನಾಳೆ ಬೆಳಗ್ಗೆ ಒಂಬತ್ತೂವರೆಗೆ ನಿನ್ನನ್ನು ನೋಡಲು ಇಲ್ಲಿಗೆ ಬರುತ್ತಾರಂತೆ ನಿಮಗೆ ತಿಳಿಸಿ ಎಂದರು ಅವರ ಪರ್ಸನಲ್ ಸೆಕ್ರೆಟರಿ."

ನನ್ನ ಎದೆಯ ಹಕ್ಕಿ ಚೀರಿತು "ಯಾರು ಬಂದರೆ ತಾನೆ ಏನು ?"

ನಾನು ಮರುಮಾತಾಡದೆ ವಿಷಯವನ್ನು ಮನಸಾ ಸ್ವಾಗತಿಸಿದೆ. ಅಂದು ರಾಷ್ಟ್ರಪತಿಗಳೂ ಇತರ ಕೆಲವು ಮಂತ್ರಿಗಳೂ ಹಿರಿಯ ಅಧಿಕಾರಿಗಳೂ ಬಂದು ಅನುತಾಪ ವ್ಯಕ್ತಪಡಿಸಿ ಹೋಗಿದ್ದರು. ಯಾರು ಬಂದರೂ ನನ್ನ ಕಷ್ಟವೇನು ಪರಿಹಾರವಾಗುವುದಿಲ್ಲ- ದೇವರೇ ನನಗೆ ದಾರಿತೋರಿಸಬೇಕು..." ಎನಿಸಿತು.

೦ ೦ ೦ ೦

ಬೆಳಿಗ್ಗೆ ಒಂಬತ್ತುಗಂಟೆಯಾಗುವ ಮುನ್ನವೇ ಮಂಜು ಒಳಬಂದು "ಸ್ವಲ್ಪ ಕುಳಿತುಕೋ ಜಾನಕೀ ! ನಿನ್ನ ತಲೆಕೂದಲು ಗಂಟುಕಟ್ಟಿದೆ ಬಾಚಿ ಮುಡಿ ಕಟ್ಟುವೆ" ಎಂದಳು.

ಒಂದು ವಾರದಿಂದ ಬಾಚಣಿಗೆ ಮುಟ್ಟಿರಲಿಲ್ಲ. ಹಾಗೇ ಕೊಡವಿ ಕಟ್ಟಿದೆ. ಒಲ್ಲೆನೆಂದರೂ ಅವಳು ಕೇಳಲಿಲ್ಲ. ಮುಡಿಬಿಚ್ಚಿ ಬಾಚಿ ಸಿಕ್ಕು ತೆಗೆದು ಮುಡಿ ಗಟ್ಟಿದಳು. ಅಂದಿನಿಂದ ಸಿಂಧೂರವಿಟ್ಟಿರಲಿಲ್ಲ. ತಿಲಕವನ್ನೂ ಹಚ್ಚಿರ ಲಿಲ್ಲ. ಇಂದು ತಲೆಬಾಚಿಕೊಂಡೊಡನೆ ಅವುಗಳ ನೆನಪಾಯಿತು. ರಾಗಮಯಿ ಕುಂಕುಮಕ್ಕೆ ಕಪ್ಪುಕಾಡಿಗೆಯನ್ನು ಹಚ್ಚಿಕೊಳ್ಳುತ್ತಾಳೆ. ಅವಳ ಸಿಂಧೂರ ರಹಿತ ಮುಖಬಿಂಬ ಶ್ರೀಹೀನವಾಗಿದೆ. ನಾನೀಗ ಅದನ್ನು ಇಡಲೇ ? ಬೇಡವೇ? ಎಂಬ ಪ್ರಶ್ನೆ ಮನದಲೆಯಲ್ಲಿ ನಿಮಿರಿ ನಿಂತಿತು. ತುಟಿಗಳು ಮಾತ್ರ ಬಿರಿಯ ಲಿಲ್ಲ. ನೋಡೋಣ, ತಲೆಬಾಚಿದ್ದಾಳೆ. ತಿಲಕವಿಡಲು ಅವಳೇ ಹೇಳಬಹು ದೇನೋ ಎಂದುಕೊಂಡೆ. ಅವಳು ಏನೂ ಹೇಳಲಿಲ್ಲ. ಡ್ರೆಸ್ಸಿಂಗ್ ಟೇಬಲ್ ಮೇಲೆ ಬಾಚಣಿಗೆಯನ್ನು ಇಡಹೋದಾಗ ಬಳಲಿ ಬೆಂಡಾದ ಮುಖಬಿಂಬ ಮಂಗಳ ದ್ರವ್ಯಹೀನತೆಯಿಂದ ಶ್ರೀಹೀನವಾಗಿ ತೋರಿತು. ಆ ಕ್ಷಣವೇ ಒಡ ಲಲ್ಲಿ ಅತೀವ ಸಂಕಟವುೂಡಿತು. ನೀಳವಾದ ನಿಟ್ಟುಸಿರನ್ನು ಹೊರಹಾಕಿ ಹಿಂದಿರುಗಿದಾಗಲೇ ಎದುರಾದ ಅಂಜು–ರಾಗು "ನಿನಗಿಷ್ಟವಾದರೆ ಕಪ್ಪು ತಿಲಕ ವಿಟ್ಟುಕೋ," ಎಂದರು. ನನ್ನ ಮೌನವೇ ಸಮ್ಮತಿಸೂಚಕವಾಯಿತೇನೋ. ರಾಗು ಕಪ್ಪು ತಿಲಕವನ್ನು ನನ್ನ ಹಣೆಗಿಟ್ಟಳು. ತಟ್ಟನೆ ಒಡಲ ಸಂಕಟವೆಲ್ಲಾ ಹಸಿಹಸಿಯಾಗಿ ಕಣ್ಣುಗಳಲ್ಲಿ ಸೂಸಿದವು. ದಯಾದ್ರ್ರಹೃದಯಿಗಳಾದ ಅವ ರೆಲ್ಲರೂ ನನ್ನನ್ನು ಸುತ್ತುವರಿದು "ಈಗ ಪ್ರಧಾನಿಗಳು ಬರುತ್ತಾರೆ. ಸ್ವಲ್ಪ ಸಮಾಧಾನ ತಂದುಕೋ," ಎನ್ನುತ್ತ ಸಂತೈಸಿದರು.

ಇನ್ನಷ್ಟು ಹೊತ್ತಿನೊಳಗಾಗಿ ಪ್ರಧಾನಿಯವರ ಸೆಕ್ಯೂರಿಟಿ ಆಫೀಸರ್ ತಮ್ಮ ಸಿಬ್ಬಂದಿಯೊಡನೆ ಜೀಪಿನಲ್ಲಿ ಬಂದಿಳಿದರು. ನಾವು ನೆಹರೂರವರಿ ಗಾಗಿ ವಿಶೇಷ ತಯಾರಿಯನ್ನೇನೂ ಮಾಡಿರಲಿಲ್ಲ.

"ಏನಾದರೂ ತಣ್ಣನೆಯ ಪಾನೀಯವನ್ನು ಕೊಡಬಹುದೇನೋ" ಎಂದಳು ಅಂಜು.

ಸೆಕ್ಯುರಿಟಿ ಆಫೀಸರ್ ತಲೆಯಾಡಿಸುತ್ತ "ದಯವಿಟ್ಟು ಕ್ಷಮಿಸಿ, ಏನೂ ಬೇಡ" ಎಂದರು.

ಸಮಯಕ್ಕೆ ಸರಿಯಾಗಿ ಪ್ರಧಾನಿಯವರ ಕಾರು ಆಗಮಿಸಿತು. ಶಾಂತಿ ಪ್ರಸಾದ್–ರಾಘವರವರು ಹಲೆಬಾಗಿಲಲ್ಲಿ ನಿಂತು ಪ್ರಧಾನಿಯವರನ್ನು ಸ್ವಾಗತಿಸಿ ಒಳಗಡೆ ಕರೆತಂದು ಸೋಫಾದಮೇಲೆ ಕೂಡಿಸಿದರು. ಆ ಮಹಾತ್ಮ ಒಳಹೆಜ್ಜೆಯಿಟ್ಟೊಡನೆಯೇ ನನ್ನ ಕಣ್ಣುಗಳು ಪುನಃ ತುಂಬಿಬಂದುವು. ಶಾಂತಿ ಪ್ರಸಾದರು ನಮ್ಮೆಲ್ಲರನ್ನೂ ಅವರಿಗೆ ಪರಿಚಯ ಮಾಡಿಕೊಟ್ಟರು. ನಾವು ಅವರಿಗೆ ಕರಗಳನ್ನು ವಿನಯಪೂರ್ವಕವಾಗಿ ಜೋಡಿಸಿದೆವು. ಅವರು ಸತ್ಯ ಭಾಮೆಯನ್ನು ರಾಗಿಣಿ–ತಾರಿಣಿಯರನ್ನೂ ಬಳಿಯಲ್ಲಿ ಕೂಡಿಸಿಕೊಂಡು ನಲ್ಮೆ ಯಿಂದ ತಲೆಯನ್ನು ನೇವರಿಸುತ್ತ ಸತ್ಯಭಾಮೆಯನ್ನು ಕೇಳಿದರು,

"ಈದಿನ ಶಾಲೆಯಿಲ್ಲವೇ ?"

"ಇದೆ. ನಿಮಗಾಗಿ ಕಾದಿದ್ದೆ; ಹೋಗಲಿಲ್ಲ."

ಅನಂತರ ಭಾಸ್‌ನ ದುರಂತಕ್ಕಾಗಿ ತಮ್ಮ ಅನುತಾಪವನ್ನು ವ್ಯಕ್ತಪಡಿ ಸಿದಮೇಲೆ ಕೇಳಿದರು,

"ನಿಮ್ಮ ಶಾಲೆ ಹೇಗೆ ನಡೆಯುತ್ತಿದೆ ?"

"ಚೆನ್ನಾಗಿ ನಡೆಯುತ್ತಿದೆ. ವಯಸ್ಕ ಮಹಿಳೆಯರಿಗೆ ಶಿಕ್ಷಣವನ್ನೂ ಕೊಡುತಿದ್ದೇವೆ."

"ಪುಣ್ಯಕಾರ್ಯ. ಅದನ್ನೇ ನಡೆಸಿಕೊಂಡುಹೋಗು. ನಿನಗೆ ದೇವರು ಅದರಲ್ಲೇ ಮುಂದಿನ ದಾರಿಯನ್ನು ತೋರಿಸುತ್ತಾನೆ."

ನನ್ನ ಮೌನವೇ ಉತ್ತರವಾಯಿತು.

ಬಳಿಕ ನೆಹರೂರವರು ಮಕ್ಕಳನ್ನು ಕುರಿತು ಅವರವರ ವಿದ್ಯಾಭ್ಯಾಸದ ಬಗ್ಗೆ ಒಂದೆರಡು ಪ್ರಶ್ನೆಗಳನ್ನು ಕೇಳಿದರು. ಸತ್ಯಭಾಮೆಯನ್ನು ಪ್ರೀತ್ಯಾದರ ದಿಂದ ಮೈದಡವುತ್ತ ಚಿಂತೆಮಾಡಬೇಡ ಮಗೂ ! ಮಿಂಚಿಹೋದುದಕ್ಕೆ

ಚಿಂತಿಸಿ ಫಲವಿಲ್ಲ. ಚೆನ್ನಾಗಿ ಓದಿ ವಿದ್ಯಾವಂತಳಾಗು" ಎಂದರು ಪ್ರಾಸಂಗಿಕವಾಗಿ, ದನಿಯಲ್ಲಿ ಸವಿಜೇನು ಹರಿಯುತಿತ್ತು.

ಅವಳು ಮಾತಾಡದೆ 'ಆಗಲಿ' ಎಂಬಂತೆ ತಲೆಯಾಡಿಸಿದಳು.

ಅವರು ಎದ್ದು ಹೊರಡುತ್ತ ಎಲ್ಲರಿಗೂ ಕೈಜೋಡಿಸಿ ಸತ್ಯಭಾಮೆಯನ್ನು ಅಪ್ಪಿಕೊಂಡೇ ಕಾರಿನವರೆಗೆ ನಡೆದರು. ನಾವು ಹಿಂದೆಯೇ ಹೋಗಿ ಬೀಳ್ಕೊಟ್ಟಾಗ ಪುನಃ ಕೈಜೋಡಿಸಿದರು.

"ನಮಸ್ತೇ !" ಎಲ್ಲರ ದನಿಯೂ ಒಕ್ಕೊರಲಿಂದ ಹೊರಬಿತ್ತು.

ಮರುಕ್ಷಣದಲ್ಲೇ ಅವರ ಕಾರು ಹೊರಟಿತು. ಹಿಂದೆಯೇ ಸಾಗಿತು ಸೆಕ್ಯುರಿಟಿ ಆಫೀಸರನ ಜೀಪ್.

ಅವರ ಪ್ರೀತಿ–ವಿಶ್ವಾಸ–ದಯೆ–ಕರುಣೆಗಳು ಸತ್ಯಳ ಮನಸ್ಸಿಗೆ ಅತ್ಯಾನಂದವನ್ನು ತಂದಿತು. ಅವಳು ಪ್ರಸನ್ನ ಮುಖದಿಂದ "ಅಮ್ಮಾ ! ಅವರು ಎಷ್ಟು ಒಳ್ಳೆಯವರು !" ಎಂದಳು.

ರಾಗಿಣಿ–ತಾರಿಣಿಯರಿಗೂ ಅಷ್ಟೆ; ಆ ಮುಹೂರ್ತದಲ್ಲಿ ತುಂಬಿಕೊಂಡ ಆನಂದದಾಗರಕ್ಕೆ ತಮ್ಮ ತಮ್ಮ ಪುಟ್ಟ ಹೃದಯಗಳು ಸಾಲವೇನೋ ಎಂಬಷ್ಟು ಹುರುಪು–ಉತ್ಸಾಹ–ಸಂತೋಷ.

ಶಾಂತಿಪ್ರಸಾದ್–ರಾಘವರವರು ಸ್ವಲ್ಪ ಹೊತ್ತು ಶ್ರೀ ನೆಹರೂರವರ ವ್ಯಕ್ತಿತ್ವವನ್ನು ಕುರಿತು ಮಾತಾಡಿದರು. ಅಂಜು, ಮಂಜು, ರಾಗುರವರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಹೊರಹಾಕಿದರು. ನಾನು ಕಾಷ್ಠಮೌನದಿಂದ ಎಲ್ಲರ ಮಾತುಕತೆಯನ್ನೂ ಪರಾಂಬರಿಸಿದೆ.

ಅದೇ ಸಂಜೆ, ಹಿರಣ್ಮಯನಾದ ಶಾಂತಸೂರ್ಯ ಪಡುವಣ ಪ್ರಾಂತ್ಯಕ್ಕೆ ಇಳಿಯುವುದರಲ್ಲಿದ್ದಾನೆ. ತಂಗಾಳಿ ತಣ್ಣಗೆ ತೀಡುತ್ತಿದೆ. ಅಸಹನೀಯವಾದ ಮಾಗಿಯ ಚಳಿಯಿಂದ ಮೈಮನಗಳು ತತ್ತರಿಸುವಂತಿವೆ. ಮೈಮೇಲೆ ಉಣ್ಣೆಯ ಬಟ್ಟೆಗಳಿದ್ದರೂ ಒಳಗಿಂದೊಳಗೇ ಚಿಲ್ಲನೆ ನಡುಗುತ್ತಿದೆ ಮೈ.

ಮೇಜಿನ ಮೇಲಿದ್ದ ಟೆಲಿಫೋನ್ ಕರೆನೀಡಿತು.

ಶಾಂತಿಪ್ರಸಾದ್ ಮಾತಾಡಿದರು. "ಹಲೊ !"

"ಹಲೋ ! ಜರ್ಮನಿ ರಾಯಭಾರ ಕಛೇರಿಯಿಂದ. ನಮ್ಮ ರಾಯಭಾರಿಗಳು ಶ್ರೀಮತಿ ಭಾಸ್ವಾನರೊಂದಿಗೆ ಮಾತಾಡುತ್ತಾರಂತೆ. ಶ್ರೀಮತಿಯವರು ಇದ್ದಾರೆಯೇ ?"

"ಇದ್ದಾರೆ, ಮಾತಾಡಿ."

ಶಾಂತಿಪ್ರಸಾದ್ ರಿಸೀವರನ್ನು ನನ್ನ ಕೈಗೆ ಕೊಟ್ಟು "ನಿನ್ನೊಂದಿಗೆ ಜರ್ಮನಿ ರಾಯಭಾರಿ ಮಾತಾಡುತ್ತಾರಂತೆ. ಏನೋ ವಿಶೇಷವಿರಬೇಕು ನೋಡು !" ಎಂದರು.

"ಹಲೋ !"

"ಹಲೋ, ಮೇಡಮ್ ! ನಿಮಗೆ ಬಲು ಸಂತೋಷದ ಸುದ್ದಿಯನ್ನು ಕೊಡಲಿದ್ದೇನೆ. ಪರಾಂಬರಿಸಿ !"

ಆಗ ಎಲ್ಲರೂ ನನ್ನ ಸುತ್ತುವರಿದು ನಿಂತರು. ಎಲ್ಲರಿಗೂ ಆಶ್ಚರ್ಯ ಕುತೂಹಲ ಅಷ್ಟಿಷ್ಟಲ್ಲ.

"ನಿಮ್ಮ ಭಾಸ್ವಾನ್ ಬದುಕಿದ್ದಾರೆ ! ಈಗಷ್ಟೆ ಅವರು ಜರ್ಮನಿಯಲ್ಲಿನ ಭಾರತ ರಾಯಭಾರ ಕಛೇರಿಯಿಂದ ಇಲ್ಲಿಗೆ ಫೋನ್ ಮಾಡಿದ್ದರು ! ನಿಮಗೆ ತಿಳಿಸಲು ಹೇಳಿದ್ದಾರೆ !"

"ಹಾ ! ಎಂತಹ ಸುದಿನ !" ಎಂದರು ಎಲ್ಲರೂ.

ನಾನು ಒಮ್ಮೆಲೇ ಹೌಹಾರಿದೆ "ಒಳ್ಳೆಯ ಸುದ್ದಿ ! ಭಾಸ್ ಬದುಕಿದ್ದಾನೆ ! ಓ ಮೈ ಲಾರ್ಡ್ ಕೃಷ್ಣ ನೀನೇ ಕಾಪಾಡು !" ಎಲ್ಲರೂ ನನ್ನನ್ನು ಬಿಗಿದಪ್ಪಿದರು. ನನ್ನ ಹೃದಯ ಆನಂದದಿಂದ ಹೆದ್ದೆರೆಯಿಂದ ತುಂಬಿ ತುಯ್ಯಲಾಡಿತು.

"ಮೇಡಮ್ ! ಅವರು ಇದುವರೆಗೂ ನಿರ್ಬಂಧ ಸ್ಥಿತಿಯಲ್ಲಿದ್ದರಂತೆ ! ಅವರ ಎಲ್ಲಾ ವಸ್ತುಗಳೂ ಕಳೆದುಹೋಗಿರುವುದರಿಂದ ಅಸಹಾಯಕ ಸ್ಥಿತಿಯಲ್ಲಿದ್ದು ಭಾರತ ರಾಯಭಾರ ಕಛೇರಿಯಲ್ಲಿ ರಕ್ಷಣೆ ಪಡೆದಿದ್ದಾರಂತೆ !"

ನಾನು ಸತ್ಯಭಾಮೆಯನ್ನು ಬಿಗಿದಪ್ಪಿ "ಇಂದು ಅಹೋಭಾಗ್ಯದ ದಿನ !" ಎಂದೆ ಕಣ್ಣುಗಳಲ್ಲಿ ಸುಖಾಶ್ರುಗಳು ಮೊಳೆತುವು. ಶ್ರದ್ಧಾಲಯದಲ್ಲಿ ಸಂಜೀವನ ತುಂಬಿತು.

"Where you tend a rose my lad'
A thistle cannot grow"

— o —

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ
೨) ಡಾ॥ ಅಘೋರ
೩) ಡಾ॥ ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ
೬) ಮನೋನ್ಮಣಿ
೭) ಸಂತ್ರಾಸಿನಿ
೮) ಆಸೆಯ ಸುಳಿಯಲ್ಲಿ
೯) ಪದ್ಮಾಲಯ
೧೦) ಶ್ರದ್ಧಾಲಯ

(ಕಥಾ ಸಂಕಲನ)

೧೧) ಬಹುರತ್ನಾವಸುಂಧರಾ
೧೨) ರತ್ನಗರ್ಭಾವಸುಂಧರಾ
೧೩) ಸುಧಾಮಣಿ
೧೪) ರಮಣೀಮಣಿ
೧೫) ಲಿಯೋನಾ
೧೬) ಶ್ರೀಮುಖಿ
೧೭) ಶ್ರೀಹರ್ಷಲಾ
೧೮) ವೈಶಾಖೀ ಪರ್ವ
೧೯) ಫಾಲ್ಗುಣೀ ಪರ್ವ
೨೦) ಮಣಿಮೇಖಲಾ
೨೧) ಮಣಿಕರ್ಣಿಕಾ

(ಕವಿತಾ ಸಂಕಲನ)

೨೨) ಪೂಜಾವಸಾನ ಸಮಯೇ....!
೨೩) ಧ್ಯಾನಾವಸಾನ ಸಮಯೇ....!
೨೪) ಗಗನ ಕುಸುಮ
೨೫) ಜೀವನ ಕುಸುಮ
೨೬) ಚಂಪಕ ರಾಜಿ
೨೭) ಬಕುಳಿ ರಾಜಿ
೨೮) ಕಸ್ತೂರಿ ಮಾಲಿಕಾ
೨೯) ಮಂದಾರ ಮಾಲಿಕಾ

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೩೦) ವಿಜಯ ಗಾಥಾ
೩೧) ಗಾನ ತೀರ್ಥ
೩೨) ನಾದ ಬಿಂದು
೩೩) ಕಾವ್ಯಾನಂದ ನಂದಿನಿ
೩೪) ಭಾವಾನಂದ ನಂದಿನಿ
೩೫) ಸಂಗೀತ ಪುಷ್ಪಾಂಜಲಿ
೩೬) ಆತ್ಮ ಗೀತಾಂಜಲಿ

(ಸಂಜೀವನ ಕಾವ್ಯ)

೩೭) ಮಂಗಳ ಭಾರತಿ
೩೮) ಕಲ್ಯಾಣ ಭಾರತಿ
೩೯) ಉತ್ತರೋತ್ತರಣಿ
೪೦) ರಾಗಾನುರಾಗಿಣಿ
೪೧) ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೨) ಪುಣ್ಯಪಯೋನಿಧಿ
೪೩) ಪುಣ್ಯಾಭಿಸಾರ

(ಸಾನೆಟ್‌ಗಳು)

೪೪) ತರಂಗಿಣಿ

(ಗದ್ಯ ಕಾವ್ಯ)

೪೫) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೬) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೭) ದೂರ ದೇಶದಲ್ಲಿ
೪೮) ಬೆಳದಿಂಗಳ ರಾತ್ರಿ
೪೯) ರಂಗನ ಸಾಹಸ
೫೦) ಓಹಿಯೋಜ ಸರೋವರ
೫೧) ಕೌಶಿಕನ ಗೊಂಬೆ
೫೨) ವಿಶೇಷ ಸುದ್ದಿ
೫೩) ಕಲ್ಯಾಣಿ ರಾಗಿಣಿ

---

ಲಕ್ಷ್ಮೀ ಪ್ರಕಾಶನ

ನಂ. 359, 14ನೇ ಅಡ್ಡ ರಸ್ತೆ, ಸದಾಶಿವನಗರ, ಬೆಂಗಳೂರು–560 080